# ಪೀಠಿಕೆ.

---

ಆದಿಯಲ್ಲಿ ಪರಶಿವನು ಬ್ರಹ್ಮನನ್ನು ನಿರ್ಮಿಸಿ, ಅವನಿಗೆ ವೇದಗಳನ್ನು ಕೊಟ್ಟು ನೀನು ಲೋಕವನ್ನು ಸೃಷ್ಟಿಸೆಂದಾಜ್ಞಾಪಿಸಿದನು. ಬ್ರಹ್ಮನು ಸೃಷ್ಟಿ ಕ್ರಮವನ್ನುತಿಳಿಯದೆ, ಸ್ವಾಮಿಾ ನೀನು ಮೊದಲು ಸೃಷ್ಟಿಮಾಡಿ ತೋರಿಸೆನಲು, ಶಿವನು ತನ್ನಚಿದ್ಧರ್ಮಾಂಶದಿಂದ ರೇಣುಕಾದಿಪ್ರಮಥರನ್ನು ಸಂಕಲ್ಪಮಾತ್ರದಿಂದ ಸೃಷ್ಟಿಸಿದನು. ಬ್ರಹ್ಮನು ನೋಡಿ, ಪ್ರಕೃತಿಸಾಧನ ಸಾಮಗ್ರಿಯಿಂದ ಅಂಡಜ, ಉದ್ಭಿಜ್ಜ, ಸ್ವೇದಜ, ಜರಾಯುಜ, ಎಂಬ ಚತುರ್ವಿಧವಾದ ಪ್ರಾಕೃತ ಸೃಷ್ಟಿಯಂಮಾಡಿದನು. ಬಳಿಕ ಪರಶಿವನು ತನ್ನಿಂದ ಸೃಷ್ಟಿಸಲ್ಪಟ್ಟ ಪ್ರಮಥರೊಳಗೆ ರೇಣುಕ, ದಾರುಕ, ಗಜಕರ್ಣ, ಘಂಟಾಕರ್ಣ ಎಂಬವರನ್ನು ವೀರಶೈವ ಮತಸ್ಥಾಪನಾರ್ಥವಾಗಿ ಭೂಲೋಕಕ್ಕೆ ಕಳುಹಿಸಿದನು. ಅವರು ಶಿವನ ಅಪ್ಪಣೆಯಂ ಹಿಡಿದು, ಕೃತಯುಗದಲ್ಲಿ ನಿಜನಾಮಗಳಿಂದಲೂ, ತ್ರೇತಾಯುಗ, ದ್ವಾಪರಯುಗಗಳಲ್ಲಿ ಬೇರೆ ಹೆಸರುಗಳಿಂದಲೂ ದಿವ್ಯದೇಹಗಳೊಡನೆ ಅಯೋನಿಜರಾಗಿ ಅವತರಿಸಿ ಪರಿಪಕ್ವಾಂತಃಕರಣರಾದ ಚಾತುರ್ವರ್ಣ್ಯದವರಿಗೆ ವೀರಶೈವಮತವನ್ನು ಭೋಧಿಸಿ, ಕಲಿಯುಗದಲ್ಲಿ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ ಎಂಬ ನಾಮಗಳಿಂದ ಅಯೋನಿಜರಾಗಿಯೇ ಅವತರಿಸಿ, ಶಿವಮತದ ಚತುರಾಚಾರ್ಯರೆಂದು ಪ್ರಸಿದ್ಧಿಯಂ ಪಡೆದು, ಅಲ್ಲಲ್ಲಿ ಸಂಚರಿಸುತ್ತಿರುವಾಗ, ಕರ್ನಾಟದೇಶದಲ್ಲಿ ಜೈನಬೌದ್ಧಾದಿ ಮತಗಳು ಹೆಚ್ಚಿ ಶಿವಮತದ ಏಳಿಗೆಗೆ ವಿಘ್ನವುಂಟಾಗಿರುವ ಶಿವನು ಸಂಗತಿಯನ್ನು ನಾರದಮುನಿಯ ಮುಖದಿಂದ ತಿಳಿದು, ಶಿವಧರ್ಮಸ್ವರೂಪನಾದ ವೃಷಭನಿಗೆ ಆಜ್ಞಾಪಿಸಲಾಗಿ ಆತನು ಕರ್ನಾಟದೇಶಕ್ಕೆ ಸೇರಿದ ಬಾಗವಾಡಿ ಎಂಬ ಗ್ರಾಮದಲ್ಲಿ ಮಾಧವನೆಂಬ ಸ್ಮಾರ್ತಬ್ರಾಹ್ಮಣನ ಪತ್ನಿಯಾದ ಮಾದಾಂಬೆಯ ಗರ್ಭದಲ್ಲಿ ಜನಿಸಿ ಸಂಗಮೇಶ್ವರನಿಂದ ಲಿಂಗಧಾರಣದೀಕ್ಷೆಯಂ ಪಡೆದು ಬಸವನಾಮವಂ ತಳೆದು ಎಂಟನೆಯವರ್ಷದಲ್ಲಿ ಶಾಸ್ತ್ರಪ್ರಕಾರ ಉಪನಯನವಂ ತಿರಸ್ಕರಿಸಿ ಕೂಡಲಿಗೆಹೋಗಿದ್ದು ಸೋದರಮಾವನಾದ ಬಲದೇವಮಂತ್ರಿಯ ಮಗಳಾದ ಗಂಗಾಂಬಿಕೆಯನ್ನು ಮದುವೆಮಾಡಿಕೊಂಡು, ಬಲದೇವನ ಅನಂತರ

ಬಿಜ್ಜಳನಮಂತ್ರಿಯಾಗಿದ್ದು ಅನೇಕ ಮಹಿಮೆಗಳಿಂದ ಶಿವಭಕ್ತಿಯಂ ಪ್ರಕಾಶಗೊಳಿಸಿ ಕಡೆಗೆ ಸಂಗಮೇಶ್ವರನಲ್ಲಿ ಐಕ್ಯವಂ ಪಡೆದನು. ಈ ಸಂಗತಿ ನಡೆದು ಸುಮಾರು ಎರಡು ಸಾವಿರ ವರ್ಷಗಳಾಗಿರಬಹುದು. ಹೇಗೆಂದೊಡೆ:—ರೇಣುಕಾಚಾರ್ಯರು ಬಿಜ್ಜಳನನ್ನು ನೋಡಿದಹಾಗೂ, ಅಲ್ಲಿಂದ ವಿಕ್ರಮಾರ್ಕನ ಪಟ್ಟಣಕ್ಕೆಹೋಗಿ, ಅವನ ಇಷ್ಟಾರ್ಥವಂ ನೆರವೇರಿಸಿದಹಾಗೂ, ರೇಣುಕಚರಿತ್ರೆಯಲ್ಲಿ ಹೇಳಲ್ಪಟ್ಟಿದೆ. ಆದುದರಿಂದ ಬಸವೇಶನು ವಿಕ್ರಮಾರ್ಕನ ಸಮಕಾಲದವನೆಂದು ಊಹಿಸಬೇಕು. ಈ ಜಿಗೆ ವ್ಯಾಸೋಕ್ತ ಬಸವಪುರಾಣವೆಂಬ ಗ್ರಂಥವು ಸಂಸ್ಕೃತಭಾಷೆಯಲ್ಲಿ ಬರೆಯಲ್ಪಟ್ಟಿರುವುದು. ಇದು ಯಾವಕಾಲದಲ್ಲಿ ಹುಟ್ಟಿತೋ ಯಾವುದರಿಂದಲೂ ಗೊತ್ತಾಗುವುದಿಲ್ಲ. ಹನ್ನೆರಡನೆಯ ಶತಮಾನದಲ್ಲಿ ಪಾಲ್ಕುರಿಕೆಯ ಸೋಮಾರಾಧ್ಯರು ಆಂಧ್ರಭಾಷೆಯಲ್ಲಿ ಬಸವಚರಿತ್ರೆಯನ್ನು ರಚಿಸಿದರು. ಅದರ ಮೇಲೆ ಶಾಲಿವಾಹನಶಕ ೧೩೬೯ರಲ್ಲಿ ಭೀಮಕವಿಗಳು ಕನ್ನಡದಲ್ಲಿ ಷಟ್ಪದೀರೂಪವಾಗಿ ರಚಿಸಿದರು. ಅದೇ ಶತಮಾನದಲ್ಲಿ ಶಂಕಾರಾರ್ಯಕವಿಗಳು ಸಂಸ್ಕೃತದಲ್ಲಿ ಕಾವ್ಯರೂಪವಾಗಿ ರಚಿಸಿದರು. ಈ ಗ್ರಂಥವನ್ನೇ ನಾನು ಕರ್ಣಾಟಭಾಷೆಯಲ್ಲಿ ಗದ್ಯರೂಪವಾಗಿ ಬರೆದು ಕರ್ಣಾಟಕ ಬಸವೇಶವಿಜಯವೆಂಬ ಹೆಸರಿಟ್ಟೆನು. ಇದು ಪ್ರತಮತಃ ವೀರಶೈವಮತ ಪ್ರಕಾಶಿಕೆಯೆಂಬ ಮಾಸಪತ್ರಿಕೆಯಲ್ಲಿ ಮೂಲದೊಡನೆ ಮುದ್ರಿತವಾಗಿತ್ತು. ಈ ಗ್ರಂಥವನ್ನೋದಿದವರಿಗೆ ವೀರಶೈವಮತಾಚಾರಗಳ ಸ್ವರೂಪಜ್ಞಾನವುಂಟಾಗಿ ಶಿವಭಕ್ತಿಯು ವೃದ್ಧಿಹೊಂದುವದರಲ್ಲಾವ ಸಂಶಯವೂ ಇಲ್ಲ.

ಮೈಸೂರು,
ತಾ॥ ೭-೫-೧೯೧೨.

ಪಿ. ಆರ್. ಕರಿಬಸವಶಾಸ್ತ್ರಿ,
ಮಹಾರಾಜಾ ಕಾಲೇಜ್ ಕರ್ಣಾಟಕ
ಸೀನಿಯರ್ ಪಂಡಿತ.

# ವಿಷಯಾನುಕ್ರಮಣಿಕೆ.

ಶಿವಪ್ರಸಾದವೇ ಪವಿತ್ರವಾದದ್ದೆಂದು ಪ್ರತಿಜ್ಞೆಗೈದು, ವಸ್ತ್ರದಲ್ಲಿ ಅಗ್ನಿಯನ್ನಿಟ್ಟು ಬಸ್ನಿಯುಮರಕ್ಕೆ ಕಟ್ಟಿ, ಏಳು ದಿನಪರ್ಯಂತರ ಅಗ್ನಿಯೇ ದೊರೆಯದೆ ದೇವಯಜ್ಞ ಪಿತೃಯಜ್ಞಗಳಿಗೆ ವಿಘ್ನವುಂಟಾದುದರಿಂದ ಶರಣಾಗತರಾದ ಪರಮತದವರಿಂದ ಜಯಪತ್ರಿಕೆಯಂ ಪಡೆದು, ವ್ಯಾಸಮುನಿಪ್ರಣೀತಮಾದ ಉತ್ತರಮಿಮಾಂಸೆಯೆಂಬ ಬ್ರಹ್ಮಸೂತ್ರಗಳಿಗೆ ಮತಾಂತರಂಗಳಂ ಖಂಡಿಸಿ ಲಿಂಗಾಂಗಸಾಮರಸ್ಯರೂಪವಾದ ಮುಕ್ತಿಯಂ ಪ್ರತಿಪಾದಿಸುವ ಷಟ್ಸ್ಥಲಪರವಾದ ವೈದಿಕವೀರಶೈವ ಭಾಷ್ಯವಂರಚಿಸಿದ ಶ್ರೀಪತಿಪಂಡಿತರ ಚರಣಕಮಲಂಗಳಿಗೆ ಭಕ್ತಿಯಿಂ ನಮಸ್ಕರಿಸುತ್ತೇನೆ.

ಬ್ರಾಹ್ಮಣನಾದ ನೀನು ಲಿಂಗಧಾರಣ, ಶಿವನಿರ್ಮಾಲ್ಯ ಸ್ವೀಕಾರಾದಿಗಳನ್ನು ಆಚರಿಸಬಹುದೇ ? ಎಂದು ಆಕ್ಷೇಪಿಸಿದ ಪ್ರಾಕೃತದ್ವಿಜರಿಗೆ ಲಿಂಗಧಾರಣಾದಿಗಳು ವೇದಾಗಮಸಂಮತವಾದುದರಿಂದ ವೈದಿಕವೀರಶೈವಬ್ರಾಹ್ಮಣನಿಗೆ ಅರ್ಹವಾದವುಗಳೆಂದೊಡಂಬಡಿಸಿ, ವೆಲ್ಲಗೊಂಡ ಮಹಾದೇವಯ್ಯನಿಗೆ ಕತ್ತರಿಸಲ್ಪಟ್ಟಿದ್ದ ಪಾದಗಳಂ ಪುಟ್ಟಿಸಿ, ವೆಲ್ನಾಡುಚೋಳನ ಸಭೆಯಲ್ಲಿ ವಾದಮುಖದಿಂದ, ವೈಷ್ಣವ, ಮೀಮಾಂಸಕ, ಜೈನ, ಬೌದ್ಧ ಮುಂತಾದ ಮತಾಂತರಂಗಳಂ ಖಂಡಿಸಿ ಶಿವಾಧಿಕ್ಯ ಪೂರ್ವಕವಾಗಿ ವೀರಶೈವಸಿದ್ಧಾಂತವಂ ನೆಲೆಗೊಳಿಸಿ, ಶ್ರೀಶೈಲದಲ್ಲಿ ಆಚಾರ್ಯ ಪೀಠವಂ ಸ್ಥಾಪಿಸಿದ ಮಲ್ಲಿಕಾರ್ಜುನ ಪಂಡಿತರಂ ಹಗಲಿರುಳು ಸ್ಮರಿಸುವೆನು.

ಶಿವಭಕ್ತಿಗಿಂತ ವೇದಾಧ್ಯಯನವು ದೊಡ್ಡದಲ್ಲವೆಂದು ವಾದವಂಮಾಡಿ ಶುನಕನ ಬಾಯಿಂದ ವೇದವಂ ಹೇಳಿಸಿ, ಪಂಚಾಕ್ಷರೀ ಮಂತ್ರವನ್ನು ಒಂದು ಬಾರಿಯಾದರೂ ಉಚ್ಚರಿಸಿದವನಿಗೆ ಸಕಲಪಾಪಗಳೂ ಪರಿಹರಿಸಲ್ಪಡುವವೆಂದು ಸ್ಥಾಪಿಸಿ ಕಲ್ಲಬಸವನಿಂದ ಹುಲ್ಲುಮೇಯಿಸಿದ ಹರದತ್ತಾಚಾರ್ಯನ ಚರಣಕಮಲಗಳಿಗೆರಗಿ ಧನ್ಯನಾಗುವೆನು.

ಶರೀರವನ್ನೂ, ಅರ್ಥವನ್ನೂ, ಮನಸ್ಸನ್ನೂ ಪ್ರಾಣಗಳನ್ನೂ ಶಿವನಿಗೇ ವಿನಿಯೋಗಿಸಿ, ಶಿವನೇ ಸಮಸ್ತ ಭಾಗ್ಯವೆಂದು ನಂಬಿ, ಪ್ರಾಪಂಚಿಕವ್ಯಾಪಾರಗಳಂ ದೂರೀಕರಿಸಿ, ಸರ್ವಾವಸ್ಥೆಗಳಲ್ಲಿಯೂ ಶಿವನನ್ನು ಹೃದಯದಲ್ಲಿ ಬಿಡದಿದ್ದು ಕಡೆಗೆ ಮೋಕ್ಷವಂ ಪಡೆದ ಸಕಲ ಶಿವಶರಣರೇ ನನಗೆ ಗತಿಯಲ್ಲದೆ ಬೇರೆಯಿಲ್ಲವಾದುದರಿಂದ ಆಮಹಾನುಭಾವರೇ ಈ ಗ್ರಂಥವಂ ನಿರ್ವಿಘ್ನವಾಗಿ ಸಾಗಿಸಲೆಂದು ಬದ್ಧಾಂಜಲಿಯಾಗಿ ಪ್ರಾರ್ಥಿಸುವೆನು.





# ಬಸವೇಶವಿಜಯವು



ವೃತ್ತಂ ॥ ಶ್ರೀಮದುಮಾನನಾಂಬುಜ ದಿನೇಶನುಪಾಶ್ರಿತಭಕ್ತರಕ್ಷಕಂ ।
ಧಾಮನಿಧೀಂದುವಹ್ನಿನಯನಂ ಕಮಲಾಕ್ಷಮುಖಾಮರಾರ್ಚಿತಂ ॥
ಹೇಮಮಹೀಧ್ರಚಾಪನಖಿಲಾಗಮ ಸನ್ನುತನಾದ್ಯನವ್ಯಯಂ ।
ಕಾಮಿತಸಂಪದಂಗಳ ನನಾರತಮೀಗೆಮಗೊಲ್ದು ಶಂಕರಂ ॥



ದೇವತಾಸಾರ್ವಭೌಮನಾದ ಪರಶಿವನ ಆವಾಸಸ್ಥಾನವಾಗಿಯೂ, ವಿದ್ವಾಂಸರಿಂದ ಪ್ರಖ್ಯಾತಿಗೊಳಿಸಲ್ಪಟ್ಟ ಮಹಿಮೆಯುಳ್ಳದಾಗಿಯೂ, ರಜತಮಯವಾಗಿಯೂ, ಇರುವ ಕೈಲಾಸನಾಮಕವಾದ ಒಂದಾನೊಂದು ಶ್ರೇಷ್ಠಪರ್ವತವು ಉತ್ತರದಿಕ್ಕಿನಲ್ಲಿರುವದು. ಆ ಪರ್ವತದಲ್ಲಿ ದೇವಗಂಗೆಯ ಹನಿಗಳಿಂದ

ತಂಪಾದ ದೇಹವುಳ್ಳುದ್ದಾಗಿಯೂ, ಕಲ್ಪವೃಕ್ಷಕುಸುಮಮಾಲಿಕೆಯ ಮಕರಂದ ಗಂಧದಿಂದ ಕೂಡಿದುದಾಗಿಯೂ, ಪರಶಿವನ ಆಭರಣರೂಪವಾದ ಸರ್ಪಶ್ರೇಷ್ಠಗಳಿಂದ ಸೇವಿಸಲ್ಪಟ್ಟು, ಉಳಿದುದಾಗಿಯೂ, ಇರುವವಾಯುವು ನಿರಂತರವೂ ಬೀಸುತ್ತದೆ. ದೇವತಾಸ್ತ್ರೀಯರು ತಮ್ಮ ವಾಸಸ್ಥಳವಾದ ಮೇರುಪರ್ವತವನ್ನು ಬಿಟ್ಟು, ಶಿವನಜಡೆಯಲ್ಲಿರುವ ಚಂದ್ರನ ಕಾಂತಿಪರಂಪರೆಯಿಂದ ಹಗಲಿನಲ್ಲಿಯೂ ಹೆಚ್ಚಿಸಲ್ಪಟ್ಟ ಸೌಂದರ್ಯವುಳ್ಳ ಈ ಕೈಲಾಸಗಿರಿಯಲ್ಲಿ ವಿಹರಿಸಬೇಕೆಂದು ಅಪೇಕ್ಷಿಸುತ್ತಾರೆ. ಹಗಲಿರುಳುಂಟಾಗುವದಕ್ಕೆ ಕಾರಣವಾದ ಮೇರುವನ್ನು ಧನುಸ್ಸಾಗಿಮಾಡಿಕೊಂಡ ಆ ಪರಮೇಶನನ್ನು ತನ್ನಯಾವದೋ ಒಂದು ತಪ್ಪಲಲ್ಲಿ ಧರಿಸಿಕೊಂಡಿರುವ ಈ ಕೈಲಾಸಕ್ಕಿಂತಲೂ ಶ್ರೇಷ್ಠವಾದಪರ್ವತವು ಎಲ್ಲಿಯೂಇಲ್ಲ. ಆ ಗಿರಿಯಲ್ಲಿ ಪ್ರವಹಿಸಿರುವ ಜಲವೇ ದೇವಗಂಗೆಯಾಯಿತು. ಅಲ್ಲಿಸಂಚರಿಸುವಾನೆಯೇ ವಿಘ್ನೇಶ್ವರನೆನಿಸಿತು. ಅದರ ತಪ್ಪಲಸಮೀಪದಲ್ಲಿರುವ ಅರಣ್ಯದೊಳಗಣ ಹಳ್ಳಿಯೇ ಅಳಕಾವತಿಯಾಯಿತು. ಈ ಕೈಲಾಸವಿರುತ್ತಿರಲಾಗಿ ಮೇರುಪರ್ವತವು ತೇಜೋಹೀನವಾಯಿತು. ಪಾರಿಯಾತ್ರಪರ್ವತವು ವ್ಯಾಕುಲತೆಗೆ ಗುರಿಯಾಯಿತು. ವಿಂಧ್ಯಪರ್ವತವು ನಿಷ್ಫಲವಾದ ಮಹಿಮೆಯುಳ್ಳುದಾಯಿತು. ಹೇಮಕೂಟಪರ್ವತವು ನಾಚಿಕೆಯಿಂದ ಔತುಕೊಂಡಿತು. ಈ ವಿಧವಾದ ಕೈಲಾಸದಲ್ಲಿ ಪರಮೇಶ್ವರನು ಪಾರ್ವತಿಯೊಡನೆ ಕ್ರೀಡಾವಿಶೇಷಗಳಿಂದ ಜಾವಗಳು ಬರುವದನ್ನೂ ಹೋಗುವದನ್ನೂ ತಿಳಿಯದೆ, ಅನೇಕದಿನಗಳನ್ನು ಕಳೆದನು. ಮನನಶೀಲರಾದ ಪ್ರಮಥರು ಸಭೆಯ ಸೌಂದರ್ಯವಿಶೇಷವನ್ನು ಮಧ್ಯಮಧ್ಯದಲ್ಲಿ ಹೊಗಳುತ್ತಾ, ಆ ಪರಮೇಶ್ವರನ ಕಥೆಗಳನ್ನು ಹೇಳುತ್ತಾ, ಶಿವಸೇವೆಯಿಂದುಂಟಾದ ಸೌಖ್ಯವನ್ನು ಹೃದಯದಲ್ಲಿ ಅನುಭವಿಸುತ್ತಾ ಇದ್ದರು. ಅನಂತರದಲ್ಲಿ ಜಗದಂತರ್ಯಾಮಿಯಾದ ಪರಶಿವನು ಸಮಸ್ತರಿಗೂ ಇಷ್ಟವಾದದ್ದನ್ನು ತನ್ನಲ್ಲಿತಿಳಿದು, ಒಂದಾನೊಂದುದಿನಪಾರ್ವತೀಸಹಿತನಾಗಿ, ಜಯೆ ವಿಜಯೆಯೆಂಬ ಸಖಿಯರೊಡನೆ ಸಭಾಮಂಟಪವನ್ನೈದಿದನು. ಪರಶಿವನು ತ್ರಿಪುರನಾಶಕನೂ, ದುರಹಂಕಾರಿಗಳ ಕೊಬ್ಬನ್ನು ಮುರಿಯುವವನೂ, ಪಾರ್ವತಿಯ ಪ್ರಾಣನಾಥನೂ, ವರ್ಣಾಶ್ರಮಗಳನ್ನು ಅತಿಕ್ರಮಿಸಿದವನೂ ಆಗಿದ್ದಾನೆ. ಹೀಗೆಂಬ ಕಹಳಾಧ್ವನಿಯು ಕಿವಿಗಳಿಗೆ ಉತ್ಸವವನ್ನು ಮಾಡಿತು. ಶಿವಸೇವಾಸಮಯವನ್ನು ತಿಳಿಸುವಂತಾದ್ದಾಗಿಯೂ, ಬಹುಕಾಲಕ್ಕೆ ಕಿವಿಗೆಕೇಳಿಬಂದದ್ದಾಗಿಯೂ, ಇರುವ ಆಧ್ವನಿಯೇ ದೇವತೆಗಳಿಗೂ ಪ್ರಮಥರಿಗೂ

ಕರೆಯುವದೂತನಾಯಿತು. ರುದ್ರಾಕ್ಷಮಾಲಿಕಾಲಂಕೃತರಾಗಿರುವ ಪ್ರಮಥರು ಆ ಕಹಳಾಧ್ವನಿಯನ್ನು ಕೇಳಿ, ಶೀಘ್ರವಾಗಿ ಬಂದು ನಮಸ್ಕರಿಸಿ, ಆನಂದಬಾಷ್ಪದಿಂದ ವ್ಯಾಪ್ತವಾದ ನೇತ್ರವುಳ್ಳವರಾಗಿ, ಸೂರ್ಯಚಂದ್ರಾಗ್ನಿರೂಪವಾದ ಮೂರು ಕಣ್ಣುಗಳುಳ್ಳವನಾಗಿಯೂ, ವಿಭೂತಿಯಿಂದ ಮನೋಹರವಾದ ದೇಹವನ್ನು ಧರಿಸಿರುವವನಾಗಿಯೂ, ಗಂಗಾನದಿಯಿಂದ ಪ್ರಕಾಶಿಸುತ್ತಿರುವ ಶಿರೋಭಾಗವುಳ್ಳವನಾಗಿಯೂ, ಧ್ಯಾನಿಸುತ್ತಿರುವವರ ಜನನಮರಣಾತ್ಮಕವಾದ ಸಂಸಾರವನ್ನು ಪರಿಹರಿಸುವವನಾಗಿಯೂ, ತ್ರಿಪುರಗಳನ್ನು ನಾಶಪಡಿಸಿದವನಾಗಿಯೂ, ಕರುಣಾಪೂರ್ಣವಾದ ದೃಷ್ಟಿಯುಳ್ಳವನಾಗಿಯೂ, ನರಸಿಹ್ಮನ ಮುಖದಿಂದಲೂ, ವರಾಹಾವತಾರನಾದ ವಿಷ್ಣುವಿನ ಕೋರೆದಾಡೆಯ ತುಣುಕಿನಿಂದಲೂ, ಕೂರ್ಮಾವತಾರನಾದ ನಾರಾಯಣನ ಬೆನ್ನೋಟೆಯಿಂದಲೂ, ಕಟ್ಟಲ್ಪಟ್ಟ ದೇವತೆಗಳ ಅಸ್ಥಿಮಾಲಿಕೆಯಿಂದ ಅಲಂಕರಿಸಲ್ಪಟ್ಟ ಎದೆಯ ಮಧ್ಯಭಾಗವುಳ್ಳವನಾಗಿಯೂ, ಆವಿರ್ಭವಿಸುತ್ತಿರುವ ಕಿಡಿಗಳುಳ್ಳ ಹಣೆಗಣ್ಣಿನ ನೋಟದಿಂದ ಮನ್ಮಥನನ್ನು ನಾಮಮಾತ್ರದಿಂದ ಉಳಿಸಿ, ಕರುಣಾರಸದಿಂದ ನೆನೆಸಲ್ಪಟ್ಟ ಚಂದ್ರನೇತ್ರದಿಂದ ತಿರಿಗಿಸೃಷ್ಟಿಸಿದವನಾಗಿಯೂ, ಪಾರ್ವತಿಯ ಪಾದಗಳಲ್ಲಿ ಹಚ್ಚಿದ್ದ ಅರಗಿನರಸದಿಂದ ಕೆಂಪಾದ ಜಟಾಜೂಟದಲ್ಲಿರುವ ಚಂದ್ರನಿಂದಲೂ, ಆಕೆಯಸ್ಥನಗಳಲ್ಲಿ ಲೇಪಿಸಲ್ಪಟ್ಟಿದ್ದ ಕುಂಕುಮರಸದಿಂದ ಗುರುತಾಗಿಮಾಡಲ್ಪಟ್ಟ ವಕ್ಷಸ್ಥಲದಿಂದಲೂ, ಪ್ರಕಾಶಿಸುವವನಾಗಿಯೂ, ಅನೇಕ ವೇದವಚನಗಳಿಂದ ಹೀಗೇಸರಿಯೆಂದು ನಿರ್ಣಯಿಸಲ್ಪಡದವನಾಗಿಯೂ, ಭಕ್ತಿವಂತರಿಗೆ ಸಿಕ್ಕುವವನಾಗಿಯೂ, ಮಹಿಮೆಗಳಿಂದ ಕೂಡಿದವನಾಗಿಯೂ, ಗಜಚರ್ಮವನ್ನು ಹೊದ್ದಿರುವವನಾಗಿಯೂ, ಇರುವ ಪರಶಿವನನ್ನು ಸಂತೋಷದಿಂದ ನೋಡಿದರು. ದಕ್ಷಧ್ವಂಸ, ತ್ರಿಪುರಸಂಹಾರ, ಮನ್ಮಥದಹನ ಮೊದಲಾದ ಪ್ರಸಂಗಗಳಿಂದ ವ್ಯಕ್ತವಾಗಿಯೂ, ವಾಚ್ಯಾರ್ಥ, ಲಕ್ಷ್ಯಾರ್ಥ, ವ್ಯಂಗ್ಯಾರ್ಥಗಳುಳ್ಳದ್ದಾಗಿಯೂ ಇರುವ ಸ್ತೋತ್ರರೂಪವಾದ ವಚನದಿಂದ ಪರಮೇಶ್ವರನನ್ನು ಕೊಂಡಾಡಿದರು. ಪುರಾತನನಾಗಿಯೂ, ಪ್ರಕಾಶಮಾನನಾಗಿಯೂ, ಮಿಥ್ಯಾಭೂತವಾದ ಅವಿದ್ಯಾ ವ್ಯಾಪಾರಗಳಿಗೊಳಗಾಗದವನಾಗಿಯೂ, ನಿಷ್ಕಳಂಕನಾಗಿಯೂ, ಉಪನಿಷತ್ತಿನ ಮರ್ಮಗಳೆಂಬ ದೀಪಗಳಿಗೆ ಹಣತಿಗಳಾಗಿ ಮಾಡಲ್ಪಟ್ಟ ಹೃದಯವುಳ್ಳ ಜ್ಞಾನಿಗಳಿಂದ ತಿಳಿಯಲ್ಪಡುವವನಾಗಿಯೂ, ಇರುವ ನಿನಗೋಸ್ಕರ ನಮಸ್ಕಾರವು. ಯಾವನಿಗೆ ಭೂಮಿಯೇ ರಥವೂ, ವಿಷ್ಣುವೇಬಾಣವೂ,

ಮೇರುಪರ್ವತವೇ ಧನುಸ್ಸೂ, ತ್ರಿಪುರವೇ ಗುರಿಯೂ, ಆಯಿತೋ ; ಅಂಥಾಧನು ರ್ಧಾರಿ ಶಿರೋಮಣಿಯಾದ ನಿನಗೆ ನಮಸ್ಕಾರವು, ಯಾವನ ಆಜ್ಞೆಯಿಂದ ಆ ವೀರಭದ್ರನು ದಕ್ಷಬ್ರಹ್ಮನ ಶಿರಸ್ಸಿನೊಡನೆ ಯಜ್ಞಪುರುಷನ ಶಿರಸ್ಸನ್ನು ತೆಗೆದನೋ; ಯಜ್ಞಕ್ಕೆ ಬಂದಿದ್ದ ಇಂದ್ರಾದಿಗಳನ್ನೆಲ್ಲಾ ಜೈಸಿದನೋ, ಆ ವೃಷಭವಾಹನ ನಾದ ನಿನಗೆನಮಸ್ಕಾರವು. ಯಾವನ ಮಹಿಮೆಯಿಂದ ವೀರಭದ್ರನು ಶತ್ರುವಾದ ಹಿರಣ್ಯಕಶಿಪುವಿನ ಸಂಹಾರದಿಂದುತ್ಪನ್ನನಾದ ನರಸಿಂಹನ ಗರ್ವವನ್ನು ಮುರಿದು ಪ್ರಪಂಚಕ್ಕೆ ಸೌಖ್ಯವನ್ನುಮಾಡಿದನೋ ಅಂಥಾಸ್ವಾಮಿಯಾದ ನಿನಗೆ ನಮಸ್ಕಾ ರವು. ಎಲೈ ಧವಳಾಂಗನೇ ಯಾವಜನಗಳು ಯಾವಮೂರ್ತಿಯನ್ನು ತಮ್ಮಮ ನೋರಥಸಿದ್ಧಿಗಾಗಿ ಸೇವಿಸುತ್ತಾರೋ ಆ ದೇವತಾಸ್ವರೂಪವನ್ನೇ ನೀನುಹೊಂದಿ, ಅವರಿಗೆ ಕೃಪೆಯಿಂದ ಆಯಾಯಫಲಗಳನ್ನು ಕೊಡುತ್ತೀಯೆ, ಇಂದ್ರನು ಸಕಲ ದೇವತೆಗಳೊಡನೆಯೂ, ಬ್ರಹ್ಮನು ನಾಲ್ಕುವೇದಗಳೊಡನೆಯೂ, ನಾರಾಯಣನು ಸಕಲಲೋಕಗಳೊಡನೆಯೂ, ಪ್ರಳಯವನ್ನು ಹೊಂದುತ್ತಿರಲಾಗಿ ಆಗ ನೀನೊ ಬ್ಬನೇ ನಾಶವಾಗದೆಇದ್ದೆ. ಹೀಗೆ ಆ ಪ್ರಮಥಶ್ರೇಷ್ಠರಿಂದ ಮಾಡಲ್ಪಟ್ಟಸ್ತೋತ್ರವು, ಸತ್ಯವಾದ್ದರಿಂದ ಆ ಪರಶಿವನಿಗೆ ಪ್ರೀತಿಯನ್ನುಂಟುಮಾಡಿತು. ಲೋಕದಲ್ಲಿ ಮಹಾ ತ್ಮರಮನಸ್ಸು ಸತ್ಯದಲ್ಲಿ ಆಸಕ್ತವಾಗುವದಿಲ್ಲ ಅಷ್ಟರಲ್ಲಿ ವಿಷ್ಣುಬ್ರಹ್ಮಮೊದಲಾದ ದೇವತೆಗಳು ಶಿವದರ್ಶನಾಪೇಕ್ಷೆಯುಳ್ಳವರಾಗಿ, ನಂದಿಕೇಶ್ವರನಿಂದ ಸಮ್ಮತಿಸಲ್ಪಟ್ಟ ಪ್ರವೇಶವುಳ್ಳವರಾಗಿ ಬಂದು, ಜಗದೀಶನಾದ ಪರಶಿವನಿಗೆ ನಮಸ್ಕರಿಸಿದರು. ಆಗ ಮುಂದಿರುವಮಹಾಕಾಳನೆಂಬ ಪ್ರಮಥನು ಮಹಾಪ್ರಭುವೇ ಕಟಾಕ್ಷಿಸಬೇಕೆಂದು ಹೇಳುತ್ತಿರಲು; ಸ್ವಾಮಿಯು ಪ್ರಮಥರಮೇಲಿಟ್ಟಿದ್ದ ದೃಷ್ಟಿಯನ್ನು ಪ್ರಯಾಸ ದಿಂದ ಎಳೆದು ದೇವತೆಗಳಮೇಲೆ ಇರಿಸಿದನು. ದೇವತೆಗಳು ಆತನ ದೃಷ್ಟಿಬಿದ್ದಮಾ ತ್ರದಿಂದ ಸಂತೋಷಗೊಂಡವರಾಗಿ ನೇಮಿಸಲ್ಪಟ್ಟಸ್ಥಳದಲ್ಲಿ ಒತ್ತಾಗಿ ಕುಳಿತು ಕೊಂಡರು. ಸಿದ್ಧರು, ಯಕ್ಷರು, ಗಂಧರ್ವರು, ವಿದ್ಯಾಧರರು, ಕಿನ್ನರರು, ಮೊದಲಾದವರು ಆ ಬ್ರಹ್ಮಾದಿಗಳ, ಉಭಯಪಾರ್ಶ್ವಗಳಲ್ಲಿ, ಕುಳಿತುಕೊಂಡರು. ಪ್ರಮಥರಲ್ಲಿ ಕೆಲವರು ಸಾಮಗಾನವನ್ನು ಮಾಡಿದರು. ಕೆಲವರು ಆಗಮಗಳನ್ನು ಪಠಿಸಿದರು, ಕೆಲವರು. ಯಜ್ಞವಿಧಿಗಳನ್ನು ವ್ಯಾಖ್ಯಾನಿಸಿದರು, ಕೆಲವರು ಮಂತ್ರಗಳನ್ನು ಜಪಿಸಿದರು, ಕೆಲವರು ಸಂತೋಷದಿಂದ ನರ್ತಿಸಿದರು. ಅನಂತರದಲ್ಲಿ ನಾರದಮುನಿಯು ಮನ್ಮಥನ ಶಿಂಜನಿಯ ಶಬ್ದದಂತೆ ಮನೋಹ

ರವಾದ ತನ್ನ ಬೃಹತಿಯೆಂಬ ವೀಣೆಯು ಪಂಚಮಧ್ವನಿಯಿಂದ ಪರಶಿವನ ಸಭೆಯಲ್ಲಿ ಉಂಟಾದ ಪ್ರೌಢವಾದಗಳನ್ನು ನಿಲ್ಲಿಸುವಂಥವನಾಗಿ ಆ ಸ್ಥಾನಕ್ಕೆ ಬಂದನು. ಆಗ ಪರಮೇಶ್ವರನು ಮಂಗಳಕರವಾದ ಸಂಗೀತರಸವೆಂಬ ಬೆಳದಿಂಗಳುಳ್ಳಂಥ; ಆನಾರದನ ಮುಖಚಂದ್ರನಲ್ಲಿ ದೃಷ್ಟಿಯನ್ನಿರಿಸಿ ಸ್ವಲ್ಪ ಹೊತ್ತು ಚಿತ್ತಾವಧಾನವುಳ್ಳವನಾಗಿದ್ದನು. ಪರಶಿವನು ಅವಧಾನಸಹಿತನಾಗುತ್ತಿರಲಾಗಿ, ಪರಸ್ಪರ ಸಂಭಾಷಣೆಯಿಂದಲೂ, ವಿದ್ಯಾವಿಚಾರದಿಂದಲೂ, ಭೃಂಗಿ ಮೊದಲಾದ ಪ್ರಮಥರನರ್ತದಿಂದಲೂ, ಬಿಡಲ್ಪಟ್ಟ ಸಭೆಯು ಚಿತ್ರದಲ್ಲಿ ಬರೆದಂತಾಯಿತು. ಸಂಗೀತಾನಂತರದಲ್ಲಿ ಶ್ಲಾಘನೀಯವಾದ ಸತ್ಕಾರವನ್ನು ಸ್ವೀಕರಿಸಿ, ಪರಶಿವನಿಂದ ಬೆಸಗೊಳಲ್ಪಟ್ಟವನಾಗಿ, ಭೂಲೋಕದಲ್ಲಿ ತಾನು ನೋಡಿದ ಸ್ಥಳಗಳನ್ನೂ ಅವುಗಳಲ್ಲಿ ನಡೆದ ವೃತ್ತಾಂತವನ್ನೂ ಹೇಳಿದನು. ಏನಂದರೆ:—ಎಲೈ ಜಗದೀಶನೇ ನಾನು ಕೇದಾರಕ್ಷೇತ್ರದಲ್ಲಿ ತೀರ್ಥವನ್ನು ಪರಿಗ್ರಹಿಸಿ, ಕಾಶೀಕ್ಷೇತ್ರ ದರ್ಶನದಿಂದ ಸಫಲವಾದ ಜನ್ಮವುಳ್ಳವನಾಗಿ; ಅಲ್ಲಿಂದ ಪೂರ್ವ ಸಮುದ್ರದ ತೀರದ ಮಾರ್ಗದಿಂದ ದಕ್ಷಿಣ ಸಮುದ್ರತೀರಕ್ಕೆ ಐದಿದೆನು. ಅಲ್ಲಿ ಪೂಜ್ಯನಾದ ರಾಮೇಶ್ವರನನ್ನು ಸೇವಿಸಿ, ಆ ಬಳಿಕ ಉತ್ಕೃಷ್ಟವಾದ ವ್ಯಾಘ್ರಪುರಿಯನ್ನು ಸೇರಿ, ಅಲ್ಲಿ ಮನಂಗೊಳಿಸುವ ಶಿವನ ನರ್ತನವನ್ನು ನೋಡಿ, ಕೃತಾರ್ಥನಾದೆನು. ಅನಂತರ ಅರುಣಾಚಲೇಶ್ವರನ ಸೇವೆಯನ್ನು ಮಾಡಿಕೊಂಡು, ಆಶ್ಚರ್ಯಗಳಿಗೆ ಜನನಸ್ಥಲವೆನಿಸಿದ ಕಾಂಚೀ ಪಟ್ಟಣವನ್ನು ನೋಡಿ, ವಟಾರಣ್ಯೇಶ್ವರನನ್ನು ಸೇವಿಸಿ, ಆ ಮೇಲೆ ಪರಮೇಶ್ವರನಿಗೆ ಇಷ್ಟವಾದ ಪಾಶಾನಗರಿಗೆ ಹೋದೆನು. ಆ ಪುರವರದಲ್ಲಿ ಪರಿಪೂರ್ಣನೂ, ವೇದಾಂತ ವೇದ್ಯನೂ, ಜ್ಞಾನಿಗಳ ಮನಸ್ಸಿಗೆ ಗೋಚರನೂ, ಅನಾದಿಯೂ, ದೇವತಾ ಸಾರ್ವಭೌಮನೂ ಆಗಿರುವ ಪರಮೇಶ್ವರನು ಆ ಪಟ್ಟಣದಲ್ಲಿ ಪ್ರಕಾಶಿಸುತ್ತಾನೆ. ಅನಂತರದಲ್ಲಿ ಜೇಡರ ಕನ್ನಯ್ಯನ ಭಕ್ತಿ ರೀತಿಗೆ ಕಾಮಧೇನುವಾಗಿಯೂ, ಪಾಪಿಗಳಿಗೆದುರ್ಲಭವಾಗಿಯೂ, ಪುಣ್ಯಾತ್ಮರಿಗೆ ದರ್ಶನೀಯವಾಗಿಯೂ, ಇರುವ ಭೂಕೈಲಾಸವೆನಿಸುವ ಕಾಳಹಸ್ತಿಯನ್ನೈದಿದೆನು. ಪೂರ್ವದಲ್ಲಿ ಅವತರಿಸಿದ್ದ ಸುಂದರನಂಬಿ ಮುಂತಾದ ಪ್ರಮಥರಿಂದ ಸ್ಥಾಪಿಸಲ್ಪಟ್ಟ ಆಗಮೋಕ್ತಾಚಾರರೂಪವಾದ ಶಿವಾಜ್ಞೆಯು ರಾಮೇಶ್ವರ ಮೊದಲ್ಗೊಂಡು ಕಾಳಹಸ್ತಿಯ ಪರ್ಯಂತವಾಗಿ ಆಶ್ಚರ್ಯಕರವಾದ ಮಹಿಮೆಯಿಂದ ವಿಹಾರವನ್ನು ಮಾಡುತ್ತದೆ. ಬಳಿಕ ಆಂಧ್ರ ದೇಶಕ್ಕೆ ಹೊಕ್ಕು, ಶ್ರೀ ಶೈಲದ

ಶಿಖರಕ್ಕೆ ತಲೆಯಿಂದ ನಮಸ್ಕರಿಸಿ, ಅಲ್ಲಲ್ಲಿ ಸಂಚರಿಸುತ್ತಾ, ವೇದಾಗಮ ವಿರುದ್ಧವಾದ ಶಾಸ್ತ್ರಗಳ ವಿಷಯವಾಗಿ ಮಾಡಲ್ಪಡುತ್ತಿದ್ದ ಸಂಭಾಷಣೆಯನ್ನು ಕೇಳಿದೆನು. ಆ ದೇಶದಲ್ಲಿ ಕೆಲವರು ಅಂಥಾ ಶಾಸ್ತ್ರಸಂಗತಿಗಳನ್ನು ತಿಳಿದುಕೊಂಡು, ಅದರಲ್ಲಿ ಹೇಳಲ್ಪಟ್ಟ ಆಚಾರಗಳಿಗೂ ಕರ್ಮಗಳಿಗೂ, ವಿಧೇಯರಾಗಿ, ಅವುಗಳಲ್ಲಿ ಆಸಕ್ತರಾಗಿ, ಧನ್ಯರಾಗಿದ್ದಾರೆ. ಭಕ್ತಿಹೀನವಾದ ಆ ದೇಶವನ್ನು ಬಿಟ್ಟು, ಕರ್ಣಾಟ ದೇಶವನ್ನು ಪ್ರವೇಶಿಸಿ, ಅದರಲ್ಲಿಯೂ ಶಿವಭಕ್ತಿಗಂಧವೇ ಇಲ್ಲದವರನ್ನು ನೋಡಿ, ನನ್ನ ಮನಸ್ಸು ಶೀಘ್ರವಾಗಿ ಹೆದರಿತು. ಹೀಗೆಯೇ ಮುಂದೆ ಮುಂದೆ ಪದೇ ಪದೇ ಗರ್ವಿಷ್ಠರ ದರ್ಶನಗಳುಂಟಾಗಬಹುದೆಂದು ಊಹಿಸಿ, ಭೂಲೋಕವನ್ನು ನೋಡುವದರಲ್ಲಿ ಕುಗ್ಗಿದ ಸಂತೋಷವುಳ್ಳವನಾಗಿ, ಈಗ ಸ್ವಾಮಿಯ ಸಭೆಗೆ ಬಂದೆನು. ಶಿವನು ಹೀಗೆ ನಾರದಮುನಿಯಿಂ ಹೇಳಲ್ಪಟ್ಟ ನಾನಾ ವಿಧವಾದ ಭೂಲೋಕದ ವಾರ್ತೆಯನ್ನು ಕೇಳಿ, ಪ್ರಕಾಶಮಾನನಾದ ವೃಷಭೇಶ್ವರನನ್ನು ನೋಡಿ ಮುಖಸಂಜ್ಞೆಯಿಂದ ಕರೆದನು. ವಿಧಾನವನ್ನು ತಿಳಿದವನಾಗಿಯೂ, ಮಹಾತ್ಮನಾಗಿಯೂ, ಎರಡನೇ ಶಿವನಾಗಿಯೂ ಇರುವ ಆ ವೃಷಭೇಶ್ವರನು ಕೂಡ ಶಿವಪ್ರೇರಣೆಯಿಂದ ಕೈಗಳನ್ನು ಜೋಡಿಸಿ ಮುಂದೆ ನಿಂತುಕೊಂಡು, ಮಾಡತಕ್ಕ ಕಾರ್ಯವೇನು ? ಅಪ್ಪಣೆಯಾಗಬೇಕೆಂದು ಕೇಳಿದನು. ಆಗ ಪರಮೇಶ್ವರನು ವೃಷಭೇಶ್ವರನನ್ನು ಕುರಿತು ಆಜ್ಞಾಪಿಸಿದನು. ಏನಂದರೆ ನೀನು ಭೂಮಿಯಲ್ಲಿ ಅವತರಿಸಿ, ಸಕಲ ದುರ್ಮತಗಳನ್ನು ಗೆದ್ದು, ಪ್ರಸಿದ್ಧವಾದ ಸಚ್ಚರಿತ್ರಗಳಿಂದ ನನ್ನ ಆಜ್ಞೆಯನ್ನು ಪರಿಪಾಲಿಸಬೇಕು. ಭೂಲೋಕದಲ್ಲಿ ಮಾಧವನೆಂಬೊಬ್ಬ ಬ್ರಾಹ್ಮಣನು ಪುತ್ರಾಪೇಕ್ಷೆಯುಳ್ಳವನಾಗಿ, ನನ್ನನ್ನು ಕುರಿತು ತಪಸ್ಸು ಮಾಡುತ್ತಾನೆ. ಆತನ ಹೆಂಡತಿಯು ನಿನ್ನಲ್ಲಿಯೇ ಆಸಕ್ತವಾದ ಮನಸ್ಸುಳ್ಳವಳಾಗಿ ನಂದಿವ್ರತವನ್ನು ಮಾಡುತ್ತಾಳೆ. ಎಲೈ ವಿವೇಕಿಯೇ ನೀನು ಆ ದಂಪತಿಗಳಿಗೆ ಮಗನಾಗಿ ಹುಟ್ಟಿ, ಅನೇಕವಿಧವಾದ ವ್ಯಾಪಾರಗಳಿಂದ ಪಾಷಂಡ ಮಾರ್ಗದಲ್ಲಿ ಪ್ರವರ್ತಿಸಿರುವವರನ್ನು ನಿಗ್ರಹಿಸಿ, ವೀರಶೈವ ಮತಸ್ಥಾಪನೆಯನ್ನು ಮಾಡು. ವೀರಭದ್ರನೇ ಮುಂತಾದ ಪ್ರಮಥಶ್ರೇಷ್ಠರು ಭೂಮಿಯಲ್ಲಿ ಕ್ರಮವಾಗಿ ಅವತರಿಸಿ, ಪ್ರತ್ಯಕ್ಷವಾಗಿರುವ ಪ್ರಮಾಣಗಳಿಂದ ನನ್ನ ಆಜ್ಞೆಯನ್ನು ನೆಲೆಗೊಳಿಸುವರು. ಪೂರ್ವದಲ್ಲಿ ಕಂಟಕಾಸುರನೆಂಬೊಬ್ಬ ರಾಕ್ಷಸನು ಕಠಿನವಾದ ತಪಸ್ಸುಗಳಿಂದ ನನ್ನನ್ನು ಸಂತೋಷಪಡಿಸಿ, ಸ್ವಪ್ನದಲ್ಲಿ

ಪ್ರತ್ಯಕ್ಷನಾದ ನನ್ನನ್ನು ತನಗೆ ಸ್ವರ್ಗರಾಜ್ಯವನ್ನು ಕೊಡಬೇಕೆಂದು ಬೇಡಿದನು. ಆದಿಯಲ್ಲಿ ನೀನು ಅನೇಕ ಪ್ರಾಣಿಗಳನ್ನು ನಿಷ್ಕಾರಣವಾಗಿ ಕೊಂದಿದ್ದೀಯೆ; ಆದಕಾರಣ ಭೂಮಿಯಲ್ಲಿ ನೀನು ರಾಜನಾಗಿ ಹುಟ್ಟಿ, ಯಾವಾಗ ಶಿವಭಕ್ತನ ಕೈಯ್ಯ ಆಯುಧದಿಂದ ಸಂಹೃತನಾಗುವೆಯೋ ಆಗ ನಿನಗೆ ಸ್ವರ್ಗಾಧಿಪತ್ಯವಾಗಲಿ. ಈರೀತಿಯಾಗಿ ನನ್ನಿಂದ ಆಜ್ಞಾಪಿಸಲ್ಪಟ್ಟವನಾಗಿ ಭೂಲೋಕದಲ್ಲಿ ಅವತರಿಸಿ, ವೇದವಿರುದ್ಧವಾದ ಶಾಸ್ತ್ರವನ್ನು ನಡವಳಿಕೆಯಲ್ಲಿ ತರುತ್ತಾ, ಶಿವಭಕ್ತರಲ್ಲಿ ದ್ವೇಷವನ್ನು ಹೊರಪಡಿಸುತ್ತಾ ಬಹಳ ಐಶ್ವರ್ಯವಂತನಾಗಿದ್ದಾನೆ. ಪಾಪದಿಂದ ಪುಣ್ಯವೂ ಕತ್ತಲೆಯಿಂದ ಬೆಳಕೂ, ಬಿಸಿಲಿನಿಂದ ನೆರಳೂ, ಕೆಟ್ಟವನಿಂದ ಗುಣಾಢ್ಯನೂ ಪ್ರಸಿದ್ಧಿಯನ್ನು ಪಡೆದಿರುವಂತೆ, ಸನ್ಮಾರ್ಗವನ್ನು ದೂಷಿಸುವಂಥಾ ದುರಾತ್ಮನಿಂದ ಪರಿಶುದ್ಧವಾದ ಮತವು ಪ್ರಸಿದ್ಧಿಯನ್ನು ಹೊಂದುತ್ತದೆ. ಆ ರಾಯನಿಗೆ ಬುದ್ಧಿಶಾಲಿಯಾದ ಬಲದೇವನೆಂಬ ಮಂತ್ರಿ ಇದ್ದಾನೆ. ಆತನು ನನ್ನನ್ನೆ ದೇವರನ್ನಾಗಿಯೂ, ನನ್ನ ಭಕ್ತನನ್ನೇ ಕುಲವಂತನನ್ನಾಗಿಯೂ, ತಿಳಿದಿದ್ದಾನೆ. ಮತ್ತು ನನ್ನ ಪ್ರೀತಿಗಾಗಿ ಅನೇಕ ದಾನಗಳನ್ನು ಮಾಡಿ, ಇಷ್ಟಲಿಂಗವನ್ನು ಹಸ್ತದಲ್ಲಿಟ್ಟುಕೊಂಡು, ಪೂಜಿಸುತ್ತಿರುವ ವೀರಶೈವನಿಗೆ ಕನ್ಯೆಯನ್ನು ಕೊಡಬೇಕೆಂದು ಅಪೇಕ್ಷಿಸುವವನಾಗಿ ನನ್ನನ್ನು ಪ್ರಾರ್ಥಿಸುತ್ತಾನೆ. ಈ ಗಂಗೆಯು, ಭಕ್ತಶಿರೋಮಣಿಯಾದ ಆ ಬಲದೇವನಿಗೆ ಪುತ್ರಿಯಾಗಿ ಆತನ ಅಭಿಲಾಷೆಯನ್ನು ಪೂರ್ತಿಗೈದು, ಜಂಗಮಾರ್ಚನೆಯನ್ನು ಮಾಡುವ ನಿನಗೆ ಸಹಾಯಕಳಾಗಿಬರಲಿ. ಗಂಗೆಯು ಕೇಳಿ, ಎಲೈ ಸ್ವಾಮಿಯೇ ನಾನು ಯಾವಾಗಲೂ, ನಿನ್ನ ಸೇವೆಯಲ್ಲಿ ಆಸಕ್ತಿಯುಳ್ಳವಳಾಗಿದ್ದೇನೆ; ಹೀಗಿರುವಲ್ಲಿ ನಿನ್ನ ಪ್ರಮಥನ ಸೇವಾಕಾರ್ಯವನ್ನು ಅನೇಕವಿಧೋಪಚಾರಗಳಿಂದ ಹ್ಯಾಗೆ ಮಾಡಲಿ. ಈಶ್ವರನು ಹೀಗೆ ಗಂಗೆಯಿಂದ ಹೇಳಲ್ಪಟ್ಟ ಮಾತುಗಳನ್ನು ಕೇಳಿ, ಸ್ವಲ್ಪನಕ್ಕು, ಆಶ್ಚರ್ಯವುಂಟಾಗುವಂತೆ ನಿರೂಪಿಸಿದನು. ಏನೆಂದರೆ, ಗಂಗೆಯೇ ಭೃಂಗಿ ಮೊದಲಾದ ನನ್ನ ಈ ಸಾಮಾಜಿಕರನ್ನು, ಪ್ರಮಥರೆಂದು ತಿಳಿ; ಈ ವೃಷಭೇಶ್ವರನನ್ನುಮಾತ್ರ ನಾನೆಂತಲೇ ಭಾವಿಸು. ಹೀಗೆ ಆಶ್ಚರ್ಯಕರವಾದ ಶಿವನ ಮಾತನ್ನು ಪಾರ್ವತಿಯು ಕೇಳಿ, ಕೈಮುಗಿದುಕೊಂಡು, ಸ್ವಾಮಿಾ ನೀನು ಈಗ ಅಪ್ಪಣೆಕೊಡಿಸಿದ್ದು ನಿನಗೆ ಭಕ್ತರ ವಿಷಯದಲ್ಲಿರುವ ಪ್ರೇಮಾತಿಶಯದಿಂದಲೋ ಅಥವಾ ಸತ್ಯದಿಂದಲೋ ಸ್ವಲ್ಪವಾಗಿ ಬೆಸಸೆಂದಳು. ಪರಶಿವನು ಹೇಳಿದ್ದೇನೆಂದರೆ,-ಎಲೌ ಪಾರ್ವತಿಯೇ ಕೇಳು,

ಆದಿಯಲ್ಲಿ ನಾನು ಲೋಕಗಳನ್ನು ನಿರ್ಮಿಸಿ, ಅವುಗಳ ಆಶ್ರಯಕ್ಕಾಗಿ ಧರ್ಮವೆಂಬ ನನ್ನ ಮೊದಲನೇ ಅಂಶವನ್ನು ಸತ್ಪುರುಷರ ಹೃದಯದಲ್ಲಿ ಸ್ಥಾಪಿಸಿದೆನು. ಸಕಲವಾದ ವೇದಮಾರ್ಗ ಮರ್ಮಗಳಿಗೆ ಆಧಾರವಾದ ಕರಚರಣಾದ್ಯವಯವಗಳುಳ್ಳಂಥ, ವೃಷಭಸ್ವರೂಪನಾದ ನನ್ನ ಕಲೆಯು ಮಹಾ ಪ್ರಳಯದಲ್ಲಿ ಮರಳಿ ನನ್ನನ್ನು ಸೇರಿತು. ಈ ವೃಷಭರೂಪವಾದ ಧರ್ಮಕ್ಕೆ ವೇದಗಳೇ ಆಭರಣಗಳೂ, ಓಂಕಾರವೇ ಮುಖವೂ, ವ್ಯಾಕರಣಾದಿ ಶಾಸ್ತ್ರಗಳೇ ಉತ್ತಮವಾದ ಅಂಗಗಳೂ ಶಿವಾಗಮವೇ ಚಿತ್ತವೂ, ಅನೇಕ ತೀರ್ಥಗಳೇ ಅಂಡಕೋಶವೂ ಆದವು. ಜ್ಞಾನಸ್ವರೂಪನಾಗಿಯೂ, ಪ್ರಪಂಚದಲ್ಲಿ ಪರಿಪೂರ್ಣನಾಗಿಯೂ; ಪೂಜ್ಯನಾಗಿಯೂ, ವೇದ ಮುಂತಾದ ವಿದ್ಯೆಗಳ ಅಕಾರವೇ ದೇಹವವಾಗುಳ್ಳವಾಗಿಯೂ, ಇರುವ ಈ ವೃಷೇಶನ ಸೇವೆಯಿಂದ ತಪಸ್ಸಿಲ್ಲದೆ ಮೋಕ್ಷವಾಗುತ್ತದೆ. ಈತನಿಲ್ಲದೆ ತಪಸ್ಸು ಕೂಡ ನಿಷ್ಫಲವಾಗುವುದು. ವೀರಶೈವಮಾರ್ಗದಲ್ಲಿ ನಡೆಯುವ ವಿಷಯದಲ್ಲಿ ಶಕ್ತರಾದ ವಿದ್ವಾಂಸರಿಗೆ ಸ್ವಾಮಿಯಾದ ಈ ವೃಷಭೇಶ್ವರನು ಅದು ಮೊದಲ್ಗೊಂಡು ನನ್ನ ದೇಹಸ್ಪರ್ಶಕ್ಕೆ ಯೋಗ್ಯವಾದ ವಾಹನತ್ವವನ್ನು ಹೊಂದಿದ್ದಾನೆ. ಎಲೌ ದೇವಿಯೇ ಪ್ರಳಯವು ಕಳೆಯುತ್ತಿರಲಾಗಿ, ಕೆಲವುಕಾಲದಮೇಲೆ ತಿರಿಗಿ ಸಮಸ್ತಲೋಕಗಳೂ ಸೃಷ್ಟಿಸಲ್ಪಡುತ್ತಿರುವಲ್ಲಿ ಶಿಲಾದನಾಮಕನಾದ ಒಬ್ಬ ಮುನಿಯು ಅನೇಕವಾದ ಉಗ್ರತಪಸ್ಸುಗಳಿಂದ ನನ್ನನ್ನು ಮೆಚ್ಚಿಸಿದನು. ವರವನ್ನು ಕೊಡುವುದಕ್ಕಾಗಿ ಪ್ರಸನ್ನನಾದ ನನ್ನನ್ನು ನೋಡಿ, ಆ ಶಿಲಾದಋಷಿಯು ಸಂತೋಷವೆಂಬ ಕ್ಷೀರಸಮುದ್ರದಲ್ಲಿ ಮುಳುಗಿ, ನನ್ನ ಅಂಶವಾಗಿಯೂ ನನ್ನಲ್ಲಿ ಉತ್ತಮವಾದ ಭಕ್ತಿಯುಳ್ಳವನಾಗಿಯೂ, ಇರುವ ಒಬ್ಬ ಮಗನನ್ನು ಯಾಚಿಸಿದನು. ಅನಂತರದಲ್ಲಿ ನಾನು ಅದಕ್ಕೆ ಒಪ್ಪಿ, ವೃಷಭೇಶ್ವರನಿಗೆ ನೇಮಿಲು; ಆತನು ನಿರ್ಮಲವಾದ ಒಂದಾನೊಂದಂಶದಿಂದ ಅಯೋನಿಜನಾಗಿ, ಶಿಲಾದಮುನಿಯು ಯಜ್ಞಕ್ಕಾಗಿ ಹಸನುಮಾಡಿಸುತ್ತಿದ್ದ ಭೂಮಿಯಲ್ಲಿ ಅವತರಿಸಿದನು. ಆಗ ತಂದೆಯಾದಶಿಲಾದನು ಸರ್ವಾಂಗಗಳಲ್ಲಿ ಭಸ್ಮರುದ್ರಾಕ್ಷಗಳಿಂದ ಅಲಂಕರಿಸಲ್ಪಟ್ಟವನಾಗಿಯೂ, ಜಟಾಜೂಟದಿಂದ ಕೂಡಿದವನಾಗಿಯೂ, ಕೌಪೀನಧಾರಿಯಾಗಿಯೂ, ಸಂತೋಷವನ್ನುಂಟುಮಾಡುವವನಾಗಿಯೂ ಇರುವ ಪುತ್ರನನ್ನು ನೋಡಿ, ಆತನಿಗೆ ನಂದಿಯೆಂಬ ಹೆಸರನ್ನಿಟ್ಟನು. ಆ ಬಾಲಕನಿಗೆ ಸಿದ್ಧಾಂತನೇಸತ್ಯವು, ಗುರುಪಾದಧ್ಯಾನವೇ ಬೆಣ್ಣೆಯು, ಸಕಲವೇದಗಳೇ ತೊದಲುಮಾತುಗಳು, ಶಿವಜ್ಞಾನವೇ

ದಾದಿಯೆನಿಸಿದವು. ಆ ನಂದೀಶನು ತಂತೆಯ ಆಜ್ಞಾನುಸಾರವಾಗಿ ಶ್ರೀಶೈಲದ ನೈರುತ್ಯದಿಕ್ಕಿನಕಡೆಯಲ್ಲಿ ನನ್ನ ಮನಸ್ಸನ್ನು ಮೆಚ್ಚಿಸುವದಕ್ಕೋಸ್ಕರ ಪವಿತ್ರವಾದ ಆಶ್ರಮವನ್ನಾಶ್ರೈಸಿದನು. ಗೆಡ್ಡೆ, ಗೆಣಸು, ಹಣ್ಣು, ಹಣ್ಣೆಲೆ, ಮೂರುಸೇರೆನೀರು ಇವುಗಳನ್ನು ಸೇವಿಸುತ್ತಾ ; ನಿರ್ಮಲಬುದ್ಧಿಯುಳ್ಳವನಾಗಿದ್ದನು. ಈ ವಿಧವಾದ ವ್ರತಗಳಿಂದ ಅನೇಕದಿನಗಳನ್ನು ಕಳೆದು, ಮೆಲ್ಲನೆ ತತ್ವಮಾರ್ಗವನ್ನು ನಿಶ್ಚೈಸಿದವನಾಗಿ ಪೂರ್ವವೃತ್ತಿಯನ್ನು ಬಿಟ್ಟು, ಚಕೋರಪಕ್ಷಿಯಂತೆ ಬೆಳುದಿಂಗಳನ್ನೂ, ಸರ್ಪದಂತೆ ವಾಯುವನ್ನೂ, ಚಾತಕಪಕ್ಷಿಯಂತೆ ಮುಂಗಾರುಹನಿಯನ್ನೂ, ಸೇವಿಸುವುದಕ್ಕೆ ಆರಂಭಿಸಿದನು. ಆ ನಂದೀಶನು ಬೇಸಿಗೆಯಲ್ಲಿ ಒಂದು ಕಾಲನ್ನು ಭೂಮಿಯಲ್ಲಿಟ್ಟು, ಮತ್ತೊಂದುಕಾಲನ್ನು ತೊಡೆಯಮೇಲೆ ಅಡ್ಡಲಾಗಿರಿಸಿ. ನಿಂತುಕೊಂಡು ಸೂರ್ಯನನ್ನು ನೋಡುತ್ತಾ, ನಾಲ್ಕಗ್ನಿಗಳ ನಡುವೆ ತಪಸ್ಸನ್ನು ಮಾಡಿದನು. ಹಗಲಿರುಳುಗಳನ್ನು ತಿಳಿಯುವುದಕ್ಕಾಗದಂಥ ಮಳೆಗಾಲದಲ್ಲಿ ಮುಖದಮೇಲೆ ಮಳೆಹನಿಗಳು ಹೊಡೆಯುತ್ತಿರಲಾಗಿ, ಕುತ್ತಿಗೆಯುದ್ದ ನೀರಿನಲ್ಲಿ ನಿಂತನು. ಮತ್ತು ತಂಪಾಗಿ ಬೀಸುತ್ತಿರುವ ಗಾಳಿಯಿಂದ ಕೂಡಿದವುಗಳಾಗಿಯೂ, ಸೂರ್ಯನ ತೇಜಸ್ಸನ್ನು ಅಡಗಿಸುವಂಥವುಗಳಾಗಿಯೂ, ಮಂಜಿನಧಾರೆಯಿಂದ ಮುಸುಕಲ್ಪಟ್ಟವುಗಳಾಗಿಯೂ ಇರುವ ಹಿಮಕಾಲದ ದಿನಗಳನ್ನು ಅರೇಕಲ್ಲುಗಳಮೇಲೆ ಕಳೆದನು. ನಿಶ್ಚಲನಾದ ನಂದೀಶ್ವರನು ಇದ್ರನ ಧೈರ್ಯವನ್ನು ಕೆಡಿಸತಕ್ಕವುಗಳಾಗಿಯೂ, ಬ್ರಹ್ಮನಿಗೆ ಮನೋವ್ಯಥೆಯನ್ನು ಕೊಡತಕ್ಕವುಗಳಾಗಿಯೂ, ವಿಷ್ಣುವಿಗೆ ಭಯವನ್ನುಂಟುಮಾಡತಕ್ಕವುಗಳಾಗಿಯೂ, ಇರುವ ಉಗ್ರತಪಸ್ಸುಗಳನ್ನು ಮಾಡಿದನು. ಆತನ ಶರೀರವು ತಪಸ್ಸಿನಿಂದ ಕೃಶವಾದಂಥಾದ್ದಾದಾಗ್ಯೂ ತೇಜೋಮಯವಾಗಿದ್ದುದರಿಂದ ಬೆಂಕಿಯಲ್ಲಿ ಪುಟವನ್ನಿಟ್ಟ ನಿರ್ಮಲವಾದ ಚಿನ್ನದಂತೆ ಪ್ರಕಾಶಿಸಿತು. ಪ್ರಳಯಕಾಲದಲ್ಲಿ ಲೋಕವನ್ನು ಕ್ಷೋಭೆಪಡಿಸುವುದರಲ್ಲಿ ಸಮರ್ಥವಾದ ನನ್ನ ಫಾಲಾಗ್ನಿಗೆ ಸಮಾನವಾದಂಥ ಮತ್ತು ಭಯಂಕರವಾಗಿಯೂ, ಅದ್ಭುತವಾಗಿಯೂ ಇದ್ದಂಥ ಆತನ ತಪೋಮಹಿಮೆಯು ಪ್ರಪಂಚವನ್ನೆಲ್ಲಾ ವ್ಯಾಪಿಸಿತು. ಕುಲಾಚಲಗಳೂ, ದಿಗ್ಗಜಗಳೂ, ಆದಿಕೂರ್ಮನೂ, ಆದಿಶೇಷನೂ, ಭೂಭಾರವನ್ನು ಹೊರುವುದರಲ್ಲಿ ಅಸಮರ್ಥರಾದರು. ಸೂರ್ಯ ಮುಂತಾದ ಸಕಲ ಗ್ರಹಗಳೂ ತಮ್ಮ ತಮ್ಮ ತೇಜೋಗರ್ವಗಳನ್ನು ಬಿಟ್ಟು, ಸ್ತಂಭೀಭೂತರಾದರು. ಆ ಕಾಲದಲ್ಲಿ ಸಮುದ್ರ

ವೃಷಭನನ್ನೇ ವಿಶೇಷವಾಗಿ ನೋಡುತ್ತಿರುವ ಸಭೆಯನ್ನು ಬಿಟ್ಟನು. ಬಳಿಕ ಉನ್ನತವಾದ ರೋಹಣಾಚಲದಲ್ಲಿಯೂ ನೀಚವಾದ ಸಮುದ್ರದ ಚಿಪ್ಪುಗಳಲ್ಲಿಯೂ ಅಮೂಲ್ಯವಾದ ರತ್ನಗಳು ಜನಿಸುವಂತೆ ತೇಜಸ್ಸುಗಳಿಂದ ಶತೃಗಳ ಅಜ್ಞಾನಾಂಧಕಾರವನ್ನು ಪರಿಹರಿಸುವಂಥಾ ಪ್ರಮಥರು ಶೀಘ್ರದಲ್ಲಿ ಶಿವಾಜ್ಞೆಯನ್ನು ನೆರವೇರಿಸುವುದಕ್ಕಾಗಿ ಉತ್ತಮಕುಲಗಳಲ್ಲಿಯೂ, ನೀಚಕುಲಗಳಲ್ಲಿಯೂ ಜನಿಸಿದರು. ಮನೋಹರವಾದ ಸೌಂದರ್ಯದಿಂದ ಪೂರ್ಣನೂ ಸತ್ಯವಾದವಸ್ತುವನ್ನು ಪ್ರಕಾಶಗೊಳಿಸುವವನೂ, ಶಿವನಿಂದ ಕೊಡಲ್ಪಟ್ಟ ಬಲವುಳ್ಳವನೂ, ಆದ ವೃಶಭೇಶನೂ ಕೂಡ ಶ್ರೇಷ್ಠವಾದ ಶಿವಯೋಗವನ್ನವಲಂಬಿಸಿ, ಪುತ್ರಸಂತಾನಾಪೇಕ್ಷೆಯಿಂದ ವ್ರತವನ್ನಾಚರಿಸುತ್ತಿದ್ದ ಮಾದಾಂಬೆಯ ಮಂಗಳಕರವಾದವುದರವನ್ನೈದಿದನು.

ಬಸವೇಶವಿಜಯದಲ್ಲಿ ಮೊದಲನೇ ಅಧ್ಯಾಯವು
ಸಮಾಪ್ತವಾಯಿತು.

---

## ಎರಡನೇ ಅಧ್ಯಾಯವು.

ಅನಂತರದಲ್ಲಿ ಆನಂದದಿಂದ ತುಂಬಲ್ಪಟ್ಟ ಮಾದಾಂಬೆಯು ಪತಿಯಾದ ಮಾದಿರಾಜನ ಇಷ್ಟಾರ್ಥಸಿದ್ಧಿಗೆ ಸೂಚಕವಾದ ಗರ್ಭಚಿಹ್ನೆಯನ್ನು ಧರಿಸಿದಳು. ನೂತನವಾದ ಶಿವಕ್ತಿ ಸಂಪತ್ತಿಯೆಂಬ ಅಮೃತಪಾನದಿಂ ಸುಖಿತಳಾದ ಮಾದಾಂಬೆಗೆ ಮನೋಹರಗಳಾದ ಇತರ ರಸಗಳಲ್ಲಿಯೂ ಅರುಚಿಯುಂಟಾಯಿತು. ಆಕಳಿಕೆಯಿಂದ ಬಾಯಿತೆರೆಯುತ್ತಿರುವ ಮಾದಾಂಬೆಯು ವೃಷಭೇಶನ ವೃತ್ತಾಂತವನ್ನು ತಿಳಿಯಬೇಕೆಂಬ ಇಚ್ಛೆಯುಳ್ಳ ಶಿವದೂತನಪ್ರವೇಶಕ್ಕೆ ಮಾರ್ಗವನ್ನು ಕೊಡುವಳೋ ಎಂಬಂತೆ ಕಾಣಿಸಿದಳು. ಧವಳಲೋಚನೆಯಾದ ಆ ಮಾದಾಂಬೆಗೆ ಭವಿಗಳು ಅಡಿಗೆಯಂಮಾಡುವಲ್ಲಿ ಉಂಟಾಗುವ ವಾಸನೆಗಳನು ಸೈರಿಸದಕಾರಣದಿಂದಲೋ ಎಂಬಂತೆ ಪ್ರತಿಕ್ಷಣವೂ ಓಕರಿಕೆಯುಂಟಾಯಿತು. ಶುಭ್ರಕಾಂತಿಯಿಂದಕೂಡಿದ ಆಕೆಯದೇಹವು ಹೊರಗೆಹೊರಡುತ್ತಿರುವ ಅತಿನಿರ್ಮಲವಾದ ವೃಷಭೇಷನ ದೇಹಕಾಂತಿಗಳಿಂದ ಅಲಂಕರಿಸಲ್ಪಟ್ಟವೋ ಎಂಬಂತೆ ಕಾಣಿಸಿತು ಆಕೆಯ

ದೇಹದ ಧಾವಳ್ಯವು ಮುಖದಲ್ಲಿ ಮಂದಹಾಸದ ಕಾಂತಿಯನ್ನೂ ಕಂಠದಲ್ಲಿ ಮುಕ್ತಾಸರದ ಕಾಂತಿಯನ್ನೂ ಕುಚಗಳಲ್ಲಿ ಶ್ರೀಗಂಧರಸದ ಕಾಂತಿಯನ್ನೂ ವಿಸ್ತರಿಸಿತು. ಆಕೆಯ ಕಪ್ಪಾದಕುಚಾಗ್ರಗಳು ಗರ್ಭದಲ್ಲಿರುವ ವೃಷಭೇಶನ ಮೂಗಿನ ಕಪ್ಪಿನಿಂದ ಮುಚ್ಚಲ್ಪಟ್ಟವೋ ಎಂಬಂತೆ ಕಾಣಿಸಿದವು. ಆಕೆಯ ಸೊಂಟವು ವೃದ್ಧಿಯನ್ನು ಹೊಂದುತ್ತಿರಲು; ಸ್ತನಗಳತೊಟ್ಟು ಕಪ್ಪಗಾಯಿತು. ಕಠಿನರಾದವರು ಇತರರ ಏಳಿಗೆಯನ್ನು ಸೈರಿಸುವದಿಲ್ಲವಷ್ಟೆ. ನಿದ್ರೆಯಿಂದ ಅಲಸಳಾದ ಆ ಮಾದಾಂಬೆಯು ಒಳಗಿರುವ ವೃಷಭನ ರೂಪವನ್ನು ನೋಡಬೇಕೆಂಬ ಇಚ್ಛೆಯೇ ಹೊರಗೆಬಂದು ಯೋಗನಿದ್ರಾಭ್ಯಾಸವನ್ನು ಮಾಡುತ್ತದೋ ಎಂಬಂತೆ ಕಾಣಿಸಿದಳು. ಮಸುಳಿಸಿದ ತ್ರಿವಳಿಯುಳ್ಳದ್ದಾಗಿಯೂ, ಗೋಚರವಾಗುವ ರೋಮರಾಜಿಯಿಂದ ಕೂಡಿದುದಾಗಿಯೂ, ಉನ್ನತವಾದ ಹೊಕ್ಕಳುಳ್ಳದ್ದಾಗಿಯೂ ಇರುವ ಆಕೆಯನಡುವು ಮನೋಹರವಾಯಿತು. ಆಕೆಯಅಂಗವು ಬಳಲಿದಕಡೆಗಣ್ಣಿಂದಲೂ ಬಿಳುಪಾದ ಕೆನ್ನೆಯಿಂದಲೂ, ಕಪ್ಪಾದ ಸ್ತನಾಗ್ರದಿಂದಲೂ ಅಸ್ವತಂತ್ರವಾದ ಸಂಚಾರದಿಂದಲೂ, ಕೂಡಿತು. ರತ್ನಖಚಿತಗಳಾದ ಅಮೂಲ್ಯವಾದ ಆಭರಣಗಳು ಅನೇಕಗಳಿದ್ದಾಗ್ಯೂ, ಆಕೆಯಮನಸ್ಸು ರುದ್ರಾಕ್ಷಮಾಲಿಕೆಯ ಧಾರಣೆಯಲ್ಲಿಯೇ ಆಸಕ್ತವಾಯಿತು. ಪಚ್ಚಕರ್ಪೂರ, ಶ್ರೀಗಂಧ, ಅಗರು ಮೊದಲಾದ ಅನುಲೇಪನಗಳಲ್ಲಿ ಸ್ವಲ್ಪವೂ ಮನಸ್ಸಿಲ್ಲದವಳಾಗಿ ಭಸ್ಮೋದ್ಧೂಳನದಲ್ಲಿಯೇ ಆಸಕ್ತಿಯನ್ನಿಟ್ಟಳು.. ಮನೆಯಕೆಲಸಗಳನ್ನು ನಡಿಸುವದರಲ್ಲಿ ಅಶಕ್ತಳಾದ ಮಾದಾಂಬೆಯು ಮಾಹೇಶ್ವರ ಪಾದಪೂಜೆಯನ್ನು ಮಾಡುವದರಲ್ಲಿ ಬಲಸಂಪನ್ನಳೂ ಆಯಾಸಹೀನಳೂ ಆದಳು. ಆಕೆಯುಬೇರೆಬೇರೆ ಸುದ್ದಿಗಳನ್ನಾಡುವದರಲ್ಲಿ ಆಲಸ್ಯಪಡುತ್ತಿದಾಗ್ಯೂ, ಶಿವಸ್ತೋತ್ರಗಳಲ್ಲಿ ಆಲಸ್ಯವನ್ನುಬಿಟ್ಟಿದ್ದಳು. ರುದ್ರಾಕ್ಷವೃಕ್ಷಗಳ ತೋಟಗಳಲ್ಲಿಯೂ, ಇಂದ್ರನಂದನವನಪ್ರದೇಶಗಳಲ್ಲಿಯೂ, ಕೈಲಾಸಪರ್ವತಕ್ಕೆ ಸೇರಿದ ವನಸಮೀಪದಲ್ಲಿಯೂ, ವಿಹರಿಸುವದಕ್ಕೆ ಮನಸ್ಸನ್ನುಮಾಡಿದಳು. ಮತ್ತು ಶಿವನನ್ನು ತನ್ನಹೆಗಲಿನಿಂದ ಹೊತ್ತುಕೊಳ್ಳುವದಕ್ಕೂ, ಆತನಮುಂತೆ ಬೆತ್ತವನ್ನು ಹಿಡಿದುಕೊಂಡು ನಿಲ್ಲುವದಕ್ಕೂ ಅಪೇಕ್ಷೆಯನ್ನು ವಹಿಸಿದಳು. ಪಂಚಾಕ್ಷರೀ ಮಂತ್ರವನ್ನು ಜಪಿಸುವದರಲ್ಲಿ ಆಸಕ್ತರಾಗಿಯೂ, ಭಸ್ಮರುದ್ರಾಕ್ಷಗಳಿಂದ ಅಲಂಕರಿಸಲ್ಪಟ್ಟವರಾಗಿಯೂ, ಇರುವ ಉಪಮನ್ಯುಮುಂತಾದ ವೀರಶೈವಮುನಿಗಳು, ಸ್ವಪ್ನದಲ್ಲಿ ಆಕೆಯನ್ನು ಸೇವಿಸಿದರು. ಮಾದಾಂಬೆಯು ಕನಸಿನಲ್ಲಿ ನಾರದಮು

ಸಿಯ ವೀಣಾಗಾನವನ್ನೂ, ನಂದಿಕೇಶ್ವರನ ಮದ್ದಳೆಯಶಬ್ದವನ್ನೂ, ಕೇಳಿದಳು. ಭೃಂಗೀಶನ ನರ್ತನವನ್ನು ನೋಡಿದಳು. ತಾಯಿಾ ಪೂಜ್ಯಳಾದ ಮಾದಾಂಬೆಯೇ ನೀನು ಕೃತಾರ್ಥಳಾದೆ, ಸರ್ವೋತ್ಕೃಷ್ಟಳಾಗು; ಎಂಬ ಇಂಪಾದ ಆಕಾಶವಾಣಿ ಯನ್ನು ಕೇಳಿದಳು. ವೃಷಭೇಶ್ವರನು ಕೂಡ ಗರ್ಭದಲ್ಲಿ ದಿನಕ್ರಮದಿಂದ ಬೆಳೆ ಯುತ್ತಾ ತಾನು ಯೋಗಿಗಳಿಂದ ಧ್ಯಾನಿಸಲ್ಪಡುವದಕ್ಕೆ ಯೋಗ್ಯನಾದಾಗ್ಯೂ ಯೋಗದಲ್ಲಿ ಆಸಕ್ತವಾದ ಮನಸ್ಸುಳ್ಳವನಾದನು. ನಿಗ್ರಹಿಸಲ್ಪಟ್ಟಮನಸ್ಸುಳ್ಳ ವೃಷಭೇಶ್ವರನು ತನ್ನ ಯಡಗಾಲಹಿಂಮಡಿಯ ತುದಿಯಿಂದ ಗುದಸ್ಥಾನವನೊತ್ತಿ, ಆದರಮೇಲೆ ಬಲಗಾಲನ್ನು ದೃಢವಾಗಿರಿಸಿ, ತಡೆಯಲ್ಪಟ್ಟ ಪ್ರಾಣವಾಯುವೆಂಬ ದಂಡದ ಪ್ರಹಾರದಿಂದ ಕುಂಡಲಿನಿಯೆಂಬ ನಾಡಿಯನ್ನು ಎಚ್ಚರಿಸಿ, ತಲೆಯನ್ನೆ ತ್ತಿಸಿ, ಬೆಳಗುತ್ತಿರುವ ದೇಹವುಳ್ಳ ಅಕುಂಡಲಿನಿಯನ್ನು ಆದರ ಪ್ರಕಾಶವೆಂಬ ಸೂರ್ಯನಸ್ಪರ್ಶಕ್ಕೆ ಅಭಿಮುಖವಾಗಿ ವಿಕಸಿತವಾದ ಷಟ್ಚಕ್ರಕಮಲಗಳನ್ನು ಹೊಂದಿಸಿ, ಆದರನೇಲ್ಗಡೆಯಲ್ಲಿಯಿರುವ ಚಂದ್ರನ ಅಮೃತಧಾರೆಯಿಂದ ವ್ಯಾಪಿಸ ಲ್ಪಟ್ಟಂಥ ಮತ್ತು ನಿರ್ಮಲವಾದ ಸ್ಫಟಿಕದಂಡದೊಳಗಿರುವ ಹವಳದಂತೆ ತೋರುತ್ತಿ ರುವ ಆ ಕುಂಡಲಿನಿಯನ್ನು ಜಾರುತ್ತಿರುವ ಪರೆಯಮಧ್ಯದಲ್ಲಿರುವ ಕೆಂಜಾವನ್ನು ಕುಣಿಸುವಂತೆ ಕುಣಿಸಿ, ಹಾವಾಡಿಗನ ಭಾವವನ್ನು (ಮನುಷ್ಯಶ್ರೇಷ್ಠತ್ವವನ್ನು) ಪಡೆದನು. ಈ ಪ್ರಕಾರವಾಗಿ ವೃಷಭೇಶ್ವರನು ಆ ಮಾದಾಂಬೆಯ ಗರ್ಭದಲ್ಲಿ ಹೃದಯಂಗಮವಾದ ಆನಂದವನ್ನನುಭವಿಸುತ್ತಾ, ಬಹಿರ್ಮುಖನಾಗದೆ, ಮೂರು ವರ್ಷಗಳನ್ನು ಕಳೆದನು. ಆ ಮಾದಾಂಬೆಯು ಆ ಗರ್ಭಭಾರವನ್ನು ಹೊರುವದಕ್ಕೆ ಅಸಮರ್ಥಳಾಗಿ, ಶಿವಾಲಯಕ್ಕೈದಿ, ವೃಷಭೇಶ್ವರನ ಮುಂದೆನಿಂದು ವಿಜ್ಞಾಪಿಸಿ ಕೊಂಡಳು. ಸ್ವಾಮೀ ಲೋಕದಲ್ಲಿ ಭಾಗ್ಯವಂತೆಯರಾದ ಸ್ತ್ರೀಯರು ಗರ್ಭಧಾ ರಣೆಯನ್ನು ಮಾಡಿ, ಒಂಭತ್ತನೇತಿಂಗಳಲ್ಲಿ ಅಥವಾ ಹತ್ತನೇತಿಂಗಳಲ್ಲಿಮಗುವನ್ನು ಹೆರುತ್ತಾರೆ. ನಿನ್ನ ಸೇವೆಯಲ್ಲಿ ಆಸಕ್ತವಾದ ಮನಸ್ಸುಳ್ಳ ನನಗೆ ಮೂರುವರ್ಷಗಳು ಕಳೆದವು. ಈಭಾರವನ್ನು ಇಳಿಸು. ಸಂತತಿಯಿಲ್ಲದಿದ್ದರೂ ಚಿಂತೆಯಿಲ್ಲ ಎಂದಳು. ಆವೇಳೆಯಲ್ಲಿ ದೇವಾಲಯದೊಳಗೆ ಪರಸ್ಪರವಾಗಿ ಮಾತನಾಡುತ್ತಿರುವ ಜನಗಳಮು ಖದಿಂದ ಶೀಘ್ರದಲ್ಲಿಯೇ ನಿನ್ನ ಇಷ್ಟಾರ್ಥಸಿದ್ಧಿಯಾಗುವದೆಂಬ ಮಾತು ಹೊರಟಿತು. ಆಗಲೇ ವೃಷಭೇಶ್ವರನ ಕೊಂಬುಗಳನಡುವೆ ಯಿಡಲ್ಪಟ್ಟಿದ್ದ ಹೂವಿನಗೊಂಚಲು ಭ್ರಮರಧ್ವನಿಗಳೊಡನೆ ಹಾಗೆಆಗಲಿಯೆಂದು ಹೇಳುವಹಾಗೆ ಕೆಳಗೆ ಬಿದ್ದಿತು.

ಪ್ರಾಜ್ಞಳಾದ ಮಾದಾಂಬೆಯು ಉಪಶ್ರುತಿಯಿಂದ ವೃಷಭೇಶ್ವರನು ಪ್ರತ್ಯಕ್ಷವಾಗಿ ಕರುಣಿಸಿದನೆಂದು ಆನಂದಬಾಷ್ಪವುಳ್ಳವಳಾಗಿ ಆ ಪ್ರಸಾದಕುಸುಮವನ್ನು ತೆಗೆದುಕೊಂಡು, ಸಖಿಯರಿಂದ ಬಳಸಲ್ಪಟ್ಟವಳಾಗಿ ಮನೆಗೆಬಂದು ಪತಿಯಾದ ಮಾದರಸನಿಗೆ ನಂದೀಶ್ವರನ ಪ್ರಸಾದವನ್ನು ಕೊಟ್ಟಳು. ಆತನುಕೂಡ ಸಂತೋಷಪಟ್ಟನು. ಬಳಿಕ ಸ್ವಲ್ಪಕಾದೊಳಗಾಗಿ ಆಕೆಯು ಹೆರಿಗೆಗೆಸಿದ್ಧವಾಗಿ ಅಮೃತೋತ್ಪತ್ತಿಯು ಸಮೀಪಿಸಿರುವಲ್ಲಿ ಕ್ಷೀರಸಮುದ್ರದ ತರಂಗದಂತೆ ಶೋಭಿಸಿದಳು. ಆ ಬಳಿಕ ಒಂದಾನೊಂದು ರಾತ್ರಿಯಲ್ಲಿ ಮಾದಾಂಬೆಯು ಶಿವಪೂಜೆಗೈದು, ಶಿವಪ್ರಸಾದವನ್ನಾಸ್ವಾದಿಸಿ, ಸಂತೋಷದಿಂದ ಮಲಗಿಕೊಂಡಳು. ಅಷ್ಟರಲ್ಲಿಯೇ ವೃಷಭೇಶ್ವರನು ಶಿಶುತ್ವವನ್ನು ಪಡೆದು, ನಿಶ್ಚಲವಾದ ದೇಹವುಳ್ಳವನಾಗಿ ಶಿವನಪಾದಕಮಲವನ್ನು ಧ್ಯಾನಿಸುತ್ತಾ ಪ್ರಕಾಶಿಸಿದನು. ಮಾದಾಂಬೆಯ ಮಗ್ಗುಲಲ್ಲಿ ನಿರ್ಮಲವಾದ ಹಾಸಿಗೆಯಮೇಲೆ ಮಲಗಿರುವಮಗುವು, ಗಂಗಾನದೀತೀರದಲ್ಲಿರುವ ಧವಳವಾದ ಮಳಲುಗುಡ್ಡೆಯ ಮೇಲೆ ಕುಳಿತಿರುವ ಹಂಸಪಕ್ಷಿಯಮರಿಯಂತೆ ಕಾಣಿಸಿತು. ಅನಂತರದಲ್ಲಿ ಕೂಡಲಸಂಗಮೇಶ್ವರನು ಗುರುರೂಪವನ್ನು ಧರಿಸಿ, ಕೆಲವು ಪ್ರಮಥರೊಡನೆ ಮಾದಾಂಬೆಯುಮಲಗಿರುವ ಮನೆಯನ್ನೈದಿದನು. ಕರುಣಾರಸಭರಿತವಾದ ನಯನದಿಂದ ಆ ಶಿಶುವನ್ನುನೋಡಿ, ಅದರಮಸ್ತಕದಲ್ಲಿ ತನ್ನಹಸ್ತವನ್ನಿರಿಸಿ, ಹಣೆಯಲ್ಲಿವಿಭೂತಿಯನ್ನು ಹಚ್ಚಿದನು. ಬಳಿಕ ಆ ಮಗುವಿನ ಕಂಠದಲ್ಲಿ ಇಷ್ಟಲಿಂಗವನ್ನು ಧರಿಸಿ, ಕಿವಿಯಲ್ಲಿ ಷಡಕ್ಷರಮಂತ್ರವನ್ನುಪದೇಶಿಸಿದನು. ಶಿವದೀಕ್ಷಾಮಹಿಮೆಯಿಂದ ಆ ಶಿಶುವು ಗಣಿಯಲ್ಲಿದ್ದ ಮಣಿಯನ್ನು ಸಾಣೆಗೆಕೊಟ್ಟಂತೆ ಶೋಭಿಸಿತು. ಅಷ್ಟರಲ್ಲಿಯೇ ಆ ಬಾಲಕನ ದೇಹಕಾಂತಿಯೆಂಬ ಸೂರ್ಯನಬಿಸಿಸಿಲಿನಸೋಂಕಿನಿಂದಲೋ ಎಂಬಂತೆ ಆಕೆಯನೇತ್ರಕಮಲವು ಮೆಲ್ಲಮೆಲ್ಲನೆ ಅರಳಿತು. ತರುವಾಯ ಸಂಗಮೇಶ್ವರನು ಎಂಟುವರ್ಷವಯಸ್ಸುಳ್ಳಬ್ಬ ಪುರುಷನರೀತಿಯಲ್ಲಿ ಶ್ರೇಷ್ಠವಾದ ತೇಜಸ್ಸಿನಿಂದ ದಶದಿಕ್ಕುಗಳನ್ನೂ ಮುಚ್ಚುವನೋ ಎಂಬಂತೆ ಆಕೆಗೆ ಕಾಣಿಸಿಕೊಂಡನು. ಆತನು ಕೋಮಲವಾದ ಹವಳದಬಳ್ಳಿಗಳಕೊಂಬೆಗಳಂತೆ ಕೆಂಪಾದಕಾಂತಿಯುಳ್ಳಂಥ, ಮತ್ತು ರುದ್ರಾಕ್ಷಿಗಳಿಂದ ಕಟ್ಟಲ್ಪಟ್ಟ ಅಗ್ರಭಾವವುಳ್ಳಂಥ, ಐದುಜಡೆಗಳಿಂದ ಕೂಡಿದವನಾಗಿದ್ದನು. ಮತ್ತು ತ್ರಿರೇಖೆಯೆಂಬನೆವದಿಂದಪ್ರಾಪ್ತವಾದ ಮೂರುಪ್ರವಾಹಗಳುಳ್ಳ ಗಂಗಾನದಿಗೆ ಸಮಾನವಾಗಿಯೂ, ಬೆಳುದಿಂಗಳಗೊಂಚಲಿನಂತೆ ನಿರ್ಮಲವಾಗಿಯೂ, ಇರುವವಿಭೂತಿಯಿಂದ ಅಲಂಕರಿಸಲ್ಪಟ್ಟ

ಹಣೆಯುಳ್ಳವನಾಗಿದ್ದನು. ಪ್ರಕಾಶಿಶುವಹಣೆಗಣ್ಣಿನ ಕಾಂತಿಗೆ ಸಮಾನವಾದ ಕಾಂತಿಯುಳ್ಳಂಥ ರಕ್ತಚಂದನ ತಿಲಕದಿಂದ ಅಲಂಕೃತನಾಗಿದ್ದನು. ರುದ್ರಾಕ್ಷಿ ಮಣಿಗಳಿಂದ ಕಟ್ಟಲ್ಪಟ್ಟ ತಾಮ್ರಮಯವಾದ ಕುಂಡಲಗಳಿಂದ ಶೋಭಿಸುತ್ತಿರುವ ಕರ್ಣಯುಗ್ಮದಿಂದ ಸುಂದರವಾದ ಮುಖಕಮಲವುಳ್ಳವನಾಗಿದ್ದನು. ಸರ್ವಾಂಗವನ್ನೂ ಆವರಿಸುವದಕ್ಕೆ ಉದ್ಯುಕ್ತವಾದ ಕಂಠವಿಷಕ್ಕೆ ಸಮಾನವಾದಂಥ ಯೋಗಪಟ್ಟವಾಗಿ ಮಾಡಲ್ಪಟ್ಟಂಥ ಕೃಷ್ಣಾಜಿನದಿಂದ ಕೂಡಿದ ಹೆಗಲುಳ್ಳವನಾಗಿದ್ದನು. ಪರೆಯನ್ನು ಬಿಟ್ಟದ್ದರಿಂದ ಅತಿನಿರ್ಮಲವಾದ ಸರ್ಪದಂತೆ ಹೊಳೆಯುವ ಶಿವಸೂತ್ರದಿಂದ ಅಲಂಕರಿಸಲ್ಪಟ್ಟ ಎದೆಯುಳ್ಳವನಾಗಿದ್ದನು. ಎದೆಯಲ್ಲಿ ಏಕಮುಖದ ನೂರೆಂಟುರುದ್ರಾಕ್ಷಮಣಿಗಳಿಂದ ಮಾಡಲ್ಪಟ್ಟ ಮಾಲಿಕೆಯನ್ನೂ, ಕಂಠದಲ್ಲಿ ಮೂವತ್ತೆರಡು ಮಣಿಗಳಿಂದಮಾಡಲ್ಪಟ್ಟ ಮಾಲಿಕೆಯನ್ನೂ, ಧರಿಸಿದ್ದನು. ನೂತನವಾದ ಗಜಚರ್ಮದಂತಿರುವ ಕಾಷಾಯ ವಸ್ತ್ರವನ್ನು ಹೊಂದಿದ್ದನು. ಹುಲಿಯಚರ್ಮದಿಂದ ಮಾಡಲ್ಪಟ್ಟ ಕಾಸೇದಟ್ಟಿಯಿಂದ ಕಟ್ಟಲ್ಪಟ್ಟ ಸೊಂಟವುಳ್ಳವನಾಗಿದ್ದನು. ಹಸ್ತಕಮಲದ ನಾಳವೋ ಎಂಬಂತಿರುವ ಬೆತ್ತವನ್ನು ಕೈಯಲ್ಲಿಹಿಡಿದಿದ್ದನು. ಭಸ್ಮಘುಂಟಿಕೆಯನ್ನು ಹೆಗಲಲ್ಲಿಧರಿಸಿದ್ದನು. ಅಧೋಮುಖಗಳಾದ ಕಮಲಗಳೊಳಗಿರುವ ಹಂಸಪಕ್ಷಿಗಳೋ ಎಂಬಂತಿರುವ ಸ್ಫಟಿಕಮಯವಾದ ಹಾವುಗೆಗಳನ್ನು ಪಾದಗಳಲ್ಲಿ ಮೆಟ್ಟಿದನು. ಕರುಣಾಪೂರ್ಣವಾದ ದೃಷ್ಟಿಯುಳ್ಳವನೂ, ದಾಕ್ಷಿಣ್ಯಂದ ಮನೋಹರವಾದ ಮುಖವುಳ್ಳವನೂ, ಅತ್ಯಂತವಾಗಿ ಪ್ರಕಾಶಿಶುವ ಆಕಾರಉಳ್ಳವನ್ನೂ, ಆಗಿ ಕಣ್ಣಿಗೆಕಾಣುವ ಸೌಜನ್ಯದಂತಿದ್ದನು. ಆ ಮಾದಾಂಬೆಯು ಹಿಂದೆ ಯಾವಾಗಲೂ ಕಾಣದಿರುವ ತೇಜಸ್ವಿಯಾದ ಆ ಮಾಹೇಶ್ವರನನ್ನು ನೋಡಿ, ಎಲೈಸ್ವಾಮಿಯೇ ಶರಣಾರ್ಥಿನಿಯಾಗಿದ್ದೇನೆಂದು ನಮಸ್ಕರಿಸಿದಳು. ವಿಚಕ್ಷಣನಾದ ಆ ಮಹಾಪುರುಷನು ಆ ಮಾದಾಂಬೆಯನ್ನು ದಯೆಯಿಂದನೋಡಿ ಮಗಳೇಪುತ್ರವತಿಯಾಗು ಎಂದು ಆಶೀರ್ವಾದಪೂರ್ವಕವಾಗಿ ಹಣೆಯಲ್ಲಿ ವಿಭೂತಿಯನ್ನು ಧರಿಸಿ, ಹೇಳಿದನು. ಎಲೌಮುಂಗಳಾಂಗಿಯೇ ಕೂಡಲಿಸಂಗಮವೆಂಬುದೊಂದು ಮಹಾಕ್ಷೇತ್ರವಿರುವುದು. ವಿರೂಪಾಕ್ಷನು ಕೈಲಾಸವನ್ನುಕೂಡ ಮರೆತು ಅಲ್ಲಿವಾಸಿಸುತ್ತಾನೆ. ಪಾವನವಾದ ಆ ಕ್ಷೇತ್ರದಲ್ಲಿ ದೇಹಗಳನ್ನು ಬಿಡುವ ಪ್ರಾಣಿಗಳ ಕರ್ಣಗಳಲ್ಲಿ ಪಾರ್ವತೀಪತಿಯಾದ ಶಿವನು ಪ್ರಣವಮಂತ್ರವನ್ನು ಉಪದೇಶಿಸುತ್ತಾನೆ. ಅಲ್ಲಿರುವ ಅಲ್ಪಸರೋವರಗಳು ಕೂಡ ತೀರ್ಥಗಳು;

ಅಲ್ಲಿನ ಪಾಮರರೆಲ್ಲರೂ ತಪಸ್ವಿಗಳು; ಅಲ್ಲಿನ ಮರಗಳೆಲ್ಲಾ ಕಲ್ಪವೃಕ್ಷಗಳು. ಅಲ್ಲಿನ ಹಸುಗಳೆಲ್ಲಾ ಕಾಮಧೇನುಗಳು. ಅಲ್ಲಿ ಸ್ವರ್ಗಾಪೇಕ್ಷೆಯೆಂಬುವದೇ ಬೈಗುಳು. ಅಪ್ರಸಾದಿಯೆಂಬುವದೇ ಪೆಟ್ಟು. ಲಿಂಗಪೂಜಾಸಕ್ತಿ ಇಲ್ಲದವನೆಂಬುವದೇ ವಧೆ. ಆ ಕ್ಷೇತ್ರದಲ್ಲಿ ವಾಸಿಸುವ ಒಬ್ಬಾನೊಬ್ಬ ಶಿವಯೋಗಿಯು ನಾನು; ನಿನ್ನ ಮಗನಿಗೆ ಶಿವದೀಕ್ಷೆಯನ್ನು ಮಾಡುವದಕ್ಕಾಗಿ ಬಂದೆನು. ಇನ್ನುಮೇಲೆ ನೀನು ನಿಶ್ಚಿಂತಳಾಗಿರು. ಬಸವರಾಜನೆಂಬ ನಾಮಧೇಯವುಳ್ಳ ಈ ಪುತ್ರನು ಭಕ್ತಿಗೆ ನಿಧಿಯಾಗುವನು. ಶಿವಸಮರ್ಪಿತವಲ್ಲದ ಯಾವವಸ್ತುವನ್ನಾದರೂ ಈತನಿಗೆ ಯಾವಾಗಲೂ ಕೊಡಕೂಡದು. ಈ ಪ್ರಕಾರವಾಗಿ ಹೇಳಿ, ಕೂಡಲೇ ಆಕೆಗೆ ಆಶ್ಚರ್ಯವನ್ನುಂಟುಮಾಡುವವನಾಗಿ ಅಂತರ್ಧಾನನಾದನು. ಶಿವಭಕ್ತರ ಬಲಗಣ್ಣು ಹಾರಿತು. ಭೂಕಾಂತೆಯು ಸಂತೋಷಪಟ್ಟಳು. ಇನ್ನು ಮೇಲೆ ನಿರ್ಮಲವಾದ ಶಿವಭಕ್ತಿಯು ನಿರಂಕುಶವಾಗಿ ಭೂಲೋಕದಲ್ಲಿ ಪ್ರಸರಿಸುವುದೆಂದು ಶಿವಗಣಂಗಳು ಪರಮಾನಂದದಿಂದ ನರ್ತನವಂಮಾಡಿದರು. ಶಿವದೂಷಕರ ಹೃದಯಂಗಳು ಭಯದಿಂದ ನಡುಗಿದವು. ಸೂರ್ಯಮಂಡಲವು ಮೇಘಾವರಣಾದಿಗಳಿಲ್ಲದೆ ಥಳಥಳಿಸಿತು. ಶಿವಕಥೆಯೆಂಬ ಅಮೃತದಿಂದ ಪರಿಪೂರ್ಣನಾಗಿರುವ ಚಂದ್ರನಾದ ವೃಷಭೇಶ್ವರನು ಅತ್ಯಂತ ಮನೋಹರಗಳಾದ ಗುಣಗಳೊಡನೆ ಬಸವನೆಂಬ ಹೆಸರಿನಿಂದ ಉದಯಿಸಲು, ಭೂಮಿಯ ಮೇಲೆ ಕಲ್ಪವೃಕ್ಷದ ಹೂವುಗಳ ಮಳೆಯು ಬಿದ್ದಿತು. ದಿಕ್ಕುಗಳು ಕೂಡ ಸತ್ಪುರುಷರ ಮನಸ್ಸುಗಳೊಡನೆ ನಿರ್ಮಲಗಳಾದವು. ವಾಯುಗಳು ಸುಖವಾಗಿ ಬೀಸಿದವು. ಆಕಾಶವು ಸ್ವಚ್ಛವಾಗಿ ಕಂಗೊಳಿಸಿತು. ಜಲಾಶಯಗಳು ತಿಳಿಯಾದವು. ಶಿವಾರ್ಚಕರ ಮನಸ್ಸುಗಳು ಪರಮಾನಂದದಿಂದ ತುಂಬಲ್ಪಟ್ಟವು. ದುರ್ಮತದವರ ಭಯದಿಂದ ಕಲಕಲ್ಪಟ್ಟಿದ್ದ ಲಿಂಗಾಂಗಿಗಳ ಹೃದಯಗಳು ಸಮಾಧಾನ ಸ್ಥಿತಿಯನ್ನು ಹೊಂದಿದವು. ಈ ಪ್ರಕಾರವಾಗಿ ಬಸವೇಶನ ಉದಯದಲ್ಲಿ ಶುಭ ಲಕ್ಷಣಗಳು ತೋರಿದವು. ಮಹಾತ್ಮರ ಅವತಾರವು ಸಕಲ ಚರಾಚರ ಪ್ರಾಣಿಗಳಿಗೂ ಸಂತೋಷಕರವಲ್ಲವೇ ?

ಬಸವೇಶವಿಜಯದಲ್ಲಿ ಎರಡನೆಯ ಅಧ್ಯಾಯವು.

ಸಂಪೂರ್ಣವು.

## ಮೂರನೇ ಅಧ್ಯಾಯವು

—:o:—

ಅನಂತರದಲ್ಲಿ ಆಶಿಶುವಿನ ತೇಜೋವಿಶೇಷಗಳಿಂದ ಹೊಡೆಯಲ್ಪಟ್ಟವೋ ಎಂಬಂತೆ ವಿರೋಧಿಮತಸ್ಥರ ಮನೆಗಳಲ್ಲಿನ ದೀಪಗಳು ಎಣ್ಣೆಯಿಂದ ನೆಸಸಲ್ಪಟ್ಟ ಬತ್ತಿಗಳುಳ್ಳವುಗಳಾದಾಗ್ಯೂ ಆರಿಹೋದವು. ಅವರ ದೇವಾಲಯಗಳಲ್ಲಿ ಹಾ ಹಾ ಎಂಬದೊಡ್ಡ ಶಬ್ದವು ಕೇಳಲ್ಪಟ್ಟಿತು. ಅಲ್ಲಿರತಕ್ಕ ಪ್ರತಿಮೆಗಳ ದೃಷ್ಟಿಗಳಲ್ಲಿ ಕಣ್ಣೀರಿನಹನಿಗಳು ಕಾಣಿಸಿದವು. ಅನೇಕ ಜೈನ ಶಾಸ್ತ್ರಗಳಿಗೆ ವ್ಯಾಖ್ಯಾನವನ್ನು ಮಾಡುವದರಲ್ಲಿ ಸಮರ್ಥರಾದ ವಿದ್ವಾಂಸರ ಮಾತುಗಳು ತೊದಲುಬಿದ್ದವು. ಅವರಬುದ್ಧಿಗಳು ಗಳಿತವಾದವು. ಒಳಿಕ ಮಾದರಸನು ಸ್ನಾನವನ್ನು ಮಾಡಿ, ಭಸ್ಮತ್ರಿಪುಂಡ್ರಗಳನ್ನು ಧರಿಸಿಕೊಂಡು ಬಂದು, ಮಹಾತ್ಮನಾದ ಪುತ್ರನನ್ನು ನೋಡಿ, ತನ್ನನ್ನು ಮಕ್ಕಳುಳ್ಳವರೊಳಗೆ ಶ್ರೇಷ್ಠನನ್ನಾಗಿ ತಿಳಿದುಕೊಂಡು, ಭಕ್ತರನ್ನು ಪೂಜಿಸಿ, ವಿಭೂತಿ ವೀಳೆಯಂಗಳನ್ನು ಕೊಟ್ಟು, ಅವರ ಪಾದತೀರ್ಥದಿಂದ ಪುತ್ರನಿಗೆ ಸ್ನಾನವನ್ನು ಮಾಡಿಸಿ, ಅವರ ಹಸ್ತದಿಂದ ಮುಟ್ಟಲ್ಪಟ್ಟ ಭಸ್ಮವನ್ನು ಪುತ್ರನ ಸರ್ವಾಂಗಕ್ಕೂ ಧರಿಸಿ, ಆ ಶಿಶುವಿಗೆ ಸಂಗಮೇಶ್ವರನಿಂದ ಕೊಡಲ್ಪಟ್ಟ ಬಸವನೆಂಬ ನಾಮವನ್ನು ಅವರೊಡನೆ ಹೇಳಿದನು. ಅವರೆಲ್ಲರೂ ಆ ಸುದ್ದಿಯನ್ನು ಕೇಳಿ ಆತ್ಯಾಶ್ಚರ್ಯಪಟ್ಟು ಮಾದರಸನನ್ನು ನೀನೇ ಧನ್ಯನೆಂದು ಹೊಗಳಿ ತಮ್ಮ ತಮ್ಮ ಮನೆಗಳಿಗೆ ಹೋದರು. ತಂದೆಯು ಮಗನನ್ನು ಆಲಂಗಿಸಿ, ಕಣ್ಣುಗಳನ್ನು ಮುಚ್ಚುತ್ತಾ ಹೃದಯದಲ್ಲಿ ತೋರಿದಾನಂದವನ್ನು ಒಳಗೆ ತಡೆಯುವುದಕ್ಕಾಗಿ ಕದವನ್ನು ಮುಚ್ಚುತ್ತಾನೋ ಎಂಬಂತೆ ಕಾಣಿಸಿದನು. ಮಾದಾಂಬೆಯು ಪುತ್ರನನ್ನು ಆಲಂಗಿಸಿ, ವ್ಯಾಪಿಸುತ್ತಿರುವ ಆನಂದಕ್ಕೆ ಅವಕಾಶವನ್ನು ಕೊಟ್ಟು, ಹೊರಗೆ ಹೊರಟವೋ ಎಂಬ ಹಾಗೆ ತೋರುವ ರೋಮಾಂಚಗಳಿಂದ ಕೂಡಿದವಳಾಗಿದ್ದಳು. ರೋಮಾಂಚಗಳಿಂದ ಕೂಡಿದ ತಾಯಿಯ ತೊಡೆಯ ಮೇಲೆ ಮಲಗಿರುವ ಪುತ್ರನಾದ ಬಸವೇಶನು ಶಿವದ್ರೋಹಿಗಳನ್ನು ಜೈಸುವದಕ್ಕಾಗಿ ಕ್ರೂರವಾದ ಮುಳ್ಳಿನ ಪೀಠದ ಮೇಲೆ ಮಲಗಿರುವನೋ ಎಂಬಂತೆ ಪ್ರಕಾಶಿಸಿದನು. ಬಾಲಕನು ದೀಪವನ್ನುನೋಡಿ ಈ ದೀಪವು ತನ್ನ ಹಿಂದಿರುವ ಕತ್ತಲೆಯನ್ನು ಕೂಡ ಪರಿಹರಿಸುವದಕ್ಕೆ ಅಸಮರ್ಥವಾದದ್ದೆಂದು ಆಲೋಚಿಸಿ, ಹಾಸ್ಯವನ್ನು ಮಾಡುತ್ತಾನೋ ಎಂಬಂತೆ ಸೊಗಸಾಗಿ ಮಂದಹಾಸವನ್ನು ಮಾಡಿದನು. ಮತ್ತು ನನ್ನ ತಂದೆತಾಯಿಗಳು ಭಕ್ತಕುಲದಲ್ಲಿ ಹುಟ್ಟಿದಂಥ ನನ್ನನ್ನು ತಮ್ಮ ಕುಲದಲ್ಲಿ ಹುಟ್ಟಿದವನನ್ನಾಗಿ ತಿಳಿದಿದ್ದಾರಲ್ಲಾ ಎಂದು ಆಲೋಚಿಸಿಯೋ

ಎಂಬಂತೆ ಮುಗಳ್ನಗೆಯನ್ನು ತೋರಿಸಿದನು. ಅಧಿಕತೇಜಸ್ಸಿನಿಂದಕೂಡಿದ ಆ ಬಸವೇಶನು ಎರಡು ಕೈಗಳಲ್ಲಿಯೂ ಗಟ್ಟಿಯಾಗಿ ಮುಷ್ಟಿಯನ್ನು ಹಿಡಿದಾತನಾಗಿ ಭಕ್ತಿಗೂ ಮುಕ್ತಿಗೂ ಕಾರಣವಾದ ಜ್ಞಾನವನ್ನು ಬಿಡದಿರುವನೋ ಎಂಬಂತೆ ಕಾಣಿಸಿದನು. ತಾಯಿಯ ಸ್ತನ್ಯವನ್ನು ಕುಡಿದು ಕುಡಿದು, ಮಧ್ಯದಲ್ಲಿ ನಿಶ್ಚಲತೆಯನ್ನು ಹೊಂದಿದವನಾಗಿ, ಯೋಗಾಭ್ಯಾಸದಿಂದ ಮರೆತುಬಿಟ್ಟ ಶಿವನ ಆಜ್ಞೆಯನ್ನು ಧ್ಯಾನಿಸುತ್ತಾನೋ ಎಂಬಂತೆ ಕಾಣಿಸಿದನು. ಹೊಟ್ಟೆ ಮುಗ್ಗುಲಾಗುವ ಬಸವೇಶನು ವೇದವಿರುದ್ಧವಾದ ಶಾಸ್ತ್ರಗಳ ಏಳಿಗೆಯಿಂದ ಕುಂದುವ ವೇದಗಳನ್ನು ನೋಡಿ, ದುಃಖಿತೆಯಾದ ಭೂಕಾಂತೆಯನ್ನು ಆಲಿಂಗಿಸಿಕೊಂಡು, ಸಮಾಧಾನಗೊಳಿಸುತ್ತಾನೋ ಎಂಬಂತಿದ್ದನು. ಮೊಗಮಾಡಿಯಾಗಿ ಮಲಗಿರುವ ಬಾಲಕನು ದೊಡ್ಡವರಿಗೆ ಮಾಡುವ ದೀರ್ಘದಂಡ ನಮಸ್ಕಾರದಲ್ಲಿ ಅಭ್ಯಾಸವನ್ನು ಅಪೇಕ್ಷಿಸುವನೋ ಎಂಬಂತೆ ಶೋಭಿಸಿದನು. ಮೊಗಮಡಿಯಾಗಿ ಬಿದ್ದು ಸ್ವಲ್ಪಮಟ್ಟಿಗೆ ತಲೆಯನ್ನು ಎತ್ತಿರುವಾಗ ಕಲಿಯುಗದಲ್ಲಿ ರಹಸ್ಯವಾಗಿದ್ದ ಭಕ್ತಿಯು ತಿರಿಗಿ ತಲೆಯನ್ನು ಎತ್ತಿತೋ ಎಂಬಂತೆಯೂ, ಇನ್ನೂ ಶಿವದ್ರೋಹಿಗಳು ಹೋಗಲಿಲ್ಲವೆಂದು ನೋಡುತ್ತಾನೋ ಎಂಬಂತೆಯೂ ಕಾಣಿಸಿದನು. ಮುಂಭಾಗದಲ್ಲಿ ಕೈಗಳನ್ನು ಊರಿಕೊಂಡು, ತಲೆಯನ್ನು ಸ್ವಲ್ಪವಾಗಿ ಅಲ್ಲಾಡಿಸುತ್ತಿರುವಲ್ಲಿ ತಾಯಿಯಿಂದ ಹಾಡಲ್ಪಟ್ಟ ಶಿವಸ್ತೋತ್ರವನ್ನು ಕೇಳಿ, ಅದನ್ನು ಶ್ಲಾಘಿಸುವನೋ ಎಂಬಂತಿದ್ದನು. ತಲೆಯನ್ನಲ್ಲಾಡಿಸದೆ ಕುಳಿತಿರುವ ಬಸವೇಶ್ವರನು ಮುಂದಕ್ಕೆ ಸಂಭವಿಸುವ ಶಿವಾರ್ಚನೆಗೆ ಯೋಗ್ಯವಾದ ಆಸನದಲ್ಲಿ ನಿಶ್ಚಲತೆಯನ್ನು ಆಲೋಚಿಸುತ್ತಾನೋ ಎಂಬಂತೆ ಪ್ರಕಾಶಿಸಿದನು. ತನ್ನ ಆಕಾರವನ್ನು ತಗ್ಗಿಸಿಕೊಂಡು, ಅಂಬೆಗಾಲಿಕ್ಕುತ್ತಿರುವ ಬಸವೇಶನು ತನ್ನ ವೃಷಭತ್ವವನ್ನು ತಿಳಿಸುತ್ತಾನೋ ಎಂಬಂತೆಯೂ, ಧರ್ಮಸ್ವರೂಪನಾದ ವೃಷಭೇಶ್ವರನು ತಾನು ಕಲಿಯುಗವನ್ನು ಕೃತಯುಗವನ್ನಾಗಿ ಮಾಡಬೇಕೆಂದು ನಾಲ್ಕು ಪಾದಗಳನ್ನು ಭೂಮಿಯ ಮೇಲೆ ಊರಿರುವನೋ ಎಂಬಂತೆಯೂ, ಕಾಣಿಸಿದನು, ತಾಯಿ ಬೆರಳುಗಳನ್ನು ಹಿಡಿದುಕೊಂಡು, ನಿಶ್ಚಲವಾದ ದೇಹವುಳ್ಳವನಾಗಿ ನಿಂತಿರುವ ಬಸವೇಶನು ಪ್ರತ್ಯಕ್ಷವಾದ ಶಿವಭಕ್ತಿಯ ರಾಶಿಯೋ ಎಂಬಂತೆ ಅಧಿಕವಾಗಿ ಶೋಭಿಸಿದನು. ತಾಯಿಯ ಬೆರಳನ್ನು ಬಿಟ್ಟು ತಾನೇ ನಿಶ್ಚಲವಾಗಿ ನಿಂತವನಾಗಿ, ಕೆಡದಿರುವ ಶಿವಾಜ್ಞೆಯ ಜಯಸ್ತಂಭದ ಸೌಂದರ್ಯವನ್ನು ವಹಿಸಿದನು.

ತಾಯಿಯ ಹಸ್ತವನ್ನು ಹಿಡಿದುಕೊಂಡು, ಅನುಚಿತವಾದ ಮಾರ್ಗದಲ್ಲಿ ಹೆಜ್ಜೆಯನ್ನಿಟ್ಟೇನು ಎಂಬ ಭಯದಿಂದಲೋ ಎಂಬಂತೆ ಮೆಲ್ಲಮೆಲ್ಲನೆ ನಡೆದಾಡಿದನು. ಮೆಲ್ಲಮೆಲ್ಲನೆ ನೆಲದ ಮೇಲೆ ಹೆಜ್ಜೆಯನ್ನಿಟ್ಟುಕೊಂಡು ನಡೆಯುವಲ್ಲಿ ತನ್ನನ್ನು ಹೊರುವದಕ್ಕೆ ಆದಿಶೇಷನ ಹೆಡೆಗಳಿಗೆ ಶಕ್ತಿಯುಂಟೋ ಇಲ್ಲವೋ ಎಂದು ಆಲೋಚಿಸುತ್ತಾನೋ ಎಂಬಂತೆ ಕಾಣಿಸಿದನು. ಈಕಡೆಗಾಕಡೆಗೆ ಓಡಾಡಿಕೊಂಡು ತಿರುಗಾಡುವ ಬಸವೇಶ್ವರನು ಅಧರ್ಮವೆಂಬ ಅರಣ್ಯದಲ್ಲಿ ಔತುಕೊಂಡಿರುವ ಭಕ್ತಿಯನ್ನು ಹುಡುಕುವನೋ ಎಂಬಂತೆ ಕಾಣಿಸಿದನು. ಜಂಗಮಲಿಂಗವನ್ನು ನೋಡಿ, ಶಿವಲಿಂಗವನ್ನು ವಿಚಾರಿಸುವಂಥಾವನಾಗಿ. ಆ ಜಂಗಮ ಮೂರ್ತಿಯ ಆಜ್ಞೆಯನ್ನು ತಲೆಯಲ್ಲಿ ಹೊತ್ತುಕೊಂಡು, ಆಡಿದನು. ಔದಾರ್ಯ ಶೀಲನಾದ ಬಸವೇಶನು ಪ್ರಾರಂಭದಲ್ಲಿಯೇ ಇಲ್ಲವೆಂಬರ್ಥವನ್ನು ಕೊಡುವ ನಕಾರವನ್ನು ಗ್ರಹಿಸುವುದಕ್ಕೆ ಭಯಪಟ್ಟವನೋ ಎಂಬಂತೆ ಪ್ರಣವಸಹಿತವಾದ ಪಂಚಾಕ್ಷರವನ್ನು ಜಪಿಸಿದನು. ಎಂಟನೇ ವರ್ಷವು ಪ್ರಾಪ್ತವಾಗುತ್ತಿರಲಾಗಿ ತಂದೆಯಾದ ಮಾದರಸನು ಬಸವೇಶನಿಗೆ ಉಪನಯನವನ್ನು ಮಾಡುವದಕ್ಕಾಗಿ ಜೋಯಿಸಿಗರೊಡನೆ ಲಗ್ನವನ್ನು ವಿಚಾರಿಸಿದನು. ಬಸವೇಶನು ತಂದೆಯನ್ನು ಕರೆದು, ಎಲೈ ತಂದೆಯೇ ಇಷ್ಟು ತವಕದಿಂದ ಇದೇನು ಸಂಭ್ರಮವನ್ನು ಮಾಡುತ್ತೀಯೆ ಎಂದು ಬೇಸರಗೊಂಡನು. ಮಾದರಸನು ಕೇಳಿ, ಎಲೈ ಕುಲಾಲಂಕಾರನಾದ ಪುತ್ರನೇ ನಿನಗೆ ಬ್ರಹ್ಮೋಪದೇಶವನ್ನು ಮಾಡಬೇಕೆಂದು ಪ್ರಯತ್ನಿಸಿದ್ದೇನೆಂದು ಹೇಳಿದನು. ತಂದೆಯ ಮಾತನ್ನು ಕೇಳಿ ಬಸವೇಶನು ಎಲೈ ಜನಕನೇ ನಿನಗೇನು ಭ್ರಾಂತಿ ಹಿಡಿಯಿತೋ ಇಲ್ಲವೇ ಪೈತ್ಯವು ತಲೆಗೇರಿತೋ ನಾನು ಹುಟ್ಟಿದ ದಿನದಲ್ಲಿ ನಡೆದ ಸಂಗತಿಯನ್ನು ಮರೆತು ಈಗ ಇಂಥಾ ಆಲೋಚನೆಯನ್ನು ಆಲೋಚಿಸುತ್ತೀಯೆ. ಶಿವಸಂಸ್ಕಾರದಿಂದ ಕೃತಾರ್ಥವಾದ ಜನ್ಮವುಳ್ಳವನು ದ್ವಿಜಸಂಸ್ಕಾವೆಂಬ ಉಪನಯನವನ್ನು ಅಪೇಕ್ಷಿಸುವದಿಲ್ಲ. ಅಮೃತದ ಸವಿಯಿಂದುಂಟಾದ ಸೌಖ್ಯದಲ್ಲಿ ಆಸಕ್ತನಾದವನು ಮೃತ್ತಿಕೆಯನ್ನು ಸವಿಯುತ್ತಾನೆಯೇ. ಶಿವದೀಕ್ಷೆಯಿಂದ ಪರಿಶುದ್ಧನಾದ ಯಾವನುತಾನೇ ಅನಿತ್ಯವಾದ ಸ್ವರ್ಗಾದಿ ಭೋಗವನ್ನು ಕೊಡುವ ಕರ್ಮದ ಬೇರನ್ನು ಕೀಳುವದರಲ್ಲಿ ಸಮರ್ಥವಾದ ಶಿವಾಚಾರವನ್ನು ಬಿಟ್ಟು, ಕರ್ಮಗಳಿಗೆ ಆಶ್ರಯವಾದ ಉಪನಯನವನ್ನು ಹೊಂದುವನು. ಮೋಕ್ಷಾಂಗನೆಗೆ ಪತಿಯಾಗಿ ಕೈಲಾಸದಲ್ಲಿ ವಾಸಿಸುವದಕ್ಕೆ

ಯೋಗ್ಯನಾದವನು ಹ್ಯಾಗೆತಾನೇ ಸ್ವರ್ಗದ ದಾಸಿಯರಿಗೆ ಮಿಂಡನಾದಾನು. ಶಿವಲಾಂಛನವೆನಿಸಿರುವ ಭಸ್ಮರುದ್ರಾಕ್ಷಾದಿಗಳನ್ನು ಧರಿಸಿದ ಯಾವನು ಕೃಷ್ಣಾಜಿನಾದಿ ನೀಚ ಮುದ್ರೆಗಳನ್ನು ಧರಿಸುತ್ತಾನೆ? ರತ್ನಖಚಿತವಾದ ಕಿರೀಟದಲ್ಲಿ ಎಂಥವನಾದರೂ ಗಾಜನ್ನು ಧರಿಸುತ್ತಾನೆಯೇ? ಮಾತಿನಲ್ಲಿ ಕುಶಲನಾದ ಮಾದರಸನು ಬಸವೇಶನಾಡಿದ ಮಾತನ್ನು ಕೇಳಿ, ಮಗನ ಅಭಿಪ್ರಾಯವನ್ನು ಅನುಸರಿಸಿ, ಪ್ರೇಮದಿಂದ ಹೇಳಿದನು. ಏನಂದರೆ;—ಎಲೈ ಪುತ್ರನೇ ದ್ವಿಜಚಿಹ್ನೆಯು ಶಿವಚಿಹ್ನೆಯಲ್ಲವೇ? ಯಾತಕ್ಕೆ ನೀನು ಅದನ್ನು ಅಂಗೀಕರಿಸುವದಿಲ್ಲ. ಈ ಆಗ್ರಹವನ್ನು ಬಿಟ್ಟು, ನನ್ನ ಮಾತನ್ನು ಕೇಳು. ನಾರಾಯಣನ ಕೂದಲುಗಳಿಂದ ಮಾಡಲ್ಪಟ್ಟ ಹುರಿಯೇ ಯಜ್ಞೋಪವೀತವೆಂದು ಹೇಳಲ್ಪಡುತ್ತದೆ. ಪ್ರಳಯದಲ್ಲಿ ಅಡಗಿದ ಆ ವಿಷ್ಣುವಿನ ಮೈಮೂಳೆಯೇ ದಂಡವೆಂದು ಕರೆಯಲ್ಪಡುತ್ತದೆ. ನರಸಿಂಹನ ದೇಹದಿಂದ ಎಳೆಯಲ್ಪಟ್ಟ ಚರ್ಮವೇ ಕೃಷ್ಣಾಜಿನವೆಂದು ತಿಳಿಯಲ್ಪಟ್ಟಿತು. ಬ್ರಹ್ಮನ ತಲೆಯೋಡೇ ಭಿಕ್ಷಾಪಾತ್ರೆಯಾಗಿ ಕಲ್ಪಿಸಲ್ಪಡುತ್ತದೆ. ದ್ವಿಜರಿಂದ ಜಪಿಸಲ್ಪಡುವ ಗಾಯತ್ರೀ ಮಂತ್ರಕ್ಕೆ ಪರಮಾತ್ಮ ಸ್ವರೂಪನಾದ ಶಿವನೇ ಅಧಿದೇವತೆಯಾಗಿದ್ದಾನೆ. ಶಿವನನ್ನು ಬಿಟ್ಟು ಯಾವ ಬ್ರಹ್ಮಕರ್ಮವಿರುವುದು. ದೇವತೆಗಳೊಳಗೆ ಶಿವನೇ ಬ್ರಾಹ್ಮಣನೆಂಬದಾಗಿ ಆಗಮವಚನವುಂಟು. ಆದಕಾರಣದಿಂದ ಬ್ರಾಹ್ಮಣನು ಹ್ಯಾಗೆ ಶಿವಕುಲೋತ್ಪನ್ನನಲ್ಲ. ಬ್ರಾಹ್ಮಣರಿಗೆ ದೇವರು ಅಗ್ನಿಯಲ್ಲಿದ್ದಾನೆಂದು ವೇದವಚನವುಂಟು. ಆ ಅಗ್ನಿಯು ಶಿವನ ಎಂಟು ತನುಗಳಲ್ಲಿ ಮುಖ್ಯವಾದ ಒಂದು ತನುವಲ್ಲವೇ? ಎಲೈ ಬಸವೇಶ್ವರನೇ ನೀನು ಹುಡುಗತನದ ಚಪಲತೆಯನ್ನು ಬಿಟ್ಟು, ಸುಮ್ಮನಿರು. ಈ ಮಾತನ್ನು ಕೇಳಿದರೆ ನಮ್ಮ ದ್ವಿಜರು ದೂಷಿಸುತ್ತಾರೆ. ಬಸವೇಶನು ಕೂಡ ತಂದೆಯ ಮಾತನ್ನು ಕೇಳಿ ನಕ್ಕು ಹೇಳಿದನು. ಏನೆಂದರೆ;—ಮೂಢಾತ್ಮರ ಸಂಗದಿಂದ ಮಂಕಾದ ಬುದ್ಧಿಯುಳ್ಳ ತಂದೆಯೇ ನನ್ನ ಮಾತನ್ನು ಕೇಳು. ಮನುಷ್ಯರಲ್ಲಿ ಶುದ್ಧರು ಪ್ರಾಕೃತರು ಎಂದು ಎರಡು ವಿಧ. ಶಿವದೀಕ್ಷಾಸಂಪನ್ನರಾದ ವೀರಶೈವರೇ ಶುದ್ಧರು. ಶಿವದೀಕ್ಷೆಯಿಲ್ಲದವರೇ ಪ್ರಾಕೃತರು. ವರ್ಣ ಆಶ್ರಮ ಮೊದಲಾದ ಧರ್ಮಗಳ ವ್ಯವಸ್ಥೆಯು ಎರಡು ಪ್ರಕಾರವಾಗಿದೆ. ಅವುಗಳೊಳಗೆ ಶಿವನಿಂದ ಹೇಳಲ್ಪಟ್ಟದ್ದೊಂದು. ಬ್ರಹ್ಮನಿಂದ ಹೇಳಲ್ಪಟ್ಟದ್ದು ಮತ್ತೊಂದು. ಶಿವಕುಲಸಂಭೂತರಿಗೆ ಶಿವಾಗಮದಲ್ಲಿ ಹೇಳಲ್ಪಟ್ಟ ಶಿವಾಚಾರವೂ, ಶಿವಸಂಸ್ಕಾರವಿಲ್ಲದ

ಪ್ರಾಕೃತರೆಂಬವರಿಗೆ ಸ್ಮೃತ್ಯುಕ್ತವಾದ ಬ್ರಹ್ಮಚಾರವೂ. ವಿಹಿತವಾಗಿರುವದು. ಈ ವರ್ಣಾಶ್ರಮ ವಿಭಾಗವು ಧರ್ಮದಿಂದಲೇ ಹೊರತು ಜನ್ಮದಿಂದುಂಟಾಗುವದಿಲ್ಲ. ಈ ವಚನವು ಪ್ರಭೇದಾಗಮದಲ್ಲಿ ಕಾಣಲ್ಪಡುತ್ತದೆ. ಆದಕಾರಣ ಲಿಂಗಾಂಗ ಸಂಬಂಧಿಯಾದ ವೀರಶೈವನು ಶಿವಧರ್ಮವನ್ನಾಚರಿಸಬೇಕು. ಬ್ರಹ್ಮನಿಂದ ಹೇಳಲ್ಪಟ್ಟದ್ದು ಪಶುಧರ್ಮವು. ಶಿವನಿಂದ ಹೇಳಲ್ಪಟ್ಟದ್ದು ಪತಿಧರ್ಮವು. ವೈಶ್ವದೇವ, ಅಗ್ನಿಷ್ಟೋಮ ಮೊದಲಾದವುಗಳೇ ಪಶುಧರ್ಮಗಳು. ಶಿವಪ್ರಸಾದ, ಭಸ್ಮ, ರುದ್ರಾಕ್ಷ, ಲಿಂಗಧಾರಣ ಮುಂತಾದವುಗಳೇ ಪತಿಧರ್ಮಗಳೆಂದು, ವೇದಾಂಗಮಗಳೆರಡನ್ನೂ ಅನುಸರಿಸಿ ನಡೆಯುವ ವೀರಶೈವ ವಿದ್ವಾಂಸರು ಹೇಳುತ್ತಾರೆ. ವಿಚಾರಮಾಡಿದರೆ ಪಶುಧರ್ಮಾನುಷ್ಠಾನಾಧಿಕಾರವನ್ನು ಪಡೆಯುವದಕ್ಕೋಸ್ಕರವೇ ಉಪನಯುವಂ ಮಾಡಿಕೊಳ್ಳುವದು. ಶಿವದೀಕ್ಷೆಯಿಂದ ಶುದ್ಧನಾದವನು ಪಶುಧರ್ಮಗಳನ್ನು ಎಂದಿಗೂ ಆಚರಿಸಕೂಡದು. ಅಜ್ಞಾನದಿಂ ಆಚರಿಸಿದರೆ ನರಕವಾಗುವದು. ಎಲ್ಲೈ ವೇದದಲ್ಲಿ ನಿಪುಣರಾದವರೇ ಉತ್ಕೃಷ್ಟವಾಗಿಯೂ ಪರಿಶುದ್ಧವಾಗಿಯೂ, ಇರುವ ಇಷ್ಟಲಿಂಗರೂಪವಾದ ಯಜ್ಞೋಪವೀತವನ್ನು ಶ್ರದ್ಧೆಯಿಂದ ಹಸ್ತಪೀಠದಲ್ಲಿಟ್ಟು ಪೂಜಿಸಿರಿ. ಬ್ರಹ್ಮವೆಂದರೆ ಲಿಂಗವು. ಆ ಲಿಂಗಕ್ಕೆ ಶಿವನೇ ಅಧಿಪತಿಯು, ಶಿವಾಧಿಷ್ಠಿತವಾದ ಲಿಂಗವು ಪರಿಶುದ್ಧವಾದುದರಿಂದ ಆ ಶಿವಲಿಂಗ ಸಂಗದಿಂದ ದೇಹವು ನಿರ್ಮಲವಾಗುವದು. ಈ ಪ್ರಮಾಣದಿಂದ ನಮಗೆ ಇಷ್ಟಲಿಂಗವೇ ಯಜ್ಞೋಪವೀತವು. ಯಜೋಪವೀತದ ಮೇಲೆ ಇನ್ನೊಂದು ಯಜ್ಞೋಪವೀತವನ್ನು ಧರಿಸುವದು ವ್ಯರ್ಥವಲ್ಲವೇ. ಇದರ ಮೇಲೆ ಲಕ್ಷ್ಮೀದೇವಿಯಿಂದ ಪ್ರೇಮ ಪೂರ್ವಕವಾಗಿ ಎಳೆಯಲ್ಪಟ್ಟದ್ದರಿಂದ ಪುಣ್ಯಶಾಲಿಯಾದ ವಿಷ್ಣುವಿನ ತಲೆಯ ಕೂದಲುಗಳಿಗೆ ಮುಂಡೆಯರ ಕೈಯಿಂದ ಎಳೆಯಲ್ಪಟ್ಟ ಸೂತ್ರವನ್ನು ಹ್ಯಾಗೆ ಹೋಲಿಸಿವೆ. ವೀರಭದ್ರನ ಕೈಯಿಂದಕತ್ತರಿಸಲ್ಪಟ್ಟ ನರಸಿಂಹನಶರೀರದ ಚರ್ಮಕ್ಕೆ ಕಿರಾತನಕೈಯಿಂದ ಸುಲಿಯಲ್ಪಟ್ಟ ಕಾಡುಹುಲ್ಲೆಯ ಚರ್ಮವನ್ನು ಹ್ಯಾಗೆ ಹೋಲಿಸಿದೆ. ವಿಷ್ಣುವಿನ ಬೆನ್ನಿನಮೂಳೆಗೆ ಮುಘನಿಂದ ತರಲ್ಪಟ್ಟ ಯಾವದೋಬಂದು ಮುತ್ತುಗದ ಕೋಲನ್ನು ಹ್ಯಾಗೆಹೋಲಿಸಿದೆ. ಶಿವನ ಹಸ್ತದಲ್ಲಿ ವಾಸವಾದದ್ದರಿಂದ ಕೃತಾರ್ಥವಾದ ಜನ್ಮವುಳ್ಳ ಬ್ರಹ್ಮಕಪಾಲಕ್ಕೆ ಎಲೆಯಿಂದ ಕಟ್ಟಲ್ಪಟ್ಟ ದೊನ್ನೆಯನ್ನು ಹ್ಯಾಗೆಹೋಲಿದೆ. ಪರಿಪೂರ್ಣವಾಗಿಯೂ, ಶಿವನಮುಖ್ಯದೇಹವಾಗಿಯೂ, ಇರುವ ಪಂಚಾಕ್ಷರೀಮಂತ್ರಕ್ಕೆ ಅನೇಕದೇವತೆಗ

ಳಿಂದ ನಿರ್ಮಿಸಲ್ಪಟ್ಟ ದೇಹವುಳ್ಳ ತ್ರಿಪದಗಾಯತ್ರಿಯನ್ನು ಹ್ಯಾಗೆಹೋಲಿಸಿದೆ. ದಯಾಸಮುದ್ರನಾದ ಗುರುವು ದೀಕ್ಷೆಯಲ್ಲಿ ಹಸ್ತಮಸ್ತಕ ಸಂಯೋಗವಂಮಾಡುವಾಗ ಶಿಷ್ಯನಮಸ್ತಕದಲ್ಲಿ ಗಾಯತ್ರಿಯನ್ನು ಸ್ಥಾಪಿಸುತ್ತಾನೆ. ಗಾಯತ್ರಿಯು ಶಕ್ತ್ಯಂಶವು. ಷಡಕ್ಷರೀಮಂತ್ರವು ಶಿವಾಂಶವು. ಈ ಎರಡುಮಂತ್ರಗಳೂ ಲಿಂಗಾಂಗಸಾಮರಸ್ಯವನ್ನು ಬೋಧಿಸುತ್ತವೆ. ಆದರೆ ಭಕ್ತನಾದವನು ಶಕ್ತ್ಯಂಶವನ್ನುಬಿಟ್ಟು ಶಿವಾಂಶವನ್ನೇ ಅಪೇಕ್ಷಿಸುತ್ತಾನೆ. ಆ ವಿಷಯದಲ್ಲಿ ಭೃಂಗೀಶ್ವರ ಮೊದಲಾದ ಭಕ್ತರಚರಿತ್ರೆಯನ್ನು ನೀನು ಕೇಳಲಿಲ್ಲವೇ? ಬ್ರಾಹ್ಮಣನು ರುದ್ರಕುಲೋತ್ಪನ್ನನೆಂದು ಹೇಳಿದೆಯಲ್ಲಾ. ಅನೇಕದೈವೋಪಾಸಕರೂ, ಶಿವೇತರದೇವತೋಪಾಸಕರೂ ಆದ ಬ್ರಾಹ್ಮಣರು ಶಿವವಂಶಜರಲ್ಲ. ಶಿವಧ್ಯಾನವೊಂದರಲ್ಲಿಯೇ ನಿರತರಾಗಿಯೂ, ಶಿವಪೂಜೆಯೇಸಕಲ ಪುರುಷಾರ್ಥಗಳೆಂದು ತಿಳಿದು, ನಿರಂತರವೂ ಅದನ್ನಾಚರಿಸುವವರಾಗಿಯೂ, ಕನಸಿನಲ್ಲಾದರೂ ಶಿವನನ್ನುಬಿಟ್ಟು, ಬೇರೆದೇವತೆಗಳನ್ನು ಸ್ಮರಿಸದವರಾಗಿಯೂ ಇರುವಬ್ರಾಹ್ಮಣರೇ ರುದ್ರಕುಲಸಂಭವರು. ಅಗ್ನಿಯು ಶಿವನತನುವಾದರೆ ದಕ್ಷಬ್ರಹ್ಮನಯಜ್ಞದಲ್ಲಿ ವೀರಭದ್ರನು ಅವನಹಸ್ತಗಳನ್ನೂ, ನಾಲಿಗೆಯನ್ನೂ, ಯಾಕೆ ಕತ್ತರಿಸಿದನು. ದಧೀಚಿಯಿಂದಲೂ ಗೌತಮನಿಂದಲೂ ಶಪಿಸಲ್ಪಟ್ಟ ಬ್ರಾಹ್ಮಣಾಧಮರು ಕಲಿಯುಗದಲ್ಲಿ ಶಿವಭಕ್ತರನ್ನು ದೂಷಿಸುವ ಪಾಷಂಡರಾಗಿ ಹುಟ್ಟುತ್ತಾರೆ. ಮೋಕ್ಷವೆಂಬ ಮುಖ್ಯಫಲವನ್ನು ಕೊಡುವಂಥ ವೀರಶೈವಮುಂತಾದ ಶೈವಮತಗಳನ್ನು ದೂಷಿಸತಕ್ಕ ಬ್ರಾಹ್ಮಣಾಧಮರಾಗಿರಿ. ಇತ್ಯಾದಿ ಪ್ರಮಾಣಗಳಿಂದ ಶಾಪದಗ್ಧರೂ ಪಾಷಂಡರೂ ಆದವರು ವೇದೋಕ್ತವಾದ ಭಸ್ಮ ರುದ್ರಾಕ್ಷಿ ಲಿಂಗಧಾರಣ ಕರ್ಮಗಳಲ್ಲಿ ಶೂರರಾದ ವೀರಶೈವಮತಸ್ಥರಾದವರನ್ನು ಈ ಕಲಿಯುಗದಲ್ಲಿ ದೂಷಿಸುತ್ತಾರೆ. ಮತ್ತು ದ್ವೇಷಿಸುತ್ತಾರೆ. ದೇಹಾನಂತರದಲ್ಲಿ ನಿಜವಾಗಿ ನರಕವನ್ನು ಹೊಂದುವರು. ತತ್ವಾರ್ಥವನ್ನು ತಿಳಿದವನಿಗೆ ದುಷ್ಟಜನಗಳದೂಷಣೆಗಳಿಂದ ಯಾವಹಾನಿಯುಂಟಾಗುವದು? ಆನೆಯ ಮೇಲೆ ಕುಳಿತುಕೊಂಡಿರುವವನನ್ನು ನೋಡಿ ನಾಯಿಗಳು ಬೊಗಳಿದರೆ ಅವನಿಗೆ ಅವಮಾನವೆಂದು ಹೇಳಬಹುದೇ? ದಧೀಚಿ, ಗೌತಮ ಮುಂತಾದ ಶಿವಭಕ್ತಮುನಿಗಳ ಶಾಪಾಗ್ನಿಯಿಂದ ಸುಡಲ್ಪಟ್ಟಜನಗಳು ಶಿವಭಕ್ತಿಯೆಂಬ ಕಲ್ಪವೃಕ್ಷವನ್ನು ಬಿಟ್ಟು ಪಶುಕರ್ಮಗಳೆಂಬ ಮುಳ್ಳುಕಾಡನ್ನು ಪ್ರವೇಶಿಸುತ್ತಾರೆ. ದಧೀಚಿ, ಗೌತಮ ಮುಂತಾದವರು ದ್ವಿಜಮುದ್ರೆಯನ್ನು ಧರಿಸಿರಲಿಲ್ಲವೆ ಎಂಬಾ

ಲೊಚನೆಯು ನಿನ್ನ ಮನಸ್ಸಿನಲ್ಲಿ ತೋರಬಹುದು. ಆ ವಿಷಯದಲ್ಲಿ ಹೇಳು ವೆನು ಕೇಳು, ಮುಂಚಿತವಾಗಿ ದ್ವಿಜಚಿಹ್ನೆಗಳನ್ನು ಧರಿಸಿದ್ದು ಪರಿಪಕ್ವಾಂತಃ ಕರಣರಾದ ಮೇಲೆ ಶಿವಚಿಹ್ನೆಗಳನ್ನು ಧರಿಸಿದರು. ಬೇರೆಜನರ ಮುದ್ರೆಯಿಂದ ಕೂಡಿದ ಪದಾರ್ಥದಮೇಲೆ ರಾಜಮುದ್ರೆಯನ್ನೊತ್ತಬಹುದು. ರಾಜಮುದ್ರೆ ಯುಳ್ಳ ವಸ್ತುವಿನಮೇಲೆ ಇನ್ನೊಬ್ಬರ ಮುದ್ರೆಯನ್ನೊತ್ತಬಹುದೇ ? ಅದರಂತೆ ಮೊದಲೇ ಶಿವಮುದ್ರಾಸಂಪನ್ನನಾಗಿರುವ ನಾನು ಈಗ ಬೆರೆ ಮುದ್ರೆಗಳಿಗೆ ಯೋಗ್ಯನಲ್ಲ. ಉಪನಯನವಿಲ್ಲದವರಾದಾಗ್ಯೂ ಚಂಡೇಶ್ವರ ಮುಂತಾದವರು ಸರ್ವಜ್ಞರೂ ಸರ್ವ ಸಂಮತರೂ, ಪೂಜ್ಯರೂ ಆಗಿಲ್ಲವೇ ? ಇದಲ್ಲದೆ ಪರಶಿವನು ತನ್ನ ಭೃತ್ಯನನ್ನು ಮತ್ತೊಬ್ಬನಿಗೆ ಕೊಡುವದೇ ಇಲ್ಲ. ಯಾಕಂದರೆ; ಸುಂದರ ನಂಬಿ ಯೆಂಬ ಭಕ್ತನನ್ನು ತನ್ನ ಮಗನೆಂದು ಸ್ಥಾಪಿಸಿ, ಮುನಯರಾಜನಿಂದ ತೆಗೆದುಕೊಂಡನು. ಮಾದರಸನು ಬಸವೇಶನಿಂದ ಹೇಳಲ್ಪಟ್ಟ ಪ್ರಾಮಾಣಿಕವಾದ ಮಾತನ್ನು ಕೇಳಿ ಸ್ವಲ್ಪ ಕೋಪಗೊಂಡವನಾಗಿ ಮತ್ತು ಹೇಳುವದಕ್ಕೆ ಉಪಕ್ರ ಮಿಸಿದನು. ಎಲೈ ಮಗನೇ ವೇದಾಧ್ಯಾಯನ ಅಗ್ನಿಹೋತ್ರ ಸಂಧ್ಯಾವಂದನಾದಿ ಕರ್ಮಗಳು ಬ್ರಾಹ್ಮಣನಿಗೆ ಮುಖ್ಯಕರ್ತವ್ಯಗಳು. ಉಪನಯನದಿಂದಲೇ ಆ ಕರ್ಮ ಗಳಲ್ಲಿ ಅಧಿಕಾರವುಂಟಾಗುವದು. ಅಂಥಾ ಉಪನಯನವಿಲ್ಲದವನಿಗೆ ಬ್ರಾಹ್ಮ ಣ್ಯವನ್ನು ವಿದ್ವಾಂಸರು ಹ್ಯಾಗೆ ಸಂಮತಿಸುವರು ? ಈ ಮಾತನ್ನು ಕೇಳಿ, ಮಹಾ ತ್ಮನಾದ ಬಸವೇಶನು ತಂದೆಯನ್ನು ಕುರಿತು ಹೇಳಿದನು. ಏನಂದರೆ:—ಶಿವನ ಉಸಿರಿನಿಂದ ಹುಟ್ಟಿದ ವೇದಗಳಿಗಿಂತಲೂ ತುಟಿ, ದವಡೆ, ಹಲ್ಲು ಮುಂತಾದ ಅವ ಯವಗಳ ಸಂಯೋಗದಿಂದುಂಟಾದ ಆಗಮಗಳು ಶ್ರೇಷ್ಠವಾದವುಗಳಲ್ಲವೇ? ಆದಕಾರಣದಿಂದ ಶಿವಾಗಮವು ವೇದಕ್ಕಿಂತಲೂ ಪ್ರಮಾಣವೆಂದು ಜ್ಞಾನಿಗಳು ಹೇಳುತ್ತಾರೆ. ಎಲೈ ತಂದೆಯೇ ಶಿವಾಗಮಗಳ ಸಾರವನ್ನು ನೀನು ತಿಳಿದಿಲ್ಲವೇ. ವೀರಶೈವ ಮತಸ್ಥರಿಗೆ ಉಪನಯನವು ಇಲ್ಲದಿದ್ದಾಗ್ಯೂ ಶಿವದೀಕ್ಷಾರೂಪವಾದ ಸಂಸ್ಕಾರದ ಮಹಿಮೆಯಿಂದ ವೇದಾಧಿಕಾರವುಂಟಾಗುತ್ತದೆ. ಈ ಅರ್ಥವನ್ನೇ ವ್ಯಾಸಮುನಿಯು ಗರುಡಪುರಾಣದಲ್ಲಿ ವಂಶಾವಳೀ ಪ್ರಯಾತಾನಾಂಲಿಂಗಧಾರ ಣಶಾಲಿನಾಂ || ಜ್ಞಾನಿನಾಂಶಿವಭಕ್ತಾನಾಂಶೂದ್ರತ್ವಂನೈವವಿದ್ಯತೆ || ನಮಕೆ ಚಮಕೆಪಂಚಬ್ರಹ್ಮಮಂತ್ರೇಚಪೈದಿಕೆ || ತೇಷಾಮೆವಾಧಿಕಾರೋಸ್ತಿಶಿವದೀಕ್ಷಾಪ್ರ ಭಾವತಃ || ಎಂಬ ವಚನಗಳಿಂದ ಸಾರುತ್ತಾನೆ. ಈ ವಚನಗಳ ಅರ್ಥವೇನೆಂದರೆ

ಜನ್ಮನಾಜಾಯತೆಶೂದ್ರಃ ಕರ್ಮಣಾದ್ವಿಜಉಚ್ಯತೆ. ಎಂಬ ವಚನಾನುಸಾರವಾಗಿ ಉಪನಯನವಿಲ್ಲದ ಪ್ರಾಕೃತಬ್ರಾಹ್ಮಣವಂಶೀಯನಿಗೆ ಶೂದ್ರತ್ವವು ಪ್ರಾಪ್ತವಾಗುವದಷ್ಟೆ. ವಂಶಪಾರಂಪರ್ಯದಿಂದ ಲಿಂಗಧಾರಕರಾದ ಅಪ್ರಾಕೃತಬ್ರಾಹ್ಮಣರಿಗೆ ಉಪನಯನವಿಲ್ಲದಿದ್ದರೂ, ಶೂದ್ರತ್ವವಿಲ್ಲ. ಶಿವದೀಕ್ಷಾಪ್ರಭಾವದಿಂದ ಅವರಿಗೆ ವೇದಾಧಿಕಾರವುಂಟು, ಎಂಬುವದೇ ತಪಸ್ಸು, ಕರ್ಮ, ಜಪ, ಧ್ಯಾನ, ಜ್ಞಾನ ಎಂಬೀಕ್ರಮದಿಂದ ಸೇವೆಯು ಐದುವಿಧವಾಗಿರುವದು. ಶಿವಕಾರ್ಯಾರ್ಥವಾಗಿ ದೇಹವನ್ನು ಶೋಷಿಸುವದೇ ತಪಸ್ಸು. ಅದನ್ನು ಬಿಟ್ಟು, ಕೃಛ್ರಚಾಂದ್ರಾಯಣ ಮೊದಲಾದದ್ದನ್ನು ಮಾಡಕೂಡದು. ಶಿವಪೂಜೆಯೇ ಕರ್ಮ; ಅದನ್ನು ಬಿಟ್ಟು, ಪಶುವಿಶಸನರೂಪವಾದ ಬಾಹ್ಯಯಾಗಾದಿಗಳನ್ನು ಆಚರಿಸಕೂಡದು. ಪಂಚಾಕ್ಷರಿ, ಪ್ರಣವ, ಶ್ರೀರುದ್ರಾನುವಾಕ,ಮೊದಲಾದ ಮಂತ್ರಾಭ್ಯಾಸವೇ ಜಪವು; ಅದನ್ನು ಬಿಟ್ಟು, ಶಿವೇತರದೇವತಾವಿಷಯಕವಾದ ಶ್ರುತಿಯನ್ನು ಓದಕೂಡದು. ಶಿವಸ್ವರೂಪವನ್ನು ಚಿಂತಿಸುವದೇಧ್ಯಾನ. ಅದನ್ನು ಬಿಟ್ಟು, ಸ್ವಸ್ವರೂಪಧ್ಯಾನವನ್ನು ಮಾಡಕೂಡದು. ಶಿವಾಗಮಾರ್ಥವನ್ನು ತಿಳಿಯಬೇಕಲ್ಲದೆ ಬೇರೆಗ್ರಂಥಗಳ ಅರ್ಥವನ್ನು ತಿಳಿಯಕೂಡದು. ಈರೀತಿಯಾಗಿ ಶಿವಯಜ್ಞವು ಐದುವಿಧವಾಗಿ ಹೇಳಲ್ಪಟ್ಟಿತು. ಈ ಪಂಚಯಜ್ಞದಿಂದ ಯಾವನು ನನ್ನನ್ನುನಿರಂತರವೂ ಪೂಜಿಸುತ್ತಾನೋ ಅವನೇಭಕ್ತನೆನಿಸುವನು. ಹೀಗೆಂಬ ವಾತುಲಾಗಮದಲ್ಲಿರುವ ಶಿವವಚನವನ್ನು ಕೇಳಲಿಲ್ಲವೇ. ಹೃದಯದಲ್ಲಿ ಪ್ರಕಾಶಿಸುವಜ್ಞಾನವೆಂಬಿ ಸೂರ್ಯನನ್ನು ಮನಸ್ಸಿನಿಂದ ಉಪಾಸನಮಾಡುವದೇ ಸಂಧ್ಯಾವಂದನೆ. ಪ್ರಸಾದಲಿಂಗಮೊದಲಾದ ಲಿಂಗಗಳಲ್ಲಿ ಶ್ರೋತ್ರಮುಂತಾದ ಇಂದ್ರಿಯಗಳಿಂದ ಶಬ್ದಾದಿವಿಷಯಗಳನ್ನು ಸಮರ್ಪಿಸುವದೇ ಅಗ್ನಿಹೋತ್ರವೆಂದು ವಿದ್ವಾಂಸರುಹೇಳುತ್ತಾರೆ. ಮಂತ್ರಸಿದ್ಧಿಯಲ್ಲಿಯೂ, ಶಿವದೀಕ್ಷೆಯಲ್ಲಿಯೂ, ಭಸ್ಮಸಂಪಾದನೆಯಲ್ಲಿಯೂ, ಶಿವಾಗ್ನಿಮುಖದಿಂದ ಬಾಹ್ಯಹೋಮವನ್ನು ಮಾಡಬೇಕಲ್ಲದೆ ಮತ್ತಾವಕರ್ಮದಲ್ಲಿಯೂ ಮಾಡಕೂಡದು. ಈ ಪ್ರಕಾರವಾಗಿ ವೀರಾಗಮಮೊದಲಾದ ಶಿವಾಗಮಗಳ ವಚನಾನುಸಾರವಾಗಿ ಈಗ ನನ್ನನ್ನು ಶಿವಾಚಾರಗಳಿಂದಕೂಡಿದ ಬ್ರಾಹ್ಮಣನೆಂದುತಿಳಿ. ಸೂರ್ಯೋಪಾಸನಾದಿ ಪಶುಧರ್ಮಗಳಿಂದ ಕಟ್ಟಲ್ಪಟ್ಟವರಾಗಿಯೂ, ಬ್ರಹ್ಮನವಂಶದಲ್ಲಿ ಹುಟ್ಟಿದವರಾಗಿಯೂ, ಇರುವ ದ್ವಿಜರು ಲಿಂಗಧಾರಣಾದಿ ಪತಿಧರ್ಮಗಳಲ್ಲಿ ಮಾತ್ರ ತತ್ಪರರಾಗಿಯೂ ಶಿವಪೂಜಾನಿರತರಾಗಿಯೂ, ಅನ್ಯದೇವತಾಸ್ಮರಣೆಯನ್ನು ತ್ಯಜಿಸಿದ

ವರಾಗಿಯೂ ಇರುವ ಲಶಿವಕುಲದಲ್ಲಿ ಹುಟ್ಟಿದ ಬ್ರಾಹ್ಮಣರೊಡನೆ ಹ್ಯಾಗೆ ಸಮಾನರಾದಾರು ? ಕೊಕ್ಕರೆಗಳು ಹಂಸಪಕ್ಷಿಗಳಿಗೆ ಸಾಟಿಯಾಗಬಲ್ಲವೇ ಹೇಳು. ದ್ವಿಜಕರ್ಮವೆಂಬುವದು ಅನೇಕ ನಾಯಕರಿಗೆ ಯೋಗ್ಯಳಾದ ವೇಶ್ಯಾಸ್ತ್ರೀಯಂತಿರುವದು. ಈ ಶಿವಕರ್ಮವಾದರೋ ಪತಿವ್ರತೆಯಂತೆ ವೀರಶೈವನೊಬ್ಬನಿಗೇ ಯೋಗ್ಯವಲ್ಲದೆ ಇತರರಿಗೆ ಯೋಗ್ಯವಲ್ಲ. ಎಲೈ ತಂದೆಯೇ ನೀನು ಶಿವಪೂಜೆಯೊಂದರಲ್ಲಿ ನಿರತನಾಗಿ ಶಿವಯೋಗಿಯ ಸೇವೆಯಲ್ಲಿ ಪ್ರೀತಿಯುಳ್ಳವನಾಗಿ, ಈ ಪ್ರಾಕೃತಜನದ ಭಯವನ್ನು ಬಿಟ್ಟು ಸುಖದಿಂದಿರು. ಎಲೌ ಜನನಿಯೇ ನೀನುಕೂಡ ತಂದೆಯ ಪಾದಸೇವೆಯಲ್ಲಿ ಆಸಕ್ತಳಾಗಿದ್ದು ಜಂಗಮಪಾದಪೂಜೆಯಿಂದ ಪರಿಪೂರ್ಣವಾದ ಇಷ್ಟಾರ್ಥವುಳ್ಳವಳಾಗಿ ನಡೆದುಕೋ ಶಿವಮುದ್ರೆಗಳ ಮಹಿಮೆಯಿಂದಲೂ ನಂದಿಕೇಶ್ವರನಲ್ಲಿಹುಟ್ಟಿರುವ ಭಕ್ತಿಯಿಂದಲೂ, ನೀವು ಪೂರ್ವದಲ್ಲೇ ಪುಣ್ಯಶಾಲಿಗಳು. ನನಿಗೆ ತಂದೆತಾಯಿಗಳಾದದ್ದರಿಂದ ಇನ್ನೂ ವಿಶೇಷವಾಗಿ ಪುಣ್ಯಶಾಲಿಗಳಾದಿರಿ. ಪ್ರಾಕೃತಾಚಾರಗಳಿಗೆ ದೂರವಾದ ಶಿವಾಚಾರಗಳಲ್ಲಿ ಪ್ರೀತಿಯನ್ನಿಟ್ಟಿರುವ ನಾನು ಅನಾಚಾರಗಳಿಗೆ ಆಸ್ಪದವಾದ ಈಸ್ಥಳದಲ್ಲಿರುವದಕ್ಕೆ ಅಪೇಕ್ಷಿಸುವದಿಲ್ಲ. ಈ ವಿಧವಾದ ಪುತ್ರನ ಉಪದೇಶವನ್ನು ತಂದೆಯಾದ ಮಾದರಸನು ಕೇಳಿ, ಸಂತೋಷದಿಂದಲೂ ಆಶ್ಚರ್ಯದಿಂದಲೂ ಆಕ್ರಮಿಸಲ್ಪಟ್ಟ ಮನಸ್ಸುಳ್ಳವನಾಗಿ, ಸುಮ್ಮನಾದನು. ಕುಲವು ಪರಿಶುದ್ಧವಾಯಿತು. ತಾಯಿಯು ಧನ್ಯಳಾದಳು ಎಂಬುವದು ಮೊದಲಾದ ವಚನಗಳನ್ನು ಸಾಫಲ್ಯಗೊಳಿಸುವನಾಗಿ ಬಸವೇಶ್ವರನು ತನ್ನ ತಾಯಿ ತಂದೆಗಳನ್ನು ಕೃತಾರ್ಥರನ್ನಾಗಿ ಮಾಡಿದನು. ಈರೀತಿಯಾಗಿ ಆ ಬಸವೇಶನು ಜನನೀಜನಕರನ್ನು ಬೋಧಿಸಿ, ತನ್ನಮನೆಯನ್ನು ಬಿಟ್ಟಹೊರಟನು. ಅವರುಕೂಡ ಇದು ನ್ಯಾಯವೆಂದುತಿಳಿದು, ತಡೆಯನ್ನುಮಾಡಲಿಲ್ಲ. ಬಲದೇವನಮಗಳಾದ ಗಂಗಾಂಬಿಕೆಗೆ ಸಂಗಡಗಾತಿಯಾಗಿರೆಂದು ಪಾರ್ವತಿಯಿಂದಾಜ್ಞಾಪಿಸಲ್ಪಟ್ಟ ವಿಜಯೆಯೆಂಬ ಪಾರ್ವತೀಸಖಿಯ ಅಂಶದಿಂದಹುಟ್ಟಿದ ಕನ್ಯೆಯಾದ ಬಸವೇಶನ ಸಹೋದರಿಯು ಆತನಜೊತೆಯಲ್ಲಿಯೇ ಹೊರಟಳು. ಆಕೆಯ ಉದರದಲ್ಲಿಯೇ ಕುಮಾರಸ್ವಾಮಿಯು ಚನ್ನಬಸವನೆಂಬನಾಮದಿಂದ ಹುಟ್ಟುವನು. ನಾಲ್ಕುವೇದಗಳ ಅರ್ಥವನ್ನುಬಲ್ಲ ದ್ವಿಜಶ್ರೇಷ್ಠನಿಗಿಂತಲೂ, ಭಕ್ತಿಸಂಪನ್ನನಾದ ಶ್ವಪಚನಾದರೂ ಶಿವನಿಗೆ ಪ್ರಿಯನಾಗುತ್ತಾನೆ. ಎಂಬ ಅದ್ಭುತವಾದ ಶಿವಾಗಮವಚನವನ್ನು ಬಸವೇಶನು ನೆನೆದು ಒಬ್ಬ ಶಿವಭಕ್ತದ್ವಾರಪಾಲಕನ ಮನೆಯನ್ನೈದಿದನು.

ಬಸವೇಶ್ವರವಿಜಯದಲ್ಲಿ ಮೂರನೇಅಧ್ಯಾಯವು ಸಂಪೂರ್ಣವು.

# ನಾಲ್ಕನೆ ಅಧ್ಯಾಯವು.

---

ಆನಂತರದಲ್ಲಿ ಭಕ್ತಿಯೆಂಬ ಬಳ್ಳಿಗೆ ಆಶ್ರಯಸ್ತಂಭವಾಗಿಯೂ, ಕೃಪಾ ವಶವಾದ ಮನಸ್ಸುಳ್ಳವನಾಗಿಯೂ, ಶಿವಮಾರ್ಗದ ವಿಘ್ನಗಳನ್ನು ಕತ್ತರಿಸುವದ ರಲ್ಲಿ ಕತ್ತರಿಯಾಗಿ ಮಾಡಲ್ಪಟ್ಟ ನಡತೆಯುಳ್ಳವನಾಗಿಯೂ, ಕಮಲಗಳಂತಿರುವ ಪಾದಗಳನ್ನಿರಿಸುವದರಿಂದ ಭೂಮಿಯನ್ನೂ, ಕೃಪೆಯೆಂಬ ಅಮೃತಸರದಿಂದ ತೋರಿಸಲ್ಪಟ್ಟ ಕಡೆಗಣ್ಣುಗಳಿಂದ ಸಕಲ ದಿಕ್ಕುಗಳನ್ನೂ, ಪರಿಶುದ್ಧಿಗೊಳಿಸುತ್ತಿ ರುವವನಾಗಿಯೂ, ಸೇವೆಯನ್ನು ಮಾಡಬೇಕೆಂಬಾಶೆಯಿಂದ ಬರುತ್ತಿರುವ ಬಾಗ ವಾಡಪುರ ಲಕ್ಷ್ಮಿಯೋ ಎಂಬಂತೆ ಭಕ್ತಿಸಂಪತ್ತಿನಿಂದ ಧನ್ಯೆಯೂ ಕನ್ಯೆಯೂ ಆಗಿರುವ ಸಹೋದರಿಯಾದ ನಾಗಲಾಂಬಿಕೆಯಿಂದ ಅನುಸರಿಸಲ್ಪಟ್ಟವನಾದ ಕಾರಣವೇ ವಿವೇಕದಿಂದ ಕೂಡಿದ ವೈರಾಗ್ಯದಂತೆಯೂ ಭಕ್ತಿಯಿಂದ ಕೂಡಿದ ಶಿವಜ್ಞಾನದಂತೆಯೂ, ಶಾಂತಿಯಿಂ ಕೂಡಿದ ತಪಸ್ಸಿನಂತೆಯೂ, ಸರ್ವರಿಂದಲೂ ನೋಡಲ್ಪಟ್ಟವನಾಗಿಯೂ ಪ್ರವೇಶಿಸುತ್ತಿರುವ ಬಸವೇಶ್ವರನನ್ನು ಪಡಿಯಾರಿಯು ನೋಡಿ ಆ ಸಮಯಕ್ಕೆ ಒದಗಿದ ಪ್ರಮಥರೊಡನೆ ಸಂತೋಷದಿಂದ ಎದುರ್ಗೊಂ ಡನು. ಬಸವೇಶನು ಕೂಡ ಆತನ ಭಕ್ತಿಯನ್ನು ನೋಡಿ, ಬಹಳವಾಗಿ ಆಶ್ಚರ್ಯ ಪಟ್ಟು, ಭಕ್ತರ ಪಾದಧೂಳಿಯಿಂದ ಪರಿಶುದ್ಧಿಗೊಳಿಸಲ್ಪಟ್ಟ ಆ ಭಕ್ತನ ಆಲಯ ವನ್ನು ಪ್ರವೇಶಿಸಿದನು. ಆಗ ಆ ದೇಶದಲ್ಲಿ ವಾಸಿಸುವವರು ಆ ಬಸವೇಶನ ಆಗ ಮನವನ್ನು ಕೇಳಿ, ಬಹು ಕಾಲಕ್ಕೆ ಬಂದ ಬಂಧುವನ್ನು ಹೊಂದುವವರಂತೆ ಆ ಬಸವೇಶನನ್ನು ಕುರಿತು ಬಂದರು. ಬಸವೇಶನ ಸಾನ್ನಿಧ್ಯದಿಂದ ಆ ಸ್ಥಲವು ಪವಿ ತ್ರವಾಯಿತು. ಮಹಾತ್ಮರು ಎಲ್ಲಿ ಇರುತ್ತಾರೋ ಅದೇ ಪರಿಶುದ್ಧವಾದದ್ದೆಂದು ವಿವೇಕಿಗಳು ಹೇಳುತ್ತಾರೆಯಷ್ಟೆ. ಬಿಜ್ಜಲರಾಯನಿಗೆ ಮಂತ್ರಿಯಾದ ಬಲದೇ ವನು ಸರಿಯಾದ ನಡತೆಯುಳ್ಳ ವರನಿಲ್ಲದ್ದರಿಂದ ಕನ್ಯೆಯಾದ ತನ್ನ ಮಗಳನ್ನು ನೋಡಿ, ವ್ಯಸನಪಡುತ್ತಿದ್ದು, ಬಹು ಆಶ್ಚರ್ಯಕರವಾದ ಬಸವೇಶನ ವಾರ್ತೆಯನ್ನು ಕೇಳಿ, ಈ ವರನು ನನ್ನ ಮಗಳಿಗೆ ಯೋಗ್ಯನೆಂದು ಆಲೋಚಿಸಿದನು. ಆಪ್ತರಾದ ಭಕ್ತರಿಂದನುಮತಿಸಲ್ಪಟ್ಟವನಾಗಿ, ಅವರೊಡನೆ ತನ್ನ ಮಗಳನ್ನು ಕರೆದುಕೊಂಡು

ಸಂತೋಷಯುಕ್ತನಾಗಿ ಕಲ್ಯಾಣ ಪಟ್ಟಣದಿಂದ ಹೊರಟನು. ಶಿವಾಜ್ಞೆಯೆಂಬ ಕತ್ತರಿಯಿಂದ ಕತ್ತರಿಸಲ್ಪಟ್ಟ ಲೌಕಿಕ ಭ್ರಾಂತಿಯುಳ್ಳ ಆ ಬಲದೇವನು ಪಡಿಯಾರಿಯ ಮನೆಯ ಬೀದಿಯನ್ನೈದಿದನು. ಆ ಬೀದಿಯು ಹ್ಯಾಗಿತ್ತೆಂದರೆ. ಆ ಕಾಲದಲ್ಲಿ ಪೂಜಾನಿರತರಾದವರಿಂದ ಇಡಲ್ಪಟ್ಟ ದೀಪಗಳಿಂದ ವ್ಯಾಪಿಸಲ್ಪಟ್ಟದ್ದಾಗಿಯೂ, ಪ್ರತಿ ಗೃಹದ ಬಾಗಿಲುಗಳಲ್ಲಿ ಕಟ್ಟಲ್ಪಟ್ಟ ನಂದಿಧ್ವಜಗಳಿಂದ ಮನೋಹರವಾದದ್ದಾಗಿಯೂ, ಬಸವೇಶನನ್ನು ನೋಡಬೇಕೆಂಬ ಇಚ್ಛೆಯಿಂದ ತುಂಬಲ್ಪಟ್ಟವರಾಗಿಯೂ ಶಿವಕಥೆಯನ್ನು ಹೇಳುವವರಾಗಿಯೂ ಇರುವ ಪ್ರಮಥರಿಂದ ಆಶ್ರೈಸಲ್ಪಟ್ಟ ಉಭಯಪಾರ್ಶ್ವಗಳ ವೇದಿಗಳುಳ್ಳದ್ದಾಗಿಯೂ, ವಿಕಸಿತವಾದ ಕಕ್ಕೆ ಹೂವುಗಳ ಸುವಾಸನೆಯಿಂದಲೂ ಉತ್ತಮ ಜಲದ ಸಂಬಂಧದಿಂದಲೂ ಕೂಡಿ, ಮೆತ್ತಗೆಬೀಸುತ್ತಿರುವ ವಾಯುಗಳಿಂದ ಮಾರ್ಗಸ್ಥರ ಆಯಾಸವನ್ನು ಪರಿಹರಿಸುವಂಥಾದ್ದಾಗಿಯೂ ಇತ್ತು. ಆ ಬೀದಿಯ ಮಧ್ಯದಲ್ಲಿರುವಂಥಾದ್ದಾಗಿಯೂ, ಬಸವೇಶ್ವರನಿಂದ ವಾಸಿಸಲ್ಪಟ್ಟದ್ದಾಗಿಯೂ ಇರುವ ಆ ಪಡಿಯಾರಿಯ ಮನೆಗೆ ಬಲದೇವ ಮಂತ್ರಿಯು ಪ್ರವೇಶಿಸಿದನು. ಕನ್ಯಾಸಮೇತನಾಗಿ, ಬಸವೇಶನ ಸನ್ನಿಧಿಯನ್ನೈದಿದ ಬಲದೇವನು ಪಾರ್ವತಿಯೊಡನೆ ಪರಶಿವನ ಸನ್ನಿಧಿಯನ್ನೈದಿದ ಹಿಮವಂತನಂತೆ ಮೆರೆಯುತ್ತಿದ್ದನು. ಅನಂತರದಲ್ಲಿ ಬಸವೇಶನನ್ನು ಕಂಡು, ನಮಸ್ಕರಿಸಲು, ಆತನು ಪ್ರೀತಿ ಪೂರ್ವಕವಾಗಿ ಆತನ ನಮಸ್ಕಾರವನ್ನು ಪ್ರತಿನಮಸ್ಕಾರದಿಂದ ಅಂಗೀಕರಿಸಿದನು. ಬಲದೇವನು ಪರಸ್ಪರೋಪಚಾರಗಳು ನಡೆದ ಬಳಿಕ ಸಮೀಪದಲ್ಲಿ ನಿಂತು, ವಿನಯದೊಡನೆ ಬಸವೇಶ್ವರನಿಗೆ ಹೇಳಿದನು. ಏನಂದರೆ,—ನನ್ನ ತಂಗಿಯಾದ ಮಾದಾಂಬೆಯ ಗರ್ಭದಲ್ಲಿ ಶಿವಯೋಗಿಯಾದ ನೀನು ಜನಿಸಿದ್ದರಿಂದ ನಮ್ಮ ವಂಶವು ಪುಣ್ಯಶಾಲಿಯಾಯಿತು. ನಿನ್ನ ಪಾದನ್ಯಾಸಗಳಿಂದ ಭೂಮಿಯೂ ನಿನ್ನ ದೃಷ್ಟಿಗಳಿಂದ ಸಕಲ ದಿಕ್ಕುಗಳೂ ಪರಿಪೂರ್ಣಗಳಾಗಿಯೂ ಉನ್ನತಗಳಾಗಿಯೂ ಇರುವ ನಿನ್ನ ಯಶಸ್ಸುಗಳಿಂದ ಆಕಾಶವೂ ಪರಿಶುದ್ಧವಾಗಿ ಮಾಡಲ್ಪಟ್ಟಿತು. ಕರ್ಮ ಮಾರ್ಗವನ್ನು ಕುತ್ಸಿತ ಮಾರ್ಗವನ್ನಾಗಿಯೂ ಶಿವೋಕ್ತಮಾರ್ಗವನ್ನು ಧರ್ಮಮಾರ್ಗವನ್ನಾಗಿಯೂ ತಿಳಿದು ಅದನ್ನು ಭೂಮಂಡಲದಲ್ಲಿ ಸ್ಥಾಪಿಸುವದಕ್ಕೆ ನಿನ್ನಂತೆ ಇನ್ನಾವನು ಸಮರ್ಥನಾಗುತ್ತಾನೆ. ಈ ಪ್ರಕಾರವಾಗಿ ಹೇಳಿ, ತನ್ನ ಮಗಳನ್ನು ಆತನ ಮುಂದೆ ನಿಲ್ಲಿಸಿ, ಈಕೆಯು ನಿನ್ನ ಪಾದ ಸೇವೆಯನ್ನು ಮಾಡಿಕೊಂಡಿರಬೇಕೆಂದು ಪ್ರಾರ್ಥಿಸಿದನು. ಆಗ ಬಸ

ವೇಶನು ಆ ಬಲದೇವನ ಪ್ರಾರ್ಥನೆಯನ್ನು ಅಂಗೀಕರಿಸಿದನು. ಭೂಮಿಯಲ್ಲಿ ಸತ್ಪುರುಷರು ಸಫಲ ಮನೋರಥರಾಗುತ್ತಾರಲ್ಲವೆ? ಬಳಿಕ ಬಲದೇವನು ಕೃತಾರ್ಥನಾಗಿ ಅವನಂ ಬೀಳ್ಕೊಂಡು, ತನ್ನ ಮನೆಗೆ ಬಂದು, ಶೀಘ್ರವಾಗಿ ಕಲ್ಯಾಣ ಪಟ್ಟಣಕ್ಕೆ ಅಲಂಕಾರವನ್ನು ಮಾಡಿಸಿ ಬಸವೇಶನನ್ನು ಕರತರುವದಕ್ಕಾಗಿ ಒಬ್ಬ ಪುರುಷನನ್ನು ಅನೇಕ ಸೇನೆಗಳೊಡನೆಯೂ, ಆಪ್ತರೊಡನೆಯೂ ಕಳುಹಿಸಿದನು. ಭಕ್ತಿಯಿಂದ ಅಲಂಕರಿಸಲ್ಪಟ್ಟ ಬಸವೇಶನು ಆ ಪುರುಷನಿಂದ ತರಲ್ಪಟ್ಟ ಆಭರಣಗಳನ್ನು ಅಂಗದಲ್ಲಿ ಧರಿಸಿಕೊಂಡು, ಅವನ ಸಂಗಡಲೇ ಶೀಘ್ರದಲ್ಲಿ ಹೊರಟು, ಅನೇಕ ಭಕ್ತರನ್ನು ಸಂಗಡ ಕರೆದುಕೊಂಡು ಸುತ್ತಲೂ ಸೇನೆಗಳಿಂದ ಬಳಸಲ್ಪಟ್ಟವನಾಗಿ, ಗಂಗಾಂಬಿಕೆಯೊಡನೆ ಆನೆಯ ಮೇಲೆ ಕುಳಿತುಕೊಂಡುಬಂದನು. ಬರುತ್ತಿರುವ ಬಸವೇಶನು ಅಲಕಾವತಿಗೆ ಸಮಾನವಾಗಿಯೂ ನಿರಂತರದಲ್ಲೂ ಮಂಗಳಗಳಿಂದ ಕೂಡಿದ ಐಶ್ವರ್ಯವುಳ್ಳದ್ದಾಗಿಯೂ ಇರುವ ಕಲ್ಯಾಣ ಪಟ್ಟಣವನ್ನು ದೂರದಲ್ಲಿ ನೋಡಿದನು. ಆ ಪುರದ ಅಗಳತೆಯು ಪಾತಾಳದಿಂ ಬರುತ್ತಾ ಹೋಗುತ್ತಾ ಇರುವ ನಾಗಾಂಗನೆಯರ ದೇಹದ ಕುಂಕುಮ ಕಾಂತಿಯಿಂದ ವ್ಯಾಪಿಸಲ್ಪಟ್ಟದ್ದಾಗಿ ಪುರ ಲಕ್ಷ್ಮಿಯ ಚಿನ್ನದ ಒಡ್ಯಾಣವೋ ಎಂಬಂತೆ ಕಾಣಿಸುವದು. ಮತ್ತು ಆ ಅಗಳತೆಯು ಸ್ಫಟಿಕಮಯವಾದ ಪ್ರಾಕಾರ ಕಾಂತಿಯಿಂದ ಬಳಸಲ್ಪಟ್ಟದ್ದಾಗಿ ಸತ್ಯಲೋಕದ ಸುತ್ತಲೂ ಬಳಸಿಕೊಂಡಿರುವ ಗಂಗಾ ನದಿಯೋ ಎಂಬಂತೆಯೂ ಪ್ರಕಾಶಿಸುತ್ತದೆ. ಶುದ್ಧಸ್ಫಟಿಕ ರತ್ನಗಳಿಂದ ನಿರ್ಮಿಸಲ್ಪಟ್ಟ ಆ ಪಟ್ಟಣದ ಕೋಟೆಯು, ಪುರಲಕ್ಷ್ಮಿಯುಟ್ಟುಕೊಂಡಿರುವ ಪ್ರಕಾಶಮಾನವಾದ ಧವಳಾಂಬರವೋ ಎಂಬಂತೆ ಪ್ರಕಾಶಿಸುತ್ತದೆ. ಕೋಟೆಗೆಹಾಕಿರುವ ಸ್ಫಟಿಕಶಿಲೆಗಳ ಕಾಂತಿಸಮುದಾಯದಿಂದ ವ್ಯಾಪಿಸಲ್ಪಟ್ಟ ಆ ಪುರವು, ಕ್ಷೀರಸಮುದ್ರದಮಧ್ಯದಲ್ಲಿರುವ ಶ್ರೇಷ್ಠವಾದೊಂದು ದ್ವೀಪದ ಬೆಡಗನ್ನು ಧರಿಸಿತ್ತು. ಸ್ಫಟಿಕಶಿಲೆಗಳಿಂದ ನಿರ್ಮಿಸಲ್ಪಟ್ಟ ಆ ಪಟ್ಟಣದ ಕೋಟೆಯಮೇಲಣ ಬುರುಜುಗಳಸಾಲು, ಕೋಟೆಯಮೇಲೆಬಂದು ಕುಳಿತಿರುವ ಶರತ್ಕಾಲದ ಮೇಘಗಳ ಸೌಂದರ್ಯವನ್ನು ವಹಿಸಿತ್ತು. ಆ ಪುರದ ಉಪ್ಪರಿಗೆಗಳ ತುದಿಗಳಲ್ಲಿಡಲ್ಪಟ್ಟ ಚಿನ್ನದಕಲಶಗಳು, ಆಕಾಶದಲ್ಲಿಚರಿಸುತ್ತಿರುವ ದೇವತೆಗಳ ವಿಮಾನಗಳಿಗೆ ವಿಘ್ನವನ್ನಾಚರಿಸುತ್ತಿರುವವು. ಆ ಪುರದ ಹೆಬ್ಬಾಗಿಲಮೇಲೆ ಶೋಭಿಸುತ್ತಿರುವ ಕಪ್ಪಾದ ಧ್ವಜಪಟವು ಪಾರ್ಶ್ವದಲ್ಲಿ ಸಂಚರಿಸುತ್ತಿರುವ ಸೂರ್ಯನಿಗೆ ನಿತ್ಯದಲ್ಲಿಯೂ

ರಾಹುವೆಂಬ ಊಹೆಯನ್ನುಂಟುಮಾಡುವದು. ಮತ್ತು ಆ ಪುರದಕೋಟೆಯಬಾಗಿಲಲ್ಲಿ ಕೆತ್ತಲ್ಪಟ್ಟ ರತ್ನಗಳಸಮೂಹದ ಕಾಂತಿಯಿಂದ ಕೆಂಪಾದ ಅಂತರಿಕ್ಷವನ್ನು ಪ್ರವೇಶಿಸಿದ ಸೂರ್ಯನು, ಆ ಕಾಲದಲ್ಲಿ ಸಂಜೆಗೆಂಪಿನಿಂದ ಆವರಿಸಲ್ಪಟ್ಟವನಂತೆ ಜನಗಳಿಗೆ ಕಾಣಿಸುವನು. ಆ ಪುರದರಾಜಮಾರ್ಗದ ಉಭಯಪಾರ್ಶ್ವಗಳಲ್ಲಿರುವ ಜಗಲಿಗಳಲ್ಲಿ ಕೆತ್ತಲ್ಪಟ್ಟ ಅನೇಕವಿಧವಾದ ರತ್ನಗಳ ಕಾಂತಿಯು ಆಕಾಶದಲ್ಲಿ ಯಾವಾಗಲೂ ಇಂದ್ರಚಾಪದ ಲೀಲೆಯನ್ನುಂಟುಮಾಡುವದು. ಮತ್ತು ಆ ಪಟ್ಟಣದ ರಾಜವೀಥಿಯ ಎರಡು ಕಡೆಗಳಲ್ಲೂ ಇರುವ ಉಪ್ಪರಿಗೆಗಳ ರತ್ನ ಕಾಂತಿ ಪರಂಪರೆಯು, ಪುರಲಕ್ಷ್ಮಿಯ ಚಂದ್ರದ ಪುಡಿಯಿಂದ ಕೂಡಿದ ಬೈತಲೆಗೆ ಸಮಾನವಾಗಿರುವದು. ಆ ಪಟ್ಟಣದ ರಾಜ ಮಾರ್ಗದಲ್ಲಿ ಸ್ಫಟಿಕ ಮಣಿಗಳಿಂದ ಮಾಡಲ್ಪಟ್ಟ ನಿಬದ್ಧ ಭೂಮಿಯಲ್ಲಿ ಸಂಚರಿಸುತ್ತಿರುವ ಸ್ತ್ರೀಯರು ದೇವಗಂಗೆಯಲ್ಲಿ ಈಜಾಡುತ್ತಿರುವ ಅಪ್ಸರ ಸ್ತ್ರೀಯರಂತೆ ಕಾಣಿಸುವರು. ಸ್ಥಿರವಾದೈಶ್ವರ್ಯದಿಂದ ಒಪ್ಪುತ್ತಿರುವ ಆ ಪಟ್ಟಣ ವಾಸಿಗಳಾದ ವೇಶ್ಯೆಯರು ತಾವು ಅಪ್ಸರ ಸ್ತ್ರೀಯರನ್ನು ಕುರಿತು, ಸ್ವಸ್ಥಿರಾನಂದ ಶಾಲಿಗಳೆಂದು (ಅಂದರೆ ಅಸ್ಥಿರವಾದ ಆನಂದದಿಂದ ಕೂಡಿದವರು ಎಂದು ಪ್ರಕೃತಾರ್ಥ ಸ್ವರ್ಗದಲ್ಲಿ ಸ್ಥಿರವಾದ ಆನಂದದಿಂದ ಕೂಡಿದವರೆಂದು ಆ ಪ್ರಕೃತಾರ್ಥ) ತಿರಸ್ಕರಿಸುತ್ತಾರೆ. ನೋಡುವವರಿಗೆ ರೆಪ್ಪೆಮುಚ್ಚದಿರುವಿಕೆಯನ್ನೂ, ಸುಖವನ್ನೂ ಕೊಡುತ್ತಿರುವ ಆ ಪುರದ ವೇಶ್ಯಾ ಸಮೂಹವು ಅತ್ಯಂತಾಶ್ಚರ್ಯವನ್ನುಂಟುಮಾಡುತ್ತದೆ. ಮನ್ಮಥನು ಆ ಪುರದ ವೇಶ್ಯಾಂಗನೆಯರ ಕುಚವನ್ನು ಗಾಲಿಯನ್ನಾಗಿಯೂ, ಯೌವನವನ್ನು ರಥವನ್ನಾಗಿಯೂ, ಅವರಹುಬ್ಬನ್ನು ಬಿಲ್ಲನ್ನಾಗಿಯೂ, ಅವರಕಣ್ಣನ್ನು ಬಾಣವನ್ನಾಗಿಯೂ ಮಾಡಿಕೊಂಡು, ಮಂತ್ರಾಸ್ತ್ರದಿಂದ ಯೌವನಸ್ಥರನ್ನು ಜೈಸುವನು. ಆ ಪುರಸ್ತ್ರೀಯರು ಜಲಕ್ರೀಡೆಯಂ ಮಾಡುವ ಸಂದರ್ಭದಲ್ಲಿ ಕೊಳಗಳಿಗೆ ತಮ್ಮ ಗಮನಗಳಿಂದ ಹಂಸಪಕ್ಷಿ ಸಮೇತತ್ವವನ್ನೂ ಮುಖಗಳಿಂದ ಕಮಲ ಸಮೇತತ್ವವನ್ನೂ ಕೂದಲುಗಳಿಂದ ತುಂಬಿಗಳುಳ್ಳತನವನ್ನೂ ಕುಚಗಳಿಂದ ಚಕ್ರವಾಕ ಪಕ್ಷಿಗಳುಳ್ಳ ಭಾವವನ್ನೂ ಉಂಟುಮಾಡುವರು. ಮತ್ತು ಕ್ರೀಡಾರ್ಥವಾಗಿ ನೀರಿನಲ್ಲಿ ನಿಂತಿರುವ ಲತಾಂಗಿಯರಾದ ಸ್ತ್ರೀಯರಿಂದ ಕೂಡಿದ ಸರೋವರಗಳು ಹವಳದ ಬಳ್ಳಿಗಳಿಂದ ಮನೋಹರಂಗಳಾದ ಸಮುದ್ರಗಳಂತೆ ತೋರುತ್ತಿರುವವು. ಚಕ್ರವಾಕ ಪಕ್ಷಿಗಳಿಂದ (ನೀರಿನ ಸುತ್ತುಗಳಿಂದ) ವ್ಯಾಪ್ತವಾಗಿಯೂ, ಹವಳಗ

ಳಿಂದ (ಚಿಗುರುಗಳಿಂದ) ಶೋಭಿಸಲ್ಪಟ್ಟದ್ದಾಗಿಯೂ ಲಕ್ಷ್ಮಿಗೆ (ಕಮಲಗಳಿಗೆ) ಆಶ್ರಯವಾಗಿಯೂ ಇರುವ ಆ ಪುರದ ಸರೋವರಗಳು ಸಮುದ್ರಗಳಂತೆ ರಂಜಿಸುವವು. ಆ ಪುರದ ರಾಜಗೃಹದ ಕಲಶದ ಮೇಲೆ ಸ್ವಲ್ಪ ಕಾಲ ವಿಶ್ರಮಿಸಿಕೊಳ್ಳುವ ಮೇಘಮಂಡಲವು ಸೂರ್ಯಮಂಡಲವನ್ನು ಹಿಡಿದ ರಾಹುಮಂಡಲವೋ ಎಂಬಂತೆ ಕಾಣುವದು. ರತ್ನಖಚಿತವಾಗಿಯೂ, ವ್ಯಾಪಿಸುತ್ತಿರುವ ಕಾಂತಿಯುಳ್ಳದ್ದಾಗಿಯೂ, ಇರುವ ಆ ಪುರದ ಅರಮನೆಯ ಮೇಲಣ ಕಲಶವನ್ನು ನೋಡಿದ ಕ್ರೀಡಾರ್ಥವಾದ ಚಕ್ರವಾಕಗಳು. ರಾತ್ರಿಕಾಲದಲ್ಲಿಯೂ ರತಿಸೌಖ್ಯವನ್ನನುಭವಿಸುತ್ತಿರುವವು. ರತ್ನಮಯುವಾದ ಆ ಪಟ್ಟಣದರಮನೆಯ ಕಲಶವು ಶರತ್ಕಾಲದ ಮೇಘದಿಂಕೂಡಿದಾಗ, ನೋಡುವವರಿಗೆ ಸೂರ್ಯಚಂದ್ರರು ಕೂಡಿರುವರೆಂಬ ಭ್ರಾಂತಿಯನ್ನುಂಟುಮಾಡುವದು. ಆ ಪಟ್ಟಣದ ಅರಮನೆಗೆ ಬಳಿದಿರುವ ಸುಣ್ಣದಹೊಳಪಿನಿಂದಲೂ ಸ್ತ್ರೀಯರ ಕಡೆಗಣ್ಣಕಾಂತಿಗಳಿಂದಲೂ ನಿಬಿಡೀಕೃತವಾದ ಚಂದ್ರಮಂಡಲವು ಕಳಂಕವನ್ನು ಬಿಟ್ಟದ್ದಾಗಿ ಶೋಭಿಸುವುದು. ಆ ಪುರದ ಚಂದ್ರಕಾಂತಶಿಲಾಮಯಗಳಾದ ಉಪ್ಪರಿಗೆಗಳಲ್ಲಿ ಸ್ತ್ರೀಯರ ಮುಖಚಂದ್ರನ ಕಾಂತಿ ಬಿದ್ದು, ಅಲ್ಲಿನ ಬಚ್ಚಲುಗಳಿಂದ ನೀರು ಸುರಿಯುತ್ತಿರಲು; ಆ ನೀರನ್ನು ಸೂರ್ಯನ ಕುದುರೆಗಳು ಕುಡಿಯುತ್ತಿರುವವು. ಮತ್ತು ಆ ಪಟ್ಟಣದ ನೀಲ ರತ್ನ ಮಯಗಳಾದ ಉಪ್ಪರಿಗೆಗಳು ಸಂಚರಿಸುತ್ತಿರುವ ಸ್ತ್ರೀಯರಿಂದ ಕೂಡಿದಾಗ; ಹೊಳೆಯುವ ಮಿಂಚುಗಳಿಂದ ಕೂಡಿರುವ ಮೇಘಗಳಂತೆ ಶೋಭಿಸುವವು. ಮತ್ತು ಅಂಥಾ ನೀಲರತ್ನ ಮಯಗಳಾದ ಉಪ್ಪರಿಗೆಗಳಲ್ಲಿ ಸಂಚರಿಸುತ್ತಿರುವ ಸುಂದರಿಯರಾದ ಸ್ತ್ರೀಯರು ಮೇಘಗಳೊಡನೆ ಆಡುತ್ತಿರುವ ದೇವತಾಸ್ತ್ರೀಯರನ್ನು ತಿರಸ್ಕರಿಸುವರು. ಮುತ್ತುಗಳನ್ನು ಕೆತ್ತಿರುವ ನೀಲರತ್ನಮಯವಾದ ಆ ಪುರದ ಉಪ್ಪರಿಗೆಗಳನ್ನು ಇದೇನು ಹಗಲಿನಲ್ಲಿ ಆಕಾಶವು ನಕ್ಷತ್ರಗಳಿಂದ ಕೂಡಿರುವದೋ ಎಂಬ ಊಹೆಯಿಂದ ಜನವು ನೋಡುವದು. ಆ ಪುರದ ಉಪ್ಪರಿಗೆಗಳ ರತ್ನ ಮಯವಾದ ಶಿಖರಗಳಲ್ಲಿ ನಿಂತಿರುವ ಸ್ತ್ರೀಯರು ವಿಮಾನದಮೇಲೆ ಕುಳಿತುಕೊಂಡು ಬಂದು, ಪುರಲಕ್ಷ್ಮಿಯನ್ನು ನೋಡುತ್ತಿರುವ ದೇವತಾ ಸ್ತ್ರಿಯರೋ ಎಂಬಂತೆ ಪ್ರಕಾಶಿಸುತ್ತಿರುವರು. ಪಚ್ಚೆಯಮಣಿಗಳ ಕಾಂತಿಯಿಂದ ವ್ಯಾಪಿಸಲ್ಪಟ್ಟ ಉಪ್ಪರಿಗೆಗಳ ಮೇಲೆ ನಿಂತಿರುವ ಸ್ತ್ರೀಯರು ನಂದನವನದಲ್ಲಿ ಸೇರಿರುವ ವನಲಕ್ಷ್ಮಿಯರಂತೆ ಕಾಣಿಸುತ್ತಿರುವರು. ಆ ಪುರದ ಪಚ್ಚೆಯ ಉಪ್ಪರಿಗೆಗಳ ಕಾಂತಿಯಿಂದ ವ್ಯಾಪಿಸಲ್ಪಟ್ಟ ಆಕಾಶವನ್ನು ಪ್ರವೇಶಿಸಿದ ಸೂರ್ಯನು ತನ್ನ ಕುದುರೆಗಳನ್ನು ಕಾಣದೆ, ಭ್ರಾಂತನಾಗಿ, ಇತ್ತಲಾಗಿ ಅತ್ತಲಾಗಿ ನೋಡುವನು. ನಿಬಿಡವಾದ ಸುಣ್ಣದಿಂದ ಪ್ರಕಾಶಿಸಲ್ಪಟ್ಟ ಆಕಾರವುಳ್ಳ ಆ ಪುರದ ದೇವಾಲ

ಯುಗಳು ಪಟ್ಟಣವಾಸಿಗಳಿಂದ ಮಾಡಲ್ಪಟ್ಟ ಸುಕೃತರಾಶಿಗಳೋ ಎಂಬಂತೆ ಕಾಣುತ್ತಿರುವವು, ಚಂದ್ರನಿಂದ ಶೋಭಿಸುತ್ತಿರುವ ಆ ಪಟ್ಟಣದ ಶಿವಾಲಯದ ಗೋಪುರವು, ದೇವತೆಗಳಿಂದನೋಡಲ್ಪಡತಕ್ಕ ಶಿವನ ಕಿರೀಟವೋ ಎಂಬಂತೆ ರಂಜಿಸುವದು. ಕಟ್ಟಲ್ಪಟ್ಟ ಧ್ವಜಗಳುಳ್ಳದ್ದಾಗಿಯೂ, ಬಿಗಿಯಲ್ಪಟ್ಟ ತೋರಣಗಳುಳ್ಳದ್ದಾಗಿಯೂ, ಧೂಪದಿಂದ ವಾಸನೆ ಕಟ್ಟಲ್ಪಟ್ಟದ್ದಾಗಿಯೂ, ಹೂವಿನಅಲಂಕಾರದಿಂದ ಶೋಭಿಸುತ್ತಿರುವ ಬೀದಿಗಳುಳ್ಳದ್ದಾಗಿಯೂ ಇರುವ ಆ ಕಲ್ಯಾಣಪಟ್ಟಣವನ್ನು ಬಸವೇಶನು ಪ್ರವೇಶಿಸಿದನು. ಆಗ ಪಟ್ಟಣದಲ್ಲಿರುವ ಸ್ತ್ರಿಯರು ಬಸವೇಶನು ಬರುತ್ತಾನೆಂಬ ಸುದ್ದಿಯನ್ನು ಕೇಳಿದಕ್ಷಣದಲ್ಲೇ ಉತ್ಪನ್ನವಾದ ಕುತೂಹಲಗಳಿಂದ ತುಂಬಲ್ಪಟ್ಟ ಮನಸ್ಸುಳ್ಳವರಾದರು. ಕೆಲವರು ಹೆಂಗಸರು ಬಸವೇಶನನ್ನು ನೋಡಬೇಕೆಂಬ ತವಕದಿಂದ ಒಡವೆಗಳನ್ನು ವ್ಯತ್ಯಸ್ತವಾಗಿ ಧರಿಸಿಕೊಂಡವರಾಗಿ, ಕೆಲವರು ಉತ್ತರೀಯವಸ್ತ್ರವನ್ನೇ ಬಿಟ್ಟವರಾಗಿ, ಕೆಲವರು ಅರ್ಧಾಲಂಕಾರವನ್ನು ಮಾಡಿಕೊಂಡವರಾಗಿ ತಮ್ಮ ತಮ್ಮ ಮನೆಗಳಿಂದ ಹೊರಟರು. ಅವರೊಳಗೊಬ್ಬಳು, ಸಂಭ್ರಮದಿಂದ ಕಾಲಲ್ಲಿ ಧರಿಸತಕ್ಕ ರತ್ನದ ನೇವುರವನ್ನು ಕಡಗವೆಂದು ಕೈಯಲ್ಲಿ ಧರಿಸಿಕೊಂಡು, ಒಡ್ಯಾಣವನ್ನು ಹಾರವೆಂದು ಕಂಠದಲ್ಲಿ ಧರಿಸಿಕೊಂಡು ಬಂದಳು. ಮತ್ತೊಬ್ಬಳು ಕಣ್ಣುಕಪ್ಪನ್ನು ಕಸ್ತೂರಿಯೆಂದು ತಿಳಿದು ಕತ್ತಿನಲ್ಲಿಯೂ, ಕಸ್ತೂರಿಯನ್ನು ಕಾಡಿಗೆಯೆಂದರಿತು ಕಣ್ಣಿನಲ್ಲಿಯೂ ಧರಿಸಿಕೋಡು, ಶೀಘ್ರದಲ್ಲಿ ಉಪ್ಪರಿಗೆಯ ಕಿಟಿಕಿಯ ಸಮಿಾಪಕ್ಕೆ ಬಂದಳು. ಇನ್ನೊಬ್ಬಳು ಬರುವ ವೇಗದಲ್ಲಿ ಉತ್ತರೀಯವು ಜಾರಿಹೋದಾಗ್ಯೂ ಪರಿಮಳದಿಂದ ಕೂಡಿದ ಶ್ವಾಸವನೂರುತಕ್ಕಾಗಿ ಮುತ್ತುತ್ತಿರುವ ತುಂಬಿಗಳಿಂದ ನೀಲವಸ್ತ್ರದಿಂದ ಮುಚ್ಚಲ್ಪಟ್ಟವಳಂತೆ ಕಾಣಿಸಿದಳು. ಮತ್ತೊಬ್ಬಳು ಬಸವೇಶನನ್ನು ನೋಡಬೇಕೆಂಬ ತಾತ್ಪರ್ಯದಿಂದ ಪರವಶಳಾಗಿದ್ದದ್ದರಿಂದ ಪರಿಚಾರಿಕೆಯಿಂದ ಕೊಡಲ್ಪಟ್ಟ ವೀಳ್ಯದೆಲೆಯ ಮಡಿಪನ್ನು ಕೈಯಿಂದ ತೆಗೆದುಕೊಂಡು ಕಿವಿಯಲ್ಲಿಟ್ಟುಕೊಂಡಳು. ಇನ್ನೊಬ್ಬಳು ಶೀಘ್ರವಾಗಿ ನಡೆಯುವದಕ್ಕೆ ಅಡ್ಡಿಯನ್ನು ಮಾಡುವಂಥ ತನ್ನ ಕಟಿಪಶ್ಚಾದ್ಭಾಗಗಳ ವಿಸ್ತಾರವನ್ನು ಕುಚಕುಂಭಗಳ ಬಿಣ್ಪನ್ನೂ ಬೈದುಕೊಂಡಳು. ಈತನೇ ಮಾದಾಂಬಿಕೆಯ ಗರ್ಭವೆಂಬ ಸಮುದ್ರಕ್ಕೆ ಚಂದ್ರಪ್ರಾಯನಾದವನು. ಮತ್ತು ಶಿವಜ್ಞಾನವೆಂಬ ಹೂವಿನ ಗೊಂಚಲಿಗೆ ಭ್ರಮರದಂತಿರುವವನು. ಈತನಿಗೆ ಪೂಜ್ಯನಾದ ಕರುಣಾಸಮುದ್ರನಾದ ಪರಶಿವನೇ ಆಚಾ

ರ್‍ಯನಾಗಿ ಬಂದು ಕಿವಿಗಳಿಗೆ ಅಮೃತರಸವನ್ನೆರೆಯುವ ಬಸವೇಶನೆಂಬ ನಾಮವನ್ನು ಇಟ್ಟನು. ಈತನು ಶಿವಭಕ್ತ ಕುಲವನ್ನು ಉದ್ಧರಿಸುವ ಕರ್ಮದಲ್ಲಿ ಉದ್ಯುಕ್ತನಾದವನೂ ಸ್ಥಿರವಾದ ವ್ರತವುಳ್ಳವನೂ ಆಗಿದ್ದಾನೆ. ಶಿವನ ಸಹಾಯ ಸಂಪತ್ತಿನಿಂದ ತ್ರಿಭುವನವನ್ನೂ ಹುಲ್ಲಿಗೆ ಸಮಾನವಾಗಿ ಮಾಡಿದ್ದಾನೆ. ಇದಲ್ಲದೆ ಭಕ್ತಿರಸಾತಿಶಯದಿಂದ ಕುಲವೆಂಬ ಕಪಟವನ್ನು ಓಡಿಸಿದವನು. ಆದಕಾರಣ ಬಲದೇವನು ಈತನನ್ನು ತನ್ನ ಮಗಳಾದ ಗಂಗಾಂಬಿಕೆಗೆ ವರನನ್ನಾಗಿ ವರಿಸಿದನು. ಗಂಗಾಂಬಿಕೆಯು ಸಾಕ್ಷಾದ್ಗಂಗೆಯೇ; ಬಸವೇಶನು ಸಾಕ್ಷಾತ್ಪರಶಿವನೇ, ಆದುದರಿಂದ ನಾವು ಪ್ರಪಂಚ ಸಂಬಂಧಿಯಾದ ಅಜ್ಞಾನವನ್ನು ಬಿಟ್ಟು ಇವರನ್ನು ನೋಡೋಣ. ಈ ಪ್ರಕಾರವಾಗಿ ಪಟ್ಟಣದ ಜನರಾಡಿಕೊಳ್ಳುವ ಮಾತುಗಳನ್ನು ಕೇಳುತ್ತಾ ಬಸವೇಶನು ಬಡಿಯಲ್ಪಡುವ ವಾದ್ಯಗಳ ಧ್ವನಿಯಿಂದ ಶಬ್ದಾಯಮಾನವಾಗಿ ಮಾಡಲ್ಪಟ್ಟ ದಿಗಂತಗಳುಳ್ಳ, ಮಾವನಾದ ಬಲದೇವನ ಮನೆಯನ್ನೈದಿದನು. ಅಲ್ಲಿರುವ ಭಕ್ತಸಮೂಹವು ತನ್ನ ಬರುವಿಕೆಯನ್ನು ಬಹುಮಾನಿಸುತ್ತಿರಲಾಗಿ; ಅವರೆಲ್ಲರಿಗೂ ನಮಸ್ಕರಿಸಿ, ಆ ಭಕ್ತ ಸಭೆಯಲ್ಲಿ ಕುಳಿತುಕೊಂಡನು. ಅನಂತರದಲ್ಲಿ ಆ ಭಕ್ತರ ಅಜ್ಞಾನ ಪೂರ್ವಕವಾಗಿ ಅಲ್ಲಿಂದ ಎದ್ದು ಗೃಹವನ್ನೈದಿ, ಪರಿಮಳದ ಎಣ್ಣೆಯನ್ನು ತೊಡೆದುಕೊಂಡು, ಲಿಂಗಾರ್ಪಿತವಾದ ಜಲದಿಂದ ಸ್ನಾನವನ್ನು ಮಾಡಿ, ಆ ಮೇಲೆ ಶಿವಪಾದೋದಕ ಪ್ರೋಕ್ಷಣದಿಂದ ನಿರ್ಮಲನಾಗಿ, ಸರ್ವಾಂಗದಲ್ಲಿಯೂ ಧರಿಸಲ್ಪಟ್ಟ ಭಸ್ಮದಿಂದ ಪರಿಶುದ್ಧವಾದ ಆಕಾರವುಳ್ಳವನಾಗಿ, ಲಿಂಗಪ್ರಸಾದಿತವೆಂದು ಪ್ರಸಿದ್ಧವಾದ ಒಂದು ಕಠಾರಿಯನ್ನು ಹಿಡಿದು, ಮೇಲ್ಕಟ್ಟು ಮೊದಲಾದವುಗಳಿಂದ ಅಲಂಕರಿಸಲ್ಪಟ್ಟದ್ದಾಗಿಯೂ, ಮಹಾತ್ಮರಾದ ಭಕ್ತರಿಂದ ಮುಂಚಿತವಾಗಿಯೇ ಆಶ್ರೈಸಲ್ಪಟ್ಟದ್ದಾಗಿಯೂ ಇರುವ ವಿವಾಹ ಮಂಟಪಕ್ಕೆ ಬಂದನು. ಬಲದೇವನು ಬಂದು, ವಿನಯದಿಂದ ನಮಸ್ಕರಿಸಿ, ಶಾಸ್ತ್ರೋಕ್ತ ಪ್ರಕಾರವಾಗಿ ಬಸವೇಶನಿಗೆ ತನ್ನ ಮಗಳನ್ನು ಪಾಣಿಗ್ರಹಣವಂ ಮಾಡಿಸಿದನು. ಆ ಬಳಿಕ ಅಲ್ಲಿದ್ದ ಭಕ್ತಮಾಹೇಶ್ವರರುಗಳು ಆಶೀರ್ವಾದವಂ ಮಾಡಿ, ವಧೂವರರ ಹಣೆಯಲ್ಲಿ ಶ್ರೇಷ್ಠವಾದ ಸೇವಾಮುದ್ರೆಯನ್ನು ಧರಿಸುವಂತೆ ಭಸ್ಮವನ್ನು ಧರಿಸಿದರು. ಅನಂತರದಲ್ಲಿ ದಂಪತಿಗಳು ಆ ಸಭೆಗೆ ನಮಸ್ಕರಿಸಿ, ಅಲ್ಲಿಂದೆದ್ದು, ಆಪ್ತರಾದವರೊಡನೆ ಬಲದೇವನ ಮನೆಗೆ ಬಂದು, ಭದ್ರಪೀಠದ ಮೇಲೆ ಕುಳಿತು, ಶಿವಭಕ್ತ ಸುವಾಸಿನಿಯರಿಂದ ಅಕ್ಷತಾ

ರೋಪಣ ಪೂರ್ವಕವಾಗಿ ಮಾಡಲ್ಪಟ್ಟ ಆಶೀರ್ವಾದವನ್ನು ಅಂಗೀಕರಿಸಿದರು. ಬಳಿಕ ಬಸವೇಶನು ಗುರುದರ್ಶನದಲ್ಲಿ ಅಪೇಕ್ಷೆಯುಳ್ಳವನಾಗಿ ಗಂಗಾಂಬಿಕೆಯುವರೊಡನೆ ಆಪ್ತರಿಂದ ಬಳಸಲ್ಪಟ್ಟವನಾಗಿ, ಕೂಡಲಸಂಗಮವೆಂಬ ಕ್ಷೇತ್ರವನ್ನೈದಿದನು. ತನ್ನ ಗುರುವಿನ ವಾಸದಿಂದ ಪುಣ್ಯಶಾಲಿಯಾದ ಸಂಗಮೇಶ್ವರಾಲಯದ ಗೋಪುರವನ್ನು ಹೆಜ್ಜೆ ಹೆಜ್ಜೆಗೂ ನಮಸ್ಕರಿಸಿ, ಆನಂದ ಬಾಷ್ಪದಿಂದ ನೆನಸಲ್ಪಟ್ಟನು. ಸಂಗಮೇಶ್ವರನು ಕೂಡ ಗುರುರೂಪವನ್ನು ಧರಿಸಿ, ತನ್ನ ಆಲಯದ ಬಾಗಿಲ ಜಗಲಿಯಲ್ಲಿ ಕುಳಿತುಕೊಂಡು, ಬರುತ್ತಿರುವ ಬಸವೇಶನನ್ನು ಕಾದಿದ್ದನು. ಆಗ ಬಸವೇಶನು ಬಂದು, ಕುಳಿತಿರುವ ತನ್ನ ಆಚಾರ್ಯನಿಗೆ ನಮಸ್ಕಾರವಂ ಮಾಡಿ, ಆತನ ಎರಡು ಪಾದಗಳನ್ನೂ, ಆನಂದ ಬಾಷ್ಪಗಳಿಂದ ತೊಳೆದನು. ಗುರುವಾದ ಸಂಗಮೇಶ್ವರನು ನಮಸ್ಕರಿಸುತ್ತಿರುವ ಬಸವೇಶ್ವರನನ್ನು ಆಲಿಂಗಿಸಿದವನಾಗಿ ತನ್ನ ಸಮೀಪದಲ್ಲಿ ಕುಳ್ಳಿರಿಸಿಕೊಂಡು, ಕೈಗಳನ್ನು ಜೋಡಿಸಿಕೊಂಡಿರುವ ಬಸವೇಶನಿಗೆ ಹಿತವಾಕ್ಯಗಳನ್ನುಪದೇಶಿಸಿದನು. ಎಲೈ ವತ್ಸನಾದ ಬಸವೇಶನೇ ಶಿವಭಕ್ತ ಸಂತತಿಗೆ ಯೋಗ್ಯವಾದ ಮತ್ತು ನಿರ್ಮಲ ಮನಸ್ಕರಾದ ಇತರರಿಂದಲೂ ಹೊಂದಲ್ಪಡತಕ್ಕ ಆಚಾರವನ್ನು ಕೇಳು. ನೀನು ಯಾವಾಗಲೂ ಪರಸ್ತ್ರೀಯರಲ್ಲಿ ಕುರುಡನಾಗಿಯೂ ಪರದ್ರವ್ಯದಲ್ಲಿ ಕೈಯಿಲ್ಲದವನಾಗಿಯೂ, ಪರದೂಷಣೆಯಲ್ಲಿ ನಾಲಿಗೆ ಇಲ್ಲದವನಾಗಿಯೂ ಇರು. ನನ್ನ ಭಕ್ತರನ್ನು ನನ್ನನ್ನಾಗಿಯೇ ತಿಳಿದು ಪೂಜಿಸು. ರೋಗಪೀಡಿತನಾದವನು ಔಷಧಗಳಲ್ಲಿ ಕಹಿಯನ್ನು ಎಣಿಸದಂತೆ ಆ ಭಕ್ತರಲ್ಲಿ ದೋಷಗಳನ್ನೆಣಿಸಬೇಡ. ಸತ್ಪುರುಷರಲ್ಲಿ ಸ್ನೇಹವನ್ನೂ, ದರಿದ್ರರಲ್ಲಿ ದಯೆಯನ್ನೂ, ಶಿವಭಕ್ತರಲ್ಲಿ ಸಂತೋಷವನ್ನೂ, ಶಿವಭಕ್ತ ದ್ವೇಷಿಗಳಲ್ಲಿ ಉಪೇಕ್ಷೆಯನ್ನೂ, ಮಾಡು. ವೇದಶಾಸ್ತ್ರಗಳಿಂದ ಸ್ಥಾಪಿಸಲ್ಪಟ್ಟು ಭೂಮಂಡಲದಲ್ಲಿ ಪ್ರಸಿದ್ಧವಾಗಿರುವ ಭಕ್ತಿಯನ್ನು ನಿರ್ವಂಚನೆಯಿಂದ ವಹಿಸು. ಆದರಿಂದ ಸ್ನೇಹ ಮೊದಲಾದ ಆ ಉತ್ತಮ ಗುಣಗಳುಂಟಾಗುವವು. ಭಕ್ತರು ಕಠಿನ ವಚನಗಳಿಂದ ಗದರಿಸಿದಾಗ್ಯೂ ಬೆತ್ತದಿಂದ ಹೊಡೆದಾಗ್ಯೂ, ಕಾಲಿನಿಂದ ಒದೆದಾಗ್ಯೂ ಅವರನ್ನೇ ಪೂಜಿಸು. ಶಿವಪ್ರಸಾದವಲ್ಲದಿರುವದು ಯಾವದೋ ಅದೆಲ್ಲಾ ಸೇವಿಸುವದಕ್ಕೆ ಅಯೋಗ್ಯವಾದದ್ದೆಂದು ತಿಳಿ. ನಿನ್ನ ಮನಸ್ಸಿಗೆ ಯಾವದು ಇಷ್ಟವಾದದ್ದೋ ಅದನ್ನು ಕುರಿತು ಶಿವನನ್ನೇ ಕೇಳು. ಶಿವನು ಸಂತೋಷಪಡಿಸುತ್ತಾನೆ. ಮಾಡಿದ ಪ್ರತಿಜ್ಞೆಯನ್ನು ಬಿಡಬೇಡ. ನಿತ್ಯ

ದಲ್ಲಿಯೂ ಶಿವಧ್ಯಾನಪರನಾಗಿ, ಶಿವನನ್ನು ಪೂಜಿಸು. ಈ ಪ್ರಕಾರವಾಗಿ ಸಂಗಮೇಶನು ಇಂಪಾಗಿಯೂ, ನಯವಾಗಿಯೂ, ಇರುವ ಮಾತುಗಳಿಂದ ತನ್ನ ಮಗನನ್ನು ಬೋಧಿಸಿ, ಮರಳಿ ಆಲಂಗಿಸಿ, ಅವನಿಂದ ನಮಸ್ಕರಿಸಲ್ಪಟ್ಟವನಾಗಿ, ತನ್ನ ಆಲಯದೊಳಕ್ಕೆ ಹೊರಟು ಹೋದನು. ಬಸವೇಶನ ಉಭಯ ಪಾರ್ಶ್ವಗಳಲ್ಲಿಯೂ ಇದ್ದವರು ಆಲಯದೊಳಗೆ ಹೋಗಿ ಆ ಶಿವಯೋಗಿಯನ್ನು ಕಾಣದೆ, ಆಶ್ಚರ್ಯದಿಂದ ಹಿಡಿಯಲ್ಪಟ್ಟ ಮನಸ್ಸುಳ್ಳವರಾಗಿ, ಮಾತನಾಡಿಕೊಂಡರು. ಏನೆಂದರೆ;—ಈತನು ಸಂಗಮೇಶ್ವರನೇ ಸರಿ, ತಪಸ್ವಿ ವೇಷದಿಂದ ಬಂದಿದ್ದನು. ಸಂಗಮನಾಥನಿಗೆ ಭಕ್ತನಲ್ಲದೆ, ಮತ್ತೊಬ್ಬನಿಲ್ಲವೆಂದು ತಿಳಿಯಿರಿ. ನಾವುಗಳು ಬಸವೇಶನ ಸೇವೆಯಿಂದ ಭಾಗ್ಯವಂತರಾದೆವು. ಯಾಕಂದರೆ:—ಈಗ ನಾವು ಪರಶಿವನನ್ನು ಪ್ರತ್ಯಕ್ಷವಾಗಿ ನೋಡಿದೆವು. ಈ ಪ್ರಕಾರವಾಗಿ ಪ್ರಶಂಸೆಯಂ ಮಾಡುತ್ತಿರುವ ಸಂಗಡಿಗರೊಡನೆ ಬಸವೇಶನು ಸಂಗಮೇಶನನ್ನು ಪೂಜಿಸಿ, ಆನಂದದಿಂದ ತುಂಬಲ್ಪಟ್ಟವನಾಗಿದ್ದನು. ಅನಂತರದಲ್ಲಿ ಕೆಲವು ಕಾಲದ ಮೇಲೆ ಬಲದೇವ ಮಂತ್ರಿಯು ಬಸವೇಶನ ವೃದ್ಧಿಯನ್ನು ಶಿವನಿಗೆ ಹೇಳಲಿಚ್ಛೆಯುಳ್ಳವನೋ ಎಂಬಂತೆ ಕೈಲಾಸವನ್ನೈದಿದನು. ಆಗ ಬಿಜ್ಜಲರಾಯನು ಬಲದೇವನು ಹೋದನೆಂದು ಕೇಳಿ ದುಃಖದಿಂದ ಪರವಶನಾಗಿ, ತನ್ನ ರಾಜ್ಯಾಧಿಕಾರಿಗಳನ್ನು ಕರೆಯಿಸಿ ಹೇಳಿದನು. ಏನೆಂದರೆ;—ಬೃಹಸ್ಪತಿಯಿಂದ ದೇವೇಂದ್ರನ ಸಭೆಯಂತೆಯೂ ಶುಕ್ರನಿಂದ ವೃಷಪರ್ವನೆಂಬ ರಾಕ್ಷಸ ರಾಜನ ಸಭೆಯಂತೆಯೂ, ಬಲದೇವ ಮಂತ್ರಿಯಿಂದ ನನ್ನ ಸಭೆಯು ಇದುವರಿಗೂ ಶೋಭಿಸುತ್ತಿತ್ತು. ಸಮುದ್ರದಲ್ಲಿ ಹಡಗು ಅನೇಕ ಜನರಿಂದ ತುಂಬಲ್ಪಟ್ಟಿದ್ದಾಗ್ಯೂ ನಾವಿಕನಿಲ್ಲದಿದ್ದರೆ ಹ್ಯಾಗೋ ಹಾಗೆ ಇನ್ನು ಮೇಲೆ ಆ ಬಲದೇವನಿಲ್ಲದ ನನ್ನ ಸಭೆಯು ಸಂತೋಷವನ್ನು ನೆಲೆಗೊಳಿಸುವದಿಲ್ಲ. ಆದಕಾರಣ ಆ ಬಲದೇವನ ಸಂಬಂಧಿಗಳೊಳಗೆ ಯಾವನಾದರೂ ನಮ್ಮ ರಾಜ್ಯಭಾರವನ್ನು ವಹಿಸುವದರಲ್ಲಿ ಸಮರ್ಥನಾದವನಿದ್ದರೆ, ಆ ಬಲದೇವನ ಅಧಿಕಾರ ಮುದ್ರಿಕೆಯನ್ನು ಆ ಪುರುಷನ ಕೈಯಲ್ಲಿ ಇಡಿಸುತ್ತೇನೆ. ಅನಂತರದಲ್ಲಿ ಸಕಲರೂ ಹೇಳಿದ್ದೇನೆಂದರೆ;—ಎಲೈ ಭೂಪತಿಯೇ ಮಹಾ ತೇಜಸ್ವಿಯಾಗಿಯೂ, ಬಹು ಶಕ್ತಿ ಸಾಹಸಗಳುಳ್ಳವನಾಗಿಯೂ, ಇರುವ ಬಸವನಾಮಕನಾದ ಆ ಬಲದೇವನ ಮಗಳ ಗಂಡನಿದ್ದಾನೆ. ಆತನು ಈ ಅಧಿಕಾರ ಮುದ್ರೆಯನ್ನು ಧರಿಸಿದರೆ, ಸಕಲ ಸಮುದ್ರಗಳಿಂದಲೂ ಮುದ್ರಿತವಾಗಿರುವ

ಭೂಮಂಡಲವು ನಿನ್ನಾಜ್ಞೆಯಿಂದ ಮುದ್ರಿತವಾಗುವದು. ಮತ್ತು ಬಸವೇಶನು ಮಂತ್ರಿಯಾದರೆ, ಈ ಭೂಮಂಡಲವೆಲ್ಲಾ ನಿನ್ನ ಕೈವಶವಾಗದಿರಲಾರದು. ಬಿಜ್ಜಳನು ಅವರುಗಳ ಮಾತನ್ನು ಕೇಳಿ ಸಂತೋಷವಿಶಿಷ್ಟನಾಗಿ ಬಸವೇಶ್ವರನನ್ನು ಕರತರುವದಕ್ಕೋಸ್ಕರ ಸದ್ಗುಣಗಳುಳ್ಳವರಾಗಿಯೂ, ಗೌರವವುಳ್ಳವರಾಗಿಯೂ ಇರುವ ಆಪ್ತರುಗಳನ್ನು ಕಳುಹಿಸಿದನು. ಅವರುಗಳು ಸಂಗಮೇಶ್ವರನ ಸ್ಥಾನವನ್ನು ಹೊಂದಿ, ಸದ್ಗುಣೈಶ್ವರ್ಯ ಸಂಪನ್ನನಾದ ಸಂಗಮೇಶ್ವರನನ್ನು ನಮಸ್ಕರಿಸಿ ಆ ಬಸವೇಶ್ವರನನ್ನು ಸ್ತೋತ್ರಮಾಡಿ, ನಿಂತುಕೊಂಡು ವಿಜ್ಞಾಪಿಸಿದರು. ಏನೆಂದರೆ:—ಬಿಜ್ಜಳನು ಬಲದೇವನಿಂದ ವಹಿಸಲ್ಪಟ್ಟಿದ್ದ ರಾಜ್ಯಭಾರವನ್ನು ವಹಿಸುವದಕ್ಕೋಸ್ಕರ ನೀನಲ್ಲದೆ ಮತ್ತಾರೂ ಇಲ್ಲವೆಂದು ನಿಶ್ಚೈಸಿ ನಿನ್ನ ಬರುವಿಕೆಯನ್ನೇ ಎದುರು ನೋಡುತ್ತಾನೆ. ಪರಿಶುದ್ಧನಾದ ಎಲೈ ಬಸವೇಶ್ವರನೇ ಶಿವಧ್ಯಾನವೆಂಬ ಅಮೃತಪಾನದಿಂದ ತೃಪ್ತನಾದ ನಿನಗೆ ಮತ್ತೊಂದು ಕಾರ್ಯವು:- ಶಾಲ್ಯನ್ನವನ್ನು ಭುಂಜಿಸುವ ಮನುಷ್ಯನಿಗೆ ಹೊಟ್ಟೆನ ಸವಿಯು ಹಾಗೆ ಆಗುತ್ತೆ. ಹಾಗಾದರೂ ಶಿವಭಕ್ತರುಗಳನ್ನು ರಕ್ಷಿಸುವದಕ್ಕೂ, ಆ ಶಿವಭಕ್ತರುಗಳಿಗೆ ವಿರೋಧಿಗಳಾದವರನ್ನು ಶಿಕ್ಷಿಸುವದಕ್ಕೂ ಕೂಡ ಬಿಜ್ಜಳನ ವಿಜ್ಞಾಪನೆಯನ್ನು ನೀನು ವಹಿಸಬೇಕು. ಬಿಜ್ಜಳನು ನಿನ್ನನ್ನು ಮಂತ್ರಿಯಾಗಿರಬೇಕೆಂದು ಅಪೇಕ್ಷಿಸುವನಾಗಿದ್ದಾನೆ, ನೀನು ಅವನ ಇಷ್ಟಾರ್ಥವನ್ನು ನೆರವೇರಿಸತಕ್ಕವನಾಗಿದ್ದೀಯೆ ಆದಕಾರಣ ನೀನು ಈ ರಾಜ್ಯ ರಕ್ಷಣೆಯನ್ನು ಮಾಡುವದು ಸಮಸ್ತ ಜನಗಳಿಗೂ ಸಮರ್ಪಕವಾಗಿದೆ ಎಂದು ಬಿಜ್ಜಳನ ಆಪ್ತರು ಬಸವೇಶ್ವರನಿಗೆ ವಿಜ್ಞಾಪಿಸಿದರು. ಬಸವೇಶ್ವರನೂ ಕೂಡ ಬಿಜ್ಜಳನ ಇಷ್ಟಾರ್ಥವನ್ನು ತನ್ನ ಕಾರ್ಯಕ್ಕೆ ಅಂದರೆ, ಶಿವಮಹಿಮೆಯನ್ನೂ, ಶಿವಭಕ್ತಿಯನ್ನೂ ವೃದ್ಧಿಗೊಳಿಸುವ ಕಾರ್ಯಕ್ಕೆ ಕಾರಣವನ್ನಾಗಿ ನಿಶ್ಚೈಸಿ ಸಮೀಪದಲ್ಲಿರುವ ಶಿವಶರಣರ ಮುಖಗಳನ್ನು ನೋಡಿದನು. ಆ ಬಸವೇಶ್ವರನು ಅವರುಗಳಿಂದ ಸಮ್ಮತಿಸಲ್ಪಟ್ಟ ರಾಜದರ್ಶನವನ್ನು ಮಾಡುವದಕ್ಕೋಸ್ಕರ ಉದ್ಯುಕ್ತನಾದನು. ಸತ್ಪುರುಷರುಗಳಿಂದ ಅಂಗೀಕರಿಸಲ್ಪಟ್ಟ ಕಾರ್ಯದಲ್ಲಿ ಸತ್ಪುರುಷರುಗಳು ಆಸಕ್ತಿಯನ್ನು ತೋರಿಸುತ್ತಾರೆ. ಆ ಬಸವೇಶ್ವರನು ಬರುವ ಸಮಾಚಾರವನ್ನು ಆ ಬಿಜ್ಜಳನು ತನ್ನ ದೂತರುಗಳ ದೆಸೆಯಿಂದ ತಿಳಿದು, ಕಲ್ಯಾಣ ಪಟ್ಟಣವನ್ನು ಅಲಂಕಾರ ಮಾಡಿಸುವಂತೆ ಆಜ್ಞಾಪಿಸಿದನು. ರಾಜನಿಂದಾಜ್ಞಾಪಿಸಲ್ಪಟ್ಟ ಆಯಾಯ ಬೀದಿಯ ಅಧಿಕಾರಿಗಳು, ಪೂರ್ಣ

ಕುಂಭ, ಧ್ವಜ, ತೋರಣ, ಕನ್ನಡಿಗಳಿಂದ ಅಲಂಕರಿಸಿದರು. ಹನ್ನೆರಡು ಗಾವುದ ದಳತೆಯುಳ್ಳದ್ದಾಗಿಯೂ, ಅಲಂಕರಿಸಲ್ಪಟ್ಟದ್ದಾಗಿಯೂ ಇರುವ ಆ ಪಟ್ಟಣ ವನ್ನು ನೋಡಿ, ಪುರಜನರೆಲ್ಲರೂ ಸಂತೋಷ ಭರಿತರಾದರು. ಮಿತ್ರಭೇದ, ಸುಹೃಲ್ಲಾಭ ಮೊದಲಾದ ತಂತ್ರಗಳನ್ನು ನಡಿಸುವದರಲ್ಲಿ ಸಮರ್ಥರಾಗಿರುವ ಮಂತ್ರಿಗಳಿಂದಾಶ್ರೈಸಲ್ಪಟ್ಟ ಸೈನ್ಯವು, ಬಿಜ್ಜಳನ ಆಜ್ಞೆಯಿಂದ ಬಸವೇಶನನ್ನು ಎದುರುಗೊಂಡಿತು. ಕುದುರೆಗಳ ಗೊರಸುಗಳೆಂಬ ಗುದ್ದಲಿಗಳಿಂದ ಸೀಳಲ್ಪಟ್ಟ ನೆಲದಿಂದೆದ್ದ ಧಳಿಯು ಆನೆಯ ಸೊಂಡಿಲುಗಳಿಂದ ಸುರಿಯುವ ನೀರಿನ ತುಂತು ರುಗಳಿಂದ ಅಡಗಿತು. ಅನಂತರದಲ್ಲಿ ಬಸವೇಶನು ರಾಜಾಧಿಕಾರಿಗಳಿಂದ ನೇಮಿ ಸಲ್ಪಟ್ಟ ಆನೆಯ ಮೇಲೆ ಕುಳಿತುಕೊಂಡು, ಆ ಪರಿವಾರದಿಂದ ಬಳಸಲ್ಪಟ್ಟವ ನಾಗಿ, ಕಲ್ಯಾಣ ಪುರವಂ ಪ್ರವೇಶಿಸಿ, ತನ್ನ ಬರುವಿಕೆಯನ್ನು ಕೇಳಿ, ಅರಮನೆ ಯಿಂದ ಹೊರಟು, ಎದುರಾಗಿ ಬರುತ್ತಿರುವ ಬಿಜ್ಜಳರಾಯನನ್ನು ನೋಡಿ, ಅಪ್ಪನಿಂದ ಕೊಡಲ್ಪಟ್ಟ ಕೈಲಾಗವುಳ್ಳವನಾಗಿ, ಆನೆಯ ಮೇಲಿಣಿಂದ ಇಳಿದನು. ಆ ರಾಯನು ಕೂಡ ಶೀಘ್ರವಾಗಿ ತನ್ನ ಕುದುರೆಯಿಂದ ಇಳಿದನು. ಬಳಿಕ ಬಿಜ್ಜಳರಾಯನು ಬಸವೇಶನನ್ನು ಕುಶಲಪ್ರಶ್ನೆ ಮೊದಲಾದವುಗಳಿಂದ ಉಪಚರಿಸಿ, ತನ್ನ ಸಭಾಮಂಟಪಕ್ಕೆ ಕರೆದುಕೊಂಡು ಹೋಗಿ, ಸುವರ್ಣ ಪೀಠದ ಮೇಲೆ ಕುಳ್ಳಿರಿಸಿ, ಹೇಳಿದನು. ಏನೆಂದರೆ;—ಎಲೈ ಬುದ್ಧಿಶಾಲಿಯಾದ ಬಸವೇಶನೇ ಪೂರ್ವದಲ್ಲಿ ಬಲದೇವನಿಂದ ಯಾವ ರಾಜ್ಯಭಾರವು ವಹಿಸಲ್ಪಟ್ಟಿತ್ತೋ ಅದನ್ನು ನೀನು ಈಗ ಸಂರಕ್ಷಿಸಬೇಕು. ಒಳ್ಳೇ ಜಾತಿಯಲ್ಲಿ ಹುಟ್ಟಿದ ಏಳುನೂರು ಮದ್ದಾನೆಗಳೂ, ವಾಯುವೇಗವುಳ್ಳ ಹನ್ನೆರಡು ಸಾವಿರ ಕುದುರೆಗಳೂ, ಸಾಮ ರ್ಥ್ಯದಿಂದ ಕೂಡಿರುವ ಹನ್ನೆರಡು ಲಕ್ಷ ಪಾಯ್ದಳವೂ, ಒಂದು ಕೋಟಿ ಧನವೂ, ಶ್ರೇಷ್ಠವಾದ ಒಂದು ಕೋಟಿ ರತ್ನಗಳೂ, ಮಿತಿಯಲ್ಲದ ಧಾನ್ಯರಾಶಿಯೂ, ನೂರು ದೊಡ್ಡ ದುರ್ಗಗಳೂ, ಇವೆ. ನಮ್ಮ ಪೂರ್ವಿಕರು ಕಲ್ಯಾಣ ಪಟ್ಟಣವನ್ನು ರಾಜಧಾನಿಯನ್ನಾಗಿ ಕಲ್ಪಿಸಿದರು. ಕುಲಪರಂಪರೆಯಿಂದ ಬಂದವರಾಗಿಯೂ, ಒಳ್ಳೇಗುಣ, ಒಳ್ಳೇ ನಡತೆಗಳಿಂದ ಕೂಡಿದವರಾಗಿಯೂ, ಬುದ್ಧಿಶಾಲಿಗಳಾ ಗಿಯೂ ಇರುವ ಹನ್ನೆರಡು ಮಂದಿ ಬೊಕ್ಕಸದ ಅಧಿಕಾರಿಗಳು ಇದ್ದಾರೆ. ಇದಕ್ಕಿಂತ ಮುಂಚೆ ಬಲದೇವನಿಂದ ರಕ್ಷಿಸಲ್ಪಡುತ್ತಿದ್ದ ಈ ಸಕಲರನ್ನೂ ನಿನ್ನ ಕೈಯಲ್ಲಿ ಕೊಟ್ಟಿದ್ದೇನೆ. ಎಲೈ ಬಸವೇಶನೇ, ಅದನ್ನು ನೀನು ರಕ್ಷಿಸು. ಈ

ರೀತಿಯಾಗಿ ಹೇಳಿ; ವಸ್ತ್ರ, ಆಭರಣ, ವಾಹನಗಳಿಂದ ಬಸವೇಶನನ್ನು ಪೂಜಿಸಿದನು. ಬಿಜ್ಜಳರಾಯನಿಂದ ಪೂಜಿಸಲ್ಪಟ್ಟ ಬಸವನ ಮಂತ್ರಿಯು, ಉತ್ತರವನ್ನು ಹೇಳಿದನು. ಏನಂದರೆ:—ಎಲೈ ರಾಜನೇ ಈ ಪ್ರಪಂಚವನ್ನು ರಕ್ಷಿಸುವಂಥ ಶಿವನಿಗೆ ನಿನ್ನ ಪಾಲನೆಯೆಂಬುವದು ಎಷ್ಟುಮಾತ್ರದ್ದು? ಆದರೆ ನೀನು ಶಿವಭಕ್ತರಲ್ಲಿ ಭಕ್ತಿಯುಕ್ತನಾಗು. ತ್ರಿಭುವನವನ್ನೂ ತೃಣೀಕರಿಸಿರುವ ಪ್ರಮಥರು ಪರ್ವತಗಳನ್ನು ಭೇದಿಸುತ್ತಾರೆ. ಈ ವಿಷಯದಲ್ಲಿ ಪರಶುರಾಮ, ಅಗಸ್ತ್ಯ, ದೂರ್ವಾಸ, ವಿಶ್ವಾಮಿತ್ರರ ವ್ಯಾಪಾರವು ಪ್ರಮಾಣವೆಂದು ತಿಳಿ. ಈ ಪ್ರಕಾರವಾಗಿ ಹೇಳಿ, ಬಿಜ್ಜಳನಿಂದ ಬೀಳ್ಕೊಂಡು, ಬಲದೇವನ ಮನೆಯನ್ನೈದಿ ರಾಯನು ಹೊರತಾಗಿ ಸಕಲರಾದ ರಾಜಕೀಯಾಧಿಕಾರಿಗಳಿಂದ ಸೇವಿಸಲ್ಪಟ್ಟನು. ಆಯಾ ಉದ್ಯೋಗಸ್ಥರಿಂದ ಕೂಡಿದ ಬಸವೇಶನು ಅಲ್ಲಿದ್ದುಕೊಂಡು, ಆದಾಯ, ವ್ಯಯ ಮೊದಲಾದುದನ್ನೆಲ್ಲಾ ಗಣಕರ ಮುಖದಿಂದ ಕೇಳಿದನು. ಅನಂತರದಲ್ಲಿ ಪುರೋಹಿತರು, ಪ್ರಧಾನರು, ಸೇನಾಪತಿಗಳು ಇವರನ್ನು ಅವರವರ ಹೆಸರುಗಳನ್ನು ಹಿಡಿದು ಕರೆದು, ಹೇಳಿದನು. ಏನಂದರೆ;—ಸಮೃದ್ಧವಾದ ದೊರೆತನಕ್ಕೆ ರಾಜಾಜ್ಞೆ ನಡೆಯದಿದ್ದ ರಾಜ್ಯದಲ್ಲಿ ಮಾತ್ಸ್ಯ ನ್ಯಾಯವು ಪ್ರವರ್ತಿಸುತ್ತದೆ. ಅಂದರೆ ರಾಜಾಜ್ಞೆಗೆ ಭಂಗವುಂಟಾದ ರಾಜ್ಯವನ್ನು ಪ್ರಬಲನಾದ ಶತ್ರುವು ಬಂದು, ಆಕ್ರಮಿಸಿಕೊಳ್ಳುವನು. ಆದಕಾರಣದಿಂದ ಭಾಗ್ಯವನ್ನಪೇಕ್ಷಿಸುವ ರಾಜನು ಆಜ್ಞಾಶಕ್ತಿಯುಳ್ಳವನಾಗಬೇಕು. ಈ ಭೂಕಾಂತೆಯು ಆಜ್ಞೆಯೆಂಬ ದೂತಿಯಿಂದ ಕರತರಲ್ಪಟ್ಟ ರಾಣಿಯಾಗುತ್ತಾಳೆ. ದುಷ್ಟರನ್ನು ಶಿಕ್ಷಿಸುವದೂ, ಸತ್ಪುರುಷರನ್ನು ರಕ್ಷಿಸುವದೂ ರಾಜಧರ್ಮವಲ್ಲದೆ ಜಡೆಗಳನ್ನು ಧರಿಸುವದು ಮೊದಲಾದದ್ದು ರಾಜಧರ್ಮವಲ್ಲ. ಸುಶ್ರುತವೆಂಬ ವೈದ್ಯಶಾಸ್ತ್ರದಲ್ಲಿ ಪಾರೀಣರಾದ ವೈದ್ಯರಂತೆ ಬಹು ಪ್ರಸಿದ್ಧಗಳಾದ ರಾಜ್ಯ ನಿಬಂಧನೆಗಳಲ್ಲಿ ನಿಪುಣರಾದ ಮಂತ್ರಿಗಳಿಂದ ರಕ್ಷಿಸಲ್ಪಟ್ಟ ರಾಜನು ಪಾಪರ ಜಿತನಾಗಿ ವಾತಾದಿ ತ್ರಿದೋಷರಹಿತನಾಗಿ ಬಾಳ್ವರೋಗಿಯಂತೆ ಬಹುಕಾಲ ಬಾಳುವನು. ಇವು ಮೊದಲಾದ ನೀತಿಶಾಸ್ತ್ರೋಕ್ತಗಳಾದ ಮಾತುಗಳಿಂದ ಬೋಧಿಸಲ್ಪಟ್ಟ ಆ ಪುರೋಹಿತಾದಿಗಳಿಂದ ಸೇವಿಸಲ್ಪಡುವ ಬಸವೇಶನು ಬಿಜ್ಜಳರಾಯನ ರಾಜ್ಯವನ್ನು ಪರಿಪಾಲಿಸಿದನು. ಬಸವೇಶನು ರಾಜ್ಯ ಪರಿಪಾಲನವಂ ಮಾಡುತ್ತಿರುವಲ್ಲಿ ಭೂಮಿಯು ಪೈರು ಪಚ್ಚೆಗಳ ಸಮೃದ್ಧಿಯಿಂದ ವಿಶಾಲವಾಯಿತು. ಕಲ್ಯಾಣ ಪಟ್ಟಣವು ದಿನಕ್ರಮದಿಂದ ಅತ್ಯುತ್ತ

ಮವಾದ ಮಂಗಳಗಳಿಂದ ಕೂಡಿದ್ದಾಯಿತು. ಶತ್ರುಮಂತ್ರಿಗಳು, ಬಸವೇಶನಿಂದ ಅಂಗೀಕರಿಸಲ್ಪಟ್ಟ ಭೂಮಿಯನ್ನು ನೋಡಿ, ನಿಸ್ಪೃಹರಾಗಿ ದುರ್ಬಲಗಳಾದ ಎತ್ತುಗಳಂತೆ ವಿಮುಖರಾದರು. ಬಸವೇಶನು ಪರರಾಜರನ್ನು ರಥಗಳಿಂದಾಗಲಿ, ಕುದುರೆಗಳಿಂದಾಗಲಿ, ಆನೆಗಳಿಂದಾಗಲಿ, ಕಾಲಾಳುಗಳಿಂದಾಗಲಿ ಜೈಸದೆ ಬರೀ ಬುದ್ಧಿಯಿಂದಲೇ ಜೈಸಿದನು. ಗುಣಗ್ರಹಣವನ್ನು ಮಾಡತಕ್ಕವನೂ, ಒಂದೇ ಸಿದ್ಧಾಂತವುಳ್ಳವನೂ, ಪ್ರಸನ್ನ ಮುಖನೂ, ಪ್ರಿಯವಚನಗಳನ್ನಾಡುವವನೂ ಆದ ಆ ಬಸವೇಶನನ್ನು ಶರೀರವಂ ಧರಿಸಿರುವ ಸತ್ಪುರುಷತ್ವವನ್ನಾಗಿ ತಿಳಿದರು. ಬಸವೇಶನು ಶತ್ರುಗಳನ್ನು ತಗ್ಗಿಸುತ್ತಾ ಮಿತ್ರರನ್ನು ಹೆಚ್ಚಿಸುತ್ತಾ ರಾಜ್ಯವನ್ನು ಶಿವಾಚಾರದ ರಾಜ್ಯವನ್ನಾಗಿ ಮಾಡುವದಕ್ಕೆ ಯತ್ನಿಸಿದನು. ನಿತ್ಯಶಿವರಾತ್ರಿ ವ್ರತವನ್ನಾಚರಿಸುತ್ತೇನೆ, ಭಕ್ತರನ್ನು ಶಿವನೆಂದು ಭಾವಿಸುತ್ತೇನೆ, ಭಕ್ತರ ಕುಲ ವನ್ನು ಯಾವದೆಂದು ವಿಚಾರಿಸುವದಿಲ್ಲ. ಭಕ್ತರಲ್ಲಿ ತಪ್ಪುಗಳನ್ನೆಣಿಸುವದಿಲ್ಲ. ಶಿವನನ್ನು ಕೂಡ ಯಾಚಿಸುವದಿಲ್ಲ. ಪ್ರತಿದಿನದಲ್ಲಿಯೂ ಯಾಚಕರಿಗೆ ಕೊಡು ತ್ತೇನೆ. ಒಳ್ಳೇ ಮಾರ್ಗದಲ್ಲಿ ನಡೆಯುತ್ತೇನೆ. ಕನಸಿನಲ್ಲಾದರೂ ಶಿವನಿಗೆ ಜಯ ವನ್ನು ಕೊಡದೆ ಭಕ್ತರಿಗೆ ಜಯವನ್ನು ಕೊಡುತ್ತೇನೆ. ಪರರನ್ನು ದೂಷಿಸುವ ದಿಲ್ಲ. ಪರಸ್ತ್ರೀಯರನ್ನು ನೋಡುವದಿಲ್ಲ. ಜಂಗಮವೇ ನನಗೆ ಪ್ರಾಣವೆಂದು ತಿಳಿದಿದ್ದೇನೆ. ಯಾವಾಗಲೂ ಅವರ ಆಜ್ಞೆಯನ್ನು ನಡಿಸುತ್ತೇನೆ. ಭವಿಯಾದವ ನಿಗೆ ದಾನವಂ ಕೊಡುವದಿಲ್ಲ. ಅವನಿಗೆ ನಮಸ್ಕರಿಸುವದಿಲ್ಲ. ಶಿವನಾಮಾಮೃ ತವಂ ಪಾನಮಾಡುತ್ತೇನೆ. ಶಿವಭಕ್ತರಲ್ಲಿ ಬಂಧುತ್ವವಂ ಮಾಡುತ್ತೇನೆ. ದ್ಯೂ ತಾದಿ ವ್ಯಸನಗಳಿಗೂ ಶಬ್ದಾದಿ ವಿಷಯಗಳಿಗೂ ಶ್ರೋತ್ರಾದಿ ಕರಣಗಳಿಗೂ ಸಂ ಸಾರಕ್ಕೂ ವಶನಾಗುವದಿಲ್ಲ. ರಾಜನ ಸಂಗಡವಾದರೂ ದೈನ್ಯವಂತೋರಿಸದೆ ಮಾತನಾಡುತ್ತೇನೆ. ವೇದಮಾರ್ಗದಲ್ಲಿ ಹೇಳಲ್ಪಟ್ಟ ಭಕ್ತಿಯನ್ನು ಪೋಷಿಸು ತ್ತೇನೆ. ವೇದಬಾಹ್ಯವಾದ ಭಕ್ತಿಯನ್ನು ಅರೆಯುತ್ತೇನೆ. ಶಿವಾಗವವನ್ನು ಸಾರುತ್ತೇನೆ. ಸತ್ಪುರುಷರೊಡನೆ ಸಂಭಾಷಣೆಯಂ ಮಾಡುತ್ತೇನೆ. ಶಿವನಪ್ಪಣೆ ಯಲ್ಲಿ ಶಿವಾಚಾರದಲ್ಲಿ ಯಾವ್ಯಾವದನ್ನು ನಡಿಸಬೇಕೋ. ಸಂಸಾರನಾಶಕವಾದ ನಿರ್ಮಲವಾದ ಆ ಕರ್ಮವನ್ನೆಲ್ಲ ಆಚರಿಸುತ್ತೇನೆಂದು ನಿಜ್ಜೈಸಿ, ಬಸವೇಶನು ಪ್ರತಿ ಜ್ಞೆಯನ್ನು ಮಾಡಿದನು. ಪ್ರಮಥರು ತ್ರಿಭುವನದಲ್ಲಿಯೂ ನಿರಂಕುಶವಾದ ಪ್ರತಿಜ್ಞೆಯುಳ್ಳವರಲ್ಲವೆ. ಈ ರೀತಿಯಾಗಿ ಬಸವೇಶನಿಂದ ಮಾಡಲ್ಪಟ್ಟ ಪ್ರತಿಜ್ಞೆ

ಯನ್ನು ಕೇಳಿ, ಆತನನ್ನು ನೋಡಬೇಕೆಂಬ ಇಚ್ಛೆಯುಳ್ಳವರಾದ ಮಹಾತ್ಮರು ಎಲ್ಲಾ ಕಡೆಗಳಿಂದಲೂ ಬರುವಂಥಾವರಾದರು. ಅವರೊಳಗೆ ಕೆಲವರು ಆತನ ದರ್ಶನವನ್ನು ಮಾಡಬೇಕೆಂಬ ಲವಲವಿಕೆಯಿಂದ ವ್ಯಾಪಿಸಲ್ಪಟ್ಟ ಹೃದಯವುಳ್ಳವರು. ಕೆಲವರು ಭೋಜನಾಪೇಕ್ಷಿಗಳು. ಕೆಲವರು ಶಿವಾರ್ಚನ ಸಾಮಗ್ರಿಗಳನ್ನು ಬಯಸುವವರು. ಕೆಲವರು ಆಚಾರ್ಯವೃತ್ತಿಯುಳ್ಳರತಕ್ಕವರಾದ್ದರಿಂದ ಛತ್ರಚಾಮರಗಳನ್ನು ಅಪೇಕ್ಷಿಸುವವರು. ಕೆಲವರು ಗ್ರಾಮಗಳ ಸರ್ವಮಾನ್ಯವನ್ನು ವಾಂಛಿಸುವವರು. ಕೆಲವರು ಕನ್ಯಾರ್ಥಿಗಳು. ಕೆಲವರು;--ಈ ಬಸವೇಶನು ಹೆಸರುವಾಸಿಗಾಗಿ ಕೊಡುತ್ತಾನೊ ಭಕ್ತಿಗಾಗಿ ಕೊಡುತ್ತಾನೊ ಎಂಬ ಆಲೋಚನೆಯಿಂದ ಎಳೆಯಲ್ಪಟ್ಟವರು ಕೆಲವರು ಅರಣ್ಯವಾಸಿಗಳು. ಕೆಲವರು ಹಣ್ಣುಗಳನ್ನೂ, ಕಾಯಿಸೊಪ್ಪುಗಳನ್ನೂ ಭಕ್ಷಿಸುವವರು. ಇನ್ನು ಕೆಲವರು ಗೆಡ್ಡೆ ಗೆಣಸುಗಳನ್ನು ತಿನ್ನುವವರು. ಕೆಲವರು ಕ್ಷೀರಪಾನದಲ್ಲಿ ಆಸಕ್ತರಾದವರು. ಕೆಲವರು ಹುರಿಟ್ಟುಗಳಲ್ಲಿ ಇಚ್ಛೆಯುಳ್ಳವರು. ಕೆಲವರು ಭಕ್ತರಿಂದ ಮಾಡಲ್ಪಟ್ಟ ಪಾಕದಲ್ಲಿ ಅಭಿಲಾಷೆಯುಳ್ಳವರು. ಕೆಲವರು ಲಿಂಗಧಾರಣಾದಿ ವೀರಶೈವ ದೀಕ್ಷೆಯಿಲ್ಲದ ಜನಗಳಿಂದ ಮಾಡಲ್ಪಟ್ಟ ಪಾಕದಲ್ಲಿ ಮನಸ್ಸನ್ನು ಹಿಂದೆಗೆಯತಕ್ಕವರು. ಕೆಲವರು ತಮ್ಮ ಹಸ್ತದಿಂದ ಮಾಡಲ್ಪಟ್ಟ ಪಾಕದಲ್ಲಿಯೇ ಇಚ್ಛೆಯುಳ್ಳವರು. ಕೆಲವರು ಭಿಕ್ಷಾನ್ನವನ್ನೇ ಬುಂಜಿಸಬೇಕೆಂಬ ನಿಯಮವುಳ್ಳವರು. ಕೆಲವರು ಸಮೀಚೀನಗಳಾದ ಕೇಶಪಾಶಗಳುಳ್ಳ ತಮ್ಮ ಆಚಾರ್ಯರಿಂದ ರೂಪಿಸಲ್ಪಟ್ಟ ಮತಗಳಲ್ಲಿ ತಮ್ಮ ತಮ್ಮ ಮನಸ್ಸುಗಳುಳ್ಳವರು. ಇನ್ನು ಕೆಲವರು ಮಹಾತ್ಮರು ಅಷ್ಟಮೂರ್ತಿಗೊಂದಂಗವಾದ ಸೂರ್ಯನಲ್ಲಿ ಇಡಲ್ಪಟ್ಟ ತಮ್ಮ ನೇತ್ರಗಳುಳ್ಳವರು. ಕೆಲವರು ಲಿಂಗಧಾರಣಾದಿ ವೀರಶೈವ ದೀಕ್ಷೆಗಳಿಲ್ಲದ ಭೂಮಿಗಳೊಡನೆ ಮಾತನಾಡುವದಕ್ಕೂ, ಅವರನ್ನು ನೋಡುವದಕ್ಕೂ ಭೀತಿಯಿಂದ ವ್ಯಾಪಿಸಲ್ಪಟ್ಟ ಮನಸ್ಸುಳ್ಳವರಾಗಿ ವಸ್ತ್ರಗಳಿಂದ ಮುಚ್ಚಲ್ಪಟ್ಟ ಮುಖಗಳುಳ್ಳವರು. ಕೆಲವರು ಭಸ್ಮಲೇಪನದಲ್ಲಿ ಅಭಿಲಾಷೆಯುಳ್ಳವರು. ಕೆಲವರು ಲಿಂಗಾವಧಾನಿಗಳು;—ತಮ್ಮಿಷ್ಟ ಲಿಂಗವನ್ನು ಮಸ್ತಕದಲ್ಲಿಯೂ, ಕೆಲವರು ಕೊರಳಿನಲ್ಲಿಯೂ, ಕೆಲವರು ಕಂಕುಳಲ್ಲಿಯೂ, ಕೆಲವರು ಎದೆಯಲ್ಲಿಯೂ, ಕೆಲವರು ಹಸ್ತದಲ್ಲಿಯೂ, ಕೆಲವರು ಭ್ರೂಮಧ್ಯದಲ್ಲಿಯೂ, ಧರಿಸಿ; ಆ ಲಿಂಗದಲ್ಲಿಯೇ ಅನುಸಂಧಾನವುಳ್ಳವರು. ಅವರಿಗೆ ಯಾವ್ಯಾವದು ಇಷ್ಟವೋ

ಅದನ್ನು ಬಸವೇಶನು ನೆರವೇರಿಸಿದನು. ಅವರುಗಳು ಆ ಪೂಜೆಯಿಂದ ಸಂತುಷ್ಟರಾಗಿ, ಸುಖದಿಂದಿದ್ದರು. ಇಂಥಾ ಮಹಾತ್ಮರಾದ ಲಕ್ಷದಮೇಲೆ ಎಂಭತ್ತು ಸಾವಿರ ಮಂದಿ ತಪಸ್ವಿಗಳು ಬಸವೇಶನ ಮನೆಯಲ್ಲಿ ಯಾವಾಗಲೂ ವಾಸಿಸಿದರು. ಅವರೆಲ್ಲರೂ ಬಸವೇಶನಿಂದ ಕಳುಹಿಸಲ್ಪಟ್ಟ ವಸ್ತ್ರ, ಕರ್ಪೂರವೀಳೆಯ, ಹೂವು, ಗಂಧಗಳಿಂದಲೂ, ಭಕ್ಷ್ಯ ಭೋಜನಗಳಿಂದಲೂ, ಸಂತೋಷಪಟ್ಟ ಮನಸ್ಸುಳ್ಳವರಾಗಿದ್ದರು. ರುದ್ರರ ಅವತಾರವಾಗಿರುವ ಹನ್ನೆರಡು ಸಾವಿರ ಗಣನಗಳು ಕಾಮಿಗಳಂತೆ ವೇಶ್ಯಾಪತಿಗಳಾಗಿದ್ದರು. ಅನೇಕಪ್ರಕಾರವಾದ ನಿಯಮಗಳನ್ನು ನಡಸುವವರಾಗಿಯೂ, ಅನೇಕವಿಧ ವೃತ್ತಿಯುಳ್ಳವರಾಗಿಯೂ, ಪ್ರಸಿದ್ಧವಾದ ತೇಜಸ್ಸುಳ್ಳವರಾಗಿಯೂ, ಇರುವ ಇನ್ನೂ ಅನೇಕರಿದ್ದರು. ಒಂದಾನೊಂದು ಕಾಲದಲ್ಲಿ ಬಸವೇಶನು ಶಿವಾರ್ಚನೆಯನ್ನು ಮಾಡುತ್ತಾ, ಲಿಂಗಮೂರ್ತಿಯಲ್ಲಿ ನೂತನವಾಗಿಯೂ, ಸುಂದರವಾಗಿಯೂ, ಇರುವ ಮತ್ತೊಂದು ಮೂರ್ತಿಯನ್ನು ನೋಡಿದನು. ಹೀಗೆ ಅದ್ಭುತವಾದ ರೂಪನ್ನು ನೋಡಿ ಆಶ್ಚರ್ಯಪಡುತ್ತಿರಲಾಗಿ; ಒಬ್ಬ ತಾಂಬೂಲ ವಾಹಕನು ಶೀಘ್ರದಲ್ಲಿ ಬಂದು, ಹೇಳಿದನು. ಏನಂದರೆ:—ಎಲೈ ಸ್ವಾಮಿಯೇ ದೇಹದ ನೆಳಲೇ ಭೂಮಿಯಲ್ಲಿ ಕಾಣಿಸದವನಾಗಿಯೂ, ತಡೆಯಿಲ್ಲದವನಾಗಿಯೂ, ಬಿಚ್ಚಿದ ಕೂದಲುಗಳುಳ್ಳವನಾಗಿಯೂ, ನಾರು ವಸ್ತ್ರವನ್ನು ಧರಿಸಿದವನಾಗಿಯೂ, ಧೂಳಿಯಿಂದ ಮಲಿನವಾದ ದೇಹವುಳ್ಳವನಾಗಿಯೂ, ಅವಿಚ್ಛಿನ್ನವಾಗಿ ಸುರಿಯುತ್ತಿರುವ ಆನಂದಬಾಷ್ಪ ಸಂತತಿಯಿಂದ ತೋರಿಸಲ್ಪಟ್ಟವನಾಗಿಯೂ, ಹಸ್ತತಲದಲ್ಲಿರುವ ಶಿವಲಿಂಗದಲ್ಲಿ ರಪ್ಪೆಗಳಂ ಮುಚ್ಚಿದ ದೃಷ್ಟಿಯನ್ನಿರಿಸಿದವನಾಗಿಯೂ, ಹೊಳೆ, ಕೊಳ, ಬಾವಿ, ಕೆರೆ, ಮರ ಮೊದಲಾದ ಸ್ಥಾವರಗಳಿಂದಲೂ ಗ್ರಾಮ್ಯರಿಂದಲೊಪಾದಿಯಲ್ಲಿ ಬಿಡಲ್ಪಟ್ಟ ಮಾರ್ಗವುಳ್ಳವನಾಗಿಯೂ, ಕುದುರೆ, ಎತ್ತು, ಆನೆ ಮೊದಲಾದ ಪ್ರಾಣಿಗಳಿಂದ ದೂರದಲ್ಲಿ ಬಿಡಲ್ಪಟ್ಟ ಮುಂಭಾಗವುಳ್ಳವನಾಗಿಯೂ, ಇರುವ ಯಾರೋ ಒಬ್ಬ ಪುರುಷನು ಬರುತ್ತಾನೆ. ಸೂರ್ಯನು ಆತನು ಬರುವ ದಾರಿಯಲ್ಲಿ ತಾಬೆಚ್ಚಗಿರುವ ಕಿರಣಗಳನ್ನು ಕೆದರುತ್ತಾನೆ. ಈತನು ಯಾವ ಯಾವ ಕಡೆಗೆ ಚರಿಸುತ್ತಾನೋ ಆಯಾ ಕಡೆಗೆ ವಾಯುವೂ ಕೂಡ ಸೇವೆಯಲ್ಲ ತತ್ಪರನಾದ ಬಂಟನಂತೆ ಅನುಕೂಲವಾದ ಗಮನವುಳ್ಳವನಾಗಿ ಬೀಸುತ್ತಾನೆ. ಪಕ್ಷಿಗಳು ಅಂತರಿಕ್ಷದಲ್ಲಿ ತಮ್ಮ ರೆಕ್ಕೆಗಳನ್ನು ಅಗಲಿಸಿಕೊಂಡು, ದಂಡಿಯಿಲ್ಲದ ಸತ್ತಿಗೆಗಳಿಗೆ

ಸಮಾನಗಳಾಗಿ ಆತನ ಸೇವೆಯಂ ಮಾಡುತ್ತಿವೆ. ಎಲೈ ಪ್ರಭುವೆ ಸರ್ವೋತ್ಕೃಷ್ಟನಾಗು. ಪ್ರಭುವೇ ರಕ್ಷಿಸು. ಪ್ರಭುವೇ ಯಾವಾಗಲೂ ನಮಗೆ ಜ್ಞಾನೋಪದೇಶವನ್ನು ಮಾಡು. ಹೀಗೆ ಎಲ್ಲಾ ಕಡೆಗಳಲ್ಲಿಯೂ ಹೇಳಲ್ಪಡುವ ಅಕ್ಷರಗಳು ಕಿವಿಗಳಿಗೆ ಉತ್ಸವವನ್ನುಂಟುಮಾಡುತ್ತವೆ. ದಕ್ಷಿಣಾಮೂರ್ತಿ ಸ್ವಾಮಿಯ ದಯೆಯಿಂದ ಪ್ರಾಣಲಿಂಗವನ್ನು ಹೊಂದಿದ ಶುಕಮಹರ್ಷಿಯೋ ಎಂಬಂತೆ ಸಕಲಪ್ರಾಣಿಗಳ ಮನಸ್ಸನ್ನೂ ಹೊಂದಿದವನಾಗಿ ಪ್ರಕಾಶಿಸುತ್ತಾನೆ. ಹೀಗೆ ಹೇಳುತ್ತಿರಲಾಗಿ ಪೂಜ್ಯವಾದ ಮಹಿಮೆಯುಳ್ಳ ಮಾಚಯ್ಯನು;--ಎಲೈ ಬಸವೇಶನೇ; ಆಶ್ಚರ್ಯವಾದ ವಸ್ತು ಬರುತ್ತದೆ ನೋಡೇಳು ಎಂಬದಾಗಿ ಹೇಳಿದನು. ಬಸವೇಶನು ಸಂತೋಷಪಟ್ಟ ಮನಸ್ಸುಳ್ಳವನಾಗಿ, ಎದ್ದು, ಪಾದ್ಯ, ಗಂಧ, ಅಕ್ಷತ, ಧೂಪ, ದೀಪ ಮೊದಲಾದ ಪೂಜಾ ದ್ರವ್ಯಗಳನ್ನು ಹಿಡಿದಿರುವ ಪರಿಚಾರಕರಿಂದ ಕೂಡಿದವನಾಗಿ, ಎದುರುಗೊಂಡನು. ತಾಂಬೂಲವಾಹಕನಿಂದ ಹೇಳಲ್ಪಟ್ಟ ಹಾಗೆ ಆಯಾಯ ಗುಣಗಳಿಂದ ಕೂಡಿದವನಾಗಿ ದೃಷ್ಟಿ ಗೋಚರವಾದ ಶಿವಲಿಂಗದ ಮುಖ್ಯತತ್ವಾರ್ಥವೋ ಎಂಬಂತೆ ಬರುತ್ತಿರುವ ದೋಷರಹಿತನಾದ ಆ ಪ್ರಭುದೇವನನ್ನು ನೋಡಿದನು. ಬಸವೇಶನ ಮುಖವೆಂಬ ಕಮಲವು ಪ್ರಭುದೇವನೆಂಬ ಸೂರ್ಯನ ದರ್ಶನದಿಂದ ವಿಕಸಿತವಾಯಿತು. ರೋಮಾಂಚಗಳಿಂದ ಆತನ ದೇಹವು ಆ ಕಮಲದ ನಾಳದಂತೆ ಕಾಣಿಸಿತು. ಬಸವೇಶನು ಆ ಪ್ರಭುದೇವನನ್ನು ನೋಡಿದ್ದು ಮೊದಲ್ಗೊಂಡು, ಹೆಜ್ಜೆಹೆಜ್ಜೆಗೂ ದಂಡಪ್ರಣಾಮವಂ ಮಾಡುತ್ತಾ ಸಮೀಪವನ್ನೈದಿ, ವಿಧ್ಯುಕ್ತಪ್ರಕಾರವಾಗಿ ಪಾದಪೂಜೆಯನ್ನು ಮಾಡಿ, ತನ್ನ ಮನೆಗೆ ಕರೆದುಕೊಂಡುಹೋಗಿ, ಉನ್ನತವಾದ ಪೀಠದಲ್ಲಿ ಕುಳ್ಳಿರಿಸಿ, ರತ್ನಗಳೆಂಬ ಪುಷ್ಪಗಳಿಂದ ಅರ್ಚಿಸಿ, ಸ್ತೋತ್ರಗಳಿಂದ ಸಂತೋಷಪಡಿಸಿದನು. ಆಗ ಮುಂಚಿದ್ದ ಗಣಾಧೀಶ್ವರರು ಉಚ್ಚಾಸನದಲ್ಲಿ ಕುಳಿತಿರುವ ಪ್ರಭುದೇವನನ್ನೂ, ಅವನ ಪೂಜೆಯಲ್ಲಿ ಉದ್ಯುಕ್ತನಾದ ಬಸವೇಶನನ್ನೂ ನೋಡಿ, ಕೋಪಗೊಂಡವರಾಗಿ ಹೊರಟರು. ಬಸವೇಶನು ಕೈಯಲ್ಲಿರುವ ರತ್ನವನ್ನು ಬಿಸಾಡಿ, ಹೋದದ್ದನ್ನು ಹುಡುಕುವಂತಾಗುವದೆಂದು ನಿಶ್ಚೈಸಿ, ಹೊರಟುಹೋದ ಗಣಂಗಳ ವ್ಯಸನವನ್ನು ಬಿಟ್ಟು ಪ್ರಭುದೇವರ ಸೇವೆಯಲ್ಲಿ ತತ್ಪರನಾಗಿದ್ದನು. ಮನೋಜ್ಞವಾದ ಚಿನ್ನದ ಪಾತ್ರೆಯಲ್ಲಿ ಬಡಿಸಲ್ಪಟ್ಟದ್ದಾಗಿಯೂ, ಶಾಕಪಾಕಗಳಿಂದ ಕೂಡಿದ್ದಾಗಿಯೂ ಇರುವ ಅಮೃತಕ್ಕೆ ಸಮಾನವಾದ ಆ ಅನ್ನರಾಶಿಯನ್ನು ತೆಂಗಿನ ಕಾಯಿಯ ಪ್ರಮಾಣಕ್ಕೆ ಬೇರೆಬೇರೆ ಉಂಡೆಗಳನ್ನು

ಕಟ್ಟಿ, ಭಕ್ತಿಭಾರದಿಂದ ಬಗ್ಗಿದವನಾಗಿ, ಪ್ರಭುದೇವನ ಕೈಯಲ್ಲಿ ಕೊಡುವದಕ್ಕೆ ಆರಂಭಿಸಿದನು. ಆ ಅನ್ನದ ತುತ್ತುಗಳನ್ನು ಪ್ರಭುದೇವನ ಹಸ್ತದಲ್ಲಿ ಕೊಡುತ್ತಿರುವ ಬಸವೇಶನು ಪೂರ್ವದಲ್ಲಿ ಭಕ್ತಿಯಿಂದ ಶಿವನಕೈಯಲ್ಲಿ ತುತ್ತು ಮಾಡಿಕೊಟ್ಟ ಸುರಗಿಯ ಚೌಡೈಯನಂತೆ ಶೋಭಿಸಿದನು. ಆಗ ಪ್ರಭುಸ್ವಾಮಿಯು ಬಸವೇಶನಿಂದ ಸಮರ್ಪಿಸಲ್ಪಟ್ಟದ್ದಾಗಿಯೂ, ಲಕ್ಷದ ಎಂಬತ್ತು ಸಾವಿರ ಮಾಹೇಶ್ವರರಿಗಾಗಿ ಸಂಪಾದಿಸಲ್ಪಟ್ಟದ್ದಾಗಿಯೂ ಇರುವ ಆ ಅನ್ನವನ್ನೆಲ್ಲಾ ಒಂದೇ ಕ್ಷಣದಲ್ಲಿ ಬುಂಜಿಸಿದನು. ಆ ಪ್ರಭುದೇವನು ಆ ಅನ್ನವನ್ನೆಲ್ಲಾ ಸ್ವೀಕರಿಸಿ, ತೃಪ್ತಿಯನ್ನು ಹೊಂದದ ಮನಸ್ಸುಳ್ಳವನಾಗಿರುತಿರಲು, ಬಸವೇಶನು, ಭಯವನ್ನೂ, ಆಶ್ಚರ್ಯವನ್ನೂ ಹೊಂದಿದವನಾಗಿ, ಆಲೋಚಿಸಿದನು. ಈ ವೇಳೆಯಲ್ಲಿ ಜ್ಞಾನ ಸ್ವರೂಪನಾದ ಚನ್ನಬಸವೇಶನು ಬಸವೇಶನ ಮನೋ ವ್ಯಸನವೆಂಬ ಕತ್ತಲೆಗೆ ದೀಪದೋಪಾದಿಯಲ್ಲಿ ಬಂದನು. ಈ ಚನ್ನಬಸವೇಶನ್ಯಾರೆಂದರೆ;--ಬಸವೇಶನ ಹಸ್ತದಿಂದ ಮುಟ್ಟಲ್ಪಟ್ಟ ಭಸ್ಮದ ಮಹಿಮೆಯಿಂದ ಉದಿಸಿದವನು. ನಾಗಾಂಬಿಕೆಯ ಗರ್ಭವೆಂಬ ಸಮುದ್ರಕ್ಕೆ ಚಂದ್ರನಾದವನು. ಶಿವನಿಂದ ಪ್ರೇರಿತನಾದ ಷಣ್ಮುಖಸ್ವಾಮಿಯು ತನ್ನಾಜ್ಞೆಯನ್ನು ಭೂಮಿಯಲ್ಲಿ ಸ್ಥಾಪಿಸುವದಕ್ಕಾಗಿ ಚನ್ನಬಸವ ರೂಪದಿಂದ ಅವತರಿಸಿದನು. ಈ ಚನ್ನಬಸವೇಶನ ಮುಖಚಂದ್ರನಿಂದ ಹೊರಟಂಥ ಮಂತ್ರಗೋಪ್ಯವೆಂಬ ಬೆಳದಿಂಗಳು ಯೋಗಿಶ್ರೇಷ್ಠರ ಹೃದಯಗಳೆಂಬ ನೈದಿಲೆಗಳವನವನ್ನು ಅರಳಿಸುತ್ತದೆ. ಅಂಥಾ ಚನ್ನಬಸವೇಶನು ಏನು ಮಾಡಬೇಕೆಂದು ತಿಳಿಯದೆ ಭಯದಿಂದ ಪರವಶನಾದ ಬಸವೇಶನ ಸಮೀಪಕ್ಕೈದಿ, ಆತನನ್ನು ಎಚ್ಚರಿಸಿ ಈ ಮಾತನ್ನಾಡಿದನು. ಸಂಪೂರ್ಣವಾದ ಬ್ರಹ್ಮಾಂಡವನ್ನು ಒಂದೇ ತುತ್ತನ್ನಾಗಿ ಮಾಡಿಕೊಳ್ಳುವದರಲ್ಲಿ ಆಸಕ್ತವಾದ ಮನಸ್ಸುಳ್ಳವನನ್ನು ಜಗತ್ತಿನೊಳಗೆ ಸೇರಿದ ಪದಾರ್ಥಗಳು ತೃಪ್ತಿಗೊಳಿಸುವದಕ್ಕೆ ಸಾಲುವವೇ. ನಿನ್ನನ್ನು ಅನ್ನವನ್ನಾಗಿಯೂ; ನನ್ನನ್ನು ಶಾಕಪಾಕವನ್ನಾಗಿಯೂ ಮಾಡಿಕೊಂಡು, ಜಗದ್ರೂಪನಾಗಿಯೂ, ದುಃಖನಾಶಕನಾಗಿಯೂ ಇರುವ ಪ್ರಭುವನ್ನು ತೃಪ್ತಿಗೊಳಿಸು. ಈ ಪ್ರಕಾರವಾಗಿ ಹೇಳಿದ ಚನ್ನಬಸವೇಶನ ಮಾತನ್ನು ಕೇಳಿ, ಹೀಗೇ ಸರಿಯೆಂದು ನಿಶ್ಚೈಸಿ, ಆ ರೀತಿಯಾಗಿ ನುಡಿದ ಬಸವೇಶನನ್ನು ಪ್ರಭುದೇವನು ನೋಡಿ, ತಂದೆಯಾದವನು ಕಾರ್ಯಜ್ಞನಾದ ಮಗನನ್ನು ನೋಡಿ, ಸಂತೋಷಪಡುವಂತೆ ಸಂತೋಷಪಟ್ಟನು. ಜಗದ್ರೂಪನಾದ ಪ್ರಭುದೇವನು

ತೃಪ್ತಿಪಡುತ್ತಿರಲಾಗಿ; ಮೂರು ಲೋಕವೂ ತೃಪ್ತಿಪಟ್ಟಿತು. ಮರದ ಬೇರಿಗೆ ನೀರನ್ನೆರೆದರೆ ಆ ಮರದ ಕೊಂಬೆಗಳು ತೃಪ್ತಿಯನ್ನು ಹೊಂದೇ ಹೊಂದುತ್ತವೆ. ಬಸವೇಶನು; ಆ ಪ್ರಭುದೇವನು ತೃಪ್ತಿಪಟ್ಟದ್ದರಿಂದ ತಾನೂ ಸಂತುಷ್ಟನಾಗಿ ವಿನಯದಿಂದ ಪ್ರಭುವಿನ ಮುಂದೆ ಕೈ ಜೋಡಿಸಿ ನಿಂತುಕೊಂಡು ಈ ಕಥೆಯನ್ನು ಹೇಳಿದನು. ಪೂರ್ವದಲ್ಲಿ ಯಾವಾಗಲೋ ಒಂದು ವೇಳೆಯಲ್ಲಿ ಕೈಲಾಸ ಪರ್ವತದ ಶಿಖರದಲ್ಲಿ ಸಭೆಯಲ್ಲಿರುವಂಥ ಪರಶಿವನನ್ನು ಸೇವಿಸುವದಕ್ಕಾಗಿ ಪಾರ್ವತಿಯು ಬಂದಳು. ಅಲ್ಲಿ ಸಾರೂಪ್ಯಪದವನ್ನು ಹೊಂದಿ, ಶಿವನಂತೆಯೇ ತೋರುವ ಪ್ರಮಥರಿಂದ ಬಳಸಲ್ಪಟ್ಟ ಪರಮೇಶ್ವರನನ್ನು ಈತನೇ ನನ್ನ ಪತಿಯೆಂದು ತಿಳಿಯದೆ ಒಂದು ಕ್ಷಣಕಾಲ ಪಾರ್ವತಿಯು ಸಂಶಯದಿಂದ ಸುಮ್ಮನೆ ನಿಂತಳು. ಪ್ರಮಥರು ಆಕೆಯ ಮನೋಭಾವವನ್ನು ತಿಳಿದು, ಶೀಘ್ರವಾಗಿ ಸಿಂಹ, ಹುಲಿ, ಶರಭ, ಮೊಲ, ಕಪಿ, ಈ ಮೃಗಗಳ ಮುಖಗಳನ್ನು ಧರಿಸಿದವರಾದರು. ಬಳಿಕ ಪಾರ್ವತಿಯು ಅದನ್ನು ತಿಳಿದು ಸಂತೋಷಗೊಂಡು, ಶಿವನನ್ನು ನಮಸ್ಕರಿಸಿ, ಆತನಿಂದ ಅಪ್ಪಣೆಯಂ ಪಡೆದು, ಆತನ ಎಡದ ತೊಡೆಯ ಮೇಲೆ ಕುಳಿತಳು. ಅಲ್ಲಿ ಆ ಸಮಯಕ್ಕೆ ತಕ್ಕ ಮಾತುಗಳನ್ನಾಡುವದರಿಂದ ಸ್ವಲ್ಪ ಹೊತನ್ನು ಕಳೆದು, ಕೈಗಳನ್ನು ಮುಗಿದು ಶಿವನಿಗೆ ಬಿನ್ನೈಸಿದಳು. ಎಲೈ ಸ್ವಾಮಿಯೇ ನಿನ್ನ ಸಾಮಾಜಿಕರಾದ ಪ್ರಥಮರ ಸಮೂಹಕ್ಕೆ ತೃಪ್ತಿಯನ್ನುಂಟುಮಾಡತಕ್ಕದ್ದಾಗಿಯೂ, ಅಧಿಕವಾದ ರುಚಿಯಿಂದಲೂ ಸುವಾಸನೆಯಿಂದಲೂ ಕೂಡಿದ್ದಾಗಿಯೂ ಇರುವ ಉತ್ತಮವಾದ ಭೋಜನವನ್ನು ಮಾಡಿಸುತ್ತೇನೆ. ಹೀಗೆ ಹೇಳಲು; ಮಹಾದೇವನು ಮಂದಹಾಸ ಪೂರ್ವಕವಾಗಿ ಹಾಗೇ ಆಗಲೆಂದು ಹೇಳಿ, ಪಾರ್ವತಿಯನ್ನು ಕಳುಹಿಸಿದನು. ಆಕೆಯು ಸಖಿಯರೊಡನೆ ರಾಣಿವಾಸಕ್ಕೆ ಬಂದು, ಗಂಗೆಯನ್ನೂ, ನಂದನವನಾಭಿಮಾನ ದೇವತೆಯರನ್ನೂ, ದಿಕ್ಪಾಲಕರ ಪತ್ನಿಯರನ್ನೂ, ಸಿದ್ಧರ ಮತ್ತು ವಿದ್ಯಾಧರರ ಹೆಂಗಸರನ್ನೂ, ಮೊದಲನೇ ಮೂರನೇ ಸಮುದ್ರಗಳನ್ನು ಬಿಟ್ಟು, ಮಿಕ್ಕ ಸಮುದ್ರಗಳೆಲ್ಲವನ್ನೂ, ಕುಬೇರನನ್ನೂ, ಅಗ್ನಿಯನ್ನೂ, ವಾಯುವನ್ನೂ ಸ್ಮರಿಸಿದಳು. ಪಾರ್ವತಿಯು ನೆನದ ಮಾತ್ರದಿಂದಲೇ ಪರಮ ಸಂತೋಷದಿಂದ ತುಂಬಲ್ಪಟ್ಟ ಆ ದೇವಾಂಗನೆಯರೂ, ಆ ದೇವ ಪುರುಷರೂ ಬಂದು ಪಾರ್ವತಿಯ ಮುಂದೆ ಕೈಗಳನ್ನು ಜೋಡಿಸಿ ನಿಂತುಕೊಂಡರು. ಬಳಿಕ ಪಾರ್ವತಿಯು ಆ ಸ್ತ್ರೀ ಸಮೂಹವನ್ನೂ ಪುರುಷ

ಸಮೂಹವನ್ನೂ ನೋಡಿ, ಅವರವರಿಗೆ ಯೋಗ್ಯವಾದ ಕೆಲಸಗಳಲ್ಲಿ ನೇಮಿಸಿದಳು. ಆ ಗಂಗಾದೇವಿಯು ಅಮೃತ ಸಂಪತ್ತನ್ನು ಗರ್ಭದಲ್ಲಿ ಧರಿಸಿದ್ದಾಗಿಯೂ, ಸೌಗಂಧಿಕ ಕಮಲಗಳ ಸುವಾಸನೆಯುಳ್ಳದ್ದಾಗಿಯೂ, ಇರುವ ಜಲದಿಂದ ಪಾನಕಗಳನ್ನು ರಚಿಸಿದಳು. ನಂದನವನಾಭಿಮಾನ ದೇವತೆಯು ನಾನಾ ವಿಧಗಳಾಗಿಯೂ, ರುಚಿಕರಗಳಾಗಿಯೂ ಇರುವ ಹಣ್ಣುಗಳನ್ನು ಕಲ್ಪವೃಕ್ಷಗಳ ಕೊಂಬೆಗಳಿಂದ ತೆಗೆದುಕೊಂಡು ಬಂದಳು. ತಮ್ಮ ತಮ್ಮ ಸಖಿಯರೊಡನೆ ಕರೆಯಲ್ಪಟ್ಟ ಶಚೀದೇವಿ ಮುಂತಾದ ದಿಕ್ಪಾಲಕರ ಪತ್ನಿಯರು ಪಾರ್ವತಿಯಿಂದ ನೇಮಿಸಲ್ಪಟ್ಟ ಕೆಲಸಗಳನ್ನು ಕ್ರಮವಾಗಿ ಮಾಡುವದಕ್ಕೆ ಆರಂಭಿಸಿದರು. ಕುಬೇರನು ಶಾಕಪಾಕಾದಿಗಳ ರುಚಿಗೂ, ಸುವಾಸನೆಗೂ, ಕಾರಣವಾದ ಅನೇಕ ಪದಾರ್ಥಗಳನ್ನು ಒದಗಿಸಿದನು. ಪಾರ್ವತಿಯು ಅಡಿಗೆಯ ಕೆಲಸದ ಯಾಜಮಾನಿಯಾದಳು. ಅನೇಕ ವಿಧ ಪಾಕಗಳಲ್ಲಿ ಆಚಾರ್ಯನಾದ ಅಗ್ನಿಯು ತಾನೇ ಪಾಕಶಾಲೆಗೆ ಅಧ್ಯಕ್ಷನಾದನು. ರುದ್ರದಾಸಿಯರು ಆ ಪಾಕಶಾಲೆಯಲ್ಲಿ ಸನ್ನಾಹದೊಡನೆ ಕೂಡಿದವರಾಗಿ ಸಾಹಾಯ್ಯವನ್ನು ಮಾಡುತ್ತಾ, ಈ ಕಡೆ ಆ ಕಡೆ ಸಂಚರಿಸುತ್ತಿದ್ದರು. ಆ ಕಾಲದಲ್ಲಿ ವಾಯುವು ಕೆಲಸವನ್ನು ಮಾಡುವದರಿಂದುಂಟಾದ ಆಯಾಸವನ್ನು ಪರಿಹರಿಸತಕ್ಕ ಶ್ಲಾಘನೀಯವಾದ ಆ ಕೃತಿಯನ್ನು ಧರಿಸಿಕೊಂಡು ಸಂಚರಿಸಿದನು. ಒಂದು ಕ್ಷಣಮಾತ್ರದಲ್ಲಿ ರಜತಾದ್ರಿಗೆ ಸಮಾನವಾದ ಆಕಾರಯುಳ್ಳವುಗಳಾಗಿಯೂ, ಬೆಳುದಿಂಗಳಂತೆ ಮನೋಹರವಾದ ಕಾಂತಿಯುಳ್ಳವುಗಳಾಗಿಯೂ ಇರುವ ಲೆಕ್ಕವಿಲ್ಲದಷ್ಟು ಅನ್ನರಾಶಿಗಳು ಸಿದ್ಧವಾದವು. ಮೇಲೋಗರ ಮುಂತಾದ ಶ್ರೇಷ್ಠವಾದ ಉಪಕರಣಗಳು ಪಾಕಕಾಲದಲ್ಲಿ ಪ್ರಾಪ್ತವಾದ ಪರಿಮಳ ಗುಣಾತಿಶಯದಿಂದ ದಿಕ್ಕುಗಳನ್ನು ಸುಗಂಧಮವಾಗುವಂತೆ ಮಾಡಿದವು. ಲಡ್ಡುಮೊದಲಾದ ಭಕ್ಷ್ಯ, ಕಡುಬುಮುಂತಾದ ಭೋಜ್ಯ, ಸೀಕರಣೆ ಮುಂತಾದ ಲೇಹ್ಯ, ಕುಟ್ಟಿಂಡಿಮುಂತಾದ ಚೋಷ್ಯ, ಮಜ್ಜಿಗೆ ಮುಂತಾದ ಪೇಯ, ವೆಂಬೈದು ಪ್ರಕಾರವಾದ ಆಹಾರವನ್ನು ಪಾರ್ವತಿಯು ನೋಡಿ, ಸಂತೋಷಪಟ್ಟಳು. ಈ ವೇಳೆಯಲ್ಲಿ ಪಾರ್ವತಿಯು ಸಮೀಪಕ್ಕೈದಿದ ಒಬ್ಬ ಪ್ರಮಥಬಾಲಕನನ್ನು ಕರೆದು, ಪ್ರಮಥರನ್ನೆಲ್ಲಾ ಶೀಘ್ರವಾಗಿ ಕರಕೊಂಡು ಬಾರೆಂದು ಹೇಳಿದಳು. ಆ ಬಾಲಕನು ತನ್ನ ಬಳಲಿಕೆಯನ್ನು ನಟಿಸಿ ನನ್ನ ದೇವನಿಗೆ ಸಂಭವಿಸಿರುವ ಹಸಿನೆಯನ್ನು ಪರಿಹರಿಸು. ಆ ಮೇಲೆ ಲೋಕಮಾತೆಯಾದ ನೀನು

ಆಜ್ಞಾಪಿಸಿದ ಕಾರ್ಯವನ್ನು ಮಾಡುತ್ತೇನೆಂದು ಹೇಳಿ, ಉತ್ತರದಿಙ್ಮುಖವಾಗಿ ಕುಳಿತು ಪಾರ್ವತಿಯುಸಖಿಯಿಂದ ಕೊಡಲ್ಪಟ್ಟಪೂಜೋಪಕರಣಗಳುಳ್ಳವನಾಗಿ, ಶಿವಾರ್ಚನೆಯನ್ನು ಮಾಡಿ, ಗಣಾಧೀಶ್ವರರ ಅಪ್ಪಣೆಯಿಂದ ಅಲ್ಲಿ ಅಳವಡಿಸಿದ್ದ ಅನ್ನರಾಶಿಯನ್ನೆಲ್ಲಾ ತನ್ನ ಇಷ್ಟಲಿಂಗಕ್ಕೆ ಸಮರ್ಪಿಸಿ ಶಿವಲಿಂಗವನ್ನು ಕರಡಿಗೆಯಲ್ಲಿ ಮಡಗಿಕೊಂಡು ಪ್ರಸಾದಸೇವನೆಯಲ್ಲಿ ತಾತ್ಪರ್ಯಉಳ್ಳವನಾಗಿ ಕೈಲಾಸಪರ್ವತದ ಕೋಡುಗಲ್ಲಿಗೆ ಸಮಾನಗಳಾದ ತುತ್ತುಗಳನ್ನು ಮಾಡಲುದ್ಯುಕ್ತನಾದನು. ಆ ಕಾಲದಲ್ಲಿ ಅಪರಿಮಿತವಾದ ಆಹಾರವನ್ನು ಭುಂಜಿಸುತ್ತಿರುವ ಬಾಲಕನಾದ ಪ್ರಮಥಸೇವಕನನ್ನು ನೋಡಿದವರು ಪ್ರಪಂಚವನ್ನೇ ನುಂಗುವದಕ್ಕೆ ಉದ್ಯುಕ್ತನಾದ ಜಗದೀಶನನ್ನಾಗಿಯೇ ಊಹಿಸಿದರು. ನಾನಾವಿಧಗಳಾದ ಭಕ್ಷ್ಯಗಳೆಂಬ ಶಿಖರಗಳುಳ್ಳವುಗಳಾಗಿಯೂ, ಶಾಕಪಾಕಗಳೆಂಬ ತಪ್ಪಲುಗಳುಳ್ಳವುಗಳಾಗಿಯೂ, ತುಪ್ಪದಧಾರೆಯೆಂಬ ಗಿರಿನದೀ ಪ್ರವಾಹಗಳಿಂದ ಕೂಡಿದವುಗಳಾಗಿಯೂ ಇರುವ ಅನ್ನರಾಶಿಗಳೆಂಬ ಪರ್ವತಗಳನ್ನು ಸ್ವೀಕರಿಸಿದನು. ಅನಂತರದಲ್ಲಿ ಕೈಗಳನ್ನು ತೊಳೆದುಕೊಂಡು ಪ್ರಮಥರನ್ನು ಕರೆತರುವದಕ್ಕೆ ಉದ್ಯುಕ್ತನಾದ ಆ ಬಾಲಕನನ್ನು ಪಾರ್ವತಿಯು ನೋಡಿ, ನಾಚಿಕೆಯಿಂದ ತಲೆಯನ್ನು ಬಗ್ಗಿಸಿಕೊಂಡಳು. ಆದಕಾರಣದಿಂದ ಎಲೈ ಪ್ರಭುಸ್ವಾಮಿಯೇ ನಿನ್ನನ್ನು ತೃಪ್ತಿಪಡಿಸುವದಕ್ಕೆ ನನಿಗೆ ಶಕ್ತಿಯುಂಟೇ ? ಸಮುದ್ರದ ಬಾಯಾರಿಕೆಯನ್ನು ಪರಿಹರಿಸುವದಕ್ಕೆ ಅರವಟ್ಟಿಗೆಯು ಸಮರ್ಥವಾದೀತೆ ? ಈತನು ಭಕ್ತನೆಂದು ನನಿಂದ ಮಾಡಲ್ಪಟ್ಟ ಪೂಜೆಯಿಂದ ತೃಪ್ತನಾಗಿದ್ದೀಯೇ ಹೊರ್ತು, ನಿತ್ಯತೃಪ್ತನಾದ ನಿನ್ನನ್ನು ಯಾವನು ತೃಪ್ತಿಗೊಳಿಸುವನು. ಇತರರಿಗೆ ಸಾಧಾರಣವಲ್ಲದ ನನ್ನ ಭಾಗ್ಯಾತಿಶಯದಿಂದ ಎಳೆಯಲ್ಪಟ್ಟನಾನು ಮಹಾತ್ಮರ ಪೂಜೆಯನ್ನು ಮಾಡುತ್ತೇನೆ. ಹೀಗೆ ತಿಳಿದು ನನ್ನನ್ನು ರಕ್ಷಿಸು. ಈ ಪ್ರಕಾರವಾಗಿ ಹೇಳಿ, ಕೈಗಳನ್ನು ಜೋಡಿಸಿಕೊಂಡು ನಿಂತಿರುವ ಬಸವೇಶನನ್ನೂ, ಚನ್ನಬಸವೇಶನನ್ನೂ, ಪ್ರಭುಸ್ವಾಮಿಯು ನೋಡಿ, ಸಂತುಷ್ಟಹೃದಯನಾಗಿ ಹೇಳಿದನು. ಏನೆಂದರೆ, ಎಲೈ ಬಸವೇಶನೇ ಚಿಂತಾಮಣಿಗೆ ಸಮಾನವಾದ ರತ್ನವೂ, ಕಲ್ಪವೃಕ್ಷಕ್ಕೆ ಸಮಾನವಾದ ವೃಕ್ಷವೂ ಇದ್ದರೆ ನಿನಗೆ ಸಮಾನವಾದ ಭಕ್ತನು ಕೂಡ ಭೂಮಿಯಲ್ಲಿರುವನು. ಯೋಗಿಗಳಿಂದ ಪ್ರಾರ್ಥಿಸಲ್ಪಟ್ಟ ಭಕ್ತಿ, ಜ್ಞಾನ, ವೈರಾಗ್ಯಗಳಲ್ಲಿ ನೀನೂ ಚನ್ನಬಸವನ್ನೂ ಇಬ್ಬರೇ ಹೊರ್ತು ಮೂರನೆಯವನು ತ್ರಿಭುವನದಲ್ಲಿಯೂ ಇಲ್ಲ. ಹೀಗೆ ಶಿವಯೋಗಿ ಚಕ್ರವರ್ತಿಯಾದ

ಪ್ರಭುದೇವನು ಅನೇಕವಿಧವಾಗಿ ಶ್ಲಾಘಿಸಿ, ಬಸವೇಶ್ವರನಿಗೆ ವಾಕ್ಸಿದ್ಧಿ ಮೊದಲಾದ ಸಕಲ ಸಿದ್ಧಿಗಳನೂ ಕೊಟ್ಟು, ಚನ್ನಬಸವೇಶನನ್ನು ಮೂರ್ಧಾಘ್ರಾಣಪಂಮಾಡಿ. ಆ ಕ್ಷಣವೇ ಅದೃಶ್ಯನಾದನು.

ಬಸವೇಶವಿಜಯದಲ್ಲಿ ನಾಲ್ಕನೆ ಅಧ್ಯಾಯವು
ಸಂಪೂರ್ಣವು.

## ಐದನೇ ಅಧ್ಯಾಯವು.

ಅನಂತರದಲ್ಲಿ ಒಂದಾನೊಂದುದಿನ ಬಲಶಾಲಿಗಳಾದ ಚೋರರು ಬಹಳ ದ್ರವ್ಯವನ್ನು ಸೆರೆಹಿಡಿದು ತೆಗದುಕೊಂಡು ಹೋಗಬೇಕೆಂಬ ಇಚ್ಛೆಯುಳ್ಳವರಾಗಿ ಪ್ರಭುಸ್ವಾಮಿಯ ಅನುಗ್ರಹದಿಂದ ಪಡೆಯಲ್ಪಟ್ಟ ಆಜ್ಞಾಸಿದ್ಧಿಯುಳ್ಳ ಮಹಾತ್ಮನಾದಬಸವೇಶನ ಮನೆಯನ್ನು ಪ್ರವೇಶಿಸಿದರು. ಅವರು ಬಟ್ಟೆಯೊಳಗೆ ಬದನೆಯ ಕಾಯಿಯನ್ನು ಲಿಂಗದಂತೆಕಟ್ಟಿ, ಎದೆಯಮೇಲೆ ಧರಿಸಿದವರಾಗಿ, ಲಲಾಟದಲ್ಲಿ ಭಸ್ಮವನ್ನೂ, ಕಂಠದಲ್ಲಿ ರುದ್ರಾಕ್ಷಮಾಲಿಕೆಯನ್ನೂ ಧರಿಸಿ, ಶಿವಚಿಹ್ನೆಗಳನ್ನು ಹೊಂದಿದ್ದುರಿಂದ ಒಳಪುಗುವದಕ್ಕೆ ಅವಕಾಶವನ್ನು ಪಡೆದರು. ಬಸವೇಶ್ವರನು ಪ್ರವೇಶಿಸುತ್ತಿರುವ ಅವರನ್ನು ನೋಡಿ, ಕಳ್ಳರೆಂದು ಮನಸ್ಸಿನಲ್ಲಿ ನಿಶ್ಚಯಿಸಿ, ಆಶ್ಚರ್ಯಕರವಾದ ಆಲೋಚನೆಯನ್ನು ಮಾಡಿದನು. ನನ್ನ ಮನೆಯ ಅಂಗಣವು ಭವಿಗಳ ಕಾಲಸೋಂಕಿಗೆ ಎಷ್ಟೋದೂರವಾದದ್ದು. ಈಗ ಚೋರರ ಪ್ರವೇಶಕ್ಕೆ ಹ್ಯಾಗೆ ಯೋಗ್ಯವಾಯಿತು ಆಶ್ಚರ್ಯ. ಈ ಚೋರರು ನನ್ನ ಮನೆಯನ್ನು ಪ್ರವೇಶಿಸಿದ್ದರಿಂದ್ಧ ಜನ್ಮಾಂತರದಲ್ಲಿ ಮಾಡಲ್ಪಟ್ಟ ಅಮೋಘವಾದ ತಪಸ್ಸಿನಿಂದ ಹೋಗಲಾಡಿಸಲ್ಪಟ್ಟ ಪಾಪವುಳ್ಳವರಾಗಿ ಶೀಘ್ರದಲ್ಲಿ ಕಾಕತಾಳನ್ಯಾಯದಿಂದ ಈ ಫಲವನ್ನು ಹೊಂದಿದರು. ಈ ಪ್ರಕಾರವಾಗಿ ಬಸವೇಶನು ನಿಶ್ಚಯಿಸಿ, ಪ್ರೀತಿಪೂರ್ವಕವಾಗಿ ಆ ಚೋರರನ್ನು ಕುರಿತು, ಇದು ಗಂಧವು, ಇದು ಪುಷ್ಪವು, ಶಿವಾರ್ಚನೆಯನ್ನುಮಾಡಿರಿ, ಎಂದು ಹೇಳಿದನು. ಅವರು ಹಾಗೇ ಆಗಲೆಂದು ಪೀಠಗಳಲ್ಲಿ

ಕುಳಿತು, ಧನವನ್ನು ಸೆರೆಹಿಡಿಯಬೇಕೆಂಬ ಬುದ್ಧಿಯಿಂದ ಬಂದ ನಾವು ಸೆರೆಯಲ್ಲಿ ಸಿಕ್ಕಿದೆವೆಂದು ಒಬ್ಬರೊಬ್ಬರ ಮುಖವನ್ನು ನೋಡಿಕೊಂಡರು. ತಿರಿಗಿ ಬಸವೇಶನು ಆ ಚೋರರನ್ನುಕುರಿತು, ಈಗ ನೀವು ಏನನ್ನು ಆಲೋಚಿಸುತ್ತೀರಿ, ಲಿಂಗವಿಹೀನರು ನನ್ನ ಮನೆಗೆ ಎಂದಿಗೂ ಪ್ರವೇಶಿಸುವದಿಲ್ಲವೆಂದು ಹೇಳಿದನು. ಬಳಿಕ ಅವರು ಮೆಲ್ಲಗೆ ಶಿವಪೂಜೆಗೆ ಪ್ರಾರಂಭಿಸಿ, ವಸ್ತ್ರದಲ್ಲಿ ಕಟ್ಟಿಕೊಂಡಿರುವ ಬದನೆಯಕಾಯಿಯು ಗೊತ್ತಾಗುವದಲ್ಲಾ ಎಂದು ಹೆದರಿ, ಭಯದಿಂದ ನಡುಗುತ್ತಿರುವ ಕೈಗಳುಳ್ಳವರಾಗಿ ಬೆವರಹನಿಗಳಿಂದ ವ್ಯಾಪ್ತವಾದ ಮುಖವುಳ್ಳವರಾಗಿ ಬದನೇಕಾಯಿಂದ ಕೂಡಿದ ವಸ್ತ್ರದ ಗಂಟನ್ನು ಬಿಚ್ಚಿ ಬಸವೇಶನ ವಚನವೆಂಬ ದೀಕ್ಷೆಯ ಮಹಿಮೆಯಿಂದ ಸಿದ್ಧವಾದ ಶಿವಲಿಂಗಾಕಾರವುಳ್ಳ ಆ ಬದನೆಯ ಕಾಯನ್ನು ನೋಡಿ, ಪ್ರಕಾಶವಾದ ಆನಂದವನ್ನು ಹೊಂದಿದರು. ಮತ್ತು ಬಸವೇಸನ ಕರುಣಾದೃಷ್ಟಿಯು ತಗಲಿದಮಾತ್ರದಿಂದ ಪೂಜಾಕ್ರಮವನ್ನು ತಿಳಿದವರಂತೆ ಸಾಂಗವಾಗಿ ಶಿವಾರ್ಚನೆಯನ್ನು ಮಾಡಿ ತಮ್ಮ ಮುಂಚಿನ ಭಾವವು ಅಳಿದುಹೋದದ್ದರಿಂದ ನಿರ್ಮಲವಾದ ತಮ್ಮ ತಮ್ಮ ಮನಸ್ಸುಳ್ಳವರಾಗಿ ಅದು ಮೊದಲಾಗಿ ಸದ್ವೃತ್ತಿಯಲ್ಲಿಯೂ, ಸದಾಚಾರಗಳಲ್ಲಿಯೂ ವರ್ತಿಸಿದರು.

## ಮಲ್ಲಿನಾಥನ ಕಥೆ.

ಪೂರ್ವದಲ್ಲಿ ಭಕ್ತರ ಪ್ರೀತಿಗೆ ಪಾತ್ರನಾಗಿ ಮಲ್ಲಿನಾಥನೆಂಬ ಒಬ್ಬ ಭಕ್ತನಿದ್ದನು. ಆತನು ಸ್ವಪ್ನದಲ್ಲಾದರೂ ಶಿವನನ್ನು ಸೇವಿಸಿದಲ್ಲದೆ ಭೋಜನವಂ ಮಾಡುವದಿಲ್ಲವೆಂಬ ನಿಯಮವಂ ಹಿಡಿದಿದ್ದನು. ಒಂದಾನೊಂದು ಸಮಯದಲ್ಲಿ ವ್ಯಾಪಾರಕ್ಕಾಗಿ ಬಂಧುಜನದೊಡನೆ ಪರದೇಶವನ್ನು ಕುರಿತು ಹೊರಟು, ಮಾರ್ಗವಶದಿಂದ ಅರಣ್ಯದ ನಡುವೆ ಇಳಿದು ಅಲ್ಲಿ ಶಿವಾಲಯವನ್ನು ಕಾಣದೆಹೋದದ್ದರಿಂದ ಆಹಾರವಿಲ್ಲದೆ ಆ ದಿವಸವನ್ನು ಕಳೆದು, ಮಾರನೇದಿನ ಎದ್ದು ಜೊತೆಯವರ ಸಂಗಡ ಹೊರಟನು. ಆ ದಿವಸದಲ್ಲಿಯೂ ಅಡವಿಯಲ್ಲಿ ಶಿವಾಲಯವು ಸಿಕ್ಕಲಿಲ್ಲವಾದ್ದರಿಂದ ಆತನ ಮಿತ್ರರು, ಭಾವಮೈದುನ ಮೊದಲಾದ ಬಂಧುಗಳು ಆಲೋಚಿಸಿದರು. ಏನಂದರೆ.—ಈತನು ಮುದುಕನು, ಇದರಮೇಲೆ ಕಣ್ಣೋವಿನಿಂದ ಪೀಡಿತನಾಗಿದ್ದಾನೆ. ಈ ಕಾಲವಾದರೋ ಉಗ್ರವಾದ ಬಿಸಿಲಿನಿಂದ ಕೂಡಿದೆ. ಈ ದಿನವೂ ಭೋಜನವನ್ನು ಮಾಡದಿದ್ದರೆ. ಬದುಕುವದಿಲ್ಲ. ಹೀಗೆ ಅವರೆಲ್ಲರೂ, ಒಬ್ಬರೊಬ್ಬರು ಆಲೋಚಿಸಿ ಒಂದು ಕಪಟೋಪಾಯವನ್ನು

ಹಿಡಿದು, ಹುಲ್ಲಿನಿಂದಲೂ, ಮುತ್ತುಗದ ಎಲೆಗಳಿಂದಲೂ, ಒಂದು ಪರ್ಣಶಾಲೆಯನ್ನು ಕಲ್ಪಿಸಿ, ಅದರಲ್ಲಿ ಒಂದು ಬಳ್ಳವನ್ನು ತಲೆಕೆಳಗಾಗಿ ನಟ್ಟು, ಕಾಡಿನ ಹೂವುಗಳಿಂದ ಮುಚ್ಚಿ, ಒಂದು ಸಂಭ್ರಮದೊಡನೆ ಆ ಭಕ್ತನನ್ನು ಕುರಿತು, ಎಲೈ ಮಲ್ಲಿನಾಥನೇ ನಿನ್ನ ಭಾಗ್ಯದಿಂದ ಈ ಅರಣ್ಯದಲ್ಲಿ ಶಿವಾಲಯವು ಗೋಚರವಾಯಿತು. ಅದನ್ನು ನೋಡುಬಾ ಎಂದು ಅವರಿಂದ ಕರತರಲ್ಪಟ್ಟವನಾಗಿ ಆ ಪರ್ಣಶಾಲೆಯನ್ನೈದಿ ಸಾಕ್ಷಾತ್ಪರಶಿವನೆಂದೇ ಭಾವಿಸಿ, ನಮಸ್ಕಾರವನ್ನು ಮಾಡಿದನು. ಆತನ ಭಾವನೆಯಿಂದ ತರಲ್ಪಟ್ಟ ಬಳ್ಳವು ಕೂಡ ಆ ಕ್ಷಣದಲ್ಲಿಯೇ ಲಿಂಗರೂಪವಾಯಿತು. ತಿರಿಗಿ ಅಡಿಗೆಯ ಬಳಿಗೆ ಬಂದು, ಭೋಜನವನ್ನು ಮಾಡಿ, ಯಾವದೋ ಒಂದುಕಡೆ ಕುಳಿತಿರುವ ಭಕ್ತನನ್ನು ಆತನ ಭಾವ ಮೊದಲಾದ ಬಂಧುಗಳು ಆವರಿಸಿ ಕುಳಿತರು. ಸುತ್ತುಮುತ್ತಲೂ ಕುಳಿತುಕೊಂಡು, ಯಾರೋ ಒಬ್ಬನನ್ನು ಕರೆದು, ಆ ಗುಡಿಸಲಲ್ಲಿಟ್ಟಿರುವ ಬಳ್ಳವನ್ನು ತೆಗೆದುಕೊಂಡುಬಾ, ಆ ಬಳ್ಳವು ಲಿಂಗಾಕಾರದಿಂದಿದ್ದು, ಮಲ್ಲಿನಾಥನಿಗೆ ಭೋಜನವನ್ನು ಮಾಡಿಸಿತು, ಎಂದು ಹೇಳಿದರು. ಮಲ್ಲಿನಾಥನು ಆ ವಂಚಕರ ಮಾತನ್ನು ಕೇಳಿ, ಬಹಳ ಕೋಪಗೊಂಡು ಬನ್ನಿರಿ, ಭಕ್ತವತ್ಸಲನಾದ ಸ್ವಾಮಿಯನ್ನು ನೋಡಿರಿ, ಎಂದು ಹೇಳಿ ಶೀಘ್ರದಲ್ಲಿ ಎದ್ದು ಕಠಿಣೋಕ್ತಿಗಳನ್ನಾಡುತ್ತಾ ಆ ಗುಡಿಸಲಬಳಿಗೆ ಬಂದು, ಶಿವನನ್ನು ತೋರಿಸಿದನು. ಬಳ್ಳವು ಬಳ್ಳದಾಕಾರವುಳ್ಳ ಲಿಂಗವಾಗಿರಲು ಅವರುಗಳು ನೋಡಿ, ಭೀತಿಯಿಂದ ನಡುಗುವ ದೇಹವುಳ್ಳವರಾಗಿ ಪದೇಪದೇನಮಸ್ಕರಿಸಿದರು. ಮತ್ತು ಭಕ್ತಿಯಿಂದ ಆತನ ಪಾದಕಮಲಗಳಮೇಲೆ ತಮ್ಮ ಶಿರಸ್ಸುಗಳನ್ನಿರಿಸಿ, ಕೋಪಾತಿರೇಕದಿಂದ ಕೆಂಪಾದ ಕಣ್ಣುಗಳುಳ್ಳ ಮಲ್ಲಿನಾಥನನ್ನು ಪ್ರಸನ್ನನನ್ನಾಗಿ ಮಾಡಿಕೊಂಡರು. ಅದು ಮೊದಲ್ಗೊಂಡು ಶಿವನು ಆಸ್ಥಳದಲ್ಲಿ ಬಳ್ಳೇಶ್ವರನೆಂಬ ಹೆಸರಿನಿಂದ ಕರ್ಣಾಟಕದೇಶದ ಭಾಗ್ಯದ ಮೊಳಕೆಯೋ ಎಂಬಂತೆ ಇದ್ದಾನೆ. ಆ ದಿವಸ ಮೊದಲ್ಗೊಂಡು ವಿನಯದಿಂದ ಎಲ್ಲರೂ ಮಲ್ಲಿನಾಥನನ್ನು ತಂದೆಯಂತೆಯೂ, ಗುರುವಿನಂತೆಯೂ, ರಾಜನಂತೆಯೂ, ದೇವರಂತೆಯೂ, ಭಾವಿಸಿದರು.

---

## ಕಾಟಕೋಟನ ಕಥೆ.

ಇದಲ್ಲದೆ ಜನ್ಮನಿವರ್ತಕನಾದ ಕಾಟಕೋಟನೆಂಬೊಬ್ಬ ಭಕ್ತನು ಕುರಿಗಳ ಹಿಂಡನ್ನು ಕಾಯುವಂತೆ ತನ್ನ ತಂದೆಯಿಂದ ನೇಮಿಸಲ್ಪಟ್ಟವನಾಗಿ ಅರಣ್ಯದಲ್ಲಿ

ಸಂಚರಿಸುತ್ತಾ ಇದ್ದನು. ಆತನು ಒಂದುಕಡೆಯಲ್ಲಿ ಕುರೀಹಿಕ್ಕೆಯನ್ನು ಲಿಂಗವೆಂಬ ಬುದ್ಧಿಯಿಂದ ಪ್ರತಿಷ್ಠಿಸಿ ಪ್ರತಿದಿವಸದಲ್ಲೂ, ಎಲ್ಲಾ ಕುರಿಗಳ ಹಾಲಿನಿಂದ ಅಭಿಷೇಕಿಸುತಿದ್ದನು, ಹೀಗಿರುವಲ್ಲಿ ಒಂದುದಿನ ಅವನತಂದೆಯು ಕುರೀಮಂದೆಯ ಹಾಲಿನ ಧಾರೆಯಿಂದ ಕುರೀಹಿಕ್ಕೆಯನ್ನು ಅಭಿಷೇಕಿಸುತ್ತಾ ಶಿವನಿಗೆ ಅಭಿಷೇಕ ಮಾಡುವ ಸನ್ನಾಹದಲ್ಲಿ ಮತ್ತೊಬ್ಬರ ಹಂಬಲವನ್ನೇ ಮರೆತಿರುವ ತನ್ನ ಮಗನನ್ನು ನೋಡಿ, ಕೋಪಗೊಂಡು ಹಿಂದೆಯೇಬಂದು ಬೇಗನೆ ಸಾಕ್ಷಾತ್ಪರಶಿವನೆಂದು ಭಾವಿಸಲ್ಪಟ್ಟಿದ್ದ ಕುರೀಹಿಕ್ಕೆಯನ್ನು ಕಾಲಿಂದೊದೆದನು. ಕಾಟಕೋಟನೂ ಕೂಡ ಕೋಪದಿಂದ ತನ್ನ ಕೈಯಲ್ಲಿದ್ದ ಕೊಡಲಿಯಿಂದ ಅವನ ತಲೆಯನ್ನು ಹೊಡೆದುಹಾಕಿದನು. ಶಿವಕಾರ್ಯಕ್ಕೆ ವಿಘ್ನವನ್ನಾಚರಿಸುವವನು, ವಧೆಗೆಯೋಗ್ಯನೇ ಅಲ್ಲವೆ. ಆ ಹುಡುಗನು ಕೊಡಲಿಯನ್ನು ಮೇಲಕ್ಕೆ ಎತ್ತುತ್ತಿರಲಾಗಿ ಕೈಲಾಸದ ಭಾಗಿಲಕದವು ಶೀಘ್ರದಲ್ಲಿ ತೆರೆಯಲ್ಪಟ್ಟಿತು; ಕೊಡಲಿಯು ಆ ಕದಕ್ಕೆ ಕೂಚಿಯಾಯಿತು. ತಂದೆಯತಲೆಯು ಬೀಳಿಸಲ್ಪಡುತ್ತಿರಲಾಗಿ ಶಿವಪುರದ ಅಗುಳಿಯು ಸಡಿಲಿತು. ಆತನತಲೆಯು ಬೀಗದಕ್ಕೈಯ್ಯೋ ? ಈಶ್ವರನು ಆಶ್ಚರ್ಯವಾದ ಮಹಿಮೆಯುಳ್ಳವನು. “ ತಾಯಿ, ತಂದೆ, ಅಣ್ಣ, ತಮ್ಮ, ನಂಟ, ಇವರೊಳಗೆ ಯಾರೇ ಆದರೂ, ಶಿವಕಾರ್ಯಕ್ಕೆ ವಿಘ್ನವನ್ನಾಚರಿಸುವವರು, ಶಿವಾಜ್ಞೆಯಿಂದ ಶಿಕ್ಷೆಗೆ ಯೋಗ್ಯರು ” ಎಂಬ ಶಿವಾಗಮ ವಚನದ ಅರ್ಥವನ್ನಾಚರಿಸಿದ್ದರಿಂದ ಆ ಭಕ್ತನೇ ಕೃತಾರ್ಥನು. ಶಾಸ್ತ್ರವನ್ನನುಸರಿಸಿ ನಡೆಯುವವರಿಗೆ ಫಲವಿಲ್ಲವೇ ಭಕ್ತನಾದ ಕಾಟಕೋಟನ ಹಸ್ತಸ್ಪರ್ಶದಿಂದ ಪರಿಶುದ್ಧವಾದ ಆಯುಧದ ಪ್ರಹಾರದ ದೆಸೆಯಿಂದ ಆತನ ತಂದೆಯು ಪರಿಹರಿಸಲ್ಪಟ್ಟ ಪಾಪವುಳ್ಳವನಾಗಿ ಸ್ವರ್ಗವನ್ನೈದಿದನು.

---

## ಬಾಹೂರ ಬ್ರಹ್ಮನ ಕಥೆ.

ಹಾಗೆಯೇ ಬ್ರಹ್ಮಯ್ಯನೆಂಬನಾಮಧೇಯವುಳ್ಳ ಭಕ್ತನ ಮಹಿಮೆಯಿಂದ ಜೋಳದರಾಶಿಯು ಸ್ಫಟಿಕಲಿಂಗಸ್ವರೂಪವಾಯಿತು. ಇದುಯುಕ್ತವೇಸರಿ, ಶಿವನುಭಕ್ತರಮನೋಭಾವನೆಗೆ ಜನ್ಮಸ್ಥಾನವಾಗಿದ್ದಾನೆ. ಆದಕಾರಣ ಬಸವೇಶನ ಇಚ್ಛೆಯಿಂದ ಬದನೆಯಕಾಯಿಯು ಲಿಂಗಸ್ವರೂಪವನ್ನು ಹೊಂದಿತು. ಆ ಜೋರರು ಶಿವನಲ್ಲಿಯೇ ಆಸಕ್ತರಾಗಿ ಸದಾಚಾರಸಂಪನ್ನರಾದರು ಎಂದು ಭಕ್ತಶಿರೋಮಣಿಗಳು ಸಂತೋಷವನ್ನನುಭವಿಸಿದರು. ಒಬ್ಬ ನಿಯಮವಂತನಾದ ಭಕ್ತನು

ಶಿವಪೂಜೆಗೆ ರಂಗವಲ್ಲಿಯನ್ನು ಮಾಡಲಿಚ್ಛೆಯಿಂದ ಬಸವೇಶನು ತೈಲವನ್ನೊತ್ತಿಕೊಳ್ಳುವ ಸಮಯದಲ್ಲಿ ಬಂದು ಹತ್ತುಖಂಡಿಗ ಮುತ್ತುಗಳು ಬೇಕೆಂದುಯೋಚಿಸಿದನು. ಬಸವೇಶನು, ಆ ವ್ರತಸ್ಥನವಾತನ್ನು ಕೇಳಿ, ಮುಂದೆಸುರಿದಿದ್ದ ಜೋಳದರಾಶಿಯನ್ನು ಮುತ್ತುಗಳೆಂಬ ಭಾವನೆಯಿಂದ ನೋಡಿದನು. ಆಕ್ಷಣವೇ ಆತನ ದೃಷ್ಟಿಯಿಂದ ವ್ಯಾಪಿಸಲ್ಪಟ್ಟ ಜೋಳದರಾಶಿಯು ಪಡೆಯಲ್ಪಟ್ಟ ಮಹಾಪ್ರಕಾಶವುಳ್ಳದ್ದಾಗಿ ಭಕ್ತನಹಾಗೆ ಮುಕ್ತಾತ್ಮಕವಾಯಿತು. (ಜೋಳದರಾಶಿಯು ಪರವಾಗಿ ಮುತ್ತುಗಳರೂಪವನ್ನು ಹೊಂದಿತು. ಎಂದರ್ಥ,) ಭಕ್ತನಪರವಾಗಿ ಮೋಕ್ಷವನ್ನು ಹೊಂದಿದ ಆತ್ಮವುಳ್ಳವನಾದನು ಎಂದರ್ಥ. ಆವ್ರತಿಯೆಂಬ ಸ್ವಾತಿಯುಸಾನ್ನಿಧ್ಯವುಳ್ಳ ಆನಂದವೆಂಬ ಮೇಘೋದಕದಿಂದ ತನ್ನ ದೃಷ್ಟಿಯೆಂಬ ಮುತ್ತಿನಚಿಪ್ಪಿನಿಂದ ಹೊರಡಿಸಲ್ಪಟ್ಟ ಮುತ್ತುಗಳ ಸಮುದಾಯವನ್ನು ಆ ಭಕ್ತನಿಗೆ ಕೊಟ್ಟನು.

---

## ಬಂಕಯ್ಯನ ಕಥೆ.

ಹಾಗೇಸರಿ, ಬಂಕಯ್ಯನೆಂಬ ಒಬ್ಬ ಭಕ್ತನಿದ್ದನು. ಆತನು ಒಬ್ಬ ವ್ರತಸ್ಥನಿಂದ ಅರ್ಧರಾತ್ರಿಯಲ್ಲಿ ಬಿಲ್ವಪತ್ರೆಯನ್ನೂ, ಒಂದು ಕೊಳಗ ಹಾಲನ್ನೂ ಯಾಚಿಸಲ್ಪಟ್ಟನು. ಮಹಾ ತೇಜಸ್ವಿಯಾದ ಬಂಕಯ್ಯನೂ ಕೂಡ, ನಿಮ್ಮ ಅನುಗ್ರಹದಿಂದ ಅದನ್ನೆಲ್ಲಾ ನಿಮಗೆ ಸಂಪಾದಿಸಿಕೊಡುವೆನೆಂದು ಆತನ ಪಾದಪೂಜೆಯನ್ನು ಮಾಡಿ, ಆತನ ಪಾದತೀರ್ಥಜಲವನ್ನು ಬಂಜೆಹಸುವಿನಮೇಲೂ, ಅದರ ಹಗ್ಗದಿಂದ ಕಟ್ಟಲ್ಪಟ್ಟ ಗೂಟದಮೇಲೂ, ತನ್ನಮೇಲೂ, ತನ್ನಮನೆಯಮೇಲೂ ಚಿಮಿಕಿಸಿದನು. ಆಕ್ಷಣದಲ್ಲಿಯೇ ಉತ್ಪನ್ನವಾದ ಕ್ಷೀರಧಾರೆಯಿಂದ ಮನೋಹರವಾದ ಸ್ತನಗಳುಳ್ಳಂಥ ಕರುವಿನಿಂದ ಕೂಡಿದ್ದರಹಾಗೆ ಪ್ರೀತಿಯುಕ್ತವಾದ ಆ ಹಸುವಿನಲ್ಲಿ ಅಪೇಕ್ಷಿಸಲ್ಪಟ್ಟಷ್ಟು ಹಾಲನ್ನು ಕರೆದನು. ಅನಂತರದಲ್ಲಿ ಚಿಗುರಿದಂಥ ಆ ಗೂಟದಿಂದ ಬಿಲ್ವಪತ್ರೆಯನ್ನು ಕೊಯ್ದುಕೊಂಡು ಆ ಎರಡು ಪದಾರ್ಥಗಳನ್ನು ವ್ರತಸ್ಥನಿಗೆ ಕೊಟ್ಟು ಕೃತಾರ್ಥನಾದನು, ಈ ಪ್ರಕಾರವಾದ ಕಥೆಯನ್ನು ಕೇಳಿದ್ದೆವು. ಈಗ ಪ್ರತ್ಯಕ್ಷವಾಗಿ ನೋಡಿದೆವು. ಬಸವೇಶನು ದೃಷ್ಟಿಸಿದ ಮಾತ್ರದಿಂದ ಜೋಳಗಳು ಮುತ್ತಾದವು. ಭಾವನಮಾತ್ರದಿಂದಲೇ ಸಿದ್ಧವಾದ ತಮ್ಮ ಇಷ್ಟಾರ್ಥದಿಂದ ಕೂಡಿದ ಪ್ರಮಥರಿಗೆ ದುರ್ಲಭವಾದ್ದು ಯಾವದಿದೆ? ಈ ರೀತಿಯಾಗಿ

ಆ ಕಾಲದಲ್ಲಿ ಬಸವೇಶನ ಮಹಿಮೆಯನ್ನು ನೋಡಿದ್ದರಿಂದುಂಟಾದ ಅಪರಿಮಿತವಾದ ಆಶ್ಚರ್ಯವುಳ್ಳ ಭಕ್ತಗಣವು ಪ್ರಶಂಸೆಯಂಮಾಡಿತು. ಈ ಪ್ರಕಾರವಾಗಿ ಬಸವೇಶನು ಭಕ್ತರುಗಳಿಗೆ ಆನಂದವನ್ನುಂಟುಮಾಡುತ್ತಿರಲು, ಶಿವನು ಜಂಗಮಾಕೃತಿಯನ್ನು ಧರಿಸಿಕೊಂಡು ಬಂದು, ತನಗೆ ಮೂರನೇಕಣ್ಣನ್ನು ಕೇಳಿದನು. ಬಳಿಕ ಬಸವೇಶನು ಪರಮೇಶನ ವಂಚಕತನವನ್ನು ತಿಳಿದು, ನಿನಗೆ ಮೂರನೇಕಣ್ಣು ಇದೆಯೋ ಇಲ್ಲವೋ ನೋಡು ಎಂದು ಕನ್ನಡಿಯನ್ನು ಕೊಟ್ಟನು. ಹಣೆಯಲ್ಲಿ ಮರೆಯಾಗಿರುವ ಕಣ್ಣನ್ನು ನೋಡಿ ನಾಚಿಕೆಯಿಂದ ಓಡಿಹೋಗುತ್ತಿರುವ ಶಿವನನ್ನು ಯುದ್ಧದಲ್ಲಿ ಓಡಿಹೋಗುತ್ತಿರುವ ಬಟನನ್ನು ಕುರಿತು ಹೇಳುವಂತೆ ಈ ಮಾತನ್ನು ಹೇಳಿದನು. ಎಲೈ ಸ್ವಾಮಿಯೇ ಹೋಗಬೇಡ, ಹೋಗಬೇಡ, ಭಯಾಕ್ರಾಂತನಾಗಿ ಯಾತಕ್ಕೆ ಓಡಿಹೋಗುತ್ತೀಯೆ. ನಾನು ದೇವರ ದಾಸಯ್ಯನಂತೆ ನಿಧಿಯನ್ನೂ, ಸಿರಿಯಾಳ್ವನಂತೆ ಮಗನನ್ನೂ, ಸುಂದರನಂಬಿಯಂತೆ ಆಶ್ರಯದಂಡವನ್ನೂ ಕರಿಕಾಲ ಚೋಳನಂತೆ ಅತ್ಯಾಶ್ಚರ್ಯಕರವಾದ ಸುವರ್ಣವೃಷ್ಟಿಯನ್ನೂ, ತಿರುನೀಲಕಂಠನಂತೆ ಪ್ರಾಯವನ್ನೂ ಕೇಳುವದಿಲ್ಲ. ನನ್ನನ್ನು ತಿಳಿಯದವನ ಹಾಗೆ ವಂಚನೆಯಿಂದ ಕೂಡಿದವನಾಗಿದ್ದೀಯಾ. ಇದಲ್ಲದೆ ಎಲೈ ದೇವಾದಿದೇವನೇ ಇನ್ನೂ ಭಕ್ತರಸಹಾಯ ಪರಂಪರೆಗಳನ್ನು ಹೇಳುತ್ತೇನೆ ಕೇಳು. ಲೋಕದಲ್ಲಿ ಸಹಾಯ ಸಂಪನ್ನನಾದವನು ಎಂದಿಗೂ ಭಯಪಡುವದಿಲ್ಲ. ಕಾಟಕೋಟನು ನಿನಗೆ ಸ್ನಾನವನ್ನು ಮಾಡಿಸುವವನು. ಕನ್ನಯ್ಯನು ಪೂಜಾಚಾರ್ಯನು. ಪುಷ್ಪದಂತನು ಹೂವಾಡಿಗನು. ಅಣುಮೂರ್ತಿಯು ಸುಗಂಧವಸ್ತುಗಳನ್ನು ಮಾಡುವವನು. ರೇಚವ್ವೆಯು ನಿನಗೆ ಅಲಂಕಾರವನ್ನು ಮಾಡುವ ಉದ್ಯೋಗವುಳ್ಳವಳು. ಮಾಚಯ್ಯನು ಧೂಪವನ್ನು ಸಮರ್ಪಿಸುವವನು. ಓಹಿಲೈಯ್ಯನು ಘಂಟಾನಾದವನ್ನು ಮಾಡುವವನು. ಎಲೈ ಚಂದ್ರಶೇಖರನೇ ಸೋಮವ್ವೆಯು ನಿನಗೆ ನೀವರಾಜನವನ್ನೆತ್ತುವವಳು. ಸಿರಿಯಾಳ್ವನು ಭಕ್ಷ್ಯಕಾರನು. ಚಂಗಳೆಯು ನಿನ್ನ ಅಡಿಗೆಯ ಪರಿಚಾರಿಣಿಯು. ಅರಿಪಾಲನು ನಿನ್ನ ಸಂಬಳಕೊಡುವ ಕೆಲಸದವನು. ಮಾರಯ್ಯನು ಕಟ್ಟಿಗೆಯನ್ನು ಹೊರುವವನು. ಕಲಿಕಾಲಚೋಳನು ಭೋಜನ ಪಾತ್ರೆಗಳನ್ನು ಇಡುವವನು. ಚೋಳವ್ವೆಯು ಅನ್ನವನ್ನು ಕೊಡುವವಳು. ಹೊನ್ನಯ್ಯನು ಚಿನ್ನದ ಗಿಂಡಿಯನ್ನು ಹಿಡಿಯುವವನು. ರೇಚಯ್ಯನು ವೀಳೆಯವನ್ನು ಹಿಡಿಯುವವನು. ಬಿಬ್ಬಭಾಸುರನು ನಿನ್ನ ಪ್ರಸಾದಿಯು. ನಾಟ್ಯನ ಮಿತ್ರಂ

ಡಿಯು ನಿನ್ನ ವೈದ್ಯನು ಸಾಮವೇದಿಯು ಪುರೋಹಿತನು. ಮಾಯಿಭಟ್ಟನು ಪೌರಾಣಿಕನು. ಕವಿಕಂಪನು ವಿದೂಷಕನು. ವಾಗೀಶನು ಸ್ತುತಿಪಾಠಕನು. ಶ್ರೀಪತಿ ಪಂಡಿತನು ವಾಚಾಲಕನಾದ ಕವಿಯು. ಮಲ್ಲಿಕಾರ್ಜುನ ಪಂಡಿತನು ವಿದ್ವತ್ಪೂಜ್ಯನಾದ ವಿದ್ವಾಂಸನು. ಮಾದಿರಾಜನು ರಸಜ್ಞನಾದ ನಿನ್ನ ವೈಣಿಕನು. ಶಂಕರಯ್ಯನು ನಿನ್ನ ಸಂಗೀತಕಾರನು. ಕೇಶಿರಾಜನು ನಿನ್ನ ಶಾನುಭೋಗನು. ಗಣನಾಥನು ನಿನ್ನ ಪ್ರಧಾನನು. ಜಗದೇವಯ್ಯನು ನಿನ್ನ ಮಂತ್ರಿಯು. ಆ ಪ್ರಭುದೇವನೇ ನಿನ್ನ ಸರ್ವಾಧಿಕಾರಿಯು. ಜೊಕ್ಕನಾಥನು ನಿನ್ನ ಕುದುರೆಯ ಸಹಣಿಗಾರನು. ಇರುವತ್ತನು ನಿನ್ನ ಆನೆಗಳ ಗೊತ್ತುಗಾರನು. ರಾಮಯ್ಯನು ಏಕಾಂತದವನು. ಮಂಜಣ ಪಂಡಿತನು ನಿನ್ನ ದಾಸನು. ಶಂಕರದಾಸನು ನಿನ್ನ ಯುದ್ಧಭಟನು. ಏಣಾಂಕನು ಜಟ್ಟಿಯು. ಬಂಕಯ್ಯನು ಸುಂಕದವನು. ಸುರಗಿಯ ಚೌಡಯ್ಯನು ನಿನ್ನ ಕತ್ತಿಯ ಊಳಿಗದವನು. ಬಿಜ್ಜ ಮಹಾದೇವಿಯು ನಿನ್ನ ಸಾಕಿದ ತಾಯಿಯು. ಕಕ್ಕಯ್ಯನು ತಳವಾರನು. ಜೇಡರ ದಾಸಿಮಯ್ಯನು ನಿನ್ನ ಬಟ್ಟೆಗಳ ಅಧಿಕಾರಿಯು. ಸಕಲಯ್ಯನು ನಿನ್ನ ಮಿತ್ರನು. ಕಿನ್ನರ ಬ್ರಹ್ಮಯ್ಯನು ನಿನ್ನ ದ್ರವ್ಯಗಳನ್ನು ನೋಡತಕ್ಕವನು. ಮಾಚಿದೇವಯ್ಯನು ಮಡಿಮಾಡುವವನು. ಚೇರಮನು ನಿನ್ನ ಸೇನಾಧಿಪತಿಯು. ಗುಂಡಯ್ಯನು ಕುಂಭಗಳನ್ನು ಮಾಡುವವನು. ಜೊಮ್ಮಯ್ಯನು ಬೇಟೆಗಾರನು. ಚಂಡೇಶ್ವರನು ನಿನ್ನ ಗೋಪಾಲಕನು. ಕ್ಷೇತ್ರಪಾಲನು ನಿನ್ನ ಹೊಲವನ್ನು ಉಳುವವನು. ಬಳ್ಳೇಶ್ವರ ಮಲ್ಲಯ್ಯನು ನಿನ್ನ ಧಾನ್ಯರಾಶಿಯ ಅಧಿಕಾರಿಯು. ಬಂಕಯ್ಯನು ಹಸುವನ್ನು ಕರೆಯುವವನು. ಕೊಡಗೂಸು ನಿನಗೆ ಹಾಲನ್ನು ಕಾಯಿಸುವವಳು. ಭೋಗಯ್ಯನು ನಿನಗೆ ಅತ್ಯಂತ ಹಿತನು. ಹಲಾಯುಧನು ನಿನಗೆ ನೀತಿಬೋಧಕನು. ಈ ನಮ್ಮ ಭಕ್ತರೆಲ್ಲರೂ ನಿನ್ನ ವಿಶ್ವಾಸಕ್ಕೆ ಪಾತ್ರರಾದ ಊಳಿಗದವರಾಗಿದ್ದಾರೆ. ನಾನು ಅವರಿಗೆ ಸೇರಿದವನು. ಈ ವಿಷಯದಲ್ಲಿ ಸಂಶಯವಿಲ್ಲ. ಸಕಲ ಪ್ರಳಯಗಳಲ್ಲಿಯೂ ನಾನು ನಿನ್ನ ಸೇವಕನು. ಎಲೈ ಶಂಕರನೇ ಬ್ರಹ್ಮವಿಷ್ಣುಗಳು ಹುಟ್ಟುವದಕ್ಕಿಂತ ಪೂರ್ವದಲ್ಲಿಯೂ ನಾನು ನಿನಗೆ ಸೇವಕನಾಗಿದ್ದೆನು. ಹಾಗಾದಾಗ್ಯೂ ಯಾರು ನಿನಗೆ ಭಕ್ತರೋ ಅವರೇ ನನ್ನ ಸ್ವಾಮಿಗಳು. ಅವರ ಅನುಗ್ರಹದಿಂದ ಉಂಟಾದ ಶಾಶ್ವತವಾದ ಐಶ್ವರ್ಯಗಳು ನನಗಿದ್ದಾವೆ. ನಿನಗೆ ನಾಲ್ಕನೆಯ ಕಣ್ಣನ್ನಾದರೂ, ಆರನೆಯ ತಲೆಯನ್ನಾದರೂ, ಒಂಭತ್ತನೆಯ ದೇಹವನ್ನಾದರೂ

ಕೊಡುತ್ತೇನೆ. ನಿನ್ನ ಪಾದದಾಣೆ ಒಂದು ಹುಲ್ಲುಕಡ್ಡಿಯನ್ನಾದರೂ, ನಿನ್ನನ್ನು ಕೇಳುವದಿಲ್ಲ. ಈ ರೀತಿಯಾಗಿ ಬಸವೇಶನು ಪ್ರತಿಭಟಿಸಿ, ನುಡಿದು ಶಿವನನ್ನು ಜೈಸಿದನು. ಹೀಗೆ ಭಕ್ತರಿಗೆ ಜಯವನ್ನು ಕೊಡುವ ಬಸವೇಶನು ಶಿವನನ್ನು ಗೆದ್ದು; ಆನೆ, ಕುದುರೆ, ಚಾಮರ, ಕಹಳೆ ಜಯಶಂಖಗಳ ವೈಭವದಿಂದಿದ್ದನು. ಮಲ್ಲಿನಾಥನ ಮಹಿಮೆಯನ್ನೂ, ಆಶ್ಚರ್ಯಕರವಾದ ಕಾಟಕೋಟನ ಚರಿತ್ರೆಯನ್ನೂ, ಬಂಕಯ್ಯನ ಭಕ್ತಿಯನ್ನೂ ಪ್ರೀತಿಯಿಂದ ಕೇಳುವವರ ಮನೋರಥಗಳೆಲ್ಲವೂ ಫಲಿಸುವವು.

ಬಸವೇಶವಿಜಯದಲ್ಲಿ ಐದನೆಯ ಅಧ್ಯಾಯವು
ಸಂಪೂರ್ಣವು.

---

## ಆರನೇ ಅಧ್ಯಾಯವು.

### ಗೋಪಿಕಾ ಸಮುದ್ಧರಣವು.

ಒಂದು ದಿನದಲ್ಲಿ ಬಸವೇಶನು ಒಡ್ಡೋಲಗದಲ್ಲಿರುವ ಬಿಜ್ಜಳರಾಯನ ಸಮೀಪದಲ್ಲಿ ಕುಳಿತಿರುವಾಗ; ಎಡಹುವದು ಮೊದಲಾದ ಕಾರಣದಿಂದ ಭೂಮಿಯಲ್ಲಿ ಬೀಳತಕ್ಕ ಜನವನ್ನು ತಡೆಯುವದಕ್ಕೆ ಪ್ರಯತ್ನಿಸಿದವನಂತೆ ತನ್ನ ಕೈಯನ್ನು ನೀಡಿದನು. ಎಲೈ ಬಸವೇಶನೇ ನೀನು ಬಹು ಸಂಭ್ರಮದಿಂದ ಕೈಯನ್ನು ನೀಡಿದೆಯಲ್ಲಾ ಇದೇನು ಹೇಳು, ಎಂದು ಬಿಜ್ಜಳರಾಯನಿಂದ ಕೇಳಲ್ಪಟ್ಟ ಬಸವೇಶನು ಆಗ ಸಭೆಯಲ್ಲಿ ತನ್ನ ವೈಭವವನ್ನು ಹೇಳಿದನು. ಏನೆಂದರೆ,--ಎಲೈ ರಾಯನೇ ಈ ಪಟ್ಟಣದಲ್ಲಿ ವಾಸಿಸುತ್ತಿರುವ ಒಬ್ಬ ಮಹಾತ್ಮನಾದ ಭಕ್ತನು ಪ್ರತಿದಿನವೂ ಕಪಿಲೇಶ್ವರನಿಗೆ ಸಾವಿರಕೊಡ ಹಾಲಿನಿಂದ ಅಭಿಷೇಕವನ್ನು ಮಾಡಿಸುತ್ತಾನೆ. ಆ ಕ್ಷೀರರಸವು ದಾರಿಯಲ್ಲಿ ಹರಿದು, ಕೆಸರೆದ್ದಿರಲು, ಒಬ್ಬ ಗೊಲ್ಲತಿಯು ಬರುತ್ತಾ, ಕಾಲುಜಾರಿ ಬೀಳುವ ಸಮಯದಲ್ಲಿ ಬಸವಾ, ನನ್ನನ್ನು

ಹಿಡಿದುಕೊಳ್ಳೆಂದು ನನ್ನ ಹೆಸರನ್ನು ಉಚ್ಚರಿಸಿದಳು. ಶಿವನು ತನ್ನ ಭಕ್ತರನ್ನು ಸಂರಕ್ಷಿಸುವದರಲ್ಲಿ ಆಸಕ್ತನಾಗಿದ್ದಾನೆ. ಆತನ ಭಕ್ತರು ಕೂಡ ಅಂಥಾ ಕಾರ್ಯದಲ್ಲಿಯೇ ಉದ್ಯೋಗವುಳ್ಳವರಾಗುತ್ತಾರೆ. ಆದ್ದರಿಂದ ನಾನು ವಿಶೇಷವಾದ ಭಕ್ತಿಭಾವನೆಯುಳ್ಳ ಆಸ್ತ್ರೀಯನ್ನು ಕೆಸರಿನಲ್ಲಿ ಜಾರುತ್ತಿರುವಾಗ ಕೈಯಿಂದ ಹಿಡಿದೆತ್ತಿದೆನು. ರಾಯನು ಆ ಮಾತನ್ನು ಕೇಳಿ, ಸಾಸಿವೆಯಷ್ಟು ಬಸ್ಮವನ್ನು ಧರಿಸಿದವನಿಗೆ ಕುಂಬಳಕಾಯಷ್ಟು ಭ್ರಾಂತಿಯು ಇರುವದೆಂಬ ಪರಿಹಾಸದ ಮಾತು ಸತ್ಯವೆಂದು ನಕ್ಕನು. ಮದದಿಂದ ಕೊಬ್ಬಿದ ರಾಯನು ಗರ್ವದೊಡನೆ ಕೂಡಿದ ತನ್ನ ಮಿತ್ರನೊಡನೆನಕ್ಕು, ಬೀದಿಗಳಲ್ಲಿ ಹುಡುಕಿ, ಆ ಗೊಲ್ಲತಿಯನ್ನು ಇಲ್ಲಿಗೆ ಕರದು ಕೊಂಡುಬನ್ನಿರೆಂದು ಕಂಚುಕಿಗಳಿಗೆ ಆಜ್ಞಾಪಿಸಿದನು. ಅವರು ರಾಯನ ಅಪ್ಪಣೆಯನ್ನು ಪಡೆದು, ಅತಿ ವೇಗದಿಂದ ಬೀದಿಗಳನ್ನು ಸುತ್ತಿ ಒಂದುಕಡೆ ಸಂಚರಿಸುತ್ತಿರುವ ಆ ಗೊಲ್ಲತಿಯನ್ನು ಕಂಡು, ರಾಯನಬಳಿಗೆ ಕರತಂದರು. ರಾಯನು ಹೆಗಲಿನಲ್ಲಿ ಮಜ್ಜಿಗೆಯ ಅಳಗೆಯನ್ನು ಹೊತ್ತಿರುವವಳಾಗಿಯೂ, ಕುಚಯುಗ್ಮದಲ್ಲಿ ಭಾರದಿಂದ ಬಳಲಿ ಅಲಸವಾದ ಗಮನವುಳ್ಳವಳಾಗಿಯೂ. ನಿಟ್ಟುಸಿರುಗಳನ್ನು ಬಿಡುವವಳಾಗಿಯೂ, ಬೆವರಿನ ಹನಿಗಳಿಂದ ಕೂಡಿದ ಮುಖಕಮಲವುಳ್ಳವಳಾಗಿಯೂ, ಅಲ್ಲಲ್ಲಿ ಮಜ್ಜಿಗೆಯ ಹನಿಗಳಿಂದ ಗುರ್ತುಮಾಡಲ್ಪಟ್ಟ ಅಂಚುಳ್ಳದ್ದಾಗಿಯೂ, ಒಂದೊಂದು ಕಡೆ ಕೆಸರಿನ ಹನಿಗಳ ಚಿಹ್ನೆಯುಳ್ಳದ್ದಾಗಿಯೂ, ಅರಳಿದ ತಾವರೆಯಂತೆ ಕೆಂಪಾಗಿಯೂ ಇರುವ ವಸ್ತ್ರವನ್ನು ಧರಿಸಿದವಳಾಗಿಯೂ, ಕೆನ್ನೈದಿಲೆಯಂತೆ ಪ್ರಕಾಶಿಸುವವಳಾಗಿಯೂ, ಶಂಖದ ಬಳೆಗಳನ್ನು ಧರಿಸಿದವಳಾಗಿಯೂ ಭಸ್ಮರೇಖೆಯಿಂದ ಚಿಹ್ನಿತವಾದ ಹಣೆಯುಳ್ಳವಳಾಗಿಯೂ, ರುದ್ರಾಕ್ಷಿಗಳಿಂದ ಮಾಡಲ್ಪಟ್ಟ ನಾನಾ ವಿಧವಾದ ಆಭರಣಗಳನ್ನು ಧರಿಸಿದವಳಾಗಿಯೂ, ತಲೆಯ ಕೂದಲುಗಳ ನಡುವೆ ಮೆರೆಯುವ ಜಡೆಯಲ್ಲಿ ಧರಿಸಲ್ಪಟ್ಟ ಶಿವಲಿಂಗದಿಂದ ಪವಿತ್ರವಾದ ಶಿರಸ್ಸುಳ್ಳವಳಾಗಿಯೂ ಒಂದೊಂದುಕಡೆ ಭವಿಗಳೊಡನೆ ಸಂಭಾಷಣೆಯಂ ಮಾಡಿದುದ್ದರಿಂದ ದೂಷ್ಯವಾದ ತನ್ನನಾಲಿಗೆಯನ್ನು ಬಸವನಾಮವೆಂಬ ಅಮೃತರಸಪ್ರವಾಹದಲ್ಲಿ ಮುಳುಗಿಸುವದರಿಂದ ಪರಿಹರಿಸಲ್ಪಟ್ಟ ದೋಷವುಳ್ಳದುನ್ನಾಗಿ ಮಾಡುವವಳಾಗಿಯೂ ಇರುವ ಆ ಸ್ತ್ರೀಯನ್ನು ನೋಡಿದನು. ಆಕೆಯು ಕೂಡ ಸಭಾಮಂಟಪದಲ್ಲಿ ಕುಳಿತಿರುವ ರಾಯನನ್ನುನೋಡಿ. ಮಜ್ಜಿಗೆಯ ಪಾತ್ರೆ

ಯನ್ನು ಹೆಗಲಿನಿಂದ ಇಳಿಸಿ, ಅದನ್ನೇ ರಾಯನಿಗೆ ಕಾಣಿಕೆಯಾಗಿ ಕೊಟ್ಟು ಅನಂತರದಲ್ಲಿ ಬಸವೇಶನಿಗೆ ಕೈಗಳನ್ನು ಮುಗಿದಳು. ರಾಯನು ಸೇವಕರಿಂದ ಕೇಳಿಸಲು, ಆಕೆಯು ಬೆಳಗಿನಿಂದ ಎದ್ದದ್ದು ಮೊದಲುಮಾಡಿಕೊಂಡು, ಹಗಲಲ್ಲಿ ನಡಿಸಿದ ತನ್ನ ಸಮಸ್ತ ವೃತ್ತಾಂತವನ್ನು ಕ್ರಮವಾಗಿ ಹೇಳುವದಕ್ಕೆ ಪ್ರಾರಂಭಿಸಿದಳು. ಪ್ರಾತಃಕಾಲದಲ್ಲಿ ಪೂಜ್ಯನಾದ ಶಿವನನ್ನು ಸೇವಿಸಿ, ಗೊಲ್ಲರಹೆಂಗಸರಿಂದ ಕೂಡಿದವಳಾಗಿ ನಮ್ಮ ಹಳ್ಳಿಯಿಂದ ಮಜ್ಜಿಗೆಯನ್ನು ಮಾರುವದಕ್ಕೋಸ್ಕರ ಸ್ವರ್ಗಕ್ಕೆ ಸಮಾನವಾದ ಈ ಪಟ್ಟಣಕ್ಕೆ ಬಂದೆನು. ಕ್ಷೀರಪ್ರವಾಹದಿಂದುಂಟಾದ ಕೆಸರಿನಿಂದ ಕೂಡಿರುವ ಈ ಪುರದ ಒಂದು ಬೀದಿಯನ್ನು ಪ್ರವೇಶಿಸಿ, ನಡುಗಿದ ಕಾಲುಗಳುಳ್ಳವಳಾಗಿ ಬೀಳುವದಕ್ಕುಪಕ್ರಮಿಸಲು, ಆಗ ಬಸವೇಶನು ಬಂದು ಕೈಯನ್ನುನೀಡಿ ಕಾಪಾಡಿದನು. ಹೀಗೆಹೇಳಿದ ಗೊಲ್ಲತಿಯಮಾತನ್ನು ಕೇಳಿದರಾಯನು ಎಲೈಸ್ತ್ರೀಯೇ! ಈ ಸಭೆಯಲ್ಲಿಯೇ ಕುಳಿತಿರುವ ಬಸವೇಶನು ಕೈಯನ್ನು ನೀದಿ, ಹ್ಯಾಗೆ ನಿನ್ನನ್ನು ರಕ್ಷಿಸಿದನು ಎಂದು ಕೇಳಲು, ಬುದ್ಧಿಸಂಪನ್ನೆಯಾದ ಆ ಗೋಪಿಯು ಹೇಳಿದಳು. ಏನೆಂದರೆ—

ವ್ಯಾಘ್ರಪುರಿಯೆಂಬ ಊರಿನಲ್ಲಿ ಪೊನ್ನಾಂಬಲನೆಂಬ ಒಬ್ಬ ಶಿವಭಕ್ತನಿದ್ದನು. ಅವನು ಪ್ರತಿದಿನದಲ್ಲೂ ಪರಮೇಶ್ವರನಿಗೆ ಸಾವಿರ ಪುಷ್ಪಗಳನ್ನು ಸಮರ್ಪಿಸುವ ನಿಯಮವನ್ನು ಹಿಡಿದು, ಅದರಲ್ಲಿ ಸ್ಥಿರವಾದ ಮನಸ್ಸುಳ್ಳವನಾಗಿದ್ದನು. ಅವನು ವಂದುದಿನ ತೋಟಕ್ಕೆಹೋಗಿ ಶಿವಪೂಜೆಗೆ ಯೋಗ್ಯಳಾದ ಹೂವುಗಳನ್ನು ಕೊಯ್ದುಕೊಂಡು ತನ್ನ ಊರನ್ನು ಕುರಿತು ಹಿಂತಿರಿಗಿ ಬರುತ್ತಿರುವಾಗ ಕೆಸರಿನಲ್ಲಿ ಕಾಲುಜಾರಲು, ಪೊನ್ನಾಂಬಲಪತಿಯಾದ ಪರಶಿವನೇ ಎಂದು ಉಚ್ಚರಿಸುತ್ತಾ ಬಿದ್ದನು. ಆಗ ಈಶ್ವರನು ಅವನ ದೀನಧ್ವನಿಯಿಂದ ರಸಗೊಳಿಸಲ್ಪಟ್ಟ ಹೃದಯವುಳ್ಳವನಾಗಿ ಬಂದು ಆತನನ್ನು ಹಿಡಿದುಕೊಂಡನು. ಆತನ ಭಕ್ತನಾದ ಬಸವೇಶ್ವರನು ಕೂಡ ಜಾರಿಬೀಳುವವನಾಗಿಯೂ, ತನ್ನ ಹೆಸರನ್ನು ವುಚ್ಚರಿಸಿದವಳಾಗಿಯೂ, ಇರುವ ನನ್ನನ್ನು ಹಿಡಿದನು. ಎಲೈ ಪ್ರಭುವೇ! ಉತ್ಕೃಷ್ಟವಾದ ಒಂದು ಕಥೆಯನ್ನು ಹೇಳುತ್ತೇನೆ. ಸಿದ್ಧರಾಮನೆಂಬ ಹೆಸರುಳ್ಳ ಶಿವಯೋಗಿಯು, ಶಿವನ ಏಕಾಂತ ಸಭಾಸ್ಥಲದ ನಡುವೆ ವಿಹರಿಸುವದೆಂಬ ಐಶ್ವರ್ಯ ವಿಶೇಷಕ್ಕೆ ಪಾತ್ರನಾಗಿದ್ದಾನೆ. ಆತನು ಬಾಲ್ಯದಲ್ಲಿಯೇ ಮಹಾಸ್ವಾಮಿಯಾದ ಶ್ರೀಶೈಲದ ಮಲ್ಲಿಕಾರ್ಜುನನ್ನು ತನ್ನ ಊರಿಗೆ ಕರತಂದನು. ಆಮೇಲೆ ಆಹಾರವನ್ನು ಬಿಟ್ಟು ಲಕ್ಷದ

ತೊಂಭತ್ತು ಶಿವಾಲಯುಗಳನ್ನು ಕಟ್ಟಿಸಿದನು. ಭೂಲೋಕವನ್ನೈದಿರುವ ಪ್ರಮಥರು ಒಂದುಕಾಲದಲ್ಲಿ ತಮ್ಮ ಬಳಿಗೈದಿದ ಮಹಾಸಾಮರ್ಥವಂತನಾದ ಆ ಯೋಗಿಯನ್ನು ಪೂಜಿಸಿ, ಅಯ್ಯಾ ಮಹಾತ್ಮನೇ! ಬಸವೇಶನು ಈ ಲೋಕದಲ್ಲಿ ಮಾತ್ರ ಇದ್ದಾನೋ? ಶಿವಲೋಕದಲ್ಲಿಯೂ ಇದ್ಧಾನೋ ಇಲ್ಲವೋ? ಹೇಳೆಂದು ಕೇಳಿದರು. ಆ ತಪಸ್ವಿಯು ಅವರ ಮಾತುಗಳನ್ನು ಕೇಳಿ ವಿಚಾರಿಸಿ ಹೇಳುವೆನೆಂದು ಅವರನ್ನು ಬಿಟ್ಟು ಸರ್ವರೂ ನೋಡುತ್ತಿರಲು, ಕಾರ್ಯಗೌರವದಲ್ಲಿ ಆದರ ಉಳ್ಳವನಾಗಿ ಉತ್ತರದಿಕ್ಕಿಗೆ ಮುಖವನ್ನು ಮಾಡಿಕೊಂಡು, ಯೋಗಬಲದಿಂದ ಮೇಲಕ್ಕೆ ಹೋದನು. ಮಿಂಚಿನಕಾಂತಿ ಪರಂಪರೆಯಿಂದ ವ್ಯಾಪ್ತವಾದ ಮೇಘ ಮಾರ್ಗವನ್ನು ಹೊಕ್ಕು ಹೆಜ್ಜೆಹೆಜ್ಜೆಗೂ ಗಗನಚಾರಿಗಳಾದ ದೇವತಗಳಿಂದ ನಮಸ್ಕರಿಸಲ್ಪಟ್ಟವನಾಗಿ ಕ್ಷಣಮಾತ್ರದಲ್ಲಿ ಕೈಲಾಸವನ್ನೈದಿದನು. ಶಿವನುಕೂಡ ಆ ಸಮಯದಲ್ಲೇ ವಿನಾಯಕ ಷಣ್ಮುಖರಿಂದಲೂ, ನಾನಾವಿಧ ವೇಷಗಳುಳ್ಳವರಾಗಿಯೂ, ನಾನಾಪ್ರಕಾರವಾದ ಮುಖಗಳೂ ಕಣ್ಣುಗಳೂ ಉಳ್ಳವರಾಗಿಯೂ, ಇರುವ ಪ್ರಮಥರಿಂದಲೂ ಆಶ್ರೈಸಲ್ಪಟ್ಟದ್ಧಾಗಿಯೂ ಇರುವ ನಿತ್ಯಸಭೆಯಲ್ಲಿದ್ದನು. ಆ ಶಿವಯೋಗಿಯು ಪ್ರಮಥರೊಡನೆ ಸಭಾಮಂಟಪವನ್ನೈದಿ, ಶಿವನನ್ನು ನಮಸ್ಕರಿಸಿ ಸ್ತುತಿಸಿ ಸ್ವಲ್ಪವಾಗಿ ಚಲಿಸುತ್ತಿರುವಹುಬ್ಬಿನ ತುದಿಯಿಂದ ತೋರಿಸಲ್ಪಟ್ಟ ಸ್ಥಳದಲ್ಲಿ ಕೈಗಳನ್ನು ಜೋಡಿಸಿಕೊಂಡು ಕುಳಿತನು. ಹಾಗೆಕುಳಿತುಕೊಂಡು ಸ್ವಲ್ಪವಾಗಿ ತುಟಿಯನ್ನು ಅಲ್ಲಾಡಿಸುತಿರುವದನ್ನು ನೋಡಿ, ಚಂದ್ರಶೇಖರನಾದ ಶಿವನು ತಿಳಿಸಬೇಕಾದ್ದೇನಿದೆ ಹೇಳು. ಎಂದು ಮಾತನಾಡುವದಕ್ಕೆ ಅವಕಾಶವನ್ನು ಕೊಡಲು, ಆ ತಪಸ್ವಿಯು ವಿಜ್ಞಾಪಿಸಿದನು. ಏನಂದರೆ–ಸ್ವಾಮಿಾ ಬಸವೇಶನು ಭೂತಲದಲ್ಲಿ ಮಾತ್ರ ಇದ್ದಾನೋ ನಿನ್ನ ಪಟ್ಟಣದಲ್ಲಿಯೂ ಇದ್ದಾನೋ ಎಂದು ಕೇಳಲು? ಈಶ್ವರನು ಆ ಶಿವಯೋಗಿಯ ವಚನವನ್ನು ಅತ್ಯಂತವಾಗಿ ಆದರಿಸಿ ಉತ್ತರವನ್ನು ಹೇಳಿದನು. ಏನಂದರೆ–ಆ ಬಸವೇಶನು ಭೂಲೋಕದಲ್ಲಿ ಮಾತ್ರವಲ್ಲ. ಸಕಲಲೋಕಗಳಲ್ಲಿಯೂ ಕಾಣಲ್ಪಡುತ್ತಾನೆ. ಅವನು ವೇದದ ಧರ್ಮವೆಂದು ಪ್ರಸಿದ್ಧನಾಗಿದ್ಧಾನಲ್ಲವೇ ಆದ್ದರಿಂದ ಅವನಿಲ್ಲದಿದ್ದರೆ ಈ ಲೋಕಗಳು ಹ್ಯಾಗಿದ್ದಾವು? ಧರ್ಮಸ್ವರೂಪನಾದ ಬಸವೇಶನನ್ನಾಶ್ರಯಿಸದ ವಿಷ್ಣುವು ರಾಕ್ಷಸಸೈನ್ಯಗಳನ್ನು ಜೈಸುತ್ತಾನೆ. ಆತನನ್ನು ಆಶ್ರೈಸಿದ ಬ್ರಹ್ಮನು ಪ್ರಪಂಚವನ್ನು ಸೃಷ್ಟಿಸುತ್ತಾನೆ. ಅವನೇ ನಾನು ಎಂದು ಹೇಳಿ, ತನ್ನಹೃದಯದಲ್ಲಿ ಇದ್ದ ಬಸವೇಶನನ್ನು ತೋರಿಸಿ

ದನು. ಶಿವನ ಹೃದಯಕಮಲದ ನಡುವೆ ಪದ್ಮಾಸನದಲ್ಲಿ ಕುಳಿತಿರುವವನಾಗಿಯೂ ಹಸ್ತದಲ್ಲಿಡಲ್ಪಟ್ಟ ಇಷ್ಟಲಿಂಗದಲ್ಲಿ ರೆಪ್ಪೆಗಳನ್ನು ಮುಚ್ಚದೆ ನಟ್ಟಿರುವ ದೃಷ್ಟಿಯುಳ್ಳವನಾಗಿಯೂ ಅವಿಚ್ಛಿನ್ನವಾಗಿ ಸುರಿಯುತ್ತಿರುವ ಆನಂದಬಾಷ್ಪಗಳಿಂದ ತೋಯಿಸಲ್ಪಟ್ಟವನಾಗಿಯೂ, ಪರಿಶುದ್ಧವಾದ ಭಸ್ಮದಿಂದ ಶುಭ್ರನಾಗಿಯೂ, ಅನೇಕವಿದ ರುದ್ರಾಕ್ಷಗಳಿಂದ ಅಲಂಕರಿಸಲ್ಪಟ್ಟವನಾಗಿಯೂ, ಜಡೆಗಳಿಂದ ಕೂಡಿದವನಾಗಿಯೂ ರೋಮಾಂಚಗಳಿಂದ ತುಂಬಿದ ದೇಹವುಳ್ಳವನಾಗಿಯೂ, ಒಂದೇ ಕೈಯನ್ನು ಮುಗಿದುಕೊಂಡವನಾಗಿಯೂ ಇರುವ ಬಸವೇಶನನ್ನು ಪಾರ್ವತಿಯುನೋಡಿ, ಆಶ್ಚರ್ಯಪಟ್ಟಳು. ಪ್ರಖ್ಯಾತಕಾರ್ಯನಾದ ಆ ಸಿದ್ಧರಾಮಯೋಗಿಯೂ, ಅತನೊಡನೆ ಬಂದಿದ್ದ ಪ್ರಮಥರೆಲ್ಲರೂ ಬೆರಗಾದರು ಮೂರುಲೋಕಗಳ ಅಧಿಪತ್ಯವು ನನ್ನಲ್ಲಿದೆ. ಮೂರುಲೋಕಗಳ ಪಾಲನ ಕರ್ತೃತ್ವವು ಈತನಲ್ಲಿ ಇಧೆ. ತ್ರಿಭುವನದ ಸಂಹಾರಕಾರ್ಯವು ನನ್ನಲ್ಲಿಇಧೆ. ತ್ರಿಭುವನದ ರಕ್ಷಣೆಯು ಈತನಲ್ಲಿ ಇಧೆ. ನಾನು ಭಕ್ತಿವಂತರ ಹೃದಯಗಳಲ್ಲಿ ಮಾಡಲ್ಪಟ್ಟ ಪ್ರೀತಿಯುಳ್ಳವನಾಗಿದ್ಧೇನೆ. ಈತನಾದರೊ ಭಕ್ತಿಯೆಂಬ ಮುತ್ತನ್ನುಸಂಪಾದಿಸಿದ್ದಾನೆ ನಾನು ಭಕ್ತದೇಹಿಕನಾಗಿದ್ದೇನೆ. ಈತನು ಭಕ್ತರಪ್ರಾಣವಾಗಿದ್ಧಾನೆ. ನಾನು ಯಾವಾಗಲೂ ಸ್ಥಿರಲಿಂಗಮೂರ್ತಿಯಾಗಿದ್ಧೇನೆ. ಈತನು ಯಾವಾಗಲೂ ಜಂಗಮಲಿಂಗಸ್ವರೂಪನಾಗಿದ್ಧಾನೆ. ಪ್ರಮಥರು ನನ್ನನ್ನು ಶಂಭುವೆಂದು ಹೇಳುತ್ತಾರೆ. ಈ ಬಸವೇಶನನ್ನು ದ್ವಿತೀಯಶಂಭುವೆಂದು ಹೇಳುತ್ತಾರೆ. ನನ್ನ ಪಾದಕಮಲಗಳನ್ನು ಸೇವಿಸುವದರಿಂದ ಬಹುಕಾಲಕ್ಕೆ ಸಂಸಾರನಾಶಕವಾದ ಭಕ್ತಿಯು ಹುಟ್ಟುಪದು. ಈ ಬಸವೇಶನ ನಾಮಾಕ್ಷರಗಳನ್ನು ಉಚ್ಚರಿಸಿದ ಮಾತ್ರದಿಂದಲೇ ಪರಿಶುದ್ಧವಾದ ಭಕ್ತಿಯು ಪ್ರಕಾಶಿಸಲ್ಪಡುತ್ತದೆ. ನನ್ನಭಕ್ತರು, ನನಗೆ ದೇಹ, ಮನಸ್ಸು, ದ್ರವ್ಯ, ಧಾನ್ಯಇವುಗಳನ್ನು ಕೊಡುತ್ತಾರೆ. ಈತನು ಸಂತೋಷದಿಂದ ತನ್ನ ದೇಹಮುಂತಾದುದನ್ನು ಯಾವಾಗಲೂ, ಭಕ್ತರ ಕೈವಶಮಾಡುತ್ತಾನೆ. ಈ ರೀತಿಯಾಗಿ ಶ್ಲಾಘಿಸಿದ ಪರಶಿವನು ಎಲೈ ಬಸವೇಶನೇ ನಿನಗೆ ಭೂತಲವು ಸುಖಕರವಾಗಿದೆಯೋ ? ಅಲ್ಲಿ ಭಕ್ತನು ಇದ್ಧಾನೆಯೋ ? ಹೇಳೆಂದು ತಿಳಿಸಲು, ಬಸವೇಶನು ಶರಣಾರ್ಥಿಯೆಂದು ನಮಸ್ಕರಿಸಿ ಹೇಳಿದನು. ಏನಂದರೆ—ಪಾತಾಳವಾಗಲಿ, ಸ್ವರ್ಗವಾಗಲಿ, ಭೂಲೋಕವಾಗಲಿ, ಸಂಸಾರನಾಶದಲ್ಲಿ ಸಮರ್ಥವಾದ ಜಂಗಮಪ್ರಸಾದಾನುಭವವು ನನಗೆ ಎಲ್ಲಿದೊರೆಯುವದೋ ಆಸ್ಥಲವು ನನಗೆ ಸುಖಕರವಾ

ಗಿಯೇ ಇರುವದು. ನಿನ್ನಪಾದಕಮಲದಲ್ಲಿ ಭಕ್ತಿಯುಳ್ಳ ಪುರುಷನು ನನ್ನಕಣ್ಣಿಗೆ ನಿನ್ನ ಆಕಾರವುಳ್ಳವನಾಗಿಯೇ ಕಾಣಿಸುವದರಿಂದ ಭೂಮಿಯಲ್ಲಿ ನಾನು ಹೊರತು ಇನ್ನೊಬ್ಬಭಕ್ತನೂಕಾಣಲ್ಪಡುವದಿಲ್ಲ. ಎಲೈ ಪರಶಿವನೇ ನಿನ್ನ ಭಕ್ತರವಾಸಸ್ಥಳದಲ್ಲಿ ವಿಹರಿಸುವ ಹುಳು, ಚಿಟ್ಟೆ, ಹಕ್ಕಿ ಮೊದಲಾದ ಪ್ರಾಣಿಗಳಲ್ಲಿ ಹುಟ್ಟುವದು ಕೂಡ ನನಗೆ ಇಷ್ಟವು. ಈ ರೀತಿಯಾಗಿ ಹೇಳಿಬಸವೇಶನು ಸುಮ್ಮನಾದನು. ಅನಂತರದಲ್ಲಿ ಆ ಶಿವಯೋಗಿಯು ಶಿವನ ಹೃದಯಕಮಲದಲ್ಲಿ ಪ್ರಕಾಶಿಸುವಹಾಗೆ ಪ್ರಮಥರ ಹೃದಯಗಳಲ್ಲಿಯೂ, ತನ್ನ ಮನಸ್ಸಿನಲ್ಲಿಯೂ ನೋಡಿ ಶಿವನಿಂದ ಬೀಳ್ಕೊಂಡು, ಭೂಲೋಕವನ್ನೈದಿದನು. ಅಲ್ಲಿರುವಭಕ್ತರು ಅತ್ಯಾಶ್ಚರ್ಯಕರವಾದ ಸಿದ್ಧರಾಮಯೋಗಿಯ ವಚನವನ್ನು ಕೇಳಿ, ತಮ್ಮತಮ್ಮ ಮನಸ್ಸುಗಳಲ್ಲಿ ಬಸವೇಶನನ್ನು ಭಾವಿಸಿ, ಮನೆಯ ಅಂಗಳದಲ್ಲಿ ನಿಧಿಯು ದೊರಕಿದಂತೆ ಅಪರಿಮಿತವಾದ ಆನಂದವನ್ನನುಭವಿಸಿದರು. ಎಲೈ ರಾಜನೇ ಬಸವೇಸನ ಮಹಿಮೆಯು ಮೂರುಲೋಕಗಳಿಂದಲೂ ಶ್ಲಾಘಿಸಲ್ಪಡುವದಕ್ಕೆ ಯೋಗ್ಯವಾದದ್ದು, ಅಮೊಲ್ಯವಾದದ್ದು, ಆಶ್ಚರ್ಯಕರವಾದದ್ದು, ಆಗಿದೆ. ಇಂತಾ ಮಹಾತ್ಮನು ದಾರಿಯಲ್ಲಿ ನನ್ನ ಕಾಲು ಜಾರುವಾಗ ನನ್ನನ್ನುಹಿಡಿದು ನಿಲ್ಲಿಸಿದ್ದನ್ನು ಯಾಕೆ ಆಶ್ಚರ್ಯವೆಂದುಹೇಳುತ್ತೀಯೆ ಹೀಗೆ ಆ ಗೊಲ್ಲತಿಯುಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿಯೂ, ಪುರಾಣಗಳಲ್ಲಿ ಮತ್ತು ಅನೇಕಾಗಮಗಳಲ್ಲಿ ಪ್ರಖ್ಯಾತವಾಗಿಯೂ, ಇರುವ ಬಸವೇಶನ ಮಹಿಮೆಯನ್ನು ಬಿಜ್ಜಳರಾಯನ ಸಭೆಯಲ್ಲಿ ಪ್ರಕಾಶಪಡಿಸಿ ಸುಮ್ಮನಾದಳು. ಈ ಪ್ರಕಾರವಾಗಿ ಬಸವೇಶನ ಕಥೆಯನ್ನು ಹೇಳಿದ ಆ ಗೊಲ್ಲತಿಯನ್ನು, ಬಸವೇಶನನ್ನೂ, ರಾಯನು ವಿಶೇಷವಾದ ವಸ್ತ್ರಗಳಿಂದಲೂ, ರತ್ನಾಭರಣಗಳಿಂದಲೂ, ಸತ್ಕರಿಸಿ. ಸ್ನಾನವೇಳೆಯನ್ನು ಸೂಚಿಸುವ ಮಧ್ಯಾಹ್ನ ಶಂಖಧ್ವನಿಯನ್ನು ಕೇಳಿತನ್ನ ಸಭೆಯನ್ನುಬಿಟ್ಟು ಎದ್ದನು.

ಬಸವೇಶವಿಜಯದಲ್ಲಿ ಅರನೆಯ ಅಧ್ಯಾಯವು
ಸಂಪೂರ್ಣವು.

# ಏಳನೇ ಅಧ್ಯಾಯವು.

ಒಂದಾನೊಂದುದಿನದಲ್ಲಿ ಬಸವೇಶನು ದ್ರವ್ಯವನ್ನು ನೋಡುವುದರಲ್ಲಿ ಆಸಕ್ತನಾಗಿ, ಸಮರ್ಥರಾದ ಹನ್ನೆರಡುಮಂದಿ ಕೋಶಾಧಿಕಾರಿಗಳೊಡನೆ ಬೊಕ್ಕಸವನ್ನೈದಿ, ಗಣಕರ ಮುಖದಿಂದ ದ್ರವ್ಯದ ಲೆಕ್ಕವನ್ನು ಕೇಳಿ, ಮುಂಚಿನಂತೆ ಪೆಟ್ಟಿಗೆಗಳಲ್ಲಿ ತುಂಬಿಸಿ, ತನ್ನ ಮುದ್ರೆಯುಂಗರದಿಂದ ಮುದ್ರೆಗೈಸುತ್ತಿರುವಷ್ಟರೊಳಗೆ ಒಬ್ಬ ಯಾಚಕನಾದ ಜಂಗಮನು ಬಂದು, ಯಾಚಿಸಲು, ಬಹು ಪ್ರೀತಿಯಿಂದ ಆತನಿಗೆ ಅಪರಿಮಿತವಾದ ದ್ರವ್ಯವನ್ನು ಕೊಟ್ಟನು. ಆತನು ಅದನ್ನು ತೆಗೆದುಕೊಂಡುಹೋಗಲು, ಉಳಿದ ಅಧಿಕಾರಿಗಳು ಕೋಪಗೊಂಡವರಾಗಿ, ಬಸವೇಶನ ಸ್ವಾತಂತ್ರ್ಯವನ್ನು ಬಿಜ್ಜಳರಾಯನಿಗೆ ತಿಳಿಸಿದರು. ಬಿಜ್ಜಳರಾಯನು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ, ಬಸವೇಶನನ್ನು ಕರೆಸಿ ಹೇಳಿದ್ದೇನಂದರೆ;—ಅಯ್ಯಾ ಮಂತ್ರಿಯೇ ನನ್ನ ಧನವನ್ನೆಲ್ಲಾ ಸಿಕ್ಕಿದವರಿಗೆ ಕೊಟ್ಟು, ದಾನಿಗಳೊಳಗೆ ಅಗ್ರೇಸರನಾದೆ. ಯಾವ ರಾಯನು ಮಂತ್ರಿಗಳಿಗೆ ಸ್ವಾತಂತ್ರ್ಯವನ್ನು ಕೊಡುತ್ತಾನೋ ಅವನು ಕೆರಳಿದ ಆನೆಯನ್ನುಹತ್ತಿದವನಂತೆ ಕೆಡುತ್ತಾನೆ. ಈರೀತಿಯಾಗಿ ಹೇಳಿದ ರಾಯನ ಮಾತನ್ನು ಬಸವೇಶನು ಕೇಳಿ ಹೇಳಿದ್ದೇನಂದರೆ; ಎಲೈ ಭೂಪತಿಯೇ ಯಾವಕಾರ್ಯವನ್ನಾದರೂ ವಿಚಾರವಿಲ್ಲದೆ ಮಾಡಬಾರದು. ಶಿವಭಕ್ತಿ ಎಂಬ ಕ್ಷೀರಸಮುದ್ರವೂ, ಶಿವಭಕ್ತಿ ಎಂಬ ಕಲ್ಪವೃಕ್ಷವೂ ಇರುವಲ್ಲಿ ಭಕ್ತನಾದವನಿಗೆ ಪರದ್ರವ್ಯದಲ್ಲಿ ಅಪೇಕ್ಷೆಯು ಹ್ಯಾಗುಂಟಾದೀತು? ಮಾವಿನ ಚಿಗುರನ್ನು ಆಸ್ವಾದಿಸುವದರಿಂದ ಒಗರಾದ ಗಂಟಲುಳ್ಳ ಮಯೂರವು ಒಣಗಿದ ಬಿದುರಿನ ಒಡಕೆಲೆಗಳನ್ನು ತಿನ್ನುವುದೇ? ಕ್ಷೀರಸಮುದ್ರದ ತೆರೆಯೊಳಗೆ ವಿಹರಿಸುವವರಿಂದ ಸಂತುಷ್ಟವಾದ ಹೃದಯವುಳ್ಳ ರಾಜಹಂಸವು ಬಗ್ಗಡವಾದನೀರುಳ್ಳ ಅಲ್ಪ ಸರೋವರದಲ್ಲಿ ಸಂಚರಿಸುತ್ತದೆಯೇ? ಶರತ್ಕಾಲದಲ್ಲಿ ನಿರ್ಮಲವಾದ ಚಂದ್ರನ ಬೆಳದಿಂಗಳಲ್ಲಿ ಪೂರ್ಣವಾದ ಕುತೂಹಲವುಳ್ಳ ಚಕೋರಪಕ್ಷಿಯು ವಿಸ್ತೀರ್ಣವಾದ ಅಂಧಕಾರಪರಂಪರೆಯನ್ನು ಗ್ರಹಿಸುತ್ತದೆಯೇ ಏನು? ಅದಂತಿರಲಿ, ಬೊಕ್ಕಸದಲ್ಲಿರತಕ್ಕ ದ್ರವ್ಯವನ್ನು ವಿಚಾರಿಸು, ಲೆಕ್ಕದಲ್ಲಿ ಇರುವುದಕ್ಕಿಂತ

ಸ್ವಲ್ಪವಾದರೂ ಕಡಿಮೆಯಾದರೆ ನಾನು ಭಕ್ತನಲ್ಲ. ನಾನು ಆ ತಪಸ್ವಿಗೆ ಯಾವ ಧನವನ್ನು ಕೊಟ್ಟೆನೋ ಅದು ಆವನದು. ನಾನು ರಾಜದ್ರವ್ಯವನ್ನು ಹ್ಯಾಗೆ ಕೊಟ್ಟೇನೂ? ಆತನು ಹ್ಯಾಗೆ ತೆಗೆದುಕೊಂಡಾನು? ಬಿಜ್ಜಳರಾಯನು ಆ ಬಸವೇಶನ ಮಾತಿಗೆ ಒಪ್ಪಿಕೊಂಡು, ಗಣಕರನ್ನು ಕರಸಿ, ಹಣ ತುಂಬಿದ ಪೆಟ್ಟಿಗೆಗಳನ್ನು ತರಿಸಿ, ಲೆಕ್ಕದಲ್ಲಿರುವಷ್ಟು ಧನವಿರುವುದೋ ಇಲ್ಲವೋ ಎಂದು ಪರೀಕ್ಷಿಸುವುದಕ್ಕೋಸ್ಕರ ಪೆಟ್ಟಿಗೆಗಳ ಬೀಗವನ್ನು ತೆಗಿಸಿ, ಮೊದಲಿಗಿಂತಲೂ ಹೆಚ್ಚಾಗಿರುವುದನ್ನು ನೋಡಿ, ಆಶ್ಚರ್ಯಪಟ್ಟು; ಬಸವೇಶನ ದ್ವೇಷಿಗಳಾದ ದುರಾತ್ಮರೆಲ್ಲರನ್ನು ಕುರಿತು ಕೋಪಿಷ್ಠನಾಗಿ ಕರ್ಣಕಠೋರವಾದ ಮಾತುಗಳನ್ನಾಡಿ, ಅವರನ್ನು ಅಧಿಕಾರದಿಂದ ತೆಗೆದು, ಇನ್ನುಮೇಲೆ ಯಾವನು ನನ್ನಮುಂದೆ ಬಸವೇಶನನ್ನು ಕುರಿತು ಈ ವಿಧವಾದ ಚಾಡಿಯಮಾತನ್ನು ಹೇಳುವನೋ ಅವನ ನಾಲಿಗೆಯನ್ನು ಕತ್ತರಿಸುವೆನು. ಎಂದು ಆಜ್ಞಾಪಿಸಿ, ಬಸವೇಶನನ್ನು ಸತ್ಕರಿಸಿ, ಕಳುಹಿಸಿ, ತಾನೂಕೂಡ ನರ್ಮಸಖರೊಡನೆ ಅಂತಃಪುರವನ್ನು ಪ್ರವೇಶಿಸಿದನು.

ಒಂದಾನೊಂದುಸಮಯದಲ್ಲಿ ಒಬ್ಬ ವೇಶ್ಯೆಯ ದಾಸಿಯು ತನ್ನ ಒಡೆಯನಾದ ಜಂಗಮನು ಕೊಡತಕ್ಕ ವೇತನವನ್ನು ತೆಗೆದುಕೊಳ್ಳುವುದಕ್ಕಾಗಿ ಬಸವೇಶನ ಮನೆಗೆಹೋಗಿ, ಮುಂಜೆ ತಾನು ಗಂಗಾಂಬಿಕೆಯುಟ್ಟುಕೊಂಡಿದ್ದ, ಆಶ್ಚರ್ಯಕರವಾದ ಸೀರೆಯನ್ನು ನೋಡಿಬಂದು, ತನ್ನ ಒಡತಿಗೆ ತಿಳಿಸಲು, ಆಕೆಯು ಆ ಸೀರೆಯಲ್ಲಿ ಆಶೆಯುಳ್ಳವಳಾಗಿ, ಅದನ್ನು ಶೀಘ್ರದಲ್ಲಿ ತರುವುದಕ್ಕೋಸ್ಕರ ತನ್ನ ನಾಯಕನಾದ ಜಂಗಮನನ್ನು ಕಳುಹಿಶೆದಳು. ಆ ಜಂಗಮನು ಬಂದು, ಅ ವಸ್ತ್ರವನ್ನು ಕೊಡಬೇಕೆಂದು ಬಸವೇಶನನ್ನು ಬೇಡಲು; ಬಸವೇಶನು ಗಂಗಾಂಬಿಕೆಯನ್ನು ತನ್ನ ಸಮೀಪಕ್ಕೆ ಕರೆಸಿ, ಆಕೆಯುಟ್ಟಿದ ಸೀರೆಯನ್ನು ಬಿಚ್ಚಲುದ್ಯುಕ್ತನಾಗಿ ಸಭಾಮಧ್ಯದಲ್ಲಿ ಮುಟ್ಟಿದ ಮಾತ್ರದಿಂದಲೇ ಅಕ್ಷಯವಾಗಿ ಬೆಳದ ಆ ವಸ್ತ್ರವನ್ನು ಪ್ರಮಾಣಕ್ಕೆ ಸರಿಯಾಗಿ ಹರಿದು ಹರಿದು ಒಂದು ಕಡೆಗೆ ಹಾಕಲು, ಅದು ರಾಶಿಯಾಗಿ ಬಿದ್ದಿತು. ಅವುಗಳೊಳಗೆ ಅನೇಕವಾದ ಪಟ್ಟೇಸೀರೆಗಳನ್ನು ಆ ಜಂಗಮನಿಗೆ ಕೊಟ್ಟನು. ಆಗ ಆ ವಸ್ತ್ರರಾಶಿಯನ್ನು ನೋಡಿದ ಸಭಾಜನಗಳು ಅತ್ಯಾಶ್ಚರ್ಯವನ್ನು ಹೊಂದಿದರು. ಮೇಘದಿಂದೊಂದು ಹನಿಯನ್ನು ಯಾಚಿಸಿದ ಚಾತಕಪಕ್ಷಿಯು ಅನೇಕ ಧಾರೆಗಳನ್ನು ಪಡೆಯುವಂತೆ, ಬಸವೇಶನಿಂದ ಒಂದು ವಸ್ತ್ರವನ್ನು ಯಾಚಿಸಿದ ಜಂಗಮನು ಅನೇಕ ವಸ್ತ್ರಗಳನ್ನು ಪಡೆದನು. ಗಂಗಾಂ

ಬಿಕೆಯು ಅತ್ಯಂತ ಸಂತೋಷದಿಂದ ಕೂಡಿದವಳಾಗಿ, ಯಥಾಪ್ರಕಾರ ಅಂತಃಪುರಕ್ಕೈದಿದಳು. ಆಗ ಭಕ್ತರು ಶಿವನೆಂಬ ಮಹಾನಿಧಿಗೆ ಆಶ್ರಯನಾದ ಬಸವೇಶನನ್ನು ಚಿತ್ರವಸ್ತ್ರಗಳನ್ನು ಕೊಡುವದರಿಂದುಂಟಾದ ಸ್ತೋತ್ರಗಳಿಂದ ಸಂತುಷ್ಟನನ್ನು ಮಾಡಿದರು. ಈ ಪ್ರಕಾರವಾಗಿ ಚನ್ನಬಸವನಿಂದ ಕೂಡಿದ ಬಸವೇಶನು ಶಿವನ ಅಪ್ಪಣೆಯನ್ನು ಪ್ರಕಾಶಪಡಿಸುತ್ತಾ; ವಿರೋಧಿ ಮತವನ್ನಡಗಿಸುತ್ತಾ, ಭಕ್ತ, ಮಾಹೇಶ ಮೊದಲಾದ ಆರು ಸ್ಥಳಗಳಲ್ಲಿ ವಿಶೇಷವಾಗಿ ಸಂಚರಿಸುವ ಮಹಾ ಪುರುಷರು ಇಷ್ಟಾರ್ಥವನ್ನು ನೆರವೇರಿಸುತ್ತಾ ಇದ್ದನು.

ಬಸವೇಶವಿಜಯದಲ್ಲಿ ಏಳನೆಯ ಅಧ್ಯಾಯವು
ಸಂಪೂರ್ಣವು.

---

## ಎಂಟನೇ ಅಧ್ಯಾಯವು.

ಆ ಬಳಿಕ ಅಪರಿಮಿತವಾದ ತೇಜಸ್ಸುಳ್ಳ ಆ ಬಸವೇಶನ ಮುಂದೆ ಅಲ್ಪ ತೇಜಸ್ಸಿನಿಂದ ಕೂಡಿದ ನಾನು ಎಷ್ಟು ಮಾತ್ರದವನು ಎಂದು ಆಲೋಚಿಸಿಯೋ ಎಂಬಂತೆ ಸೂರ್ಯನು ಅಧೋಮುಖನಾದನು. ಚಂಡಕಿರಣನಾದ ಸೂರ್ಯನು, ತೇಜಸ್ಸಮೂಹವನ್ನು ಎಳೆದುಕೊಂಡು, ಸಂಧ್ಯಾನಟನಾದ ಪಾರ್ವತೀಪತಿಗೆ ನಾಟ್ಯ ವೇಳೆಯನ್ನು ಕೊಡುತ್ತಾನೋ ಎಂಬಂತೆ ಪಶ್ಚಿಮಾಚಲವನ್ನು ಸೇರಿದನು. ಪಶ್ಚಿಮ ಸಮುದ್ರದಲ್ಲಿ ತೇಲುತ್ತಿರುವ ಸೂರ್ಯಬಿಂಬವು, ಕಾಲನಿಬಂಧನೆಯನ್ನು ತಿಳಿಯುವದಕ್ಕಾಗಿ, ಬ್ರಹ್ಮನು ಮಡಗಿದ ತಾಮ್ರದಗಳಿಗೆ ವಟ್ಟಲೋ ಎಂಬಂತೆ ಕಾಣಿಸಿತು. ಚಕ್ರವಾಕ ಪಕ್ಷಿಗಳಿಗೆ ಪರಸ್ಪರ ವಿಯೋಗದಲ್ಲಿ ಉಂಟಾದ ದುಃಖಧ್ವನಿಯನ್ನು ಕೇಳುವದಕ್ಕೆ ಅಸಮರ್ಥನಾದನೋ ಎಂಬಂತೆ ಸೂರ್ಯನು ಸಮುದ್ರದಲ್ಲಿ ಮುಳುಗಿದನು. ಋಷೀಶ್ವರರಿಂದ ನಮಸ್ಕರಿಸಲ್ಪಡುವ ಸಂಜೆಯು, ಆಕಾಶವೆಂಬ ಸಮುದ್ರದಲ್ಲಿ ಹುಟ್ಟಿ ಹಬ್ಬಿಕೊಂಡ ಹವಳದ ಬಳ್ಳಿಯೋ ಎಂಬಂತೆ ತೋರಿತು. ಪಶ್ಚಿಮಾದ್ರಿಯ ಶಿಖರದಲ್ಲಿ ನಿಶ್ಚಲವಾದ ಸಂಧ್ಯಾರೇಖೆಯು, ಕುಸುಂಬೇ ಬಣ್ಣದ

ಮನ್ಮಥನ ಧ್ವಜಪಟವನ್ನು ತಿರಸ್ಕರಿಸಿತು. ಭಕ್ತರು ಶಿವಾರ್ಚನೆಯಲ್ಲಿ ಹಾಕುವ ಧೂಪದ ಹೊಗೆಯಿಂದ ವೃದ್ಧಿಹೊಂದಿದಂಥ, ಹೊಂಗೆಯ ಹೂವಿನಂತೆ ಕಪ್ಪಾದ ಕಾಂತಿಯುಳ್ಳಂಥ, ಅಂಧಕಾರ ಪರಂಪರೆಯು ಪ್ರಕಾಶಿಸಿತು. ಅನಂತರದಲ್ಲಿ ನಕ್ಷತ್ರಗಳು ಸಾಯಂಕಾಲದೊಡನೆ ಕ್ರೀಡಿಸುತ್ತಿರುವ ಆಕಾಶಲಕ್ಷ್ಮಿಯ ರತ್ಯಾಯಾಸದಿಂದುಂಟಾದ ಸ್ವೇದೋದಕದ ಹನಿಗಳೋ ಎಂಬಂತೆ ಪಕಾಶಿಸಿದವು. ಮತ್ತು ಅಂಧಕಾರದಿಂದ ಕಪ್ಪಾದ ಅಂತರಿಕ್ಷದಲ್ಲಿ ಉದಯಿಸಿದ ನಕ್ಷತ್ರಗಳು ಕಾಲನೆಂಬ ಪುರುಷನಿಂದ ಚೆಲ್ಲಲ್ಪಟ್ಟ ಬೆಳುದಿಂಗಳ ಬೀಜಗಳೋ ಎಂಬಂತೆ ಶೋಭಿಸಿದವು. ಅನಂತರದಲ್ಲಿ ಪಾಪರಹಿತನಾಗಿಯೂ, ಗುರುವಿನಿಂದ ತೋರಿಸಲ್ಪಟ್ಟ ಮೋಕ್ಷಮಾರ್ಗದಲ್ಲಿ ಕುಶಲನಾಗಿಯೂ, ಲೌಕಿಕ ವ್ಯಾಪಾರಗಳಲ್ಲಿ ಮುಗ್ಧನಾಗಿಯೂ ಇರುವ ಸಂಗಯ್ಯನೆಂಬ ಭಕ್ತನು ಬಸವೇಶನನ್ನು ಕಾಣುವದಕ್ಕಾಗಿ ಬಂದನು. ಬಸವೇಶನು ಆ ತಪಸ್ವಿಯನ್ನು ಪಾದ್ಯ ಮೊದಲಾದ ಪೂಜಾ ದ್ರವ್ಯಗಳಿಂದ ಭಕ್ತಿಪೂರ್ವಕವಾಗಿ ಸತ್ಕರಿಸಿದನು. ಆ ಮುಗ್ಧಸಂಗಯ್ಯನು ಸಂತೋಷಪಟ್ಟವನಾಗಿ ಬಸವೇಶನಿಂದ ಕೊಡಲ್ಪಟ್ಟ ಪೀಠದಲ್ಲಿ ಕುಳಿತುಕೊಂಡವನಾಗಿ, ಕರ್ಪೂರ, ವೀಳೆಯಗಳನ್ನೂ, ಗಂಧಪುಷ್ಪಗಳನ್ನೂ ತೆಗೆದುಕೊಂಡು ಹೋಗುವ ಯೌವನಸ್ಥರಾದ ಕೆಲವು ತಪಸ್ವಿಗಳನ್ನು ನೋಡಿ, ವೇಶ್ಯಾಗಮನವು ವಿಶೇಷವಾದ ಪೂಜೆಯೆಂದೆಣಿಸಿ ಅವರ ಕೂಡ ವೇಶ್ಯಾಗೃಹಕ್ಕೆ ಹೋಗುವೆನೆಂದು ಬಸವೇಶನನ್ನು ಕೇಳಿದನು. ಬಸವೇಶನು ಮುಗುಳ್ನಗೆಯೊಡನೆ ಹಾಗೇ ಆಗಲೆಂದು ಒಬ್ಬ ಭೃತ್ಯನೊಡನೆ ವೇಶ್ಯಾಗೃಹವನ್ನು ಕುರಿತು ಕಳುಹಿಸಿಕೊಟ್ಟನು. ಆ ಮುಗ್ಧಸಂಗಯ್ಯನು ವೇಶ್ಯಾಗಮನದಲ್ಲಿ ಆಸಕ್ತನಾಗಿ, ಆ ಭೃತ್ಯನಿಂದ ತೋರಿಸಲ್ಪಟ್ಟ ಮಾರ್ಗದಲ್ಲಿ ಆತನ ಕೈಲಾಗಿನಿಂದ ವೇಶಾಗೃಹಕ್ಕೈದಿದನು. ಆಗ ಚಲಿಸುತ್ತಿರುವ ಮುಂಗುರುಗಳುಳ್ಳವಳಾಗಿಯೂ, ಹಣೆಯಲ್ಲಿ ತ್ರಿಪುಂಡ್ರವನ್ನು ಧರಿಸಿದವಳಾಗಿಯೂ ಇದ್ದ ಒಬ್ಬ ಗಣಿಕಾಂಗನೆಯು, ದೇಹವನ್ನು ಧರಿಸಿದ ಮನ್ಮಥನ ಅಸ್ತ್ರಾಭಿಮಾನಿದೇವತೆಯೋ ಎಂಬಂತೆ ಸಖಿಯರಿಂದ ಬಳಸಲ್ಪಟ್ಟವಳಾಗಿ, ಆತನ ಇದಿರಿಗೆ ಬಂದು, ಬೆನ್ನುಕಾಣುವಂತೆ ಬಗ್ಗಿ ನಮಸ್ಕರಿಸಿ, ಆತನಿಂದ ಕೊಡಲ್ಪಟ್ಟ ಭಸ್ಮವನ್ನು ಹಣೆಯಲ್ಲಿ ಧರಿಸಿದವಳಾಗಿ ಆತನ ಭೃತ್ಯವನ್ನು ಕಳುಹಿಸಿಬಿಟ್ಟು, ತಾನೇ ಕೈಲಾಗವನ್ನು ಕೊಟ್ಟು ಮುಗ್ದಸಂಗಯ್ಯನನ್ನು ತನ್ನ ಮನೆಗೆ ಕರತಂದು, ಪಾದಪೂಜೆಯಂಮಾಡಿ, ಚೆಲ್ಲಿರುವ ಪುಷ್ಪಗಳಲ್ಲಿ ಆಸಕ್ತಳಾದ ಭ್ರಮರಗಳ ಝುಂಕಾರ

ಗಳಿಂದ ಮನೋಹರಗಳಾದ ಸೋಪಾನ ಪಙ್ತಿಗಳಿಂದ ಉಪ್ಪರಿಕೆಯನ್ನೇರಿಸಿದಳು. ಅಲ್ಲಿರುವ ಕೇಳಿಕಾಗೃಹದಲ್ಲಿ ಮುಗ್ಧಸಂಗಯ್ಯನು ಸೊಳ್ಳೇತೆರೆಯಿಂದ ಆವರಿಸಲ್ಪಟ್ಟದ್ದಾಗಿಯೂ, ಶರತ್ಕಾಲದಮೇಘದಂತಿರುವ ಆಚ್ಛಾಧನವಸ್ತ್ರದಿಂದ ಕೂಡಿದ್ದಾಗಿಯೂ, ಕ್ಷೀರಸಮುದ್ರದ ನೊರೆಯಂತೆ ನಿರ್ಮಲವಾದ, (ಮತ್ತು) ಚಿನ್ನದ ಕಂಬಗಳನ್ನು ಅವಲಂಬಿಸಿದ (ಮತ್ತು) ಮುತ್ತುಗಳ ಸಮೂಹದಿಂದ ರಮಣೀಯವಾದ ಮೇಲ್ಕಟ್ಟಿನಿಂದ ಪ್ರಕಾಶಿಸಲ್ಪಟ್ಟದ್ದಾಗಿಯೂ, ಪಚ್ಚ ಕರ್ಪೂರ, ಲಾಮಂಚ, ಕಸ್ತೂರಿ, ತಾವರೆಹೂವು, ನೈದಲೆ ಇವುಗಳಿಂದವಾಸನೆಕಟ್ಟಲ್ಪಟ್ಟದ್ದಾಗಿಯೂ, ನೀರನ್ನು ತುಂಬಿದ ಚಿನ್ನದ ಬಟ್ಟಲುಗಳಿಂದ ಆಶ್ರೈಸಲ್ಪಟ್ಟ ಸಮೀಪಪ್ರದೇಶವುಳ್ಳದ್ದಾಗಿಯೂ, ತಲೆಯಕಡೆ ಕಾಲ್ಗಡೆಗಳಲ್ಲಿ ಇರಿಸಲ್ಪಟ್ಟ ಹಂಸಪಕ್ಷಿಯತುಪ್ಪಟಂತುಂಬಿದ ದಿಂಬುಗಳುಳ್ಳದ್ದಾಗಿಯೂ, ಪಚ್ಚಕರ್ಪೂರಮೊದಲಾದವುಗಳಿಂದ ಮಾಡಲ್ಪಟ್ಟ ಧೂಪದ ಹೊಗೆಯಿಂದ ವಿಶೇಷವಾಗಿ ಪರಿಮಳಿಸಲ್ಪಟ್ಟದ್ದಾಗಿಯೂ, ಕೈಯಲ್ಲಿ ಬೀಸಣಿಗೆಗಳನ್ನು ಹಿಡಿದು, ಚೈತನ್ಯವುಳ್ಳವುಗಳೋ ಎಂಬಂತಿರುವ ನಾಲ್ಕು ಪಾದಗಳ ಮೇಲ್ಗಡೆಯಲ್ಲಿ ನಿಂತಿರುವ ಬೊಂಬೆಗಳಿಂದ ಕೂಡಿದ್ದಾಗಿಯೂ, ಪಾರ್ಶ್ವದಲ್ಲಿ ಮಡಗಿರುವ ತಾಂಬೂಲದ ಚಿನ್ನದ ಸಂಬಳಿಗೆಯುಳ್ಳದಾಗಿಯೂ, ಅಭಿಮುಖವಾಗಿರಿಸಲ್ಪಟ್ಟ ಅಮೂಲ್ಯವಾದ ರನ್ನಗನ್ನಡಿಯಿಂದ ಅಲಂಕರಿಸಲ್ಪಟ್ಟದ್ದಾಗಿಯೂ, ಕೆಳಗಡೆ ರತ್ನಮಯಗಳಾದ ಹಾವುಗೆಗಳಿಂದ ಕೂಡಿದ್ದಾಗಿಯೂ, ಚಿಗುರಿನಂತೆ ಕೋಮಲವಾಗಿಯೂ, ವಿಸ್ತಾರವುಳ್ಳದ್ದಾಗಿಯೂ, ಚಿತ್ರಿಸಲ್ಪಟ್ಟದ್ದಾಗಿಯೂ, ಇರುವ ಒಂದು ಮಂಚವನ್ನು ನೋಡಿ; ಮನಸ್ಸಿನಲ್ಲಿ "ಇದು ಪರಿಶುದ್ಧವಾದ ವೃದ್ಧರ ಪೂಜಾಸ್ಥಾನವಾಗಬಹುದು. ನಮ್ಮಂಥಾವರು ಇದರಮೇಲೆ ಕಾಲನ್ನಿಡಬಾರದು." ಎಂದಾಲೋಚಿಸಿ, ಕೆಳಗೆ ಸಾಧಾರಣವಾದ ಒಂದು ಚಿತ್ರಾಸದಲ್ಲಿ ಕುಳಿತುಕೊಂಡು, ಅಧಿಕವಾದ ಭಕ್ತಿಯಿಂದಲೂ, ಜ್ಞಾನ್ಮಯಿಂದಲೂ, ತುಂಬಿದನಳಾಗಿಯೂ, ನಿರ್ಮಲವಾದ ವೃತ್ತಿಯುಳ್ಳವಳಾಗಿಯೂ, ಇರುವ ಆ ವೇಶ್ಯಾಂಗನೆಯನ್ನು ನೋಡಿ, ಎಲೌ ಶೋಭನಾಂಗಿಯೇ ನಿನಗೆ ಸರ್ವಾಂಗಗಳಲ್ಲಿ ಭಸ್ಮವೂ, ಕೌಪೀನವೂ ಇಲ್ಲ. ರುದ್ರಾಕ್ಷಿಗಳೂ, ಜಡೆಮುಡಿಯೂ, ನಿನಗೆಯಾಕಿಲ್ಲವೆಂದು ಕೇಳಿದನು. ಇಂಪಾಗಿ ಮಾತನಾಡುವ ಪ್ರೌಢೆಯಾದ ಆ ವೇಶ್ಯಾಸ್ತ್ರೀಯು ಮುಗ್ಧಸಂಗಯ್ಯನ ಮಾತುಗಳನ್ನು ಕೇಳಿ, ಒಳಗೇ ಹುಸಿನಗೆಯುಳ್ಳವಳಾಗಿ, ಈ ನನ್ನ ದೇಹವು ದ್ವೀಪಾಂತರದಿಂದ ತರಲ್ಪಟ್ಟ ಹೊಂಬಣ್ಣದ ವಿಭೂತಿಯಿಂದ

ಅಲಂಕೃತವಾಗಿದೆ; ನೋಡೆಂದು ಅರಿಸಿನವನ್ನು ಹಚ್ಚಿಕೊಂಡಿರುವ ಮೈಯನ್ನು ತೋರಿಸಿದಳು. ಭವಿದೃಷ್ಟಿಯು ತಗಲೀತೆಂಬ ಊಹೆಯಿಂದುಂಟಾದ ಭಯದಿಂದ ಪರಿಶುದ್ಧವಾದ ಪಟ್ಟುವಸ್ತ್ರದಿಂದ ಸರ್ವಾಂಗವನ್ನೂ ಮುಚ್ಚಿಕೊಂಡಿದ್ದೇನೆಂದು ಉಟ್ಟಿದ್ದ ಸೀರೆಯನ್ನು ತೋರಿಸಿದಳು. ಕ್ಷೀರಸಮುದ್ರದ ದಡದಲ್ಲಿ ಹುಟ್ಟಿದ್ದರಿಂದ ಧವಳ ವರ್ಣಗಳಾಗಿಯೂ, ನುಣುಪಾಗಿರುವುದರಿಂದ ಮುಖ ಕಾಣಿಸದವುಗಳಾಗಿಯೂ, ಇರುವ ರುದ್ರಾಕ್ಷಿಗಳನ್ನು ಧರಿಸಿದ್ದೇನೆಂದು ಮುತ್ತುಗಳನ್ನು ತೋರಿಸಿದಳು. ಪಾರ್ವತಿಯ ಸಂಪ್ರದಾಯವನ್ನು ಹಿಡಿದು ಬಂದ ಜನಗಳಿಗೆ ಅಸಂಖ್ಯಾತಗಳಾದ ಸಣ್ಣ ಜಡೆಗಳಿವೆ- ಎಂದು ತಲೆಯಕೂದಲುಗಳನ್ನು ತೋರಿಸಿದಳು. ನಮ್ಮ ಗುಂಪಿಗೆ ಸೇರಿದ ಅನೇಕರು, ದ್ರಾಕ್ಷಾರಾಮ, ಶ್ರೀಶೈಲ, ಕಾಂಚಿ ಮೊದಲಾದ ಪಟ್ಟಣಗಳಲ್ಲಿ ವಾಸಿಸುತ್ತಿದ್ದಾರೆ. ಎಂದು ಹೇಳಲು; ಮುಗ್ಧಸಂಗಯ್ಯನು ಸಂತುಷ್ಟಹೃದಯನಾಗಿ, ಆಕೆಯ ಆಚಾರವನ್ನೇ ಅಧಿಕವಾದದ್ದಾಗಿ ತಿಳಿದನು. ಆವೇಳೆಯಲ್ಲಿ ಮುಗ್ಧಸಂಗಯ್ಯನ ಸರಸೋಕ್ತಿಗಳಿಂದ ಮಂದಹಾಸಯುಕ್ತಳಾದ ವೇಶ್ಯೆಯಂತೆ ಪೂರ್ವದಿಕ್ಕು ಚಂದ್ರಿಕೆಯಿಂದ ನಿರ್ಮಲವಾದ ಮುಖವುಳ್ಳಂಥಾದ್ದಾಯಿತು. ಶಿವನ ಸೇವೆಯಿಂದಲೂ ಹೋಗದಿದ್ದ ತನ್ನ ಕಳಂಕನ್ನು ಭಕ್ತಸೇವೆಯಿಂದ ಹೋಗಲಾಡಿಸಿಕೊಳ್ಳಲಿಚ್ಛೆಯುಳ್ಳವನೋ ಎಂಬಂತೆ ಚಂದ್ರನು ಉದಯಿಸಿದನು.

ಚಂದ್ರಮಂಡಲವು ಬಸವೇಶನ ಕೀರ್ತಿಪರಂಪರೆ ಎಂಬಸಮುದ್ರದಲ್ಲಿ ಹುಟ್ಟಿದ ನೊರೆಯ ರಾಶಿಯಂತೆ ಉದಯಿಸಿತು. ಆಗಲೋಕವು ಆದಿಶೇಷನ ಕಾಂತಿಯನ್ನು ಅಪಹರಿಸುವಂಥಾದ್ದಾಗಿಯೂ, ಶಿವನ ನಗೆಗೆ ವಿದ್ಯಾರ್ಥಿಯಾಗಿಯೂ, ರಜತಾದ್ರಿಯ ಪ್ರಕಾಶ ಸಮೂಹಕ್ಕೆ ಮಿತ್ರವಾಗಿಯೂ, ಇರುವ ಬೆಳುದಿಂಗಳಿಂದ ಶೋಭಿಸಿತು, ಅನಂತರದಲ್ಲಿ ಮುಗ್ಧಸಂಗೈಯ್ಯನು ಶಿವಪೂಜೆಯಂ ಮಾಡುವದಕ್ಕಾರಂಭಿಸಲು; ಆ ವೇಶ್ಯೆಯು ಆತನ ಸೇವೆಯಲ್ಲಿ ಉದ್ಯುಕ್ತಳಾಗಿ, ತನ್ನ ಸಖಿಯರನ್ನು ಕುರಿತು;- ಎಲೇ ಕಾಳೀ! ಶಿವಪೂಜಾಸ್ಥಳವನ್ನು ಶುದ್ಧವಾದ ನೀರಿನಿಂದ ಸಾರಿಸು. ಎಲೇ ಗೌರಿ! ಪಚ್ಚಕರ್ಪೂರದ ಧೂಳಿಯಿಂದ ರಂಗವಲ್ಲಿಯನ್ನು ಬಿಡು. ಎಲೇ ಪಂಚಾನನೆ! ಬಿಲ್ವಪತ್ರೆಗಳನ್ನು ಶೋಧಿಸಿ ಮುಂದಿರಿಸು. ಎಲೆ ಧೂಪಿನಿಯೇ! ನೀನು ಧೂಪವನ್ನು ಬೀಸು. ಎಲೇ ದೀಪಿನಿಯೇ! ನೀನು ದೀಪವನ್ನು ಬೆಳಗು. ಎಲೇ ತಾರಾಕ್ಷಿಯೇ! ನೀನು ತಾಳವನ್ನು ತೆಗೆದುಕೋ. ಎಲೇ ವೇಣಿಕೆ!

ನೀನು ವೀಣೆಯನ್ನು ಬಾರಿಸು. ಎಲೇ ಕಲ್ಪಲತಿಕೆ! ನೀನು ಕಹಳೆಯನ್ನೂದು. ಎಲೇ ಶಂಖಿನಿಯೇ! ನೀನು ಶಂಖನ್ನೂದು. ಎಲೇ ಚಂದನಲತೇ! ನೀನು ಕಂಸಾಳವನ್ನು ಬಡಿ. ಎಲೇ ಚಂಡಿಕೇ! ನೀನು ಘಂಟಾನಾದವನ್ನು ಮಾಡು. ಎಲೇಚೂತಲತಿಕೆ! ನೀನು ನಡುವಿಗೆ ಮದ್ದಲೆಯನ್ನು ಕಟ್ಟಿಕೋ. ಎಲೇ ರುದ್ರಾಣಿ ನೀನು ಪ್ರೌಢವಾದ ಅಭಿನಯರೀತಿಯನ್ನು ತೋರಿಸು. ನಾನು ಶಿವನಿಗೆ ಅನೇಕವಾದ ಉಪಚಾರಗಳಿಂದ ಮನೋಹರವಾದ ನೈವೇದ್ಯವನ್ನು ಕಲ್ಪಿಸುವೆನು. ನೀವುಜಾಗರೂಕರಾಗಿರಿ. ಎಂದು ಹೇಳಿ, ಸಖಿಯರಿಗೆ ಆಯಾ ಕೆಲಸವನ್ನು ನೇಮಿಸಿ, ತಾನು ಆಲಸ್ಯರಹಿತಳಾಗಿ, ಎಲ್ಲಾ ಕಡೆಯೂ ಸಾವಧಾನೆಯಾಗಿ ಮುಗ್ಧಸಂಗಯ್ಯನ ಸೇವೆಯನ್ನು ಮಾಡಿದಳು. ಮೋಕ್ಷಾಪೇಕ್ಷಿಯಾದ ಮುಗ್ಧಸಂಗಯ್ಯನು ಸೂರ್ಯೋದಯವಾಗುವ ಪರ್ಯಂತರ ಶಿವಪೂಜೆಯನ್ನು ಮಾಡಿದನು.

ಶಿವಪೂಜೆಯಲ್ಲಿ ಹಚ್ಚಿರುವ ದೀಪಗಳು;—ಇನ್ನು ಮೇಲೆ ಮುಗ್ಧಸಂಗಯ್ಯನ ದರ್ಶನವು ದುರ್ಲಭವಾಯಿತಲ್ಲಾ ಎಂಬ ದುಃಖದಿಂದಲೋ ಎಂಬಂತೆ ಕಳೆಗುಂದಿದವು. ಮುಗ್ಧಸಂಗಯ್ಯನ ದರ್ಶನದಿಂದ ಪಾಪಸಮೂಹವು ಹ್ಯಾಗೆ ಕ್ಷೀಣವಾಯಿತೋ ಹಾಗೆ ಸೂರ್ಯದರ್ಶನದಿಂದ ಗಾಢಾಂಧಕಾರವು ಕ್ಷೀಣವಾಯಿತು. ಸೂರ್ಯೋದಯವಾಗಲು, ಮುಗ್ಧಸಂಗಯ್ಯನು ವೇಶ್ಯಾಗಮನದಿಂದ ಸಂತುಷ್ಟನಾಗಿ ಆ ಸ್ಥಳದಿಂದೆದ್ದು, ಬಸವೇಶನ ಸಮೀಪವನ್ನೈದಿ;—ಎಲೈಬಸವೇಶನೇ ವೇಶ್ಯಾಗಮನವನ್ನು ಹ್ಯಾಗೆ ವರ್ಣಿಸಲಿ ? ಅಯ್ಯೋ ನಾನು ನಿನ್ನನ್ನು ಬಿಟ್ಟು ಹೋದೆನು; ನೀನು ಬಂದಿದ್ದರೆ ಆ ಸುಖಾನುಭವವು ನಿನಗೂ ಉಂಟಾಗುತ್ತಿತ್ತು. ಹೇಳುವದಕ್ಕೆ ಅಶಕ್ಯವಾದ ಆಕೆಯ ಆಚಾರವನ್ನು ಶ್ರೀಶೈಲದಲ್ಲಿ ವಾಸಿಸುವ ಮಹಾಯೋಗಿಗಳಲ್ಲಿಯೂ, ತಪಸ್ವಿಗಳಲ್ಲಿಯೂ, ಹಿಂದೆಯಾವಾಗಲೂ ನಾನು ನೋಡಲಿಲ್ಲ. ಆಕೆಗೆ ಸರ್ವಾಂಗ ಕೌಪೀನವೂ, ಶುಭ್ರವಾದ ರುದ್ರಾಕ್ಷಿಗಳೂ, ಹೊಂಬಣ್ಣದ ವಿಭೂತಿಯೂ, ಸೂಕ್ಷ್ಮವಾದ ಜಡೆಗಳೂ ಇದ್ದವು. ಆಕೆಯ ಸಖಿಯರುಕೂಡ ಆ ವಿಧವಾಗಿಯೇ ಇದ್ದರು. ಅವರುಗಳೆಲ್ಲರೂ ಮೂಗಿನಲ್ಲಿ ರುದ್ರಾಕ್ಷಿಗಳನ್ನು ಧರಿಸುತ್ತಾರೆ. ಅಪೂರ್ವವಾದ ಆಗಮಜ್ಞಾನವನ್ನು ಈಗ ನಾನು ಅಲ್ಲಿ ನೋಡಿದೆನು. ಜನ್ಮಾಂತರದಲ್ಲಿ ನೀನು ಬಹುವಿಧವಾಗಿ ವೇಶ್ಯಾಗಮನವನ್ನು ಮಾಡಿದೆ. ಹಾಗಿಲ್ಲದಿದ್ದರೆ ಇಂಥಾ ಭಾಗ್ಯವು ಹ್ಯಾಗೆತಾನೇ ಉಂಟಾಗುತ್ತಿತ್ತು. ಅದನ್ನು ಕೇಳಿ ಚನ್ನಬಸವಣ್ಣನು ಕೈಗಳನ್ನು ಮುಗಿದು;—ಈ ರೀತಿಯಾದ ಮುಗ್ಧ

ತನವು ಲೋಕದಲ್ಲಿ ಎಲ್ಲಿಯಾದರೂ ಉಂಟೇ? ಎಂದು ಕೇಳಲು, ಬಸವೇಶನು ಹೇಳಿದ್ದೇನಂದರೆ,—ಶಿವಧರ್ಮದಲ್ಲಿ ಪ್ರೌಢರಾಗಿಯೂ, ಸಂಸಾರಮಾರ್ಗಗಳಲ್ಲಿ ಮುಗ್ಧರಾಗಿಯೂ ಇರುವ ಮಹಾತ್ಮರು ಕೆಲವರು ಇದ್ದಾರೆ.

---

## ರುದ್ರಪಶುಪತಿ ಕಥೆ.

ಪೂರ್ವದಲ್ಲಿ ರುದ್ರಪಶುಪತಿ ಎಂಬೊಬ್ಬ ಭಕ್ತನಿದ್ದನು. ಆತನು ಒಂದಾನೊಂದು ದಿವಸ ಶಿವಾಲಯದಲ್ಲಿ ಪೌರಾಣಿಕನಿಂದ ಓದಿಸಲ್ಪಟ್ಟದ್ದಾಗಿಯೂ, ಲಕ್ಷ್ಮಿ, ಕೌಸ್ತುಭ, ಚಂದ್ರ, ಕಲ್ಪವೃಕ್ಷ, ಇವುಗಳ ಉತ್ಪತ್ತಿಗೆ ಕಾರಣಭೂತವಾದ ಸಮುದ್ರಮಥನದಿಂದ ಶೋಭಿಸಲ್ಪಟ್ಟದ್ದಾಗಿಯೂ, ಇರುವ ಪುರಾಣವನ್ನು ಕೇಳಿದನು. ಆ ಮಧ್ಯದಲ್ಲಿ ಪೌರಾಣಿಕನು ವಿಷೋತ್ಪತ್ತಿಯನ್ನು ಹೇಳಿ, ಭಕ್ತರಿಗೆ ಸುಖಪ್ರದಾಯಕನಾದ ಶಿವನು ಲೋಕರಕ್ಷಣೆಗೋಸ್ಕರ ಆ ವಿಷವನ್ನು ಸ್ವೀಕರಿಸಿದನೆಂದು ಹೇಳಿದನು. ರುದ್ರಪಶುಪತಿಯು ಆ ಮಾತನ್ನು ಕೇಳಿ, ನೆಲದ ಮೇಲೆಬಿದ್ದು ಬಾರಿಬಾರಿಗು ಹೊರಳುತ್ತಾ, ಹಾಹಾಕಾರದಿಂದ ವ್ಯಾಪ್ತವಾದ ಮುಖವುಳ್ಳವನಾಗಿ, ಅತ್ತನು. ವಿಷವನ್ನು ಕುಡಿದು ಯಾವನು ಬದಕುತ್ತಾನೆ? ಯಾವನು ಪರೋಪಕಾರಾರ್ಥವಾಗಿ ವಿಷವನ್ನು ಕುಡಿಯುವರು. ಎಲೈ ಸ್ವಾಮಿಯೇ ನೀನು ಸರ್ವಜ್ಞನಾದಾಗ್ಯೂ ಈ ವಿಷಯದಲ್ಲಿ ನಿನಗೆ ಹಾಗೆ ಅವಿವೇಕವು ಸಂಭವಿಸಿತು. ಕರುಣಾಳುವಾದ ನೀನು ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳ ಮೊರೆಯನ್ನು ಕೇಳಿ, ವಿಷವನ್ನು ನುಂಗಿದೆ. ಇತರರ ಬುದ್ಧಿಯಂತೆ ನಡೆಯುವದರಿಂದ ಕೇಡುಂಟಾಗುವದೆಂಬರ್ಥವನ್ನು ನೀನು ಕೇಳಿಲ್ಲವೆ. ಇಂದ್ರನು ಸಕಲ ದೇವತೆಗಳಿಂದಲೂ ಪ್ರಾರ್ಥಿಸಲ್ಪಟ್ಟವನಾಗಿ ವೃತ್ರಾಸುರನನ್ನು ಕೊಂದು, ಅದರಿಂದ ಬಂದ ಬ್ರಹ್ಮಹತ್ಯಾದೋಷವನ್ನು ತಾನೇ ಅನುಭವಿಸಿದನಲ್ಲವೆ? ನೀನು, ಘಾತುಕವಾದ ವಿಷದೋಷದಿಂದ ಕೊಲ್ಲಲ್ಪಡತಕ್ಕವನಾಗಿದ್ದೀಯೆ. ಸಂದೇಹವಿಲ್ಲ. ಆದಕಾರಣ ರಾಮನಿಗೆ ಸಮಾನನಾದ ರಾಜನಿದ್ದರೆ, ಸಮುದ್ರವನ್ನು ದಾಟಬಹುದು. ಎಲೌ ಪಾರ್ವತಿಯೇ ಶಿವನು ವಿಷವನ್ನು ಕುಡಿಯುತ್ತಿರುವಾಗ ನೀನು ಮಗ್ಗುಲಲ್ಲಿ ಸುಮ್ಮನೆ ನಿಂತುಕೊಂಡಿದ್ದೆಯಲ್ಲವೇ? ಈಶ್ವರನ ವಿಷಪಾನವನ್ನು ನೀನು ಬಿಡಿಸಕೂಡದಾಗಿತ್ತೇ? ಎಲೈ ಚಂಡೀಶ, ನಂದಿ, ಭೃಂಗಿ, ಮೊದಲಾದ ಪ್ರಮಥರೇ ಆ ಕಾಲದಲ್ಲಿ ನೀವು ಎಲ್ಲಿಗೆ ಹೋಗಿದ್ದಿರಿ. ಎಲೈ ಶಿವನೇ ಪುತ್ರರಾದ ಗಣಪತಿ ಷಣ್ಮುಖರಾದರೂ ನಿನ್ನ

ಸಮೀಪದಲ್ಲಿರಲಿಲ್ಲವೇ? ಕರುಣಾಶಾಲಿಯಾದ ಶಿವನೇ ಆ ವಿಷವನ್ನು ಉಗುಳು. ಇಲ್ಲದಿದ್ದರೆ ನನಗೆ ಕೊಡು. ಆ ವಿಷಪರಿಹಾರವಾದ ಔಷಧವು ಇಲ್ಲವೇ ಇಲ್ಲ. ಹೀಗೆ ಪ್ರಲಾಪಿಸುತ್ತಿರಲು, ಶಿವನು ಪ್ರತ್ಯಕ್ಷನಾಗಿ, ಆ ಭಕ್ತನನ್ನು ಕುರಿತು:—ಎಲೈ ಮಗನೇ ವರವನ್ನು ಕೇಳು ಎಂದು ಅಪ್ಪಣೇ ಕೊಡಿಸಿದಮೇಲೆ ಆತನು ಎದ್ದು, ಕೈಗಳನ್ನು ಜೋಡಿಸಿಕೊಂಡು, ಬ್ರಹ್ಮ, ವಿಷ್ಣು, ದೇವೇಂದ್ರ ಮೊದಲಾದವರಿಗೆ ಶಂಕಾಭಯಗಳನ್ನುಂಟುಮಾಡುವಂಥ ಮಾತನ್ನು ಹೇಳಿದನು. ಏನಂದರೆ,—ಎಲೈ ದೇವತಾಸಾರ್ವಭೌಮನೇ ವಿಷವನ್ನುಗುಳು; ನಿನಗೆ ಯಾವಹಾನಿಯುಂಟಾಗುವದು? ಲೋಕವು ಸೂರ್ಯ ಚಂದ್ರರಹಿತವಾಗಲಿ; ಬ್ರಹ್ಮ, ವಿಷ್ಣುಗಳಿಂದ ಶೂನ್ಯವಾದದ್ದಾಗಲಿ, ಎಂಬೀಮಾತನ್ನು ಕೇಳಿದ ಬ್ರಹ್ಮ, ವಿಷ್ಣು, ಮೊದಲಾದವರು ಲೋಕವನ್ನು ನುಂಗುವದರಲ್ಲಿ ತವಕಪಡುವ ವಿಷದ ಉದ್ಯೋಗವನ್ನು ನೆನೆದು, ನಡುಗುವ ದೇಹವುಳ್ಳವರಾದರು. ಶಿವನು ನಕ್ಕು, ರುದ್ರಪಶುಪತಿಯನ್ನು ಕುರಿತು;–ಎಲೈ ವತ್ಸನೇ ನನ್ನ ಕಂಠದ ಏಕದೇಶದಲ್ಲಿರುವ ಈ ವಿಷವು ನನ್ನನ್ನು ಏನುಮಾಡಬಲ್ಲದು, ಎಂದು ಈಶ್ವರನು ಹೇಳಲು, ರುದ್ರಪಶುಪತಿಯು ಕೇಳಿ, ಎಲೈ ಸ್ವಾಮಿಯೇ ಈ ವಿಷವು ಹೊಟ್ಟೆಗೆ ಇಳಿದರೆ ನಿನಗೆ ಪ್ರಾಣ ಭಯವುಂಟಾಗುವದು, ಆದ್ದರಿಂದ ಈ ವಿಷವನ್ನುಗುಳು, ಎಂದು ಹೇಳಿದನು. ಹೀಗೆ ದೃಢಪ್ರತಿಜ್ಞನಾದ ಆ ಭಕ್ತನನ್ನು ಕುರಿತು ಮರಳಿ ಶಿವನು ಎಲೈ ಮಹಾತ್ಮನೇ, ಭಯಪಡಬೇಡ, ಈ ವಿಷವು ಕಂಠಸ್ಥಾನದಿಂದ ಕೆಳಗಿಳಿಯುವದಿಲ್ಲ, ಅಲ್ಲಿವರಿಗೆ ನೀನು ನನ್ನ ತೊಡೆಯಮೇಲೆ ಕುಳಿತುಕೊಂಡು, ಆಯುಧಸಹಿತನಾಗಿ ವಿಷವನ್ನು ನೋಡುತ್ತಿರು; ಎಂದು ಹೇಳಿ ಆತನನ್ನು ತನ್ನ ತೊಡೆಯನ್ನೇರಿಸಿಕೊಂಡು, ಕೈಲಾಸವನ್ನೈದಿದನು.

---

## ಅರ್ಕಭಕ್ತನ ಕಥೆ.

ಇದಲ್ಲದೆ, ಎಲೈ ಮಹಾತ್ಮನಾದ ಚನ್ನಬಸವನೇ ಕೇಳು; ದ್ರವಿಡ ದೇಶದಲ್ಲಿ ಶಿವಭಕ್ತಿಗೆ ಉತ್ತಮಸ್ಥಾನವಾದ, ಸುಂದರವಾದ ಎಲೆಯೂರೆಂಬ ಗ್ರಾಮವುಂಟು. ಅಲ್ಲಿ ಅರ್ಕನಾಮಕನಾದ ಒಬ್ಬ ಶಿವಭಕ್ತನಿದ್ದನು. ಆತನು ಒಂದು ದಿನ ಎಂದಿನಂತೆ ಸೇವೆಯನ್ನು ಮಾಡುವದಕ್ಕೋಸ್ಕರ ತನ್ನ ಹೆಂಡತಿಯೊಡನೆ ಶಿವಾಲಯಕ್ಕೆ ಹೋದನು. ಆತನ ಹೆಂಡತಿಯು, ಶಿವಲಿಂಗದ ಮೇಲೆ ಹರಿ

ದಾಡುತ್ತಿರುವ ಜೇಡರ ಹುಳವನ್ನು ನೋಡಿ, ಲಿಂಗವು ದೂಷಿತವಾಯಿತೆಂದು ಅದಕ್ಕೆ ಫೂತ್ಕಾರದಿಂದ ಶಾಂತಿಯಂ ಮಾಡುವದಕ್ಕಾರಂಭಿಸಿದಳು. ಆಕೆಯ ಗಂಡನು ಕೋಪಗೊಂಡು, ನೋಡಿ, ಸ್ವಾಮಿಯು ನಿನ್ನ ಬಾಯಿಗುಳಿನ ತುಂತುರುಗಳಿಂದ ನೆನಸಲ್ಪಟ್ಟನು ಎಂದು ಆಕೆಯನ್ನು ತನ್ನ ಮನೆಯಿಂದ ಹೊರಡಿಸಿಬಿಟ್ಟು ಮಾರಣೇ ದಿನದಲ್ಲಿ ಶಿವನನ್ನು ನಮಸ್ಕರಿಸುವದಕ್ಕೋಸ್ಕರ ಹೋಗಿ ನೋಡುವಲ್ಲಿ ತನ್ನ ಹೆಂಡತಿಯು ಊರುಬಿದ ಭಾಗವು ಕ್ಷೇಮವಾಗಿಯೂ, ಊರಬದಿದ್ದ ಭಾಗವು ಬೊಬ್ಬೆಗಳಿಂದ ಆವರಿಸಲ್ಪಟ್ಟದ್ದಾಗಿಯೂ ಇರಲು, ಆ ಭಕ್ತನು ನೋಡಿ ಮನಸ್ಸಿನಲ್ಲಿ ಹೆದರಿ, ತೌರುಮನೆಯಲ್ಲಿರುವ ತನ್ನ ಪತ್ನಿಗೆರಗಿ ಕರೆದುತಂದು, ಶಿವಲಿಂಗದ ಸಮೀಪವನ್ನೈದಿಸಿ:—ಎಲೌ ಸುಶಿಲೇ; ಸ್ವಾಮಿಯ ದೇಹವನ್ನು ನೆನ್ನೇ ದಿನದಂತೆ ನಿನ್ನ ಮಂತ್ರದಿಂದ ಬೊಬ್ಬೆಗಳಿಲ್ಲದಂತೆಮಾಡು. ನಾನು ಮಾಡಿದ ತಪ್ಪನ್ನು ಕ್ಷಮಿಸು ಎಂದನು. ಆಕೆಯು ಬೊಬ್ಬೆಗಳಿಂದ ಕೂಡಿದ ಶಿವಲಿಂಗದ ಭಾಗವನ್ನು ನೋಡಿ, ಮೂರ್ಧನಾದ ನನ್ನ ಗಂಡನ ಅಪ್ಪಣೆಯಿಂದ ಚನ್ನಾಗಿ ಅಭಿಮಂತ್ರಿಸದೆ ಹೋದದ್ದರಿಂದ ತನ್ನನ್ನು ಅಪರಾಧಿಯೆಂದು ತಿಳಿದು, ಶಿವದ್ರೋಹಿಯಾದ ನನ್ನ ಪ್ರಾಣವನ್ನು ಬಿಡಬೇಕೆಂದು ನಿಶ್ಚೈಸಿದಳು. ಪರಶಿವನು ಆಕೆಯ ಮುಗ್ಧಭಕ್ತಿಗೆ ಸಂತುಷ್ಟನಾಗಿ ಮೋಕ್ಷವನ್ನು ಕೊಟ್ಟು, ರಕ್ಷಿಸಿದನು.

---

## ಬಿಜ್ಜಮಹಾದೇವಿಯ ಕಥೆ.

ಈ ರೀತಿಯಾಗಿ ಪೂರ್ವದಲ್ಲಿ ಸಹಜಭಕ್ತಿಯಿಂದ ಕೂಡಿದ ಬಿಜ್ಜಮಹಾದೇವಿಯೆಂಬ ಮತ್ತೊಬ್ಬ ಮುಗ್ಧಭಕ್ತೆ ಇದ್ದಳು. ಆಕೆಯು ಒಂದಾನೊಂದು ದಿವಸ ಆಲೋಚಿಸಿದ್ದೇನಂದರೆ:—ಶಿವನಿಗೆ ತಾಯಿಯೇ ಇಲ್ಲ. ತಾಯಿ ಇದ್ದಪಕ್ಷದಲ್ಲಿ ಆತನ ತಲೆಯು ಹ್ಯಾಗೆ ಜಡೆಗಟ್ಟುತ್ತಿತ್ತು. ದೇಹವು ಯಾವಾಗಲೂ ವಸ್ತ್ರರಹಿತವಾಗಿಯೂ, ಧೂಳಿಯಿಂದ ಮಲಿನವಾಗಿಯೂ ಇದ್ದೀತೆ? ತಲೆಯನ್ನು ಅರ್ಜುನನು ಗದೆಯಿಂದಲೂ, ಸಾಂಖ್ಯನು ಕಲ್ಲಿನಿಂದಲೂ, ಹ್ಯಾಗೆ ಹೊಡೆಯುತ್ತಿದ್ದರು? ಕನ್ನಯ್ಯನು ಪಾದುಕೆಯಿಂದೊತ್ತಿ, ಬಾಯಲ್ಲಿ ತುಂಬಿಕೊಂಡ ನೀರನ್ನು ಹ್ಯಾಗೆ ಉಗುಳುತ್ತಿದ್ದನು? ತಾಯಿಯಿದ್ದರೆ ಮಗನ ಹಾವುಗಳ ತೊಡಿಗೆಯನ್ನೂ, ಹುಲಿ ದೊಗಲ ಉಡಿಗೆಯನ್ನೂ, ಭಿಕ್ಷೆಯೆತ್ತುವದನ್ನೂ, ಸ್ಮಶಾನವಾಸವನ್ನೂ ಹ್ಯಾಗೆ ಸಹಿಸುತ್ತಿದ್ದಳು. ಹೀಗಾಗುವದಕ್ಕೆ ಅನಾಥತ್ವವೇ ನಿಮಿತ್ತವು.

ಬಾಣಾಸುರನು ಬಲಾತ್ಕಾರದಿಂದ ಬಾಗಿಲನ್ನು ಕಾಯಿಸಿದನು. ಪಾರ್ವತೀದೇವಿಯು ಅರ್ಧದೇಹವನ್ನೇ ಸೆಳಕೊಂಡಳು. ಇದು ಪಾಲಕರಿಲ್ಲದವರ ಅವಸ್ಥೆಯುಲ್ಲವೇ? ಕುಂಬಾರ ಗುಂಡಯ್ಯನು ತಾನು ಮಡಗುವದಕ್ಕಾಗಿ ತೆಗೆದುಕೊಂಡಿದ್ದ ಪಾತ್ರೆಯನ್ನು ಹಿಂದಿರಿಗಿಕೊಡದೆ, ಹೆಂಡತಿ ಸಹಿತವಾಗಿ ಆಣೆಯನ್ನು ಇಟ್ಟು ಅಪಹರಿಸಿದನು. ಈ ರೀತಿಯಾಗಿ ನಿಚ್ಚೈಸಿ, ಆಕೆಯು ತಾನು ಶಿವನಿಗೆ ತಾಯಿಯೆಂಬ ಭಾವನೆಯನ್ನು ಹೊಂದಿದವಳಾಗಿ ತನ್ನ ಇಷ್ಟಲಿಂಗವನ್ನು ತೊಡೆಯಮೇಲಿಟ್ಟುಕೊಂಡು ಬಾಲಕ ಪ್ರೇಮವನ್ನು ಮಾಡಲು, ಶಿವನು ಕೂಡ ಬಾಲಕನಾಗಿ ಬಾಯನ್ನು ಬಿಟ್ಟು, ಸ್ವಲ್ಪವಾಗಿ ಕಣ್ಣುಗಳನ್ನು ಮುಚ್ಚಿಕೊಂಡು, ಕೈಗಳನ್ನು ಅಲ್ಲಾಡಿಸುತ್ತಾ ಅಳುವದಕ್ಕೆ ಆರಂಭಿಸಿದನು. ಆಗ ಆ ಭಕ್ತೆಯು ರೋದನವನ್ನು ನಿಲ್ಲಿಸುವದಕ್ಕೆ ಉದ್ಯುಕ್ತಳಾಗಿ, ಸ್ತುತಿಯಿಂದಲೂ, ಗಾನದಿಂದಲೂ, ಕಥೆಯಿಂದಲೂ ಲಾಲಿಸಿದಳು. ಸಕಲ ಲೋಕಗಳಿಗೂ ಆಶ್ರಯನಾದವನೇ ಆದಿಶೇಷನನ್ನು ಆಭರಣವನ್ನಾಗಿ ಮಾಡಿಕೊಂಡಿರುವವನೇ ಮನ್ಮಥಧ್ವಂಸಿಯೇ ನನ್ನ ಸ್ವಾಮಿಯೇ ನೀನು ಅಳಬೇಡ ಉಪನಿಷತ್ತುಗಳಿಂದ ಕಾಣಲ್ಪಡದವನೇ ದೇವತಾ ಶ್ರೇಷ್ಠನೇ ಪೂಜ್ಯನೇ ನೀನು ಅಳಬೇಡ. ಭಕ್ತರ ಮನಸ್ಸಿಗೆ ಅನುಕೂಲವಾದವನೇ ಜನ್ಮವೆಂಬ ವೃಕ್ಷಕ್ಕೆ ಸಿಡಿಲಾದವನೇ ಮಹಾತ್ಮರಿಂದ ಪೂಜಿಸಲ್ಪಡತಕ್ಕವನೇ ನೀನು ಅಳಬೇಡ. ಆ ಶಿಶುವು ಗಾನಸಹಿತವಾದ ಸ್ತುತಿಯನ್ನು ಕೇಳಿ ಸುಮ್ಮನಾಗಲು, ಆಕೆಯು ತೊಡೆಯನ್ನು ಬಡಿದುಕೊಂಡು, ವಿನೋದಕರವಾದ ಕಥೆಯನ್ನು ಹೇಳಲಾರಂಭಿಸಿದಳು. ಏನಂದರೆ, ಹಿಂದೆ ಕೃತಯುಗದಲ್ಲಿ ದಕ್ಷನೆಂಬ ಒಬ್ಬ ಬ್ರಹ್ಮನಿದ್ದನು. ಆತನು ತನ್ನ ಒಳ್ಳೇ ಅದೃಷ್ಟದಿಂದ ಶಿವನನ್ನು ಅಳಿಯನನ್ನಾಗಿ ಪಡೆದುಕೊಂಡು, ಇಂದ್ರ ಮೊದಲಾದ ದೇವತೆಗಳಿಂದಲೂ, ಇತರರಾದದೇರ್ಷಿಗಳಿಂದಲೂ ಬಳಸಲ್ಪಟ್ಟವನಾಗಿ ನೂರು ಯಜ್ಞಗಳನ್ನೂ ಮಾಡಿದನು, ಯಜ್ಞಸ್ವಾಮಿಯಾದ ಶಿವನನ್ನು ಬಿಟ್ಟದ್ದರಿಂದ ಆ ಯಜ್ಞಗಳು ಸಾಂಗಗಳಾದಾಗ್ಯೂ ಪ್ರಾಣವಿಲ್ಲದ ಜಂತುಗಳಂತೆ ಪರಿಣಮಿಸಿದವು. ಆಗ ಶಿವಕಿಂಕರರು ದಕ್ಷನನ್ನು ಶಿವದ್ರೋಹಿಯೆಂದು ನಿಚ್ಚೈಸಿ, ವೀರಭದ್ರನನ್ನು ಮುಂದಿಟ್ಟುಕೊಂಡು, ಯಜ್ಞಶಾಲೆಗೆ ಪ್ರವೇಶಿಸಿದರು. ಯಜ್ಞಾತ್ಮಕನಾದ ವಿಷ್ಣುವು ಪ್ರವೇಶಿಸುತ್ತಿರುವ ಪ್ರಮಥರನ್ನು ನೋಡಿ, ಬಹಳವಾಗಿ ಭಯಪಟ್ಟವನಾಗಿ ವೇಗದಿಂದ ಓಡಿಹೋಗುವದರಲ್ಲಿ ಆಸಕ್ತನಾದನು. ಆ ವೀರಭದ್ರನು ಓಡಿಹೋಗುತ್ತಿರುವ ಆ ವಿಷ್ಣುವಿನ ತಲೆ

ಯನ್ನು ಅನಾಯಾಸದಿಂದ ಒಂದೇ ಬಾಣದಿಂದ ಭೇದಿಸಿ, ಕೋಪದಿಂದ ಅಗ್ನಿಯ ನಾಲಿಗೆಯನ್ನು ಕೃಷ್ಣ ಮೊದಲಾದ ಏಳುಭಾಗಗಳನ್ನು ಮಾಡಿ, ಪೌರುಷವನ್ನು ತೋರಿಸುವದಕ್ಕೆ ಬಂದಪೂಷನೆಂಬ ಸೂರ್ಯನ ಹಲ್ಲುಗಳನ್ನು ಮುರಿದು, ಚಂದ್ರ ಮಂಡಲವನ್ನು ಕಾಲಿನಿಂದ ಹೊಸಗಿದನು. ಜನಗಳು ಆ ಪಾದಮರ್ದನದಿಂದುಂ ಟಾದ ಜಡ್ಡನ್ನು ಕಳಂಕವೆಂದು ಹೇಳುತ್ತಾರೆ. ವೀರಭದ್ರನ ಉಗುರಿನಿಂದ ಕತ್ತ ರಿಸಲ್ಪಟ್ಟ, ತನ್ನ ಎಡದ ಕುಚಾಗ್ರವನ್ನು ಸರಸ್ವತಿಯು ವೀಣೆಯನ್ನು ಬಾಜಿಸುವ ನೆವದಿಂದ ಮರೆ ಮಾಡಿಕೊಂಡಳು. ಯುದ್ಧಸನ್ನದ್ಧನಾದ ಚಕ್ರಪಾಣಿಯಾದ ವಿಷ್ಣುವಿನ ತಲೆಯನ್ನು ಒಂದೇ ಬಾಣದಿಂದ ಹೋಮಾಗ್ನಿಯಲ್ಲಿಟ್ಟು, ಹಾಗೆಯೇ ದಕ್ಷನತಲೆಯನ್ನೂ, ಬ್ರಹ್ಮನತಲೆಯನ್ನೂ ಕತ್ತರಿಸಿ ಅಗ್ನಿಗೆಹಾಕಿ, ಋತ್ವಿಕ್ಕುಗಳ ಜಡೆಗಳನ್ನು ಕಿತ್ತು, ಅವುಗಳಿಂದ ಉಳಿದ ದೇವತೆಗಳನ್ನೂ ಕಟ್ಟಿ ಯಜ್ಞಶಾಲೆ ಯನ್ನು ಹಣೆಗಣ್ಣಿನ ಉರಿಗಳ ಸಮೂಹದಿಂದ ವ್ಯಾಪ್ತವಾದದ್ದನಾಗಿ ಮಾಡಿ, ನೋಡಿ, ಪ್ರಮಥರೊಡನೆ ಕಿಳಕಿಲ ಧ್ವನಿಯನ್ನು ಮಾಡಿ, ಸುಟ್ಟುಹೋದ ಯಜ್ಞ ಶಾಲೆಯ ಬೂದಿಯನ್ನು ಮೈಗೆ ಸವರಿಕೊಂಡು ನೆಗೆದಾಡುತ್ತಿರುವ ಪ್ರಮಥ ರಿಂದ ಸುತ್ತಲ್ಪಟ್ಟವನಾಗಿ ಭದ್ರಕಾಳಿಯೊಡನೆ ವೃಷಭಾರೂಢನಾಗಿ ಹೊರಟು ಹೋದನು. ಹೀಗೆಂಬ ದಿವ್ಯಕಥೆಯನ್ನು ಕೇಳಿ, ಸ್ವಲ್ಪ ಕಣ್ಣುಗಳನ್ನು ಮುಚ್ಚಿ ಕೊಂಡು ನಿದ್ರೆಯಂಮಾಡಿ, ಎದ್ದ ಶಿಶುವೇಶದ ಶಿವನಿಗೆ ತೈಲಾಭ್ಯಂಗವನ್ನು ಮಾಡಿ, ಹೆಸರುಹಿಟ್ಟಿನಿಂದ ಪಾದಮೊದಲ್ಗೊಂಡು ತಲೆಯತನಕ ತೀಡಿ,ಸ್ವಲ್ಪ ಬೆಚ್ಚಗಿರುವ ನೀರಿನಿಂದ ಸ್ನಾನವನ್ನು ಮಾಡಿಸಿ, ಕಾಲಿನ ಹೆಬ್ಬೆರಳ ತುದಿಯಲ್ಲಿ ಹತ್ತಿದ ಧೂಳಿಯಿಂದ ಹಣೆಯನ್ನಲಂಕರಿಸಿ, ವಸ್ತ್ರದಿಂದ ಒರಸಿದಮೇಲೆ ವಿಭೂ ತಿಯಬಟ್ಟನ್ನಿಟ್ಟಳು. ಈ ರೀತಿಯಾಗಿ ದೇವತೆಗಳಿಗೂ, ಯೋಗಿಗಳಿಗೂ ದುರ್ಲಭ ವಾದ ಬಾಲೋಪಚಾರವನ್ನು ಮಾಡುವ ಬಿಜ್ಜಮಹಾ ದೇವಿಗೆ ಕೆಲವು ಕಾಲಕ ಳೆಯುತ್ತಿರಲು, ಶಿಶುವಾದ ಶಿವನು ಒಂದಾನೊಂದುದಿನ ಅಜೀರ್ಣ ರೋಗವೆಂಬ ಶಂಕೆಯುಂಟಾಗುವಂತೆ ಮುಖದಲ್ಲಿ ಬೆವರು ಹನಿಗಳುಳ್ಳವನಾಗಿ, ತಾಯಿಯ ಮನಸ್ಸಿಗೆ ಭಯವನ್ನು ಹುಟ್ಟಿಸಿ, ಉಬ್ಬರಿಸಿದ ಹೊಟ್ಟೆಯುಳ್ಳವನಾದನು. ತಾಯಿಯು ಮಗನಿಗೆ ಸಂಭವಿಸಿದ ಆ ಅವಸ್ಥೆಯನ್ನು ನೋಡಿ, ಮರಣವು ಪ್ರಾ ಪ್ತವಾಯಿತೆಂದು ಊಹಿಸಿ, ಬಹು ದುಃಖಿತಳಾಗಿ, ಒಬ್ಬ ಜೋಯಿಸನ ಬಳಿಗೈದಿ ಅಯ್ಯಾ ಜೋಯಿಸನೇ ನನ್ನ ಮಗನು. ಬುದ್ಧಿ, ಜಾಠರಾಗ್ನಿ, ಧಾತು, ಬಣ್ಣ

ಇವುಗಳನ್ನು ಬೆಳಸುವ, ಸ್ವಲ್ಪ ಬಿಸಿಯಾದ ಮೃಷ್ಟಾನ್ನವನ್ನು ಉಣ್ಣುತ್ತಾನೆ. ಭಕ್ಷ್ಯವನ್ನು ತಿನ್ನುತ್ತಾನೆ. ಹಾಗಾದರೂ ಯಾವಕಾರಣದಿಂದಲೋ ಹೊಟ್ಟೆ ಉಬ್ಬರಿಸಿಕೊಂಡಿದೆ. ನಾನು ತಿಳಿಯೆ; ನೀನು ಹೇಳು. ಎಂದು ಪ್ರಾರ್ಥಿಸಲು; ಆತನು ಎಲೌ ಪೂಜ್ಯಳೇ ನಿನ್ನ ಮಗನ ನಡತೆಯು ಲೋಕವನ್ನು ಮೀರಿದ್ದಾಗಿ ತೋರಿಬರುತ್ತದೆ. ನಿನ್ನ ಸಂಗಡ ಹೇಳಕೂಡದು. ನೀನು ಕೇಳಿದ್ದರಿಂದ ಹೇಳುತ್ತೇನೆ. ಎಲೌ ಮಂಗಳಾಂಗಿ ನಿನ್ನ ಮಗನಿಗೆ ಅಜೀರ್ಣಕಾರಿಯಾದ ಕೃತ್ಯವು ನಡೆದಿದೆ. ಒಬ್ಬಳು ತಾನುತಿಂದು ರುಚಿನೋಡಿದ ಮೂರು ಎಂಜಿಲು ಮಾವಿನ ಹಣ್ಣನ್ನು ಕೊಟ್ಟಳು. ಒಬ್ಬ ರಾಜನ ಪಾರ್ಶ್ವದಲ್ಲಿ ಕುಳಿತುಕೊಂಡು, ಮೂವತ್ತು ಕೊಳಗ ಮೆಣಸಿನ ಪುಡಿಯಿಂಕೂಡಿದ ಭಕ್ಷ್ಯ, ಭೋಜನಗಳನ್ನು ಮೆದ್ದನು. ಯಾರೋ ಒಬ್ಬರು ಕೊಟ್ಟ ತಂಗಳು ಗಂಜಿಯನ್ನು ಕುಡಿದನು. ಒಬ್ಬ ವೇಶ್ಯಾಸ್ತ್ರೀಯಿಂದ ಕೊಡಲ್ಪಟ್ಟ ಹೆಸರುಕಾಳಿನ ಹುಗ್ಗಿಯನ್ನು ಕವಳಿಸಿದನು. ಒಬ್ಬ ಸಾಮವೇದಿಯ ಹೆಂಡತಿಯಿಂದ ಚನ್ನಾಗಿ ಬೇಹಿಸಲ್ಪಟ್ಟ ಸತ್ತ ಕರುವಿನ ಮಾಂಸವನ್ನು ಅನ್ನದೊಡನೆ ಕಲಸಿ ಭಕ್ಷಿಸಿದನು. ಕಿರಾತನಿಂದ ಯೆಂಜಲು ಮಾಡಲ್ಪಟ್ಟ ಸುಟ್ಟ ಮಾಂಸವನ್ನು ಯಥೇಚ್ಛವಾಗಿ ತಿಂದನು. ನಿರ್ಮಲ ಹೃದಯನಾಗಿಯೂ, ಭಕ್ತಿವಂತನಾಗಿಯೂ ಇದ್ದ ಒಬ್ಬ ವೈಶ್ಯನ ಬಳಿಗೆ ಕಾಪಾಲಿಕನಾಗಿ ಹೋಗಿ, ಮನುಷ್ಯ ಮಾಂಸವನ್ನು ಕೊಡೆಂದು ಯಾಚಿಸಿದನು. ಒಬ್ಬ ಹುಡುಗಿಕೊಟ್ಟ ಬಂಧು ಬಳ್ಳಹಾಲನ್ನು ಕುಡಿದನು. ಸುರಗಿಯ ಚೌಡಯ್ಯನು ಕೊಟ್ಟ ಅನ್ನದ ತುತ್ತುಗಳನ್ನು ನುಂಗಿದನು. ಈ ರೀತಿಯಾಗಿ ಅವನು, ಅನ್ನಮುಂತಾದ ಭೋಜ್ಯವನ್ನು ಉಂಡನು. ಮಜ್ಜಿಗೆ ಮುಂತಾದ ಪಾನಕವನ್ನು ಕುಡಿದನು. ಅನೇಕ ಉಪಕರಣಗಳಿಂದ ಕೂಡಿದ ಚಕ್ಕಲಿಮೊದಲಾದ ಭಕ್ಷ್ಯಗಳನ್ನು ತಿಂದನು. ಎಂದು ಹೇಳಿದ ಜೋಯಿಸಿಗನ ಮಾತನ್ನು ಬಿಜ್ಜಮಹಾದೇವಿಯು ಕೇಳಿ ತನ್ನ ಮಗನಿಗೆ ಪ್ರಾಪ್ತವಾದ ರೋಗವು ಬಹು ಅಪಥ್ಯಸೇವನೆಯಿಂದ ಸಂಭವಿಸಿದ್ದರಿಂದ ಅಸಾಧ್ಯವಾದದ್ದೆಂದು ನಿಜ್ಜೈಸಿ; ಮರಳಿ ಮನೆಗೆ ಬಂದು, ಉಬ್ಬರಿಸಿಕೊಂಡ ಹೊಟ್ಟೆಯೂ ಬೆವತಿರುವ ಮುಖವೂ ಉಳ್ಳ ಮಗನನ್ನು ನೋಡಿ:–ಎಲೈ ಮಗನೆ ನಾನು ನಿನಗೆ ತಾಯಿಯಲ್ಲವೇ, ಆದ್ದರಿಂದ ಇಂಥಾ ದುರವಸ್ಥೆಯಿಂದ ಪೀಡಿತನಾದ ಕೋಮಲಾಂಗನಾದ ನಿನ್ನನ್ನು ನೋಡಿಕೊಂಡು ನಾನು ಹ್ಯಾಗಿರಲಿ? ಎಲೈ ಮಗನೇ ನೀನು ತಾಯಿಾ ತಾಯಿಾ ಎಂದು ನನ್ನನ್ನು ಯಾವಾಗ

ಕೂಗುವೆ. ಯಾವಾಗ ನಿನ್ನ ಮಾತುಗಳೆಂಬ ಅಮೃತದಿಂದ ತುಂಬಲ್ಪಟ್ಟ ಕಿವಿಗಳುಳ್ಳವಳಾಗುವೆನು? ನಿನಗೆ ಬಂದಿರುವ ರೋಗವು ಅಜೀರ್ಣದೋಷವೊ ಮತ್ತೊಂದೋ. ಇದಕ್ಕೆ ಔಷದವನ್ನು ತಿಳಿಯೆನು. ನೀನು ಏನುಮಾಡುತ್ತಿಯಾ ಆಮೇಲೆ ನಾನೇನು ಮಾಡುವೆನು. ಹೀಗೆ ಆಕೆಯು ಅನೇಕ ವಿಧವಾಗಿ ಹಂಬಲಿಸಿ ತನ್ನ ಮಗನಮೇಲೆ ಬಿದ್ದು, ಕೈಯಿಂದ ಅವಯುವಗಳನ್ನು ಮುಟ್ಟಿ, ಮುಟ್ಟಿ ಮರಳಿ ಮರಳಿ ಆಲಿಂಗಿಸಿ, ವಸ್ತ್ರದಿಂದ ಚನ್ನಾಗಿ ಮುಚ್ಚಿ, ತಿರಿಗಿ ವಸ್ತ್ರವನ್ನು ತೆಗೆದುನೋಡಿ, ಪರವಶಳಾಗಿ, ಭೂಮಿಯಮೇಲೆ ಬಿದ್ದಳು. ತಿರಿಗಿ ಎದ್ದು, ಪ್ರಾಣತ್ಯಾಗವನ್ನು ಮಾಡಿಕೊಳ್ಳುವ ಉದ್ಯೋಗದಲ್ಲಿ ದೃಢವಾದ ಸಂಕಲ್ಪವುಳ್ಳ ಆಕೆಗೆ ಶಿವನು ಸ್ವಸ್ವರೂಪವನ್ನು ತೋರಿಸಿ, ತಾಯಿಾ ಚಿಂತೆಪಡಬೇಡ. ನನಗೆ ನಿನ್ನಂಥಾ ತಾಯಿಯೂ, ನಿನಗೆ ನನ್ನಂಥ ಮಗನೂ ಎಲ್ಲಿಯೂ ಇಲ್ಲ. ಆದ್ದರಿಂದ ನಾನು ನಿನಗೆ ನಿತ್ಯತ್ವವನ್ನು ಕೊಟ್ಟೆನು. ಎಂದು ಶಿವನು ಆಕೆಗೆ ವರವನ್ನುಕೊಟ್ಟು, ವೃಷಭವನ್ನೇರಿ ದೇವತೆಗಳಿಂದ ಹೊಗಳಿಸಿ ಕೊಳ್ಳುತ್ತಾ, ಆಕೆಯನ್ನು ಸಂಗಡ ಕರೆದುಕೊಂಡು ಕೈಲಾಸವನ್ನೈದಿದನು.

---

## ಕೋಳೂರು ಕೊಡಗೂಸಿನಕಥೆ.

ಶಿವದೇವನೆಂಬೊಬ್ಬ ಶಿವಭಕ್ತನಿದ್ದನು. ಆತನುಪ್ರತಿದಿನಪ್ರಾತಃಕಾಲದಲ್ಲಿಯೂ ಶಿವನಿಗೆ ಒಂದು ಬಳ್ಳಹಾಲನ್ನು ಸಮರ್ಪಿಸುತಿದ್ದನು. ಹೀಗಿರುವಲ್ಲಿ ಒಂದಾನೊಂದು ದಿನದಲ್ಲಿ ಆತನು ಶಿವನಿಗೆ ಕ್ಷೀರಸಮರ್ಪಣವನ್ನು ಮಾಡುವಕಾರ್ಯವನ್ನು ಕನ್ಯೆಯಾದ ತನ್ನ ಮಗಳಿಗೆ ನೇಮಿಸಿ, ಹೆಂಡತಿಯೊಡನೆ ಮತ್ತೊಂದು ಊರಿಗೆ ಹೋದನು, ಆಕನ್ಯೆಯು ಹೊತಾರೆ ಎದ್ದು ಮುಖವನ್ನು ತೊಳೆದುಕೊಂಡು, ಹಣೆಯಲ್ಲಿವಿಭೂತಿಯನ್ನು ಧರಿಸಿಕೊಂಡು, ಆ ಹಾಲನ್ನು ತೆಗೆದುಕೊಂಡು ಶಿವಾಲಯಕ್ಕೈದಿ, ಭೋಗೇಶ್ವರನ ಶನ್ನಿಧಿಯಲ್ಲಿ ಆ ಹಾಲನ್ನಿರಿಸಿ;–ಎಲೈ ಮಹಾದೇವನೇ ಸ್ವೀಕರಿಸೆಂದು ಹೇಳಿ, ಹೊರಗೆ ಬಂದು, ಸ್ವಲ್ಪ ಹೊತ್ತನ್ನು ಬಿಟ್ಟುಕೊಂಡು ಮರಳಿ ಒಳಗೆ ಹೋಗಿ. ಮಡಗಿದಂತೆಯೇ ಇದ್ದಹಾಲನ್ನು ನೋಡಿ, ಎಲೈ ಶಂಭುವೇ ಈ ಹಾಲನ್ನು ಯಾಕೆ ನೀನು ತೆಗೆದುಕೊಳ್ಳಲಿಲ್ಲ. ಪೂರ್ವದಂತೆ ಬೆಂಕಿಯಲ್ಲಿ ಹಾಲು ಕಾದಿಲ್ಲವೋ? ಮಂದವಾದ ಕೆನೆ ಇಲ್ಲವೋ? ಹಾಲಿಗೆ ತಕ್ಕ ಕಂಪೂ, ರುಚಿಯೂಇಲ್ಲವೋ?ಎಲೈ ಸ್ವಾಮಿಯೇ ಬಾಳೇಹಣ್ಣು, ಜೇನುತುಪ್ಪ, ಬೆಲ್ಲ,

ಸಕ್ಕರೆ, ಈಗ ಕಾಯಿಸಿದ ತುಪ್ಪ, ಇವೆಲ್ಲವೂ ನಮ್ಮ ಮನೆಯಲ್ಲಿ ತುಂಬಿವೆ. ಇವುಗಳೊಳಗೆ ಯಾವದನ್ನು ಬಯಸುತ್ತೀಯೆ, ಹೇಳು, ಇವಳ ತಂದೆಯಾದರೂ, ತಾಯಿಯಾದರೂ, ತರಲಿಲ್ಲ. ಹುಡಗಿಯಾದ ಇವಳು ತಂದಿದ್ದಾಳೆ. ಎಂದು ಹಾಲನ್ನು ಕುಡಿಯಲಿಲ್ಲವೋ? ಅವರಿಬ್ಬರೂ ಈ ಸ್ಥಳದಲ್ಲಿಲ್ಲ. ನಿನ್ನ ಸೇವೆಯ ಕೆಲಸದಲ್ಲಿ ನನ್ನನ್ನು ನೇಮಿಸಿ, ಜೊತೆಯಾಗಿ ಗ್ರಾಮಾಂತರಕ್ಕೆಹೋದರೂ. ನಾಳೆಬರುವರು. ಎಂದು ಹೇಳಿ, ಭೂಮಿಯಮೇಲೆ ದೀರ್ಗದಂಡ ನಮಸ್ಕಾರವಂ ಮಾಡಿ, ಬಹಳ ಹೊತ್ತು ಹಾಗೇ ಇದ್ದು, ಮರಳಿ ಎದ್ದು ಆ ಹಾಲನ್ನು ನೋಡಿ, ಅಳುವದಕ್ಕೆ ಉದ್ಯುಕ್ತಳಾಗಿ, ಕೈಗಳನ್ನು ಒದರಿಕೊಂಡು, ಕಾಲುಗಳಿಂದ ನೆಲವನ್ನು ಬಡಿಯುತ್ತಾ, ಹಾಹಾಕಾರದಿಂದ ವ್ಯಾಪ್ತಳಾಗಿ, ಹೊರಳಿ, ಬಾಗಿಲ ಮುಂದಣ ಕಲ್ಲಿಗೆ ತನ್ನ ತಲೆಯನ್ನು ಹೊಡೆದುಕೊಳ್ಳಲಾರಂಬಿಸಲು; ಚಂದ್ರಧಾರಿಯಾದ ಶಿವನು ಆ ಮುಗ್ಧೆಯನ್ನು ಹಿಡಿದುಕೊಂಡು, ಹಾಲನ್ನು ಸ್ವೀಕರಿಸಿದನು. ಶಿವನು ಹಾಲನ್ನು ಕುಡಿಯುತ್ತಿರಲು; ಆ ಬಾಲಕಿಯು ಆನಂದದಿಂದ ತುಂಬಲ್ಪಟ್ಟವಳಾಗಿ, ಆ ಹಾಲಿನ ಬಟ್ಟಲನ್ನು ತೆಗೆದುಕೊಂಡು, ತನ್ನ ಮನೇಗೆ ಬಂದಳು. ಅದು ಮೊದಲಾಗಿ ಪ್ರತಿಥಿನ ಪ್ರಾತಃಕಾಲದಲ್ಲಿ ಅ ಕನ್ಯೆಯು ತಂದಕ್ಷೀರವನ್ನು ಶಿವನು ಆಕೆಯಿಂದ ಸಂಪಾದಿಸಲ್ಪಟ್ಟ ಪ್ರಬಲವಾದ ಪುಣ್ಯಾಶೇಷವೋ ಎಂಬಂತೆ ಸ್ವೀಕರಿಸಿದನು.

ಹೀಗೆ ಕೆಲವು ದಿವಸಗಳು ಕಳೆಯುತ್ತಿರಲಾಗಿ; ಶಿವದೇವನು ಹೆಂಡತಿಯೊಡನೆ ಗ್ರಾಮಾಂತರದಿಂದ ತನ್ನೂರಿಗೆ ಬಂದು, ಗ್ರಾಮಪ್ರವೇಶವಂ ಮಾಡುತ್ತಾ ಮಾರ್ಗಮಧ್ಯದಲ್ಲಿ ಶಿವನಿಗೆ ಕ್ಷೀರವನ್ನು ಸಮರ್ಪಿಸಿ, ಹಿಂತಿರಿಗಿ ಹೋಗುವ ಮಗಳನ್ನು ನೋಡಿದನು. ಬಳಿಕ ತನಗೆ ನಮಸ್ಕರಿಸಿದ ಆಕೆಯನ್ನು ಆಲಿಂಗಿಸಿ, ತಲೆಯನ್ನು ಅಘ್ರಾಣಿಸಿ, ಹಸು, ಹಣ, ದವಸಗಳ ಕ್ಷೇಮವನ್ನು ಕ್ರಮವಾಗಿ ಕೇಳಿದಮೇಲೆ, ಆಕೆಯ ಕೈಯಲ್ಲಿ ಬರಿದಾಗಿರುವ ಹಾಲಿನ ಬಟ್ಟಲನ್ನು ಕಂಡು ಮಗಳನ್ನು ಕುರಿತು;– ನೀನು ಶಿವನಿಗೆ ಹಾಲನ್ನು ನಿವೇದಿಸಲಿಲ್ಲಾ. ಯಾವನಿಗೆ ಕೊಟ್ಟೆ ಹೇಳೆಂದು ಕೇಳಲು; ಆಕೆಯು; ತಂದೆಯೇ ! ಪ್ರತಿದಿನವೂ ನಾನು ಸಮರ್ಪಿಸುತ್ತಿರುವ ಹಾಲನ್ನು ದೇವಶ್ರೇಷ್ಟನಾದ ಶಿವನೇ ಕುಡಿಯುತ್ತಾನೆ. ನಾನು ಮತ್ತೊಬ್ಬರಿಗೆ ಕೊಡುವುದಿಲ್ಲ. ವೆಂದಳು. ಆಮಾತನ್ನು ಕೇಳಿ, ನಾಳಿನ ಹೊತಾರೆ ತಿಳಿಯುತ್ತೆ ಎಂದು ಪದೇಪದೇಬೆದರಿಸಿ, ತನ್ನಮನೆಗೆ ಬಂದು ಮಾರಣೆದಿನ ಹೊತಾರೆ ಎದ್ದು, ಕೈಯಲ್ಲಿ ಹಾಲನ್ನು ಹಿಡಿದುಕೊಂಡಿರುವ ಮಗಳ ಕೂಡ ಶೀಘ್ರ

ವಾಗಿ ಭೋಗೇಶ್ವರಲಿಂಗದ ಸನ್ನಿಧಿಗೈದಿದನು. ಶಿವನು ಮೊದಲಿನಂತೆ ಆಕೆಯು ಕೊಟ್ಟ ಹಾಲನ್ನು ಕುಡಿಯದಿರಲು; ಶಿವದೇವನು ಕೋಪಾವೇಶದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ಆ ಮಗಳನ್ನು ಹೊಡೆಯುವದಕ್ಕಾಗಿ ತೋಳನ್ನು ಎತ್ತಿಕೊಂಡುಬರಲು; ಹುಡಿಗಿಯುನೋಡಿ, ಸ್ವಾಮಿಾ! ನನ್ನನ್ನು ರಕ್ಷಿಸು ಎಂದು ಕೂಗಿಕೊಂಡು ಶಿವನಲ್ಲಿ ಮರೆಬಿದ್ದಳು. ಶಿವನು ಹೊಡಿಯುವಕ್ಕೆ ಉದ್ಯುಕ್ತನಾದ ಆ ಹುಡಿಗಿಯ ತಂದೆಯನ್ನು ಹುಂಕಾರಗಳಿಂದ ತಡೆದು, ಆಕೆಯನ್ನು ದಯೆಯಿಂದ ತನ್ನ ದೇಹದಲ್ಲಿಸೇರಿಸಿಕೊಂಡನು. ಆಕೆಯ ತಂದೆಯಾದ ಶಿವದೇವನು ಲಿಂಗದ ಗರ್ಭದಲ್ಲಿ ಪ್ರವೇಶಿಸುತ್ತಿರುವ ತನ್ನ ಮಗಳ ಕೂದಲೂಗಳನ್ನು ಹಿಡಿದುಕೊಂಡು, ಮಗಳನ್ನು ಕಾಣದೆ ಆಶ್ಚರ್ಯದಿಂದ್ತ ಸಬ್ಧನಾದನು. ಬಳಿಕ ಸಮಸ್ತಪ್ರಮಥರೂಬಂದು ಆಶ್ಚರ್ಯದಿಂದ ನೋಡಿ, ಭಾಗ್ಯಶಾಲಿಯಾದ ಶಿವದೇವನನ್ನು ನಾನಾವಿಧವಾಗಿ ಕೊಂಡಾಡಿದರು. ಈಗಲೂ ಭೋಗೇಶ್ವರಲಿಂಗದ ದೇಹದಲ್ಲಿ ಕೂದಲುಗಳ ಪಙ್ತಿಯು ಕಾಣುತ್ತದೆ. ಪ್ರತಿತಿಂಗಳಲ್ಲಿ ಕತ್ತರಿಸುತ್ತಿದ್ದಾಗ್ಯೂ ದಿನೇದಿನೇ ಬೆಳೆಯುತ್ತದೆ.

---

## ದೀಪದಕಲಿಯಾರಕಥೆ.

ಕಾಂಚೀ ಪಟ್ಟಣದಲ್ಲಿ ಮುಗ್ಧಭಕ್ತಿಯಿಂದ ಪರಿಶುದ್ಧವಾದ ಮನಸ್ಸುಳ್ಳ ದೀಪದಕಲಿಯಾರೆಂದು ಪ್ರಸಿದ್ಧನಾದ ಒಬ್ಬ ಭಕ್ತನಿದ್ದನು. ಒಂದಾನೊಂದುಸಮಯದಲ್ಲಿ ಆತನು ಮತ್ತೊಂದು ಪಟ್ಟಣಕ್ಕೆ ಹೋಗುತ್ತಾ ಅರಣ್ಯಮಧ್ಯದಲ್ಲಿಒಂದು ಗುಡಿಯಲ್ಲಿ ತನ್ನಷ್ಟಕ್ಕೆ ತಾನೇ ಇರುತ್ತಿರುವ ಶಿವಲಿಂಗವನ್ನು ನೋಡಿ, ಆಲೋಚಿಸಿದ್ದೇನಂದರೆ;- ಯಾವ ಪುರುಷನಾದರೂ ಜನಗಳಿಲ್ಲದ ಪ್ರದೇಶದಲ್ಲಿ ವಾಸಿಸುವದು ಯುಕ್ತವಲ್ಲ. ಅನೇಕಶತೃಗಳುಳ್ಳ ಶಿವನಿಗೆ ಹೇಳತಕ್ಕದ್ದೇನು! ಈತನು ಪರಾಕ್ರಮಶಾಲಿಗಳಾದ ಅನೇಕ ರಾಕ್ಷಸರನ್ನು ಕೊಂದನು. ಹಿಂದೆ ಐಶ್ವರ್ಯಭರಿತಳಾದ ಅವರ ಪಟ್ಟಣಗಳನ್ನು ಸುಟ್ಟನು. ಸಕಲ ಪ್ರಾಣಿಗಳ ಮನಸ್ಸನ್ನು ಅನುಸರಿಸುವ ವಿದ್ಯೆಯಲ್ಲಿ ನಿಪುಣನಾದ ಮನ್ಮಥನು ತನ್ನ ಹಣೆಗಣ್ಣಿನ ಬೆಂಕಿಯವುರಿಗೆ ಬಲಿಯನ್ನು ಕೊಟ್ಟನು. ದಕ್ಷಬ್ರಹ್ಮನ ಯಜ್ಞದಲ್ಲಿ ಇಂದ್ರ ಮೊದಲಾದ ದೇವತೆಗಳನ್ನು ಅನೇಕವಿಧವಾಗಿ ಅಪಮಾನಪಡಿಸಿ, ಅವರ ಮುಖಗಳನ್ನು ನಾಚಿಕೆಯಿಂದ ಬಗ್ಗುವಂತೆ ಮಾಡಿದನು. ಕೆಲವರು ಋಷಿಗಳು, ತಮ್ಮ ಪತ್ನಿಯರಿಗೆ

ಈತನಿಂದ ದೂಷಣೆ ಸಂಭವಿಸಿದ್ದರಿಂದ ಅತ್ಯಂತವಾಗಿ ಕೋಪಗೊಂಡು, ಮೋಟವನ್ನು ಮಾಡಿದರು. ಬ್ರಹ್ಮನ ಐದನೆಯ ತಲೆಯನ್ನು ಉಗುರಿನ ಕೊನೆಯಿಂದ ಚಿವುಟಿದನು. ನರಸಿಂಹರೂಪಿಯಾದ ವಿಷ್ಣುವಿನ ದೇಹದ ಚರ್ಮವನ್ನು ಸುಲಿದನು. ಆದಕಾರಣ ಈತನು ಯಾವಾಗಲೂ ಈ ಅರಣ್ಯದಲ್ಲಿ ಸೈನ್ಯಸಮೇತನಾಗಿರಬೇಕು. ಮತ್ತು ಭೀತಿಯನ್ನು ಪರಿಹರಿಸತಕ್ಕ ಒಂದು ದುರ್ಗಸ್ಥಳವಾಗಬೇಕು. ಈ ರೀತಿಯಾಗಿ ಕಲಿಯಾರನು ಮನಸ್ಸಿನಲ್ಲಿ ನಿಶ್ಚೈಸಿ, ತನ್ನ ದ್ರವ್ಯವನ್ನೆಲ್ಲಾ ತರಿಸಿ, ನಾಲ್ಕು ಬಾಗಿಲುಗಳಿಂದ ಶೋಭಿಸಲ್ಪಟ್ಟದ್ದಾಗಿಯೂ, ಆಳವಾದ ಅಗಳುಗಳಿಂದ ಸುತ್ತಲ್ಪಟ್ಟ ಕೋಟೆಗಳಿಂದ ಅಲಂಕರಿಸಲ್ಪಟ್ಟದ್ದಾಗಿಯೂ, ಶತಘ್ನಮುಂತಾದ ಯಂತ್ರಗಳಿಂದ ರಕ್ಷಿಸಲ್ಪಟ್ಟದ್ದಾಗಿಯೂ, ಇರುವ ಒಂದು ಶಿವಾಲಯವನ್ನು ಕಟ್ಟಿಸಿದನು. ಪ್ರತಿರಾತ್ರಿಯಲ್ಲೂ ಅನೇಕ ದೀಪಗಳಿಂದ ಪ್ರಕಾಶಿಸುತ್ತಿರುವ ಕೋಟೆಗಳು, ಉರಿಯುತ್ತಿರುವ ಜ್ಯೋತಿರ್ಲತಾದಿ ಮಹೌಷಧಿಗಳಿಂದ ಕೂಡಿದ ದೊಡ್ಡಪರ್ವತದ ತಪ್ಪಲುಗಳಂತೆ ಕಾಣಿಸಿದವು. ಗಂಭೀರವಾದ ದೇಹವುಳ್ಳವರಾಗಿಯೂ, ಎತ್ತಲ್ಪಟ್ಟ ಆಯುಧಗಳುಳ್ಳವರಾಗಿಯೂ, ಉನ್ನತವಾದ ಬಿರುದಾವಳಿಯುಳ್ಳವರಾಗಿಯೂ ಇರುವಅನೇಕಸಾವಿರ ಭಟರನ್ನು ಪ್ರತಿದ್ವಾರದಲ್ಲಿಯೂ ಇರಿಸಿ, ತಾನು ರಾತ್ರಿವೇಳೆಯಲ್ಲಿ ನಡುಕಟ್ಟನ್ನು ಕಟ್ಟಿಕೊಂಡು, ಖಡ್ಗಪಾಣಿಯಾಗಿ ಕಾವಲುಗಾರರೊಡನೆ ಪ್ರಮಾದವಿಲ್ಲದೆ, ಎಚ್ಚರವಾಗಿರಿ; ಎಂದು ಹೇಳುತ್ತಾ ತಿರುಗುತ್ತಿದ್ದನು. ಶಿವನಿಗೆ ಆರುಕಾಲಗಳಲ್ಲಿಯೂ ನೇಮಿಸಲ್ಪಟ್ಟ ಸಕಲೋಪಚಾರಗಳಿಂದ ಕೂಡಿದ ಅರ್ಚನೆಯು ಆಗಮೋಕ್ತಪ್ರಕಾರವಾಗಿ ಪ್ರತಿದಿನದಲ್ಲಿಯೂ ನಡೆಯುವದಕ್ಕಾರಂಭವಾಯಿತು.

ಹೀಗೆ ಅನೇಕ ದಿವಸಗಳು ಕಳೆಯುತ್ತಿರಲು; ಹೊಸದಾಗಿ ದ್ರವ್ಯವನ್ನು ಸಂಪಾದಿಸದೆ, ಇದ್ದದ್ದನ್ನೇವ್ರಯ ಮಾಡುತ್ತಿರುವ ಆ ದೀಪದ ಕಲಿ ಯಾರಿಗೆ ದಾರಿದ್ರ್ಯವು ಪ್ರಾಪ್ತವಾಯಿತು. ಆತನು ದರಿದ್ರನಾಗಲು, ಮದೋದಕಧಾರೆ ಸುರಿಯುವದು ಕಡಿಮೆಯಾದ ಆನೆಯನ್ನು ತುಂಬಿಗಳು ಬಿಡುವಂತೆ ಆತನ ಆಳುಗಳೆಲ್ಲರೂ ಬಿಟ್ಟು ಹೊರಟು ಹೋದರು. ಸಹಾಯಕರೆಲ್ಲರೂ ಹಿಂತಿರುಗಿದಾಗ್ಯೂಸಹಾಯವಂಬಯಸದದೀಪದ ಕಲಿಯೆಂಬ ಭಕ್ತನ ಮನಸ್ಸು ಹಿಂತಿರುಗಲಿಲ್ಲ. ದೃಢವ್ರತನಾದುದರಿಂದ ನಿರ್ಮಲಬುದ್ಧಿ ಸಂಪನ್ನನಾದ ಆತನು ತಾನೊಬ್ಬನೇ ಕೋಟೆಯ ಕಾವಲಿಗೋಸ್ಕರ ಬದ್ಧಕಂಕಣನಾಗಿ, ಕಯ್ಯಲ್ಲಿ ಕೊಡಲಿಯಂ ಹಿಡಿದು

ಕೋಟೆಯಸುತ್ತಲೂ ಕಾವಲಿಗಾಗಿ ಬೆಳೆಸಲ್ಪಟ್ಟವನಕ್ಕೈದಿ, ಒಣಗಿದ ಅನೇಕಹುಲ್ಲು ಗಳನ್ನು; ಬಳ್ಳಿಗಳನ್ನು, ಮರಗಳನ್ನು, ಕತ್ತರಿಸಿ, ಆ ಸೌದೆಗಳನ್ನು ಕೋಟೆಯ ಬಳಿಗೆ ತಂದು, ಏಂಗಡಿಸಿ. ಆಯಾ ಮೂಲೆಗಳಲ್ಲಿ ರಾತ್ರಿ ದೀಪಗಳಿಗೆ ಅನುಕೂಲ ಮಾಡಿದನು. ಅನಂತರದಲ್ಲಿ ಆ ಭಕ್ತನ ಚಿತ್ತದಾರ್ಢ್ಯದ ಸಮಾಚಾರವನ್ನು ಹೇಳು ವದಕ್ಕೋಸ್ಕರವೋ ಎಂಬಂತೆ ಸೂರ್ಯನು ಮೇರುಪರ್ವತದಮತ್ತೊಂದು ಭಾಗವನ್ನು ಸೇರಿದನು. ಆ ಭಕ್ತನಿಂದ ಹತ್ತಿಸಲ್ಪಡುವ ದೀಪಗಳಿಲ್ಲದ್ದರಿಂದ ಕೊಬ್ಬಿದ ಅಂಧ ಕಾರವು ಸಕಲ ಪ್ರಾಣಿಗಳ ಕಣ್ಣುಗಳನ್ನು ಕೊಕ್ಕರಿಸುವಂತೆ ಮಾಡಿದವು. ಆ ಭಕ್ತನು ಸಾಯಂಕಾಲದ ಶಿವಪೂಜೆಯನ್ನು ನೆರವೇರಿಸಿ, ದಟ್ಟಿಯನ್ನು ಕಟ್ಟಿ ಕೊಂಡು. ಖಡ್ಗವನ್ನುಹಿಡಿದು, ಕಾವಲು ಗಾರನಾಗಿ, ಒಬ್ಬನೇ ಹೊರಟು, ಕೋ ಟೆಯ ನಡುವೆ ಹೊತಾರೆ ಕೂಡಿಸಿಡಲ್ಪಟ್ಟ ಸೌದೆಗಳಿಗೆ ಬೆಂಕಿಯನ್ನು ಹತ್ತಿಸಿ, ಆಉರಿಗಳಿಂದ ಹತ್ತುದಿಕ್ಕುಗಳನ್ನು ಬೆಳಗಿದನು. ಈಪ್ರಕಾರವಾಗಿ ಪ್ರತಿದಿನದ ಲ್ಲಿಯೂ ಬೇದಿಸಲ್ಪಟ್ಟ ಆ ದೊಡ್ಡಕಾಡಿನಲ್ಲಿ ಹುಲ್ಲುಮಾತ್ರಉಳಿಯಿತು. ಆ ಭಕ್ತನು ಹುಲ್ಲನ್ನು ಕೂಡ ಕುಡುಗೋಲಿನಿಂದ ಕೊಯ್ದು ಬಿಸಿಲಲ್ಲಿ ಒಣಗಿಸಿ, ಒಂದೊಂದು ಮೊಳದಳತೆಯಲ್ಲಿ ಕಟ್ಟಿ, ಕೈ ದೀವಿಗೆಗಳನ್ನು ಮಾಡಿದನು. ಆಹುಲ್ಲಿನ ದೊಂದೆಗ ಳೆಲ್ಲವೂ ಕ್ರಮವಾಗಿ ಉರಿದುಹೋಗಿ, ಒಂದೇವಂದು ಉಳಿಯಿತು. ಆತನ ಅದೃ ಷ್ಟವಶದಿಂದ ರಾತ್ರಿಯು ಸ್ವಲ್ಪ ಉಳಿಯಲು, ಅವಿುಕಿದ್ದ ಹುಲ್ಲಿನ ಒಂದು ಸಿವು ಡನ್ನು ಹತ್ತಿಸಿ ಉರಿಸುವದಕ್ಕುಪಕ್ರಮಿಸಿದನು. ಅದೆಲ್ಲವೂ ಉರಿದು ಒಂದು ಹಿಡಿಯ ಮಟ್ಟಿಗೆ ವುಳಿಯಲು, ಆದರ ಉರಿಯನ್ನು ತನ್ನ ಜುಟ್ಟಿಗೆ ಹತ್ತಿಸಿದನು. ಜುಟ್ಟಿಗೆ ತಗಲಿದ ಆಬೆಂಕಿಯು ಊರ್ಧ್ವಮುಖವಾಗಿ ಉರಿಯುತ್ತಾ, ಬ್ರಹ್ಮರಂ ಧ್ರದಿಂದಹೊರಟು ಆತ್ಮಾಗ್ನಿಯೋ ಎಂಬತೆಕಾಣಿಸಿತು. ಅಷ್ಟರೊಳಗಾಗಿ ಪರಶಿ ವನು ನಂದಿ, ಭೃಂಗಿ, ಮೊದಲಾದ ಪ್ರಮಥರೊಡನೆಬಂದು, ಆ ಭಕ್ತನ ಇಷ್ಟಾ ರ್ಥವನ್ನು ಕೊಡುವದರಲ್ಲಿ ಆಸಕ್ತಿಯಿಂದ ಆತನಿಗೆ ಪ್ರತ್ಯಕ್ಷನಾಗಿ, ಎಲೈ ಭಕ್ತ ಶಿರೋಮಣಿಯೇ ! ನನ್ನ ಪಟ್ಟಣಕ್ಕೆ ಬಾರೆಂದು ಕರೆಯಲು; ದೀಪದ ಕಲಿಯಾ ರನು ಸಾಷ್ಟಾಂಗನಮಸ್ಕಾರವಂ ಮಾಡಿ, ಎದ್ದು, ಕೈಗಳನ್ನು ಮುಗಿದುಕೊಂಡು, ಸ್ವಾಮಿಾ ಈದೇವರನ್ನು ಒಂಟಿಯಾಗಿ ಬಿಟ್ಟು ನಾನು ನಿನ್ನ ಪಟ್ಟಣಕ್ಕೆ ಬರುವ ದಿಲ್ಲ. ಮತ್ತು ಉನ್ನತವಾದ ಕೋಟೆ, ಗೋಪುರಗಳಿಂದ ಪ್ರಕಾಶಿಸುವ ದೇವಾ ಲಯವನ್ನು ಕೂಡ ಬಿಟ್ಟು ಬರುವದಿಲ್ಲವೆಂದುನು. ಶಿವನು ಹಾಗೇ ಆಗಲಿ ಎಂದು

ಪ್ರಾಕಾರ ಗೋಪುರಗಳಿಂದ ಕೂಡಿದ ದೇವಾಲಯದಿಂದಲೂ, ಆ ಲಿಂಗದಿಂದಲೂ, ಸಹಿತವಾಗಿ ಆ ಭಕ್ತನನ್ನು ಕೈಲಾಸಕ್ಕೆ ಕರೆದುಕೊಂಡು ಹೋದನು.

---

## ನಾಟ್ಯನಮಿತ್ತಂಡಿಯ ಕಥೆ.

ಇದಲ್ಲದೆ ನಾಟ್ಯನಮಿತ್ತಂಡಿಯೆಂಬೊಬ್ಬ ಬ್ರಾಹ್ಮಣನು, ಪಾರ್ವತೀ ಪತಿಯಾದ ಶಿವನಲ್ಲಿ ನಿರ್ಮಲವಾದ ಭಕ್ತಿಯುಳ್ಳವನಾಗಿದ್ದನು. ಆತನು ಒಂದಾನೊಂದು ದಿನ ಕಾಂಚಿ ಪಟ್ಟಣದಲ್ಲಿ ಒಂದು ಶಿವಾಲಯಕ್ಕೆ ಹೋಗಿ, ಅಲ್ಲಿರುವ ತಾಂಡವ ಮೂರ್ತಿಯನ್ನು ನೋಡಿ, ಬಹು ದುಃಖಪಟ್ಟವನಾಗಿ, ಮೋಸ, ವಂಚನೆಗಳಲ್ಲಿ ಸಮರ್ಥನಾಗಿರುವ ಸಮೀಪದಲ್ಲಿದ್ದ ಅರ್ಚಕನನ್ನು ಬಹು ವಿನಯದೊಡನೆ;-ಎಲೈ ಪೂಜ್ಯನೇ! ಈ ಸ್ವಾಮಿಯು ಮೇಲಕ್ಕೆ ಎತ್ತಿದ ಎಡಗಾಲನ್ನು ನೆಲದ ಮೇಲಿಡಲಾರನು. ಮಡಿಸಿಕೊಂಡಿರುವ ಬಲಗಾಲಾದರೋ ನೆಟ್ಟಗಾಗುವದೇ ಇಲ್ಲ. ಕಾಲು, ಸೊಂಟ, ಕತ್ತು, ಈ ಮೂರು ಕಡೆಗಳಲ್ಲಿಯೂ ಸೊಟ್ಟವಾಗಿ ನಿಂತಿದ್ದಾನೆ. ಇದೇನುಕಾರಣ ಹೇಳೆಂದು ಕೇಳಲು, ವಂಚಕನಾದ ಅರ್ಚಕನು ಆ ಮುಗ್ಧನ ಮಾತನ್ನು ಕೇಳಿ, ಒಳಗೆ ಮುಗುಳು ನಗೆಯಿಂದ; ಅಯ್ಯಾ! ಈ ದೇವನು ಬಹುಕಾಲದಿಂದ ವಾಯುರೋಗ ಬಾಧೆಯನ್ನು ಅನುಭವಿಸುತ್ತಾನೆ ಹಣವನ್ನು ಕೊಡುವ ಯಾವನಾದರೂ ಒಬ್ಬ ಭಕ್ತನಿದ್ದರೆ ಈ ರೋಗವು ಪರಿಹಾರವಾದೀತು ಎಂದು ಹೇಳಿದನು. ಮುಗ್ಧನಾದ ನಾಟ್ಯನಮಿತ್ತಂಡಿಯು ಆ ಮಾತನ್ನು ಕೇಳಿ, ತನ್ನ ಮನೆಗೆ ಹೋಗಿ, ಮನೆ, ಗದ್ದೆ ಮೊದಲಾದ ಆಸ್ತಿಯನ್ನೆಲ್ಲಾ ಮಾರಿ, ಆ ಹಣವನ್ನು ತಂದು, ಆ ಅರ್ಚಕನ ಕೈಗೆ ಕೊಟ್ಟು, ಹ್ಯಾಗಾದರೂ ಮಾಡಿ, ಈ ಸ್ವಾಮಿಯ ರೋಗವನ್ನು ವಾಸಿಮಾಡಬೇಕೆಂದು ಬೇಡಿಕೊಂಡನು, ಆ ಮೋಸಗಾರನು ಆ ದ್ರವ್ಯವನ್ನೆಲ್ಲಾ ತೆಗೆದುಕೊಂಡು, ಕ್ರಮವಾಗಿ, ಕಾಸಿದ ಎಳ್ಳೆಣ್ಣೆಯನ್ನು ಹಚ್ಚುವದೇ ಮೊದಲಾದ ಸುಳ್ಳು ಚಿಕಿತ್ಸೆಯನ್ನು ಮಾಡುವದಕ್ಕೆ ಆರಂಭಿಸಿದನು. ಹೊಂಗೆ, ಲಕ್ಕಿ, ಎಕ್ಕ, ದತ್ತೂರಿ ಮೊದಲಾದ ಎಲೆಗಳನ್ನು ಹಾಕಿ, ಕಾಯಿಸಿದ ನೀರುನ್ನು ಹೊತಾರೆ ಸಾಯಂಕಾಲಗಳಲ್ಲಿ ಎರೆದನು. ಮತ್ತು ಮನಸ್ಸಿಗೆ ಬಂದಂತೆ ಕಲ್ಪಿಸಿದ ಮೂಲಿಕೆಗಳನ್ನು ಸೇರಿಸಿ, ಕಾಯಿಸಿದ ಎಣ್ಣೆಯನ್ನು ವಾಯು ತೈಲವೆಂದು ಹೇಳಿ, ತಾಂಡವೇಶ್ವರನ ದೇಹಕ್ಕೆ ತೊಡೆದನು. ಇವು ಮೊದಲಾದ ಚಿಕಿತ್ಸೆಯನ್ನು ಆ ಧೂರ್ತನಾದ ಅರ್ಚಕನು ಮುಗ್ಧ ಭಕ್ತನ

ಮುಂದೆ ಮಾಡುತ್ತಾ ಬಂದನು. ಹೀಗೆ ಕೆಲವು ದಿವಸಗಳು ಕಳೆಯುತ್ತಿರಲು; ನಾಟ್ಯನಮಿತ್ತಂಡಿಯು ಕಪಟ ವೈದ್ಯನ ಔಷಧಗಳಿಂದ ಯಾವದೊಂದು ಗುಣವನ್ನೂ ಕಾಣದೆ, ದುಃಖದಿಂದ ಪೀಡಿತನಾದನು.

ಅನಂತರದಲ್ಲಿ ಚಾಳಕನಾಗಿಯೂ, ಧೂರ್ತಧುರಂಧರನಾಗಿಯೂ, ವ್ಯಥೆಯಿಲ್ಲದವನಾಗಿಯೂ ಇರುವ ಆ ಅರ್ಚಕನು, ಮುಗ್ಧನೂ, ಕಪಟವನ್ನರಿಯದವನೂ, ವ್ಯಥೆಪಡುವವನೂ ಆಗಿದ್ದ ಆ ಮುಗ್ಧ ಭಕ್ತನನ್ನು ಕುರಿತು:-ಎಲೈ ಭಕ್ತನೇ! ನೀನೇನನ್ನಾಲೋಚಿಸುತ್ತಿಯೆ. ನಾನು ಇಷ್ಟು ಚಿಕಿತ್ಸೆಗಳನ್ನು ಮಾಡಿದಾಗ್ಯೂ ಶಿವನ ಅಂಗಗಳು ಸ್ವಲ್ಪವೂ ವ್ಯತ್ಯಾಸವನ್ನು ಹೊಂದದೆ, ಮುಂಚಿನಂತೆಯೇ ಕಾಣಲ್ಪಡುತ್ತವೆ. ಯಾವ ರೋಗವು ಶಾಸ್ತ್ರದಲ್ಲಿ ಹೇಳಲ್ಪಟ್ಟ ಔಷಧಗಳಿಂದ ಶಾಂತವಾಗುವದಿಲ್ಲವೋ ಆ ರೋಗವನ್ನು ವೈದ್ಯಶಾಸ್ತ್ರ ಪ್ರವೀಣರು, ಅಸಾಧ್ಯವೆಂದು ಹೇಳುತ್ತಾರೆ. ವಾತರೋಗ ಮೊದಲಾದ ಎಂಟು ರೋಗಗಳು ಮಹಾ ರೋಗಗಳೆಣಿಸುವವು. ಔಷಧಗಳಿಂದ ಸಾಧ್ಯವಾಗುವದಿಲ್ಲ. ಒಂದೊಂದು ಕಡೆ ಸಾಧ್ಯವಾಗುವವು. ನಾವುಗಳುಕೂಡ ಈ ರೋಗವು ಸಾಧ್ಯವಾದೀತೆಂದು ಆಲೋಚಿಸಿ, ಕೈಗಂಡ ಚಿಕಿತ್ಸೆಗಳನ್ನೆಲ್ಲಾ ಜಾಗರೂಕತೆಯಿಂದ ಚನ್ನಾಗಿ ಮಾಡಿದೆವು. ಏನು ಮಾಡತಕ್ಕದ್ದು. ಈ ರೋಗವು ಅಸಾಧ್ಯವು. ಇನ್ನೊಬ್ಬ ವೈದ್ಯನು ಈ ರೋಗವನ್ನು ವಾಸಿಮಾಡಿದರೆ ನಾನು ಅವನಿಗೆ ಸೇವಕನಾಗುತ್ತೇನೆಂದು ಪ್ರತಿಜ್ಞೆಯನ್ನು ಮಾಡಿ, ಅವನನ್ನು ಬಿಟ್ಟು ಮನಸ್ಸು ಬಂದಂತೆ ಹೊರಟುಹೋದನು. ನಾಟ್ಯನಮಿತ್ತಂಡಿಯು, ದುಃಖಾಸಕ್ತನಾಗಿ ಮನಸ್ಸಿನಲ್ಲಿ "ರೋಗಪೀಡಿತನಾಗಿ ಸಾಯುವದಕ್ಕಿರುವ ಶಿವನನ್ನು ನೋಡಿಕೊಂಡು, ಹ್ಯಾಗಿರಲಿ?" ಎಂದಾಲೋಚಿಸಿ, ಪ್ರಾಣತ್ಯಾಗವನ್ನು ಮಾಡಿಕೊಳ್ಳುವದರಲ್ಲಿ ದೃಢಚಿತ್ತನಾಗಿ, ತನ್ನ ತಲೆಯನ್ನು ಒಂದಾನೊಂದು ಕಲ್ಲಿಗೆ ಬಡಿದು ಕೊಳ್ಳಲು; ಆ ಕಲ್ಲಿನಿಂದ ಒಬ್ಬ ಮಂಗಳಕರನಾದ ಪುರುಷನು ಎದ್ದು, ಆತನ ಕೈಯನ್ನು ಹಿಡಿದುಕೊಂಡನು. ಅತನೇ ಶಿವನು. ಆ ಕ್ಷಣವೇ ಆ ಭಕ್ತನತಲೆಯ ಮೇಲೆ ಕೈಯನ್ನಿರಿಸಿ, ಮುಂದೆ ನಿಂತು ಅಮೃತಕ್ಕೆ ಸಮಾನವಾದ ಮಾತನ್ನು ಹೇಳಿದನು. ಎಲೈ ಪುತ್ರನೇ! ನಾನು ಪೂರ್ವಕಾಲದಲ್ಲಿ ನೋಡುವವರ ಪಾಪವನ್ನು ಪರಿಹರಿಸುವಂಥ, ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳಿಂದಲೂ ಹಿಂದೆನೋಡಲ್ಪಡದಂಥ ನಾಟ್ಯವನ್ನು ಮಾಡಿದೆನು. ಆ ನಾಟ್ಯದಲ್ಲಿ ಕುಸಿಯುತ್ತಿರುವ ಭೂಮಂಡಲವನ್ನು ಆದಿಶೇಷನು ಹೊರು

ವದಕ್ಕೆ ಅಶಕ್ತನಾದನು ಆ ಭೂಭಾರವನ್ನು ಧರಿಸಲಾರದೆ ಆದಿಕೂರ್ಮನ ಬೆನ್ನೋಟೆಯು ಒಡೆದುಹೋಯಿತು. ವಿಶೇಷವಾಗಿ ನಾನು ತಿರುಗುವ ವೇಗವನ್ನು ಸಹಿಸಲಾರದೆ ದಿಗ್ಗಜಗಳು ಗಿರ್ರನೆ ಸುತ್ತಿದವು. ಕುಲಾಚಲಗಳು ಒಂದಕ್ಕೊಂದು ತಗಲಿ ಧ್ವನಿಮಾಡಿಕೊಂಡು, ಬಿದ್ದು ಹೊರಳಾಡಿದವು. ಸಮುದ್ರಗಳು ಕಲಕಲ್ಪಟ್ಟು, ಅವುಗಳ ತೆರೆಗಳಿಂದ ಆಕಾಶವೆಲ್ಲವೂ ವ್ಯಾಪ್ತವಾಯಿತು. ನಕ್ಷತ್ರಸಮೂಹವು ಪುಷ್ಪಾಂಜಲಿಯಂತೆ ಉದರಿತು. ಮೇಲಕ್ಕೆ ಎತ್ತಿದ ಪಾದದ ಹೆಬ್ಬೆರಳು ತಗಲಿದ್ದರಿಂದುಂಟಾದ ಮಹಾನಾದವು ಬ್ರಹ್ಮಾಂಡ ಕಟಾಹದಮೇಲ್ಭಾಗವನ್ನಾವರಿಸಿತು. ಒಲೆದಾಡುವ ಜಡೆಗಳ ಹೊದರಿನಲ್ಲಿ ಸುತ್ತುತ್ತಿರುವ ದೇವಗಂಗೆಯಿಂದ ಜಾರಿದ ಹನಿಗಳು ಶ್ರಮಗೊಂಡ ಆಭರಣಸರ್ಪಗಳನ್ನು ಸಮಾಧಾನಗೊಳಿಸಿದವು. ಜಡೆಗಳು ಉಜ್ಜುವದರಿಂದ ಹೊರಟಚಂದ್ರನಅಮೃತರಸವು ಬೀಳುವದರಿಂದ ಚೇತನಗೊಂಡು, ಅಟ್ಟಹಾಸವಂಮಾಡುವಕಪಾಲಗಳು ನರ್ತನವನ್ನು ಶ್ಲಾಘಿಸಿದವು. ಸಕಲ ಪ್ರಪಂಚವನ್ನು ಮುಚ್ಚಿದಡಮರುಗದ ಪ್ರಬಲವಾದ ಶಬ್ದದಿಂದಕರೆಯಲ್ಪಟ್ಟ ಬ್ರಹ್ಮಾದಿ ದೇವತೆಗಳು ಆಶ್ಚರ್ಯದಿಂದ ನೋಡಿದರು. ಇದು ಆ ನಾಟ್ಯದ ಲಕ್ಷಣವೇ ಹೊರತು ವಾಯುಮೊದಲಾದ ರೋಗದಲಕ್ಷಣವಲ್ಲ. ನನ್ನನ್ನೇ ರಕ್ಷಕನೆಂದು ತಿಳಿದಿರುವ ನನ್ನ ಭಕ್ತರು ಸಕಲ ಅಶುಭಗಳ ಶಾಂತಿಗಾಗಿ, ನನ್ನ ಈ ಮೂರ್ತಿಯನ್ನು ಸೇವಿಸುತ್ತಾರೆ. ಈಪ್ರಕಾರವಾಗಿ ಭಕ್ತರಿಗೆಮುಖ್ಯ ಬಂಧುವಾದ ಶಿವನು ಹೇಳಿ, ಸಂತುಷ್ಟನನ್ನು ಮಾಡಿ, ದಿವ್ಯ ವಿಮಾನವನ್ನೇರಿಸಿ, ಕೈಲಾಸಕ್ಕೆ ಕರೆದೊಯ್ದನು.

---

## ಕನ್ನಪ್ಪನ ಕಥೆ

ದಕ್ಷಿಣಕೈಲಾಸವೆಂಬ ಒಂದಾನೊಂದು ಪರ್ವತಶ್ರೇಷ್ಠವಿರುವದು. ಆ ಪರ್ವತದಲ್ಲಿ ಶಿವನೆಂಬ ಒಂದಾನೊಂದುಮರವು (ಕಣ್ಣಪ್ಪನ ಅಭಿಷೇಕಜಲದಿಂದ ಸೇಚಿಸಲ್ಪಟ್ಟದ್ದಾಗಿ) ಜ್ಞಾನವೆಂಬ ಪುಷ್ಪಕೋರಕದಿಂದ ಕೂಡಿ, ಅಪೇಕ್ಷಿಸಲ್ಪಟ್ಟ ಫಲವನ್ನು ಕೊಡುತ್ತದೆ. ಮತ್ತು ಅಲ್ಲಿ ಗುಡಿ.ಗಿನಂತೆ ಗಂಭೀರವಾಗಿಯೂ, ತರಂಗಗಳಂತೆ ವಿಸ್ತೀರ್ಣವಾಗಿಯೂ ಇರುವ ಸ್ವರ್ಣಮುಖರೀಯೆಂಬ ನದಿಯು ದಿಗಂತಗಳಲ್ಲೆಲ್ಲಾ ಪ್ರತಿಧ್ವನಿಗೊಡುತ್ತಾ ಹರಿಯುತ್ತದೆ. ಆದುಶಿವನಿಗೆ ಇಷ್ಟವಾದ ಸಕಲ ಗುಣಗಳಿಂದಲೂ, ಕೈಲಾಸಕ್ಕೆ ಸಮಾನವಾಗಿದ್ದಾಗ್ಯೂ, ದಕ್ಷಿಣದಿಕ್ಕಿನಲ್ಲಿ ಪ್ರಸಿ

ದ್ಧಿಯೆಂಬೊಂದು ವಿಶೇಷಗುಣವು ಅದರಲ್ಲಿ ಕಾಣಬರುತ್ತದೆ. ಆ ಗಿರಿಯಲ್ಲಿ ಕಿರಾತನೂ ಬ್ರಾಹ್ಮಣನೂ ಇಬ್ಬರು ಮೋಕ್ಷದಲ್ಲಿ ಶಿವಭಕ್ತಿಗೆ ಜಾತಿಭೇದವಿಲ್ಲವೆಂಬ ಆಗಮಮಾರ್ಗವನ್ನು ಸತ್ಯವನ್ನಾಗಿ ಮಾಡಿದರು. ಶಿವನನ್ನು ಆಶ್ರಯಿಸಿದ ಆನೆ, ಹುಳ, ಕಿರಾತ ಮೊದಲಾದ ಪ್ರಾಣಿಗಳು ಕೂಡ ಆ ಪರ್ವತದಲ್ಲಿ ಯೋಗಿಗಳಿಗೂ ದುರ್ಲಭವಾದ ಗತಿಯನ್ನು ಪಡೆಯುತ್ತವೆ. ಅಲ್ಲಿ ಪರಶಿವನಿಗೆ ಕಣ್ಣಪ್ಪನು ಮುಕ್ಕುಳಿಸಿದ ನೀರಿನಿಂದ ಆಗತಕ್ಕ ಸಂತೋಷವು ಗಂಗಾನದಿಯು ತೆರೆಯ ನೀರಿನಅಭಿಷೇಕದಿಂದಲೂ, ತೆರೆಯಲ್ಲಿ ಕಣ್ಣಪ್ಪನ ಪಾದುಕೆಯಿಂದ ಕೂಡಿದ ಪಾದವನ್ನಿಡುವದರಿಂದುಂಟಾಗುವ ಆನಂದವು ಪಾರ್ವತಿಯು ಲಾಕ್ಷಾರಸದಿಂದ ಕೂಡಿದ ಪಾದನ್ಯಾಸದಿಂದಲೂ ಉಂಟಾಗಲಿಲ್ಲ. ಲೋಕದಲ್ಲಿ ರೂಪವನ್ನರ್ಪಿದ ಬಳಿಕ ರುಚಿಯು ಅರ್ಪಣವೆಂದು ಪ್ರಸಿದ್ಧವಷ್ಟೆ. ಆಸಂಗತಿಯನ್ನು ಅಲ್ಲಿ ಕಣ್ಣಪ್ಪನು ವ್ಯತ್ಯಾಸಮಾಡಿ, ಶಿವನನ್ನು ತೃಪ್ತಿಪಡಿಸಿದನು. ಏನಂದರೆ ಮೊದಲು .ರುಚಿಯನ್ನು ಅರ್ಪಿಸಿ, ಆಮೇಲೆ ರೂಪವನ್ನು ಅರ್ಪಿಸಿದನೆಂದು ತಾತ್ಪರ್ಯ. ಈ ಪ್ರಕಾರವಾಗಿ ಅಧಿಕವಾದಮಹಿಮೆಯುಳ್ಳ ಆ ಪರ್ವತದ ಎಲ್ಲೆ ಕಟ್ಟಿನಲ್ಲಿ ಸಕಲ ಪ್ರಾಣಿಗಳಿಗೆ ಆಶ್ರಯವಾಗಿಯೂ, ಅತಿ ಭಯಂಕರವಾಗಿಯೂ, ಆಶ್ಚರ್ಯಕರವಾಯೂ ಇರುವ ಅರಣ್ಯವಿದೆ. ಆ ವನವು ಸಿಂಹ, ಶರಭ, ಹುಲಿ, ಆನೆ, ಘೇಂಡ, ಮುಂತಾದ ಮೃಗಗಳಿಂದ ಅಲಂಕೃತವಾಗಿಯೂ ಅನೇಕ ವೃಕ್ಷಗಳಿಂದ ಭರಿತವಾಗಿಯೂ ಇರುವದರಿಂದ ಎರಡನೆಯ ಖಾಂಡವವನವೋ ಎಂಬಂತಿರುವದು. ಆ ಕಾಡಿನಲ್ಲಿ ಮೃಗಗಳಿಗೆ ಯಮಪುರಿಯಾಗಿಯೂ ಘಾತುಕರಿಗೆ ಆಶ್ರಯವಾಗಿಯೂ, ಕ್ಷುದ್ರ ದೇವತೆಗಳಿಗೆ ಮನೆಯಾಗಿಯೂ, ಇರುವ ಒಂದು ಬೇಡರ ಪಾಳ್ಯವಿರುವದು. ಅದು ದೊಡ್ಡ ಮೃಗಗಳ ಬಲಿಯನ್ನು ಕೊಡುವದರಿಂದಲೂ, ಮಾಂಸವನ್ನು ಅರ್ಪಿಸುವದರಿಂದಲೂ, ವನಮಹಾಕಾಳಿಯನ್ನು ತೃಪ್ತಿಪಡಿಸುವ ಕಿರಾತವೀರರಿಂದ ಭಯಂಕರವಾಗಿರುವದು, ಅಲ್ಲಿ ವಾಸಿಸುವ ಕಿರಾತವೀರರಿಗೆ ಯಾವಾಗಲೂ ಧನುಸ್ಸೇ ಆಯುಧವು; ಬೇಟೆಯೇಸಾಧನೆಯು; ನಾಯಿಗಳೇ ಸೇವಕರು. ಆ ಪರ್ವತದಲ್ಲಿ ಆನೆಗಳ ಕುಂಭಸ್ಥಲಗಳಿಂದ ಎಳೆಯಲ್ಪಟ್ಟ ಮುತ್ತುಗಳ ಕಾಂತಿಯೆಂಬ ಬೆಳದಿಂಗಳು ವಿಸ್ತೀರ್ಣವಾದ ಕಸ್ತೂರಿಯಿಂದ ಮಾಡಲ್ಪಟ್ಟ ಅಂಧಕಾರವನ್ನು ಪರಿಹರಿಸುತ್ತದೆ. ಮತ್ತು ಅಲ್ಲಿನ ಕಿರಾತಸ್ತ್ರೀಯರು ಹುಬ್ಬೆಂಬ ಬಿಲ್ಲಿನಲ್ಲಿ ಕಡೆಗಣ್ಣೆಂಬ ಬಾಣವನ್ನುಹೂಡಿ, ಹಾರುತ್ತಿರುವ ಯೌವನಸ್ಥರೆಂಬ ಹುಲ್ಲೆಗಳನ್ನು

ಹೊಡೆಯುತ್ತಾರೆ. ಅಲ್ಲಿನ ಕಿರಾತಸ್ತ್ರೀಯ ಮುಖಕಮಲವು ಕಡೆಗಣ್ಣಸೌಂದರ್ಯ ವನ್ನು ಅಪಹರಿಸಿದ ಹುಲ್ಲೆಯ ಸಂಬಂಧವನ್ನು ಮಾಡಿದ ವಿರೋಧಿಯಾದ ಚಂದ್ರ ನನ್ನು ನಿಂದಿಸುತ್ತದೆ. ಅಲ್ಲಿನ ಕಿರಾತರಿಂದ ಹೊಡೆಯಲ್ಪಟ್ಟ ಆನೆಗಳ ಕುಂಭಗಳೂ, ಸೊಂಡಿಲುಗಳೂ, ಗಮನಗಳೂ ಸೇರಿ, ಕ್ರವಾಗಿ ಆ ಬೇಡತಿಯರ ಸ್ತನಗಳೂ, ತೊಡೆಗಳೂ, ನಡಿಗೆಗಳೂ ಆಗಿ, ತಿರಿಗಿ ಆ ಕಿರಾತರನ್ನೇಹೊಡೆಯುವವು. ಜಿಂ ಕೆಯ ಕಣ್ಣಿನಂತೆ ಕಣ್ಣುಳ್ಳವರಾಗಿಯೂ, ಸಿಂಹದ ನಡುವಿನಂತೆ ನಡುವುಳ್ಳವರಾ ಗಿಯೂ, ಆನೆಯ ಕುಂಭದಂತೆ ಕುಚವುಳ್ಳವರಾಗಿಯೂ ಇರುವ ಬೇಡತಿಯರು ಸ್ವಲ್ಪಹೊತ್ತು ಕಿರಾತರಿಗೆ ಮೃಗಸಮೂಹವೆಂಬ ಭ್ರಾಂತಿಯನ್ನುಂಟುಮಾಡು ವರು. ಅಲ್ಲಿರುವ ಬೇಡರ ಹುಡುಗರು ಆನೆಯತಲೆಯ ಮುತ್ತುಗಳನ್ನು ಸರ್ಪದ ತಲೆಯ ರತ್ನಗಳನ್ನು ಮಣ್ಣು ಮಿಟ್ಟೆಗಳಂತೆ ಬಿಲ್ಲಿಗೆ ಸೇರಿಸುವರು. ಮತ್ತು ಅಲ್ಲಿನ ಹೆಂಗಸರು ಹಾಡುತ್ತಾ ಶ್ರೀಗಂಧದ ಒರಳಿನಲ್ಲಿ ಆನೆಯ ಕೊಂಬುಗಳಿಂದ ಮಾಡ ಲ್ಪಟ್ಟ ಒನಕೆಗಳಿಂದ ಸ್ವಚ್ಛವಾದ ಬಿದಿರಕ್ಕಿಗಳನ್ನು ಕುಟ್ಟುವರು. ಅಲ್ಲಿರುವ ಕಿರಾ ತರಿಗೆ ಎಲೆಗಳೇ ವಸ್ತ್ರಗಳು; ಗುಲುಗುಂಜಿಯಸರಗಳೇ ಆಭರಣಗಳು; ಆನೆಯ ಮದೋದಕವೇ ಮನೋಹರವಾದ ಅನುಲೇಪನವು. ಆಗಿರಿಯಲ್ಲಿ ತನು, ಧನ, ಮನಗಳನ್ನು ಶಿವನಿಗೆ ಸಮರ್ಪಿಸಿದ ಕನ್ನಪ್ಪನೆಂಬೊಬ್ಬ ಕಿರಾತಾಧಿಪತಿಯು ಇದ್ದನು. ಆತನು ವಂದಾನೊಂದು ಕಾಲದಲ್ಲಿ ಬೇಟೆಯನ್ನಾಡಬೇಕೆಂಬ ಕುತೂಹ ಲದಿಂದ ಕೈಯಲ್ಲಿ ಬಿಲ್ಲನ್ನು ತೆಗೆದುಕೊಂಡು, ತನ್ನ ಮಿತ್ರರಾದ ಕಿರಾತರೊಡನೆ ವನವಂಪ್ರವೇಶಿಸಿದನು. ಅಲ್ಲಿ ಇಗೋ ಇವು ಸಿಂಹಗಳಿರುವ ತಾಣಗಳು. ಇವು ಹಂದಿಗಳ ಹೆಜ್ಜೆಗಳು. ಇವು ಆನೆಗಳ ಮಾರ್ಗಗಳು ಎಂದು ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತಾ, ಮನಸ್ಸುಬಂದಕಡೆಗೆ ಮೃಗಗಳ ದಾರಿಯನ್ನು ಆಶ್ರೈ ಸುತ್ತಾ, ವನಾಂತರಕ್ಕೆ ನುಗ್ಗಿದರು. ಆಗ ಕನ್ನಪ್ಪನು ತನಗೆಬೇಕಾದ ಮಾರ್ಗವ ನ್ನನುಸರಿಸಿ, ವನದಲ್ಲಿ ಸುತ್ತಿಸುತ್ತಿ, ಬಹು ಬಳಲಿದವನಾಗಿ, ಯಾವುದೋ ಒಂದು ಗುಹೆಯಲ್ಲಿಮಲಗಿಕೊಂಡು, ಸಕಲೇಂದ್ರಿಯಗಳನ್ನು ನಿಗ್ರಹಿಸಿದ ಯೋಗಿಗಳಿಂ ದಲೂ ಕಾಣುವದಕ್ಕೆ ಅಶಕ್ಯನಾದ ಶಿವನನ್ನು ಸ್ವಪ್ನದಲ್ಲಿ ಕಂಡನು ಕೆಂಪಾದ ಜಡೆ ಮುಡಿಯಿಂದ ಪ್ರಕಾಶಮಾನನಾಗಿಯೂ, ಭಸ್ಮದಿಂದ ಸುಭ್ರನಾಗಿಯೂ, ಇರು ವದರಿಂದ; ಚಲಿಸದ ಮಿಂಚಿನಿಂದ ಸೋಂಕಲ್ಪಟ್ಟ ಶರತ್ಕಾಲದಮೇಘಕ್ಕೆ ಸಮಾ ನನಾಗಿಯೂ, ರತಿದೇವಿಯ ಕರ್ಣಾಭರಣಕ್ಕೆ ವಿವರ್ಣತೆಯನ್ನುಂಟುಮಾಡಿದ

ಮತ್ತು ಲೋಕವನ್ನು ಸುಟ್ಟು ಭಸ್ಮಧೂಳಿಯುಳ್ಳ ನೇತ್ರದಿಂದ ಕೂಡಿದ ಹಣೆಯುಳ್ಳವನಾಗಿಯೂ, ಕಮಲನಿಗೂ, ಕುಮುದಿನಿಗೂ, ಸ್ವಾಹಾದೇವಿಗೂ, ಸೌಖ್ಯಸಂಪತ್ತಿಯನ್ನುಂಟುಮಾಡುವ ಮತ್ತು ದಯಾರಸದಿಂದ ತುಂಬಿದ ದರ್ಶನವುಳ್ಳ ಕಣ್ಣುಗಳಿಂದ ಮನೋಹರವಾದ ಮುಖವುಳ್ಳವನಾಗಿಯೂ, ಪಾರ್ವತಿಯ ಸ್ಥನಪ್ರದೇಶದಲ್ಲಿ ಲೇಪಿಸಲ್ಪಟ್ಟ ಕುಂಕುಮರಸದಿಂದ ಗುರುತಾಗಿಮಾಡಲ್ಪಟ್ಟ ಎದೆಯಲ್ಲಿ ಹೊಸಹೊಸವಾದ ಬ್ರಹ್ಮ, ವಿಷ್ಣು, ಮೊದಲಾದವರ ಶಿರೋಮಾಲಿಕೆಗಳನ್ನು ಧರಿಸಿದವನಾಗಿಯೂ, ಆಭರಣರೂಪವಾದ ಸರ್ಪದತಲೆಯರತ್ನ ಕಾಂತಿಸಮೂಹದಿಂದಕೆಂಪಾಗಿಮಾಡಲ್ಪಟ್ಟ ಮತ್ತು ಚಂದ್ರಕಿರಣದಂತೆ ಶುಭ್ರವಾಗಿರುವ ನರಸಿಂಹನಚರ್ಮವನ್ನು ಹೊದ್ದುಕೊಂಡಿರುವವನಾಗಿಯೂ, ಕಾಲ್ಗಡಗಗಳಾಗಿ ಮಾಡಲ್ಪಟ್ಟ ವೇದಗಳುಳ್ಳವನಾಗಿಯೂ ಪಾದುಕೆಗಳೆಂಬ ಪೀಠವನ್ನು ಹತ್ತಿದ ಪಾದಕಮಲವುಳ್ಳವನಾಗಿಯೂ, ಇರುವ ಚಂದ್ರಶೇಖರನನ್ನು ಕನ್ನಪ್ಪನು ನೋಡಿ ಆನಂದದಿಂದ ತುಂಬಲ್ಪಟ್ಟ ಹೃದಯವುಳ್ಳವನಾಗಿ, ನಮಸ್ಕರಿಸಿದ ಭಕ್ತರಿಗೆ ಸಂತೋಷವಂ ಕೊಡುವ ಆತನಪಾದಗಳಿಗೆರಗಿದನು. ಆಗ ಜಗದೀಶನು ಕನ್ನಪ್ಪನನ್ನು ಕೈವಿಡಿದೆತ್ತಿಸಫಲವಾದ ದಯಾರಸದಿಂದ ನೆನೆದ ನೇತ್ರಗಳಿಂದ ಸ್ನಾನವನ್ನುಮಾಡಿಸುತ್ತಾನೋ! ಎಂಬಂತೆನೋಡಿ, ಎಲೈ ಭಕ್ತನೇ! ಮುಂದೆ ಒಂದುಹರಿದಾರಿಯ ದೂರದೊಳಗೆ ಒಂದು ಶಿವಲಿಂಗವಿರುವದು; ಅದೇ ನಿನ್ನ ಪ್ರಾಣಲಿಂಗವು; ಅದನ್ನು ನೀನು ಭಕ್ತಿಭಾವದಿಂದಸೇವಿಸು; ಎಂದುಹೇಳಿ, ಶೀಘ್ರವಾಗಿ ಕನಸಿನಲ್ಲಿಯೇ ಅಂತರ್ಧಾನನಾದನು. ಕನ್ನಪ್ಪನುಕೂಡ ಕನಸಿನಸಂಗತಿಯನ್ನು ಸ್ಮರಿಸಿಕೊಂಡು ಎದ್ದು ಮುಂದೆ ಹಿಂದೆ ಹತ್ತುದಿಕ್ಕುಗಳನ್ನು ನೋಡಿ, ಬೇರೆಯಾವದನ್ನು ಕಾಣದೆ, ಸ್ವಪ್ನವೆಂದೇ ನಿಶ್ಚೈಸಿದನು. ಬಳಿಕ ಪೂರ್ವದಿಕ್ಕನ್ನನುಸರಿಸಿ, ಒಂದು ಹರಿದಾರಿದೂರ ಹೋಗಿ, ಅಲ್ಲಿಸೇವಕರ ದುಃಖವನ್ನು ಪರಿಹರಿಸುವಂಥ ಶಿವಲಿಂಗವನ್ನು ನೋಡಿ,ಕನಸಿನಲ್ಲಿ ಕಂಡನಿಧಿಯನ್ನು ಎಚ್ಚರವಾದಾಗ ಎದುರಿಗೆ ನೋಡಿದವನಹಾಗೆ ಕನ್ನಪ್ಪನು ಆ ಮಹಾಲಿಂಗವನ್ನು ನೋಡಿ, ಬಹಳವಾಗಿ ಸಂತೋಷಪಟ್ಟು, ಸ್ವಪ್ನದಲ್ಲಿ ತಪಸ್ವಿಯಿಂದ ಸೂಚಿಸಲ್ಪಟ್ಟ ಈ ಮಹೇಶನನ್ನು ಕಂಡೆನು. ಈತನೇ ನನ್ನ ಪ್ರಾಣಲಿಂಗವಾಗಿ ಕಲ್ಪಿಸಲ್ಪಟ್ಟನು. ಈತನನ್ನು ಬಿಟ್ಟುಹೋಗುವದಕ್ಕೂ, ಈತನ ಸಮೀಪದಲ್ಲಿಯೇ ಯಾವಾಗಲೂ ಇರುವದಕ್ಕೂ ಆಗುವದಿಲ್ಲ. ಆದಕಾರಣ ಈತನನ್ನು ನನ್ನಮನೆಗೆ ಕರೆದುಕೊಂಡುಹೋಗಿ, ಒಂದು ಪರ್ಣಶಾಲೆಯಲ್ಲಿ ಪ್ರತಿಷ್ಠಿಸಬೇಕು.

ನನ್ನ ಮನೆಯಲ್ಲಿ ಮಳೆ, ಗಾಳಿ, ಬಿಸಿಲು, ಧೂಳು, ಮುಂತಾದ ದೋಷಗಳಿಲ್ಲ. ಪರ್ಣಶಾಲಾವಾಸ ಮುಂತಾದ ಗುಣಗಳನ್ನು ಅನೇಕ ವಿಧವಾಗಿ ತೋರಿಸಿ, ಮಾಂಸಾಶೆಯನ್ನು ಹುಟ್ಟಿಸುವೆನು. ಆಮೇಲೆ ನನ್ನ ಕೂಡಹೋಗಬೇಕೆಂಬ ಇಚ್ಛೆಯುಂಟಾಗುವದೆಂದುಮನಸ್ಸಿನಲ್ಲಿ ನಿಶ್ಚೈಸಿ, ಶಿವನನ್ನು ಕುರಿತು ಹೇಳಿದನು. ಏನೆಂದರೆ;—ಎಲೈ ಸ್ವಾಮಿಾ! ಪೂಜೆಯನ್ನು ಮಾಡುವವರೊಳಗೆ ಕಲಹವುಂಟಾದದ್ದರಿಂದ ನೀವು ಕೋಪಗೊಂಡು ವನಕ್ಕೈದಿದೆಯೋ? ಇಲ್ಲವೆ ಅವರುಮಾಡಿದ ಉಮ್ಮತ್ತಿಯ ಹೂವಿನ ಪೂಜೆಯಿಂದ ಬುದ್ಧಿಭ್ರಾಂತಿಯನ್ನು ಹೊಂದಿದೆಯೋ? ಇಲ್ಲವೆ ತೊಡೆಯಲ್ಲಿಯೂ ಶಿರದಲ್ಲಿಯೂ ಇರುವ ಗಂಗೆ ಗೌರಿಯರಿಗೆ ಮನಸ್ಸಿನಲ್ಲಿ ದ್ವೇಷವು ಹಚ್ಚಿ, ವಾಗ್ವಾದವುಂಟಾದದ್ದರಿಂದ ಏನೂ ಬೇಡವಾಗಿ ವನಕ್ಕೆ ಬಂದೆಯೋ? ಅಂತ್ಯಜಾತಿಯವನಾದ ಚನ್ನಯ್ಯನಸ್ನೇಹವನ್ನು ಮಾಡಿದೆಯೆಂದು ಜನಗಳು ನಿನ್ನನ್ನು ಬಹಿಷ್ಕರಿಸಿದ್ದರಿಂದ ಹೆಂಡತಿಮಕ್ಕಳನ್ನು ಬಿಟ್ಟು ವನಕ್ಕೈದಿದೆಯೋ ವಾಮಾಂಗವನ್ನು ಗೌರಿಯದೇಹದಿಂದ ಅಲಂಕರಿಸಿಕೊಂಡೆನು; ಇನ್ನೊಬ್ಬಳಿಂದ ದಕ್ಷಿಣಭಾಗವನ್ನೂ ಅಲಂಕಾರಗೊಳಿಸಬೇಕೆಂಬ ಕೋರಿಕೆಯಿಂದ ತಪಸ್ಸನ್ನು ಮಾಡುವದಕ್ಕೋಸ್ಕರ ಅರಣ್ಯಕ್ಕೆ ಬಂದೆಯೋ? ಯಾವಾಗಲೂ ಸುಂದರನಂಬಿಯು ನೇಮಿಸಿದ ದೂತಕೃತ್ಯವನ್ನು ಮಾಡಿ ಆಯಾಸಗೊಂಡು, ಅವನ ಕಣ್ಣಿಗೆ ತಪ್ಪಿಸಿಕೊಂಡು ಕಾಡಿಗೆಬಂದೆಯೋ? ತಾನು ಸೃಷ್ಟಿಸಿದ ಮಗಳನ್ನೇ ಕ್ರೀಡಿಸಲಪೇಕ್ಷಿಸಿ, ಹುಲ್ಲೆಯ ರೂಪವನ್ನು ಧರಿಸಿ, ಯಾವಕಡೆಗೋ ಹೋದ ಬ್ರಹ್ಮನನ್ನು ಹುಡುಕಿ, ಹೊಡೆಯುವದಕ್ಕೋಸ್ಕರ ಅಡವಿಗೆ ಬಂದೆಯೋ? ಬಹಳ ಹೂಹೆಗಳಿಂದೇನು? ನನ್ನ ಭಾಗ್ಯವಶದಿಂದ ನನ್ನ ಸಂಸಾರದುಃಖವನ್ನು ನಿವಾರಿಸುವದಕ್ಕೋಸ್ಕರ ಇಲ್ಲಿಗೆ ಬಂದಿದ್ದೀಯೆ. ನೀನು ಬಂದು ಎಷ್ಟು ಕಾಲವಾಯಿತು? ನಿನ್ನ ವಾಹನವಾದ ಮುದಿಯೆತ್ತು ಎಲ್ಲಿ ಹೋಯಿತು? ಅದು ಯಾವಕಡೆಇದೆ ಹೇಳು, ಅದನ್ನು ತೆಗೆದುಕೊಂಡುಬರುತ್ತೇನೆ; ಮಳೆ, ಬಿಸಲು, ಗಾಳಿ, ಇವುಗಳಿಂದ ವ್ಯಾಪ್ತವಾದ ಈ ಸ್ಥಲಕ್ಕೆ ಹ್ಯಾಗೆಬಂದೆ? ಜೊತೆಯಲ್ಲಿ ಒಬ್ಬರಾದರೂ ಇಲ್ಲದೆ ಈ ಭಯಂಕರವಾದ ವನವನ್ನು ಪ್ರವೇಶಿಸಬಹುದೇ? ಕಿರಾತಹುಡುಗರು, ನಿನ್ನ ಕೈಯ್ಯಲ್ಲಿರುವ ಹುಲ್ಲೆಯಮರಿಯನ್ನು ನೋಡಿದರೆ, ವಿನೋದಕರವಾದ ಬಾಣಪ್ರಯೋಗದಿಂದ ಕೊಲ್ಲುತ್ತಾರೆ. ಆನೆ ಹುಲಿಗಳನ್ನು ಕೊಂದವನಾಗಿರುವದರಿಂದಲೂ, ಸಿಂಹದ ಚರ್ಮವನ್ನು ಹೊದ್ದಿರುವವನಾದುದರಿಂದಲೂ, ತಮ್ಮ

ಕುಲಕ್ಕೆ ದ್ವೇಷಿಯಾದ ನಿನ್ನಮೇಲೆ ಕಾಡಿನಮೃಗಗಳು ಕೋಪಗೊಳ್ಳುತ್ತವೆ. ಈ ವನದಲ್ಲಿ ಶರಬಗಳೂ ಸಿಂಹಗಳೂ ಇವೆ. ಮುಂದೆ ದೊಡ್ಡದೊಡ್ಡ ಆನೆಗಳೂ ಹುಲಿಗಳೂ ಇವೆ. ಆದ್ದರಿಂದ ಇದು ನೀನಿರುವದಕ್ಕೆ ಯೋಗ್ಯವಾದ ಸ್ಥಲವಲ್ಲ. ಆದಕಾರಣ ನೀನು ನಮ್ಮ ಮನೆಗೆ ಬಂದು ಅಲ್ಲಿ ಯಾವದಾದರೂ ಒಂದು ಪರ್ಣ ಶಾಲೆಯಲ್ಲಿ ವಾಸಿಸಬೇಕು. ಅಲ್ಲಿರುವ ವಸ್ತುಗಳನ್ನು ಕೇಳು. ಬಂಡೆಯುಮೇಲೆ ಬಿದ್ದು ಘಟ್ಟಿಯಾದ ಕಾಡೆಮ್ಮೆಯುಹಾಲೂ, ಅದರಿಂದ ಮಾಡಲ್ಪಟ್ಟ ಬಿದಿರ ಕ್ಕಿಯ ಪಾಯಸವೂ ಇವೆ. ಚನ್ನಾಗಿ ಪಕ್ವವಾಗಿಯೂ, ಸಣ್ಣಬಿತ್ತಗಳಿಂದ ಕೂಡಿ ದ್ದಾಗಿಯೂ ಸುಗಂಧದಿಂದ ದಿಕ್ಕುಗಳನ್ನು ಸುವಾಸನೆಗೊಳಿಸುವದಾಗಿ ಯೂ, ಜೇನಿನಿಂದ ಕಲಸಲ್ಪಟ್ಟದ್ದಾಗಿಯೂ ಇರುವ ಬೇಲದಹಣ್ಣು ಇದೆ. ಎಲಚೀಹಣ್ಣು, ನೆಲ್ಲೀಕಾಯಿ, ನೇರಿಲಹಣ್ಣು, ಅತ್ತೀಹಣು, ಮಾವಿನಹಣ್ಣು ಇನ್ನೂ ನಾನಾವಿಧಗಳಾದ ಬೇರೆಬೇರೆ ಹಣ್ಣುಗಳೂ ಇವೆ. ಕಬ್ಬಿಣದ ಮುಳ್ಳಿ ನಲ್ಲಿ ಬೇಯಿಸಲ್ಪಟ್ಟ ಮಾಂಸವೂ, ಪಾತ್ರೆಯಲ್ಲಿ ಬೇಯಿಸಲ್ಪಟ್ಟ ಮಾಂಸವೂ, ಕೊಬ್ಬಿನರಸಗಳನ್ನು ಹಾಕಿ ಹುರಿಯಲ್ಪಟ್ಟ ಮಾಂಸವೂ, ಹಗಲೂ ರಾತ್ರಿ ತಿನ್ನು ವದಕ್ಕೆ ಸಾಕಾಗಿವೆ. ಇಲ್ಲವೆ ಈ ವನದಲ್ಲಿ ಯಾವಯಾವ ಸೀಹಣ್ಣು ಅಥವಾ ಯಾವ ಮಾಂಸವು, ನಿನಗೆ ಇಷ್ಟವೋ ಅದನ್ನು ಹೇಳು. ಶೀಘ್ರದಲ್ಲಿತಂದು ನಿನ್ನ ಮುಂದಿಡುವೆನು. ಆದ್ದರಿಂದ ಎಲೈ ಶಿವನೇ ನಡಿ. ಬೇಡರಹಳ್ಳಿಗೆ ಹೋಗೋಣ ಎಂದು ಪ್ರೀತಿಯಿಂದ ಪ್ರಾರ್ಥಿಸಿ ಪದೇಪದೇ ನಮಸ್ಕರಿಸಿದನು. ಆಗ ತನ್ನ ಮಾತ ನ್ನು ಕೇಳದವನಂತೆ ಅಲ್ಲಾಡದೆಯೂ, ಉತ್ತರವಂಕೊಡದೆಯೂ ಇರುವ ಶಿವಲಿಂಗ ವನ್ನುನೋಡಿ, ಕನ್ನಪ್ಪನು ಹಸಿವಿನ ಬಾಧೆಯಿಂದ ಶಿವನು ಕಿವುಡನಾಗಿದ್ದಾನೆಂದು ಭಾವಿಸಿಕೊಂಡು ಈಗ ಈ ಹಸಿವನ್ನು ಶಮನಪಡಿಸಿದಮೇಲೆ ನನ್ನೂರಿಗೆ ಕರೆದು ಕೊಂಡು ಹೋಗಬೇಕು. ಹಾಗಿಲ್ಲದಿದ್ದರೆ ಮಾತನಾಡುವದಕ್ಕೂ ಅಶಕ್ತನಾದೀ ತನು ನಡೆಯುವದಕ್ಕೆ ಹ್ಯಾಗೆ ಶಕ್ತನಾದಾನು ? ಈ ಪ್ರಕಾರವಾಗಿ ಕನ್ನಪ್ಪನು ಆಲೋಚಿಸಿ, ಕೈಲಿ ಬಿಲ್ಲನ್ನುತೆಗೆದುಕೊಂಡು, ಗೆಡ್ಡೆಗೆಣಸುಗಳನ್ನೂ, ಹಣ್ಣುಗ ಳನ್ನೂ ಕಾಯಿಪಲ್ಯಗಳನ್ನೂ ಮೃದುವಾದಮಾಂಸವನ್ನೂ, ತರುವದಕ್ಕೋಸ್ಕರ ವನಕ್ಕೈದಿದನು. ಪೂರ್ವಕಾಲದಲ್ಲಿ ಮಹಾಕಾಯನು, ಸುಂದರನು ಎಂಬ ಇಬ್ಬರು ರಾಕ್ಷಸರು ಅನೇಕ ತಪಸ್ಸುಗಳಿಂದ ಶಿವನನ್ನು ಮೆಚ್ಚಿಸಿದರು. ಸ್ವಾಧೀನವಾದ ಮನೋಲಯವುಳ್ಳ ಅವರ ಉಗ್ರತಪಸ್ಸುಗಳಿಗೆ ಶಿವನು ಮೆಚ್ಚಿ ಪ್ರತ್ಯಕ್ಷನಾಗಿ, ಅವ

ರಿಗೆ ಹೇಳಿದ್ದೇನಂದಲೆ! ನಿಮ್ಮ ತಪಸ್ಸಿನಿಂದ ನಾನು ಸಂತುಷ್ಟನಾಗಿದ್ದೇನೆ, ಬ್ರಹ್ಮ. ವಿಷ್ಣು, ದೇವೇಂದ್ರರ ಅಧಿಕಾರಗಳೊಳಗೆ ಯಾರಅಧಿಕಾರವು ನಿಮಗೆಬೇಕು? ಕೊಟ್ಟೇನು ಹೇಳಿರಿ. ಎಂದನು. ಅಂತರಿಕ್ಷದಲ್ಲಿ ಆ ರಾಕ್ಷಸರೀರ್ವರೂ ನಮಸ್ಕರಿಸಿ, ಶಿವಸಾನ್ನಿಧ್ಯದಿಂದುಂಟಾದ ಸಂತೋಷದಿಂದ ತುಂಬಲ್ಪಟ್ಟವರಾಗಿ;——ಎಲೈ ಸ್ವಾಮಿಯೇ! ನಮ್ಮ ಜಲಂಧರಾಸುರನ ಬಾಹುದಂಡಪ್ರಹಾರಗಳಿಂದ ಹೋಗಲಾಡಿಸಲ್ಪಟ್ಟ ಪರಾಕ್ರಮವುಳ್ಳ ವಿಷ್ಣುವಿನ ಅಧಿಕಾರದಿಂದ ನಮಗೇನುಫಲವು? ನಮ್ಮ ಸೋಮಕಾಸುರನಿಂದ ಸೆಳೆಯಲ್ಪಟ್ಟ ಸಮಸ್ತವಾದ ವೇದಸಂಪತ್ತುಳ್ಳವನಾಗಿ ಮೂಗತನವನ್ನು ಹೊಂದಿದ ಬ್ರಹ್ಮನಪದವಿಯಿಂದ ನಮಗೇನು? ನಮ್ಮ ತಾರಕಾಸುರನ ಪರಾಕ್ರಮಾಗ್ನಿಯಿಂದ ಸುಡಲ್ಪಟ್ಟ ತನ್ನ ಶೌರ್ಯವುಳ್ಳ ಇಂದ್ರನ ಹಗಲಿನ ದೀಪದಂತೆ ಪ್ರಕಾಶಹೀನವಾದ ಅಧಿಕಾರದಿಂದ ನಮಗಾಗುವದೇನು? ಈ ಮಾತನ್ನು ಕೇಳಿ, ಶಿವನು ಯಾವದು ನಿಮಗಿಷ್ಟವೋ ಹೇಳಿರಿ, ಅದನ್ನು ಕೊಡುತ್ತೇನೆನಲು; ಆ ರಾಕ್ಷಸರಿಬ್ಬರೂ;– ‹‹ಎಲೈ ಸ್ವಾಮಿಯೇ! ನಮ್ಮ ದೇಹಗಳಮಾಂಸವನ್ನು ಸ್ವೀಕರಿಸುವವಿಷಯದಲ್ಲಿಯೇ ಕೃಪೆಯಂಮಾಡು.,, ಎಂದು ಪ್ರಾರ್ಥಿಸಿದರು. ಶಿವನು ಕೇಳಿ;– ಎಲೈ ರಾಕ್ಷಸರಿರಾ! ನೀವು ದಕ್ಷಿಣಕೈಲಾಸವೆನಿಸಿದ ಕಾಳಹಸ್ತಿಪರ್ವತದ ಪ್ರಾಂತದಲ್ಲಿರುವ ಮಹಾರಣ್ಯದಲ್ಲಿ ನಿಮ್ಮ ಮಕ್ಕಳು, ಸ್ನೇಹಿತರು, ಹೆಂಡತಿಯರು, ಇವರೊಡನೆ ಮೃಗರೂಪದಿಂದ ಸಂಚರಿಸುತ್ತಿರಿ; ಅಲ್ಲಿ ಕನ್ನಪ್ಪನೆಂಬ ನನ್ನಭಕ್ತನಿದ್ದಾನೆ. ಆತನು ಇತರರಿಗೆ ಕಾಣಿಸಿಕೊಳ್ಳದ ನಿಮ್ಮನ್ನು ನಿಮ್ಮ ಬಂಧುಹಿತವಾಗಿಕೊಂದು, ಮಾಂಸವನ್ನು ನನಗೆ ಸಮರ್ಪಿಸುತ್ತಾನೆ,, ಎಂದು ಅಪ್ಪಣೆಯಂಕೊಟ್ಟನು. ಆ ಶಿವಾಜ್ಞೆಗೊಳಗಾಗಿ ಬಂಧುಗಳೊಡನೆ ಮೃಗರೂಪದಿಂ ಸಂಚರಿಸುತ್ತಿರುವ ಆ ರಾಕ್ಷಸನನ್ನು ಕನ್ನಪ್ಪನುನೋಡಿ, ಒಂದೊಂದು ಬಾಣದಿಂದ ಒಂದೊಂದುಮೃಗವನ್ನು ಹೊಡೆದು, ಕೆಳಗೆ ಬಿದ್ದದ್ದನ್ನು ತೆಗೆದುಕೊಂಡು, ಶಸ್ತ್ರದಿಂದಕತ್ತರಿಸಿ ಅದರಲ್ಲಿ ಉತ್ತಮವಾದ ಮಾಂಸಖಂಡವನ್ನು ಬೇರೆಮಾಡಿ, ಬಾರಿಬಾರಿಗೂ ಬೆಂಕಿಯಲ್ಲಿಕಾಸಿಕಾಸಿ, ಮಗ್ಗಿಸಿ, ಬೆರಳುಗಳಿಂದ ಮುಟ್ಟಿ ಮುಟ್ಟಿ, ಹದವಾಗಿ ಬೆಂದು ಪಕ್ವವಾದ ಹತ್ತಿಹಣ್ಣಿನಂತೆ ಕೆಂಪಾದವುಗಳನ್ನು ಎಲೆಗಳಮೇಲೆ ರಾಸೀಹಾಕಿ, ಆ ರಾಸಿಯನ್ನು ಎಲೆಗಳಿಂದ ಮುಚ್ಚಿ ದೊನ್ನೆಯನ್ನುಕಟ್ಟಿ, ತಾನು ಮೊದಲು ರುಚಿನೋಡಿ, ಯಾವ ಯಾವ ಮಾಂಸಖಂಡವು ಸವಿಯಾಗಿಯೂ, ಮನೋಹರವಾಗಿಯೂ ತೋರುವದೋ ಅದನ್ನೆಲ್ಲಾ ಆದು ದೊನ್ನೆಗೆ

ತುಂಬಿಕೊಂಡು, ತಲೆಯನ್ನು ಹೂವಿನಬುಟ್ಟಿಯನ್ನಾಗಿಯೂ, ಬಾಯನ್ನು ಅರ್ಘ್ಯ ಪಾತ್ರೆಯನ್ನಾಗಿಯೂ, ಮಾಡಿಕೊಂಡು, ಎಡಗೈಯಲ್ಲಿ ಧನುರ್ಬಾಣಗಳನ್ನು ತೆಗೆದುಕೊಂಡುಹೊರಟು, ಶಿವಲಿಂಗದಬಳಿಗೆ ಬಂದು, ಆ ಲಿಂಗದ ಮಸ್ತಕದಮೇಲೆ ಅರ್ಚಕನಿಟ್ಟಿದ್ದ ಪುಷ್ಪಗಳನ್ನು ಕೆರಗಾಲಿನಿಂದತಳ್ಳಿ, ಬಾಯಲ್ಲಿ ತುಂಬಿಕೊಂಡಿರುವ ನೀರಿಂದ ಅಭಿಷೇಕವನ್ನುಮಾಡಿ, ತನ್ನ ತಲೆಯಲ್ಲಿ ಇಟ್ಟುಕೊಂಡಿದ್ದ ಹೂವುಗಳನ್ನು ಎರಚಿ, ದೊನ್ನೆಯೊಳಗಿರುವ ಮಾಂಸಖಂಡವನ್ನು ಮುಗ್ಧ ಭಕ್ತಿಯಿಂದ ಕೂಡಿದ ಮನಸ್ಸಿನಿಂದ ಶಿವನಿಗೆನಿವೇದಿಸಿದನು.

ಈ ಪ್ರಕಾರವಾಗಿ ಆ ಕನ್ನೈಯ್ಯನು ಪ್ರತಿದಿನವೂ ಶಿವನಿಗೆ ಪೂಜೆಯನ್ನು ಮಾಡುತ್ತಾ ಸಂಚರಿಸುತ್ತಿರಲು ; ಮುಂಚಿನ ಪೂಜಕನು ಆ ಅಪೂರ್ವ ಪೂಜೆಯನ್ನು ನೋಡಿ, ಅದರ ಕಾರಣವನ್ನು ತಿಳಿಯದೆ, ಬಹು ಚಿಂತಾಕ್ರಾಂತನಾಗಿ ಈ ಶಿವಾಲಯವು ಅಪವಿತ್ರವಾಗಿ ಮಾಡಲ್ಪಟ್ಟಿತಲ್ಲಾ ಎಂದು ಅತಿ ದುಃಖಪಟ್ಟು, ಅಲ್ಲಿ ಬಿದ್ದಿದ್ದ ಮಾಂಸದ ತುಂಡುಗಳನ್ನು ಒಂದು ಕಡ್ಡಿಯಿಂದ ಹೊರಗೆ ಹಾಕಿ ಶ್ರೀರುದ್ರ, ಚಮಕ, ಮೊದಲಾದ ಮಂತ್ರಗಳನ್ನು ಹೇಳಿಕೊಂಡು, ಪಂಚಾಮೃತದಿಂದ ಸ್ನಾನವನ್ನುಮಾಡಿಸಿ, ಆ ಮೇಲೆ ಸ್ವರ್ಣಮುಖರೀ ನದಿಯ ಜಲದಿಂದ ಅಭಿಷೇಕಿಸಿ, ಯಾವನೋ ಕಿರಾತನು ಹೀಗೆ ಮಾಡುತ್ತಾನೆ ಹ್ಯಾಗೆ ಅವನನ್ನು ನೋಡಲಿ ಎಂದು ವ್ಯಸನಾಕ್ರಾಂತನಾಗಿ ಮನೆಗೆ ಬಂದನು. ಅನಂತರದಲ್ಲಿ ಆ ಬ್ರಾಹ್ಮಣನು ಮಾರನೇದಿನ ಬೆಳಿಗ್ಗೆ ಎಂದಿನಂತೆ ಶಿವಾಲಯಕ್ಕೆ ಬಂದು, ಬೇಡನ ಪೂಜೆಯನ್ನು ನೋಡಿ, ದುಃಖಿತನಾಗಿ ಹೊಸದಾಗಿ ಪೂಜೆಯನ್ನು ಮಾಡಿದನು. ಆ ಪೂಜಕನು ಆಗ ಕೋಪವನ್ನು ಮನಸ್ಸಿನಲ್ಲಿ ಮುಚ್ಚಿಕೊಂಡು, ಒಂದು ಗಿಡದ ಹೊದರಿನೊಳಗೆ ಮರೆಯಾಗಿ ಕುಳಿತುಕೊಂಡನು. ಆಬಳಿಕ ಕನ್ನಪ್ಪನು ಧನುರ್ಬಾಣಗಳನ್ನು ಹಿಡಿದುಕೊಂಡು, ನೈವೇದ್ಯ, ಅರ್ಘ್ಯ, ಪುಷ್ಪಗಳನ್ನು ಪೂರ್ವದಂತೆ ತೆಗೆದುಕೊಂಡುಬಂದು, ತನ್ನ ಮನಸ್ಸಿನ ಜ್ಞಾನದಲ್ಲಿ ಹುಟ್ಟಿದ ಮಹಾಶಾಸ್ತ್ರದಲ್ಲಿ ಹೇಳಲ್ಪಟ್ಟ ಮಾರ್ಗವನ್ನನುಸರಿಸಿ, ನಿಶ್ಚಲಚಿತ್ತನಾಗಿ ಶಿವನನ್ನು ಪೂಜಿಸಿದನು. ಮುಂಚಿನ ಪೂಜಕನು ಕನ್ನಪ್ಪನ ಅಪೂರ್ವ ಪೂಜೆಯನ್ನು ನೋಡಿ, ತಿರಿಗಿ ತನ್ನ ಮನೆಗೆ ಬಂದು,ದುಃಖದಿಂದ ಸುಡಲ್ಪಟ್ಟವನಾಗಿ, ಆಲೋಚಿಸಿದನು. ಏನಂದರೆ; ಈ ಕಿರಾತನ ತಲೆಯಾಗಲಿ, ಬಾಯಾಗಲಿ, ಕಾಲಾಗಲಿ, ನೂರು ಹೋಳಾಗಲಿಲ್ಲ. ಸರ್ವಾಂತರ್ಯಾಮಿಯೂ, ನಿತ್ಯನೂ, ಆಗಿರುವ ಶಿವನು ಈ ಲಿಂಗದಲ್ಲಿಲ್ಲವೇನೋ ?

ಶಿವಭಕ್ತನ ಹಸ್ತಕಮಲವೆಲ್ಲಿ? ಕಿರಾತನ ಕೆರಗಾಲೆಲ್ಲಿ? ನಿರ್ಮಲವಾದ ಅಭಿಷೇಕ ಜಲವೆಲ್ಲಿ? ಬಾಯಿ ಮುಕ್ಕಳಿಸಿದ ನೀರೆಲ್ಲಿ? ತಲೆಯ ಕೂದಲುಗಳಿಂದ ದೂಷಿತ ವಾಗದ ಪುಷ್ಪವೆಲ್ಲಿ? ಕೂದಲುಗಳೊಳಗೆ ಮಡಗಿದ ಪುಷ್ಪವೆಲ್ಲಿ ಪರಿಶುದ್ಧವಾದ ನೈವೇದ್ಯಾನ್ನವೆಲ್ಲಿ? ಕಿರಾತನ ಎಂಜಲ ಮಾಂಸವೆಲ್ಲಿ? ಅಯ್ಯೋ ಆ ಕಿರಾತನು ಮಾಡಿದ ತಪ್ಪುಗಳಿಗಾಗಿ ಶಿವನು ಯಾಕೆ ಅವನನ್ನು ಶಿಕ್ಷಿಸುವದಿಲ್ಲವೋ? ಒಂದು ವೇಳೆ ಪುರ್ವದಲ್ಲಿ ಕಿರಾತಜಾತಿಯ ರೂಪನ್ನು ಧರಿಸಿದ ಅಭಿಮಾನದಿಂದ ಅಪಮಾನ ವನ್ನು ಸೈರಿಸಿಕೊಳ್ಳುತ್ತಾನೋ ಸಾಂಖ್ಯನ ಕಯ್ಯ ಕಲ್ಲೆಸುಗೆಯಿಂದಲೂ, ಅರ್ಜು ನನ ಬಿಲ್ಲನೇಟಿನಿಂದಲೂ, ಕೋಪಗೊಳ್ಳದ ಶಿವನಿಗೆ ಈ ನೀಚ ಕಿರಾತನು ಮಾಡಿದ ತಪ್ಪು ಎಷ್ಟುಮಾತ್ರವು? ಸೇವಕನ ತಪ್ಪಿಗೆ ಯಜಮಾನನ್ನು ಶಿಕ್ಷಿಸಬೇಕೆಂಬ ಮಾ ತಿನರ್ಥಕ್ಕೆ ಗುರಿಯಾದನು. ಶಿವನು ಸಾಂಖ್ಯನ ಕಲ್ಲುಗಳಿಂದಲೂ, ಈ ಕಿರಾತನ ಕಾಲಿನೇಟುಗಳಿಂದಲೂ, ಪೀಡಿಸಲ್ಪಪಟ್ಟನು. ಈಶ್ವರನು ಬೇಕಾದರೆ ಸೈರಿಸಲಿ. ಈ ಮನುಷ್ಯಾಧಮನನ್ನು ನಾನು ಸೈರಿಸಲಾರೆನು. ಶಿವದ್ರೋಹವನ್ನು ತಿಳಿದು ಯಾವ ನು ಅಲಕ್ಷ್ಯಮಾಡುತ್ತಾನೋ ಅವನು ಪಾಪಿಷ್ಠನು. ಇದಲ್ಲದೆ ನಾನು ಬ್ರಾಹ್ಮಣನು ಯುದ್ಧಕ್ಕೆ ಹೆದರುವೆನು, ಮತ್ತು ಅಶಕ್ತನೂ, ಆಯುಧಗಳಲ್ಲಿ ಮೂಢನೂ ಆಗಿ ರುವೆನು; ಆ ಕಿರಾತನು ಮೇಲೆ ಹೇಳಿದ್ದಕ್ಕೆ ವಿರುದ್ಧವಾದ ನಡತೆಯುಳ್ಳವನಾ ಗಿದ್ದಾನೆ. ಆದಕಾರಣ ಇವನೊಡನೆ ನಾನು ಯುದ್ಧವನ್ನು ಮಾಡುವದಕ್ಕಾಗು ವದಿಲ್ಲ. ಹಾಗಾಧರೂ ಈ ವಿಷಯದಲ್ಲಿ ನಾನು ಹೆದರುವದಿಲ್ಲ. ಯಾಕಂದರೆ:- ಪೂರ್ವದಲ್ಲಿ ಜೇಡರಹುಳವು ತನ್ನ ನೂಲಿನಿಂದ ಮಾಡಲ್ಪಟ್ಟ ಉತ್ತಮವಾದ ಶಿವಾಲಯವನ್ನು ನಾಶಪಡಿಸುತ್ತಿದ್ದ ಆನೆಯನ್ನು ಕೊಂದಿತಲ್ಲವೇ? ನನಗೆ ಬೇರೆ ಸಹಾಯವಿಲ್ಲದಿದ್ದರೂ ಶಿವನ ಸಹಾಯವೆಂಬ ಬಲದಿಂದ ತುಂಬಲ್ಪಟ್ಟವನಾಗಿ, ಭಕ್ತಿಯೆಂಬ ಕವಚದಿಂದ ರಕ್ಷಿಸಲ್ಪಟ್ಟವನಾಗಿ, ಶಿವನಾಜ್ಞೆಯೆಂಬ ಶಸ್ತ್ರವನ್ನು ಹಿಡಿದವನಾಗಿ, ಶಿವದ್ರೋಹಿಯನ್ನು ಕೊಲ್ಲುವೆನು. ಹೀಗೆ ನಿರ್ಣಯಿಸಿಕೊಂಡು, ಮಾರನೇ ದಿನ ದೇವಾಲಯಕ್ಕೆ ಹೋಗಿ, ಶಿವನನ್ನು ಪೂಜಿಸಿ, ತನ್ನ ಪ್ರತಿಜ್ಞೆಯ ನ್ನು ಹೇಳಿದನು. ಏನಂದರೆ:——ಎಲೈ ಪರಮೇಶ್ವರನೇ! ದ್ರೋಹಿಗೂ,ನನಗೂ, ಈ ದಿವಸದಲ್ಲಿ ಯುದ್ಧವು ನಡೆಯುವದು. ಇದರಲ್ಲಿ ಅವನಿಗೆ ಅವಸಾನ ವಾಗಲಿ. ಇಲ್ಲವೆ ನಮ್ಮಿಬ್ಬರೊಳಗೆ ಯಾರಿಗಾದರೂ ಅವಸಾನವಾಗಲಿ. ಎಂದು ಶಿವನಿಗೆ ಬಿನ್ನೈಸಿ, ಯುದ್ಧ ಸನ್ನದ್ಧವಾಗಿಯೂ, ದೃಢವಾಗಿಯೂ ಇರುವ

ಬುದ್ಧಿಯುಳ್ಳವನಾಗಿ, ಬೇರೊಂದಾಲೋಚನೆಯಿಲ್ಲದೆ ಬಳ್ಳಿಗಳ ಪೊದರ ಮರೆಯಲ್ಲಿ ನಿಂತುಕೊಂಡನು. ದೇವತಾ ಸಾರ್ವಭೌಮನಾದ ಶಿವನು ಪ್ರೌಢನಾದ ಆ ಅರ್ಚಕನಿಗೆ ಮುಗ್ಧ ಭಕ್ತನಾದ ಕಣ್ಣಪ್ಪನ ಭಕ್ತಿಭಾವವನ್ನು ತೋರಿಸುವದಕ್ಕೆ ಉದ್ಯುಕ್ತನಾಗಿ ಲಿಂಗದ ಒಂದು ಕಣ್ಣಿನಲ್ಲಿ ನೀರನ್ನು ಸುರಿಯುವಂತೆ ಮಾಡಿದನು. ಬಳಿಕ ಕಣ್ಣಪ್ಪನು ಬಂದು ಮುಖವನ್ನು ಧರಿಸಿಕೊಂಡಿರುವವನಾಗಿಯೂ, ಕಣ್ಣೀರಿಂದ ಕೂಡಿದ ಒಂದು ನೇತ್ರವುಳ್ಳವನಾಗಿಯೂ, ಇರುವ ಶಿವನನ್ನು ನೋಡಿ, ಉತ್ಸಾಹಗುಂದಿ, ಬಹಳ ದುಃಖಪಟ್ಟು, ಜಾಗ್ರತೆಯಲ್ಲಿ ಮುಂಚಿನಂತೆ ಪೂಜೆಯುಂಮಾಡಿ, ಮುಂದೆ ನಿಂತು,-ಎಲೈ ಸ್ವಾಮಿಾ! ಇದೇನು ನಿನ್ನ ಬಲಗಣ್ಣಿನಲ್ಲಿ ನೀರು ಸುರಿಯುತ್ತದೆ. ದಕ್ಷಬ್ರಹ್ಮನು ನಿನ್ನನ್ನು ಬಿಟ್ಟು ಯಜ್ಞವನ್ನು ಮಾಡಿದ್ದರಿಂದ ಆತನು ನಿನಗೆ ಮಾಡಿದ ದ್ರೋಹವನ್ನು ಸೈರಿಸಧೆ, ಸತೀನಾಮಕಳಾದ ನಿನ್ನ ಪತ್ನಿಯು ದೇಹವನ್ನು ಬಿಟ್ಟಳೆಂಬ ವಾರ್ತೆಯನ್ನು ನಂದೀಶನ ಮುಖದಿಂದ ಕೇಳಿದಾಗ ನಿನ್ನ ಕಣ್ಣಿನಲ್ಲಿ ನೀರು ಬರಲಿಲ್ಲ. ಸಿರಿಯಾಳನನ್ನು ಯಾಚಿಸಿ, ಅವನಿಂದ ಆತನ ಮಗನನ್ನು ಕೊಯ್ಸುವಾಗಲಾದರೂ ಕರುಣಾಳುವಾದ ಮನಸ್ಸುಳ್ಳ ನಿನ್ನ ಕಣ್ಣಲ್ಲಿ ನೀರು ಬರಲಿಲ್ಲ. ಪಿಟ್ಟವ್ವೆಯು ಕೊಡುವ ದೋಸೆಯ ಪಿಟ್ಟಿಗಾಗಿ ಚೋಳನ ಕಟ್ಟೆಗೆ ಮಣ್ಣು ಹೊರುವ ಸಮಯದಲ್ಲಿ ರಾಜಪುರುಷರ ಚಾವಟಿಯ ಏಟನ್ನು ತಿಂದು ನಿನ್ನ ಕಣ್ಣಿನಲ್ಲಿ ನೀರು ಬರಲಿಲ್ಲ. ಅರ್ಜುನನ ಕಠಿಣವಾದ ಬಿಲ್ಲಿನ ಪೆಟ್ಟುಗಳಿಗೆ ಸಮಾನವಾದ ಸಾಂಖ್ಯನ ಕಲ್ಲಿನೇಟುಗಳಿಂದಲೂ ನಿನ್ನ ಕಣ್ಣಿನಲ್ಲಿ ನೀರು ಸುರಿಯಲಿಲ್ಲ. ತಪಸ್ಸನ್ನು ಮಾಡಿದ ಬಾಣನಿಗೆ ವರವನ್ನು ಕೊಟ್ಟು ಬಂಟಿಯಾಗಿ ಅವನಮನೆಯ ಬಾಗಿಲನ್ನು ಕಾಯುವಾಗಲೂ ನಿನ್ನ ಕಣ್ಣಿನಲ್ಲಿ ನೀರು ಬರಲಿಲ್ಲ. ನಾನು ಹೆಂಡತಿ ಮಕ್ಕಳನ್ನು ಬಿಟ್ಟು ಒಬ್ಬನೇ ಈ ಕಾಡಿಗೆ ಬಂದನೆಂದು ಅಳುತ್ತೀಯೋ? ಇಲ್ಲವೇ ನಿನ್ನ ವಾಹನವಾದ ವೃಷಭವನ್ನು ಕಾಣದೆ ಅಳುತ್ತೀಯೋ? ಜೂಜಾಡುವ ಸಮಯದಲ್ಲಿ ಪಾರ್ವತಿಯು ಪಂಥ್ಯವಾಗಿಟ್ಟಿದ್ದ ಚಂದ್ರರೇಖೆಯುನ್ನು ಗೆದ್ದು, ತೆಗೆದುಕೊಂಡಳೆಂದು ಅಳುತ್ತೀಯೋ? ಮಡಿಗಿರೆಂದು ಕೊಟ್ಟಿದ್ದ ಭಿಕ್ಷಾಪಾತ್ರೆಯನ್ನು ತಿರುನೀಲಕಂಠನು ಕೊಡಲಿಲ್ಲವೆಂಬ ದುಃಖದಿಂದ ಕಣ್ಣೀರನ್ನು ಸುರಿಸುತ್ತೀಯೋ? ಸುಂದರನಂಬಿಯಿಂದ ವೇಶ್ಯಾಲಯಕ್ಕೆ ಕಳುಹಿಸಲ್ಪಟ್ಟವನಾಗಿ ಆಕೆಯ ಸಖಿಯರಿಂದ ಪೆಟ್ಟುಗಳನ್ನು ತಿಂದದ್ದನ್ನು ನೆನಸಿಕೊಂಡು ಅಳುತ್ತೀಯೋ? ಈ ಪ್ರಕಾರವಾದ ಮಾತುಗಳನ್ನಾಡಿಕೊಂಡವನಾಗಿ ಮೊದಲು ಉದ್ದ

ವಾದ ಉಸುರುಗಾಳಿಗಳಿಂದ ಅಡ್ಡಲಾಗಿ ಅನೇಕಸಾರಿ ಉರುಬಿ, ಕಣ್ಣುಗಳನ್ನು ಶೋಧಿಸಿದನು. ಮತ್ತು ಕಣ್ಣುಗಳ ಒಳಗೆ ತನ್ನ ನಾಲಿಗೆಯತುದಿಯನ್ನಿಟ್ಟು, ಲೋಮವಾಗಿಯೂ, ವಿಲೋಮವಾಗಿಯೂ, ಬಹಳಸಾರಿ ತಿರುಗಿಸಿದನು. ಹೀಗೆ ಉಸಿರಿನಗಾಳಿಯನ್ನು ಪ್ರಯೋಗಿಸುವದರಿಂದಲೂ, ನಾಲಿಗೆಯನ್ನಿಟ್ಟು ತಿರುಹುವುದರಿಂದಲೂ, ಕಣ್ಣಿನಲ್ಲಿ ಮರಳನ್ನಾದರೂ, ಹುಲ್ಲನ್ನಾದರೂ, ಗಾಯದಮೊಳಕೆಯನ್ನಾದರೂ ಕಾಣದೆ, ಅಂಗೈಯಿಂದ ಮುಟ್ಟಿ, ಆ ಕಣ್ಣೀರನ್ನು ಒರಸಿ ಆ ಲಿಂಗದ ಮುಖವನ್ನು ತನ್ನ ಎದೆಯಲ್ಲಿಟ್ಟುಕೊಂಡು ಬಹು ದುಃಖಪಟ್ಟವನಾಗಿ ತಬ್ಬಿಗೊಂಡನು. ಬಳಿಕ ಬಟ್ಟೆಯ ಪೊಟ್ಟಣವನ್ನು ಕಟ್ಟಿ, ಬಾಯ ಉಷ್ಣದಿಂದ ಬೆಚ್ಚಗೆಮಾಡಿ, ಪದೇಪದೇ ಒತ್ತಡವಂ ಕೊಟ್ಟು, ಆ ಬಟ್ಟೆಯು, ಕಣ್ಣೀರಿನಿಂದ ನೆನೆಯುತ್ತಿರಲು, ಬಸವಳಿದನು. ಆ ಲಿಂಗದ ಒಂದು ಕಡೆಗಣ್ಣನ್ನು ಬೆರಳಿಸಿಂದ ಅಮುಕಿಗೊಳ್ಳಲು, ಮತ್ತೊಂದು ಕಡೆಗಣಿಂದ ಚೀಕರ್ಳೊವೆಯಿಂದ ಹೊರಟಂತೆ ಜಲಧಾರೆಯು ವಿಶೇಷವಾಗಿ ಹೊರಟಿತು. ಎರಡು ಕಣ್ಣುಗಳನ್ನು ಬೆರಳುಗಳಿಂದ ಒತ್ತಿ ಹಿಡಿಯಲು, ಕಣ್ಣೀರಧಾರೆಯು ರೆಪ್ಪೆಯ ಕೂದಲುಗಳನ್ನು ಭೇದಿಸಿಕೊಂಡು ಹೊರಟಿತು. ಕೈಯಿಂದ ಕಣ್ಣನ್ನು ಅದಿಮಿಕೊಳ್ಳಲು, ಕಣ್ಣೀರು ಎಲ್ಲಾಕಡೆಯು ಹರಿಯುತ್ತಾ,ಸಮುದ್ರವನ್ನು ಮುಚ್ಚುತ್ತದೋ ಎಂಬಂತೆವ್ಯಾಪಿಸಿತು. ಕಣ್ಣೀರು ನಿಲ್ಲದಿರಲು, ಕನ್ನಪ್ಪನು ಅಯ್ಯೋ ಕಷ್ಟವು, ಕೆಟ್ಟನಲ್ಲಾ ಏನುಮಾಡಲಿ? ಯಾರಕೂಡ ಹೇಳಲಿ ?ಯಾರು ಇದಕ್ಕೆ ತಕ್ಕ ಚಿಕಿತ್ಸೆಯನ್ನು ಹೇಳುವರು? ಎಲ್ಲಿಗೆ ಹೋಗಲಿ ? ಎಲ್ಲಿರಲಿ? ಎಲ್ಲಿ ಮಲಗಲಿ? ದೇಹವಂ ಬಿಡುವೆನೆಂದರೆ ದೇಹವನ್ನು ಬಿಟ್ಟು ಮಾಡುವದೇನು? ಈರೀತಿಯಾಗಿ ಅತಿ ದುಃಖದಿಂದ ಪ್ರಲಾಪಿಸಿದನು. ಮತ್ತು ಆನಂದದಿಂದ ಕಣ್ಣೀರು ಸುರಿಯುತ್ತದೋ ಎಂದರೆ ಈ ಸ್ವಾಮಿಯಮುಖದಲ್ಲಿ ಆನಂದಲಕ್ಷಣವೇ ದಯಾರಸಪ್ರವಾಹವೆಂದರೆ ದಯಾರಸವು ತಂಪಾಗಿರುವದಲ್ಲದೆ ಬೆಚ್ಚಗಿರುವದಿಲ್ಲ. ಈ ಕಣ್ಣು ನಷ್ಟವಾದರೆ ಹಿಂದೆ ಈತನ ನೇತ್ರಾಗ್ನಿಯಿಂದ ತಪ್ಪಿಸಲ್ಪಟ್ಟವರು ಬೇರೆವಿಧವಾಗಿ ಹೇಳಿಕೊಳ್ಳುತ್ತಾರೆ. ದುಷ್ಟರಮಾತುಗಳನ್ನು ಶೀಘ್ರವಾಗಿ ನಿವಾರಿಸುವದಕ್ಕಾಗುವದಿಲ್ಲ. ಎಲೈ ಸ್ವಾಮಿಯೇ ಜೀವತೆಗಳು ಪೂರ್ವದಲ್ಲಿ ತ್ರಿಣೇತ್ರನಾಗಿದ್ದು, ಈಗ ಎರಡು ಕಣ್ಣುಗಳುಳ್ಳವನಾದ ನಿನ್ನನ್ನುನೋಡಿ ಒಬ್ಬರಿಗೊಬ್ಬರು ಒಳಗೇನಗುತ್ತಾರೆ. ಈ ವಿಷಯದಲ್ಲಿ ಸಂಶಯವಿಲ್ಲ, ಅಡವಿ, ಬೆಟ್ಟ, ಹೊಳೆ, ಊರು, ಪಟ್ಟಣ ಇವುಗಳಲ್ಲಿ ವಾಸಿಸುತ್ತಿರುವ ನಿನ್ನಂಥಾ ಲಿಂಗಯ್ಯಗಳು ಒಂದು ಕಣ್ಣಿ

ಲ್ಲದ ನಿನ್ನನ್ನು ನೋಡಿ ಹಾಸ್ಯಮಾಡುತ್ತಾರೆ ಎಂದು ಹೇಳಿ, ಎದ್ದು ಎದ್ದು ನಿಂತು ಕೊಂಡು, ಗಾಜುಗಣ್ಣೋ ಪರೆಗಣ್ಣೋ ಕತ್ತಲೆಗಣ್ಣೋ ಯಾವದೋ ಒಂದು ಕಣ್ಣಿನ ರೋಗದಿಂದ ಹೀಗೆ ಕಣ್ಣೀರು ಸುರಿಯುತ್ತದೆ. ಈ ವಿಷಯದಲ್ಲಿ ಸಂದೇಹವಿಲ್ಲ. ನಾನು ಹುಟ್ಟಿದಾಗಿನಿಂದಲೂ ಕಣ್ಣಿನರೋಗವನ್ನೂ ಕಾಣೆನು. ಅದಕ್ಕೆ ಔಷಧವನ್ನೂ ತಿಳಿಯೆನು. ಪೂರ್ವದಲ್ಲಿ ರೋಗವನ್ನು ಅನುಭವಿಸಿದವನು ವೈದ್ಯನಿಗಿಂತಲೂ ವಿಶೇಷವಾಗಿ ತಿಳಿದವನೆಂದು ಹೇಳುತ್ತಾರೆ. ಆ ಕಣ್ಣುಗಳೊಳಗೆ ರೂಪವನ್ನು ಹೊಂದಿದ್ದಾಗಿಯೂ, ದೋಷದಿಂದ ಕೂಡಿದ್ದಾಗಿಯೂ ಇರುವ ಈ ಕಣ್ಣಿನಲ್ಲಿ ನಿರ್ದುಷ್ಟವಾಗಿಯೂ, ಕಣ್ಣೀರನ್ನು ನಿಲ್ಲಿಸುವದಾಗಿಯೂ ಇರುವ ನನ್ನ ಕಣ್ಣನ್ನು ಇಡುತ್ತೇನೆ ಎಂದು ನಿಶ್ಚೈಸಿ, ಧೈರ್ಯಶಾಲಿಯಾದ ಕನ್ನಪ್ಪನು ಬತ್ತಳಿಕೆಯಿಂದ ಬಾಣವನ್ನು ಹಿರಿದು, ತನ್ನ ತಾತ್ಪರ್ಯವನ್ನು ಮಸೆಯುವಂತೆ ಕಲ್ಲಿನಮೇಲೆ ಮಸೆದು, ಅನಾದಿಯಾದ ಮಾಯಾ ವಾಸನೆಯೆಂಬ ಬಳ್ಳಿಯಿಂದ ಮುಚ್ಚಲ್ಪಟ್ಟ ಸಂಸಾರವೆಂಬ ವೃಕ್ಷದಬುಡದಲ್ಲಿ ನಾಟುವಂತೆ ಕಣ್ಣಿನ ಕೊನೆಯಲ್ಲಿ ಬಾಣವನ್ನು ನಾಟಿ, ಜ್ಞಾನದೃಷ್ಟಿಯಿಂದ ಶಿವನನ್ನು ನೋಡುತ್ತಾ, ಶಿವನನ್ನು ಹೊರತು ಬೇರೆ ಯಾವದನ್ನೂ ನೋಡಬಾರದೆಂದು ಆಲೋಚಿಸಿಯೇ ಎಂಬಂತೆ ಭವರೋಗದೊಡನೆ ತನ್ನ ಕಣ್ಣನ್ನುಕಿತ್ತು, ಶಿವನಪಾದಕಮಲದಲ್ಲಿ ತನ್ನ ಮನಸ್ಸನ್ನು ಇಟ್ಟಂತೆ, ನೀರು ಸುರಿಯುತ್ತಿರುವ ಶಿವನಕಣ್ಣಿನಲ್ಲಿಟ್ಟನು. ಪೂರ್ವದಲ್ಲಿ ನಾರಾಯಣನು ಪೂಜಾರ್ಹವಾದ ಪುಷ್ಪಗಳಲ್ಲಿ ಪ್ರಮಾದವನ್ನುಹೊಂದಿ ಸಾಲದಿದ್ದದ್ದಕ್ಕಾಗಿ ಶಿವನ ಪಾದದಲ್ಲಿ ತನ್ನ ಕಣ್ಣನ್ನರ್ಪಿಸಿದನು. ಕನ್ನಪ್ಪನು ಯಾವಪ್ರಮಾದವನ್ನೂ ಹೊಂದದೆ, ಶಿವನ ನೇತ್ರದಲ್ಲಿ ತನ್ನ ನೇತ್ರವನ್ನರ್ಪಿಸಿದನು. ಲಿಂಗಾನುಸಂಧಾನಿಯಾದ ಪರಶುರಾಮನು ಶಿವನಿಗೆ ತನ್ನ ಶಿರಸ್ಸನ್ನು ಅರ್ಪಿಸಿದನು. ಲಿಂಗಾನುಸಂಧಾನಿಯಾದ ಕನ್ನಪ್ಪನು ಕಣ್ಣನ್ನು ಅರ್ಪಿಸಿದನು. ಪೂಜಾಫಲವನ್ನು ಹೊಂದಲಪೇಕ್ಷೆಯಿಂದ ಸೂರ್ಯನು ತನ್ನ ಬೆರಳನ್ನು ಅರ್ಪಿಸಿದನು. ಶಿವಪೂಜೆಯಲ್ಲಿ ಜಾಗ್ರರೂಕನಾದ ಕನ್ನಪ್ಪನು ಕಣ್ಣನ್ನರ್ಪಿಸಿದನು. ಕಣ್ಣಿನಮೇಲೆ ಕಣ್ಣಿಡಲು ಕನ್ನಪ್ಪನ ನೇತ್ರವು ಶಿವನಕಣ್ಣಿಗೆ ಅಂಜನವಾಯಿತೋ ಎಂಬಂತೆ ಕಣ್ಣೀರು ಸುರಿಯುವದು ನಿಂತಿತು. ಕನ್ನಪ್ಪನ ಕಣ್ಣೀರಿನ ಸಂಬಂಧದಿಂದ ಶಿವನ ಬಲಗಣ್ಣಿನಲ್ಲಿ ಸುರಿಯುವ ನೀರು ನಿಲ್ಲಲು, ಕೂಡಲೇ ಎಡಗಣ್ಣಿನಿಂದಸಾವಿರ ಪಾಲಷ್ಟು ಹೆಚ್ಚಾಗಿ ನೀರು ಸುರಿಯುವದಕ್ಕಾರಂಭಿಸಿತು. ಕರುಣಾರಸದಿಂದ ತೋಯಿಸಲ್ಪಟ್ಟ ಕನ್ನ

ಪ್ಪನ ನೇತ್ರದಸಂಗವು ನನಗೆ ಸಂಭವಿಸಲಿಲ್ಲವೆಂಬ ಚಿಂತೆಯಿಂದಲೋ ಎಂಬಂತೆ ಶಿವನ ಎಡಗಣ್ಣು ಕಣ್ಣೀರಿಂದ ತುಂಬಲ್ಪಟ್ಟಿತು. ಕನ್ನಪ್ಪನು, ಕಣ್ಣನ್ನು ಕೀಳು ವಾಗ ಉಂಟಾದ ವ್ಯಥೆಯನ್ನು ನೋಡಿದ್ದರಿಂದ ದುಃಖಗೊಂಡಿತೋ ಎಂಬಂತೆ ಶಿವನ ಎಡಗಣ್ಣಿನಲ್ಲಿ ವಿಶೇಷವಾಗಿ ಕಣ್ಣೀರುತುಂಬಿತು. ಕಣ್ಣೀರು ನಿಂತುಹೋದ ಶಿವನ ಬಲಗಣ್ಣನ್ನೂ ಕಣ್ಣೀರು ಸುರಿಯುವದಕ್ಕೆ ಉಪಕ್ರಮಿಸಿದ ಆತನ ಎಡಗಣ್ಣನ್ನೂ ನೋಡಿದ ಕನ್ನಪ್ಪನ ಮನಸ್ಸು ಸ್ವಲ್ಪಹೊತ್ತು ಸಂತೋಷದಿಂದಲೂ, ದುಃಖದಿಂದಲೂ ಕಲಕಲ್ಪಟ್ಟಿತು. ಅನಂತರದಲ್ಲಿ ವೀರವ್ರತಸ್ಥನಾದ ಕನ್ನಪ್ಪನು, ನೀರು ಸುರಿಯುವ ಆ ಎಡಗಣ್ಣಿಗೂ, ಮೊದಲುಮಾಡಿದಂತೆ ತನ್ನ ಕಣ್ಣಿನ ಸಮರ್ಪಣೆಯನ್ನೇ ಪ್ರತೀಕಾರವನ್ನಾಗಿ ತಿಳಿದು, ತನ್ನ ಕೆರಗಾಲಿನ ಹೆಬ್ಬೆರಳಿನಿಂದ ಶಿವನ ಕಣ್ಣನ್ನು ಮೆಟ್ಟಿಕೊಂಡು, ತನ್ನ ಕಣ್ಣನ್ನು ಕೀಳುವದಕ್ಕೆ ಉದ್ಯುಕ್ತನಾದನು. ಆಗ ಪರಶಿವನು ಆ ಬ್ರಾಹ್ಮಣನಿಗೆ ಕನ್ನಪ್ಪನ ಸ್ಥಿರವಾದ ಭಕ್ತಿಯನ್ನು ತೋರಿಸಿ, ಕಣ್ಣನ್ನು ತೆಗೆಯುವದಕ್ಕೆ ಉದ್ಯುಕ್ತವಾದ ಆತನ ಹಸ್ತವನ್ನು ಹಿಡಿದುಕೊಂಡನು. ಶಿವನ ಕಣ್ಣಿನಲ್ಲಿ ಹುಟ್ಟಿದ ಕಣ್ಣೀರಿನ ಮಳೆಗೆ ಕ್ಷಾಮವೆನಿಸಿದ ಕನ್ನಪ್ಪನನೇತ್ರವು ಮುಂಚಿನಂತೇ ಕಾಣಲ್ಪಟ್ಟಿತು. ಸಿರಿಯಾಳನು ಮಗನ ಮಾಂಸದಿಂದಲೂ, ಚನ್ನಯ್ಯನು ಸಹಭೋಜನದಿಂದಲೂ, ಶಿವನನ್ನು ತೃಪ್ತಿಪಡಿಸಿದರು. ಕನ್ನಪ್ಪನಾದರೋ ತನ್ನ ಪ್ರಸಾದವನ್ನು ಸಮರ್ಪಿಸುವದರಿಂದ ಶಿವನನ್ನು ತೃಪ್ತಿಪಡಿಸಿದನು. ಬಳಿಕ ಪೂಜಕನಾದ ಬ್ರಾಹ್ಮಣನು ಆಶ್ಚರ್ಯಪಟ್ಟವನಾಗಿ, ಹೆಜ್ಜೆಹೆಜ್ಜೆಗೂ ನಮಸ್ಕರಿಸುತ್ತಾ ಬಂದು, ಕನ್ನಪ್ಪನನ್ನು ಸ್ತುತಿಸಿದನು. ಏನಂದರೆ;--ಎಲೈ ಮಹಾನುಭಾವನೇ, ದಯಾಸಮುದ್ರನೇ, ಒಳ್ಳೇಭಕ್ತರ ಸಮುದಾಯದಲ್ಲಿ ಅಗ್ರೇಸರನಾದ ಕನ್ನಪ್ಪನೇ, ಜಯಶಾಲಿಯಾಗು. ಶಿವನ ಕಿರೀಟದಲ್ಲಿರುವಚಂದ್ರನ ಅಮೃತರಸದ ಪರಿಮಳದಿಂದೊಪ್ಪುತ್ತಿರುವದಾಗಿಯೂ, ಮೋಕ್ಷಕ್ಕೆಸುಖಿಯಾಗಿಯೂ, ಪರಿಶುದ್ಧವಾಗಿಯೂ ಇರುವ ನಿನ್ನ ಪಾದುಕೆಯನ್ನು ಸೇವಿಸುತ್ತೇನೆ. ಮುಂದಾಗುವದನ್ನು ತಿಳಿಯುವ ಜ್ಞಾನಿಗಳು ಶಿವನ ಮಸ್ತಕದಲ್ಲಿರುವ ಚಂದ್ರಕಲೆಗೆ ಕನ್ನಪ್ಪನ ಪಾದುಕಾಸ್ಪರ್ಶವಾಗುವದೆಂದು ನಿಶ್ಚೈಸಿ, ಚಂದ್ರಕಳೆಯನ್ನು ಪೂಜಿಸುತ್ತಾರೆ. ಮುಗ್ಧ ವೀರತ್ವದಿಂದ ಕೂಡಿರುವದಾಗಿಯೂ, ದಯಾಗುಣದಿಂದ ಮನೋಹರವಾಗಿಯೂ, ಸಂಸಾರ ಪಾಶವನ್ನು ಕತ್ತರಿಸುವದಾಗಿಯೂ, ಇರುವ ನಿನ್ನ ಶಿವಭಕ್ತಿಯು ಸರ್ವೋತ್ತಮವಾಗಿದೆ. ನೀಚರಸಂಗಡ ಸ್ನೇಹಮಾಡುವದಕ್ಕಿಂತಲೂ, ಸತ್ಪುರುಷರೊಡನೆ ದ್ವೇಷ

ಮಾಡುವುದು ಒಳ್ಳೇದೆಂಬ ನೀತಿಯು ಸತ್ಯ. ಹ್ಯಾಗಂದರೆ.-ನಿನ್ನನ್ನು ಸಂಹರಿಸ ಬೇಕೆಂದು ಉದ್ಯುಕ್ತನಾದ ನಾನು ಶಿವನನ್ನು ಕಂಡೆನು. ಇದರಂತೆ ಪೂರ್ವದಲ್ಲಿ ಮೋಟಮಲ್ಲನೆಂಬ ಮೂರ್ಖನು ತನ್ನ ಮೋಟುಗೈಗಳಿಂದ ದಸರೈಯ್ಯನೆಂಬ ಶಿವ ಭಕ್ತನನ್ನು ಹೊಡೆದು, ಆಕ್ಷಣವೇ ಕೈಗಳನ್ನು ಪಡೆದನು. ಹೀಗೆ ಸ್ತೋತ್ರವ ನ್ನುಮಾಡಿ, ಶಿವದರ್ಶನಕ್ಕೆ ಕಾರಣಭೂತವಾದ ಕನ್ನಪ್ಪನ ಪಾದಗಳಿಗೆ ನಮ ಸ್ಕಾರವಂ ಮಾಡಿದನು. ಬಳಿಕ ಈಶ್ವರನು ಕನ್ನಪ್ಪನ ಹಸ್ತವನ್ನು ಹಿಡಿದುಕೊಂಡು ನಿನಗೇನುಬೇಕೆಂದು ಕೇಳಲು, ಕನ್ನಪ್ಪನು ಶಿವನಪಾದಕಮಲದಲ್ಲಿ ಎಡೆಬಿಡದೆ ಇರ ಬೇಕೆಂಬುವದನ್ನು ಯಾಚಿಸಿದನು. ಪೂಜಕನಾದ ಬ್ರಾಹ್ಮಣನೂ ಕೂಡ ಕನ್ನಪ್ಪ ನದಯಾರಸಭರಿತವಾದ ಕಟಾಕ್ಷದಿಂದ ಸುಖಿತನಾಗಿ ಕನ್ನಪ್ಪನು ಕೇಳಿಕೊಂಡ ಉತ್ತಮ ವರವನ್ನೇ ತಾನೂ ಕೇಳಿಕೊಂಡನು. ಭಕ್ತವತ್ಸಲನಾದ ಕಾಳಹಸ್ತೀಶ್ವ ರನು ಅವನುಕೇಳಿಕೊಂಡ ಸಾಮೀಪ್ಯ ಪದವಿಯನ್ನು ಕೊಟ್ಟು ತಿರಿಗಿ ಆ ಲಿಂಗದ ವಿಗ್ರಹದಲ್ಲಿಯೇ ಅಂತರ್ಧಾನನಾದನು. ಕೈಯ್ಯಲ್ಲಿ ಬಿಲ್ಲನ್ನು ಹಿಡಿದಿರುವ ಕನ್ನ ಪ್ಪನು ಜಪಮಾಲಿಕೆಯನ್ನು ಹಿಡಿದ ಆ ಬ್ರಾಹ್ಮಣನು ಇವರಿಬ್ಬರೂ ಕಾಳಹಸ್ತೀ ಶ್ವರನ ವಿಗ್ರಹದಲ್ಲಿ ಈಗಲೂ ಕಾಣುತ್ತಾರೆ.

ನಿಷ್ಕಪಟವಾದ ಶಿವಭಕ್ತಿಯೆಂಬ ಅಮೃತರಸದಿಂದ ನೆನಸಲ್ಪಟ್ಟ ಸಭಾಸ ದರು ಈ ರೀತಿಯಾಗಿ ಬಸವೇಶನಿಂದ ಹೇಳಲ್ಪಟ್ಟ ಮತ್ತು ಶಿವನ ದಯೆಯಂ ಸಂಪಾಧಿಸುವದರಲ್ಲಿ ಪ್ರೌಢಗಳಾದ ಮುಗ್ಧರ ಎಂಟು ಕಥೆಗಳನ್ನು ಹೇಳಿ ಸಂ ತೋಷದಿಂದಲೂ, ಆಶ್ಚರ್ಯದಿಂದಲೂ ಕೂಡಿದವರಾದರು. ಯಾವ ವಿವೇಕಿಯು ಮುಗ್ಧಸಂಗೈಯ್ಯನ ಕಥಾಸ್ತೋತ್ರವನ್ನು ಪ್ರತಿದಿನವೂ ಪ್ರೀತಿಯಿಂದ ಓದು ತ್ತಾನೋ ಅವನಿಗೆ ಉಮಾಮಹೇಶ್ವರನ ಪಾದದಯೆಗೆ ಕಾರಣವಾದ ವೈರಾ ಗ್ಯವು ಸಿದ್ಧಿಸುತ್ತದೆ. ಯಾವನು ಭಕ್ತಿಯಿಂದ ಈ ರುದ್ರಪಶುಪತಿಯ ಕಥೆ ಯನ್ನು ಕೇಳುತ್ತಾನೋ ಅವನಿಗೆ ಶಿವಾಜ್ಞೆಯಿಂದ ಸ್ಥಾವರವಿಷವಾದರೂ ಜಂಗಮವಿಷವಾದರೂ ತಗಲುವದಿಲ್ಲ. ಯಾವನು ಭಯಭಕ್ತಿಗಳಿಂದ ಕೂಡಿದ ಅರ್ಕನಾಥನ ಚರಿತ್ರೆಯನ್ನು ಆತನ ಹೆಂಡತಿಯಿಂದ ತೋರಿಸಲ್ಪಟ್ಟ ಉತ್ತಮ ವಾದ ಭಕ್ತಿಯನ್ನೂ ತಿಳಿಯುತ್ತಾನೋ ಅವನು ಸಕಲ ರೋಗಗಳಿಂದಲೂ ಬಿಡಲ್ಪಟ್ಟವನಾಗಿ, ಶಿವನ ಕೃಪೆಗೆ ಪಾತ್ರನಾಗುತ್ತಾನೆ. ಶಿವನ ತಾಯಿಯಾದ ಬಿಜ್ಜವ್ವೆಯ ಚರಿತ್ರೆಯನ್ನು ತ್ರಿಕಾಲಗಳಲ್ಲಿ ಯಾವನು ಪಠಿಸುತ್ತಾನೋ ಅವನಿಗೆ

ಸಕಲ ಜನಗಳಿಂದ ಸ್ತುತಿಸಲ್ಪಡತಕ್ಕಂಥಾ ಮತ್ತು ಪೂಜಿಸಲ್ಪಡುವದಕ್ಕೆ ಯೋಗ್ಯಗಳಾದ ಪಾದಗಳನ್ನು ಧರಿಸುವಂಥ ಶಿವಸಮಾನರಾದ ಪುತ್ರರು ಹುಟ್ಟುವರು. ಪರಮೇಶನ ಕರುಣಾರಸದಿಂದ ಕೂಡಿದ ವಾತ್ಸಲ್ಯವೆಂಬ ಪ್ರವಾಹದ ಹರಿಯುವಿಕೆಗೆ ಕಾಲುವೆಯಾದ ಕೋಳೂರು ಕೊಡಗೂಸಿನ ಕಥೆಯನ್ನು ನಿತ್ಯವೂ ಪ್ರಾತಃಕಾಲದಲ್ಲಿ ಯಾವನು ಪಠಿಸುತ್ತಾನೋ ಅವನು ಈ ಪ್ರಪಂಚದಲ್ಲಿ ಸಕಲ ಸೌಖ್ಯಗಳನ್ನೂ ಅನುಭವಿಸಿ ಪರದಲ್ಲಿ ಕೈಲಾಸವನ್ನು ಪಡೆಯುತ್ತಾನೆ. ಆಶ್ಚರ್ಯಗಳಿಗೆ ಆಶ್ರಯವಾದ ದೀಪದಕಲಿಯಾರೆಂಬ ಪ್ರಮಥಶ್ರೇಷ್ಠನ ಕಥೆಯನ್ನು ಕೇಳಿರಿ. ಪಠಿಸಿರಿ. ಭೂಮಿಯಲ್ಲಿ ರತ್ನಮಯವಾದ ಗೃಹಗಳಲ್ಲಿ ಸಮಸ್ತ ಭೋಗಗಳನ್ನು ಹೊಂದಿ ಕಡೆಯಲ್ಲಿ ಶಿವನ ಪಾದಾರವಿಂದವನ್ನು ಸೇರುತ್ತೀರಿ. ಭಕ್ತಿಯಲ್ಲಿ ನಿಷ್ಠನಾದ ಯಾವನು ಗಂಭೀರವಾದ ನಾಟ್ಯನಮಿತ್ತಂಡಿಯ ಕಥೆಯನ್ನು ಮನಸ್ಸಿನಲ್ಲಿ ಭಾವಿಸುತ್ತಾನೋ ಅವನು ವಾಯು ಮೊದಲಾದ ರೋಗಗಳನ್ನು ಜೈಸಿ, ನೂರು ಸಂವತ್ಸರಗಳ ತನಕಬದುಕುತ್ತಾನೆ. ಕಾಳಹಸ್ತೀಶ್ವರನಿಗೆ ಪ್ರಿಯವಾಗಿಯೂ, ವಿಷ್ಣು ಮೊದಲಾದ ದೇವತೆಗಳಿಂದ ಸ್ತುತಿಸಲ್ಪಡತಕ್ಕ ಆಶ್ಚರ್ಯವೈಭವವುಳ್ಳದ್ದಾಗಿಯೂ ಇರುವ ಕನ್ನಪ್ಪದೇವನ ಚರಿತ್ರೆಯನ್ನು ಪ್ರಾತಃಕಾಲದಲ್ಲಿ ಪಠಿಸುವವನು ವೇದಾರ್ಥಕ್ಕೆ ಗೋಚರವಾದ ನಿತ್ಯತೇಜಸ್ಸಿನಿಂದ ಕೂಡಿದ ಸ್ಥಾನವನ್ನೈದಿದವನು.*

ಬಸವೇಶವಿಜಯದಲ್ಲಿ ಎಂಟನೇ ಅಧ್ಯಾಯವು
ಸಂಪೂರ್ಣವು.

---

## ಒಂಭತ್ತನೆಯ ಅಧ್ಯಾಯವು

### ಮಾದರಸರ ಕಥೆ.

ಅನಂತರದಲ್ಲಿ ಆಶ್ಚರ್ಯಕರಗಳಿಂದ ಎಂಟು ಮಂದಿ ಮುಗ್ಧರ ಕಥೆಗಳನ್ನು ಕೇಳಿ, ಸಂತೋಷಗೊಂಡು ನಗುತ್ತಿರುವ ಸಾಮಾಜಿಕರನ್ನು ಕುರಿತು ಬಸವೇಶನು ಹೇಳಿದ್ದೇನಂದರೆ:–ಪೂರ್ವದಲ್ಲಿ ಕಲಿಕಂಬನೆಂಬ ಭಕ್ತನು ಶಿವನನ್ನು ನಗಿಸುತ್ತಿದ್ದನು. ಆತನಂತೆ ನಾನು ಸಂತೋಷಗೊಂಡಿರುವ ನಿಮ್ಮನ್ನು ವಿಶೇಷವಾಗಿ

ನಗಿಸುತ್ತೇನೆ. ಇವು ಮೊದಲಾದ ಮಾತುಗಳನ್ನು ಬಸವೇಶನು ಭಕ್ತರ ಸಮೀಪ ದಲ್ಲಿ ಆಡುತ್ತಾ ಇದ್ದನು. ಇತ್ತಲಾಗಿ ಮಾಧವನೆಂಬೊಬ್ಬ ರಾಜನು ಭೂಮಿಯ ರಕ್ಷಣೆಯಲ್ಲಿ ಆಸಕ್ತನಾಗಿ, ಜಗದ್ರೂಪನಾದ ಸಕಲೇಶ ಲಿಂಗವೇ ತನಗೆ ಸ್ವಾಮಿಯಾದ ಇಷ್ಟದೇವನೆಂದು ತಿಳಿದು, ಪ್ರತಿ ದಿನವೂ ರಾವಣವೀಣೆ, ರುದ್ರವೀಣೆ, ಕೈಲಾಸವೀಣೆ, ಕೂರ್ಮವೀಣೆ, ಕಿನ್ನರವೀಣೆ ಮೊದಲಾದ ವೀಣೆಗಳನ್ನು ಕಲ್ಪಿಸಿ, ಸ್ವರಮಂಡಲ ಪೂರ್ವಕಗಳನ್ನಾಗಿಮಾಡಿ, ದೇವರ ಮುಂದಿಟ್ಟು ಶಿವನನ್ನು ಧ್ಯಾನಿಸುತ್ತಾ ನಿಂತುಕೊಂಡಿರುವಲ್ಲಿ ಯಾವ ವೀಣೆಯು ಶಿವನ ಪ್ರೇರಣೆಯಿಂದ ಚನ್ನಾಗಿ ಧ್ವನಿಮಾಡುತ್ತದೆಯೋ ಆ ವೀಣೆಯನ್ನೇ ತೆಗೆದುಕೊಂಡು, ಕುರಂಜಿ, ಭೈರವಿ, ಬಂಗಾಳ, ಗೌಳ, ತೋಡಿ, ಗುಂಡಕ್ರಿಯೆ, ದೇವಕ್ರಿಯೆ, ಮಧುಮಾಧವಿ, ರಾಮಕ್ರಿಯೆ, ಲಲಿತೆ, ವಸಂತ, ಪಲಮಂಜರಿ ಮೊದಲಾದ ಸಮಸ್ತ ಸ್ತ್ರೀ ರಾಗ ಪುರುಷ ರಾಗಗಳನ್ನು ಕ್ರಮವಾಗಿ ನಾಯಕ ರಾಗದೊಡನೆ ಆಯಾಯ ನಾಯಿಕ ರಾಗಗಳನ್ನು ಸೇರಿಸಿ, ಶುದ್ಧವಾಗಿಯೂ, ಗಂಭೀರವಾಗಿಯೂ, ನೂತನವಾಗಿಯೂ, ಸರಸವಾದ ಮಾತುಗಳಿಂದ ಕೂಡಿದ್ದಾಗಿಯೂ ಇರುವಂತೆ ಸಂಗೀತ ವಿದ್ಯಾಚಾತುರ್ಯದಿಂದ ಸ್ತುತಿಸಲ್ಪಡುವಂಥ ಮತ್ತು ವಿದ್ವಾಂಸರಿಂದ ಶ್ಲಾಘಿಸಲ್ಪಡುವಂಥ ಸಂಗೀತಕ್ಕೆ ತಕ್ಕ ಸ್ಥಿತಿಯುಳ್ಳ ನಾನಾವಿಧ ವಾದ್ಯಗಳೊಡನೆ ಸ್ವಲ್ಪ ವಕ್ರವಾಗಿ ಮಾಡಲ್ಪಟ್ಟ ಕಡೆಗಣ್ಣುಳ್ಳವನೂ, ರೋಮಾಂಚದಿಂದ ಕೂಡಿದ ದೇಹವುಳ್ಳವನೂ, ಆನಂದದಿಂದ ತುಂಬಿದ ಮನಸ್ಸುಳ್ಳವನೂ, ಸ್ವಲ್ಪವಾಗಿ ಚಲಿಸಲ್ಪಟ್ಟ ಶಿರಸ್ಸುಳ್ಳವನೂ ಆಗಿ, ಮತಂಗನನ್ನೂ, ಸರಸ್ವತಿಯನ್ನೂ, ಆಂಜನೇಯನನ್ನೂ, ವಿಶ್ವಾವಸ್ಸುವನ್ನೂ ತುಂಬುರ ನಾರದರನ್ನೂ ಅತಿಕ್ರಮಿಸಿ, ಶಿವನನ್ನು ಸ್ತುತಿಸುತ್ತಾ ಆ ವೀಣೆಯು ಬಾಜಿಸಿದಾಗ್ಯೂ ಧ್ವನಿಮಾಡದೆ ನಿಲ್ಲುವ ಪರ್ಯಂತರ ಸಕಲೇಶನ ಸನ್ನಿಧಿಯಲ್ಲಿ ಗಾನವಂ ಮಾಡುವನು. ಹೊತಾರೆ, ಮಧ್ಯಾಹ್ನ, ಸಾಯಂಕಾಲ, ಅರ್ಧರಾತ್ರೆ, ಸೂರ್ಯೋದಯಕ್ಕಿಂತ ಮುಂಚೆ ಈ ಕಾಲಗಳಲ್ಲಿ ಪರಶಿವನನ್ನು ಪೂಜಿಸುತ್ತಾ, ಸಕಲ ಭಕ್ತರಿಂದಲೂ ಶ್ಲಾಘಿಸಲ್ಪಡತಕ್ಕ ನಡತೆಗಳುಳ್ಳವನಾಗಿ, ಸಮಾನವಾದ ಸ್ವಭಾವವುಳ್ಳವರಾದ ಕೈ ಕೆಳಗಣ ರಾಜರಿಂದ ಸೇವಿಸಲ್ಪಡುವವನಾಗಿ ಸುಖದಿಂದಿದ್ದನು. ಒಂದಾನೊಂದು ದಿವಸದಲ್ಲಿ ಶ್ರೀಶೈಲದಿಂದ ಕೆಲವರು ಮಹಾತ್ಮರು ಬರಲು, ಅವರನ್ನು ಪೂಜಿಸಿ, ಅವರ ಮುಖದಿಂದ ಶ್ರೀಶೈಲ ಮಹಿಮೆಯನ್ನೂ ವೈರಾಗ್ಯದಿಂದ ಸಕಲೈಶ್ವರ್ಯಗಳನ್ನೂ ಬಿಟ್ಟು, ಶ್ರೀ

ಶೈಲದ ತಪೋವನದಲ್ಲಿ ಸಂಚರಿಸುತ್ತಿರುವ ಮಲ್ಲಿಕಾರ್ಜುನನೆಂಬುಕನಾದ ರಾಜನ ಮಹಿಮೆಯನ್ನೂ ಕೇಳಿದನು. ಆ ಮಹಿಮೆಯನ್ನು ಕೇಳಿದ್ದರಿಂದ ತನಗೂ ವೈರಾಗ್ಯ ಹುಟ್ಟಿ, ರಾಜ್ಯವನ್ನೂ, ಐಶ್ವರ್ಯವನ್ನೂ, ಪತ್ನೀ ಪುತ್ರಾದಿಗಳನ್ನೂ ಬಿಟ್ಟು, ಶ್ರೀಶೈಲವನ್ನಾಶ್ರೈಸಿದನು. ಆ ಗಿರಿಯಲ್ಲಿ ಕಲ್ಲಿನ ಚೂರುಗಳೆಲ್ಲಾ ಲಿಂಗಗಳೇ. ಗಿರಿ ನದೀ ಜಲವೆಲ್ಲವೂ ತೀರ್ಥವೇ. ಧೂಳಿಯೆಲ್ಲವೂ ಪರಿಶುದ್ಧವಾದ ಭಸ್ಮವೇ. ಕಿರಾತನು ಕೂಡ ಮಹರ್ಷಿಯೇ. ಸಾಮಾನ್ಯವಾದ ವೃಕ್ಷಮೂಲವು ಸಿದ್ಧಾಶ್ರಮವೇ. ಅಲ್ಲಿ ವಾಸಮಾಡಬೇಕೆಂಬ ಇಚ್ಛೆಯೇ ತಪಸ್ಸು. ಆ ಪರ್ವತದ ಕಿಬ್ಬಿಯನ್ನು ನೋಡಿದರೆ ಸ್ವರ್ಗವೂ, ಅದರ ಶಿಖರವನ್ನು ನೋಡಿದರೆ ಮೋಕ್ಷವೂ, ಸಿದ್ಧಿಸುವವು. ಆ ಮಾದರಸನು ಶ್ರೀಶೈಲವನ್ನು ಹತ್ತಿ, ಸ್ಫಟಿಕ ರತ್ನಗಳ ಬೆಟ್ಟಗಳನ್ನೂ, ಕಲ್ಲುಗಳಿಂದ ಮುಚ್ಚಲ್ಪಟ್ಟ ಭೂಪ್ರದೇಶಗಳೊಳಗೆ ಮರೆಯಾಗಿರುವ ಪಟ್ಟಣಗಳನ್ನೂ, ಪರುಷದ ಕಲ್ಲಿನ ಪರ್ವತಗಳನ್ನೂ, ಶಬ್ದವೇಧಿ ಶಿಲೆಗಳುಳ್ಳ ಪರ್ವತಗಳನ್ನೂ, ಅನೇಕಗಳಾದ ಮೃಗ ಪಕ್ಷಿಗಳಿಂದ ವ್ಯಾಪಿಸಲ್ಪಟ್ಟ ತೋಟಗಳನ್ನೂ, ಅರಣ್ಯಗಳನ್ನೂ, ಬಿಲ್ವ ವೃಕ್ಷಗಳ ಪಙ್ಕ್ತಿಯಿಂದ ಅಲಂಕರಿಸಲ್ಪಟ್ಟ ವಿಚಿತ್ರವಾದ ಗಿರಿ ನದಿಗಳನ್ನೂ, ರುದ್ರಾಕ್ಷದ ಬೆಟ್ಟಗಳನ್ನೂ, ರುದ್ರಾಕ್ಷ ವೃಕ್ಷಗಳನ್ನೂ, ರುದ್ರಾಕ್ಷ ನದಿಗಳನ್ನೂ, ವಿಭೂತಿಯ ಬೆಟ್ಟಗಳನ್ನೂ, ವಿಭೂತಿಯ ಮರಗಳನ್ನೂ ವಿಭೂತಿಯ ನದಿಗಳನ್ನೂ ವಿಭೂತಿಯ ಗಣಿಗಳನ್ನೂ, ಲಿಂಗರೂಪವಾದ ಪರ್ವತ, ಲಿಂಗವೃಕ್ಷ, ಲಿಂಗದನದಿ, ಲಿಂಗದಗಣಿ, ಇವುಗಳನ್ನೂ; ಜಂಗಮಪರ್ವತ, ಜಂಗಮವೃಕ್ಷ, ಜಂಗಮಗುಲ್ಮ, ಜಂಗಮಲತೆ, ಇವುಗಳನ್ನೂ; ಮಾತಾಡುವ ಬೆಟ್ಟ, ಮರ, ಹೊದರು, ಬಳ್ಳಿ ಇವುಗಳನ್ನೂ; ನೀರಿನಬೆಟ್ಟ, ನೀರಿನಮರ, ನೀರ ಹಕ್ಕಿ, ನೀರಿನ ಮೃಗ ಇವುಗಳನ್ನೂ; ನಾನಾವರ್ಣದ ಮತ್ತು ಅನೇಕ ರೂಪವುಳ್ಳ ಮರ, ಕಲ್ಲು, ಬಳ್ಳಿ, ಹೊದರು ಇವುಗಳನ್ನೂ; ದೇವರೂಪಗಳೂ, ಭೂತರೂಪಗಳೂ, ಆದ ಬೆಟ್ಟ, ಹೊದರು ಇವುಗಳನ್ನೂ; ಗಂಧರ್ವ, ಸಿದ್ಧ, ವಿದ್ಯಾಧರ, ರೂಪುಗಳಾದ ಕಲ್ಲು, ಬೆಟ್ಟ, ಮರ, ಬಳ್ಳಿ ಇವುಗಳನ್ನೂ; ಚಲಿಸುವ ನೆಳಲುಳ್ಳವುಗಳಾಗಿಯೂ, ದೂರಕ್ಕೆ ಕಾಣುವ ನೆಳಲುಳ್ಳವುಗಳಾಗಿಯೂ, ನೆಳಲಿಲ್ಲದವುಗಳಾಗಿಯೂ ಇರುವ ವೃಕ್ಷಗಳನ್ನೂ, ಪರ್ವತಗಳನ್ನೂ, ಬಳ್ಳಿಮರಗಳ ಸಮಾಗಮದಿಂದ ಆ ಕ್ಷಣವೇ ಹುಟ್ಟಿದ ಬಾಲ ವೃಕ್ಷಗಳನ್ನೂ, ಮರಗಳನ್ನೇರಿ ಮರಗಳಿಂದ ಸೇವಿಸಲ್ಪಡುವ ವೃಕ್ಷರಾಜಗಳನ್ನೂ, ಪರ್ವ

ತಗಳಮೇಲೆ ಕುಳಿತು ಪರ್ವತಗಳಿಂದ ಸೇವಿಸಲ್ಪಡುವ ಪರ್ವತದ ಶ್ರೇಷ್ಠ ಗಳನ್ನೂ, ತಮ್ಮ ಶಿಖರವನ್ನೇರಿದ ಪುರುಷರಿಗೆ ತ್ರಿಭುವನವನ್ನು ತೋರಿ ಸುವ ಪರ್ವತಗಳನ್ನೂ, ಆ ವಿಧವಾದ ವೃಕ್ಷಗಳನ್ನೂ, ಹತ್ತಿದವರ ಮನ ಸ್ಸಿನಿಂದ ಬಯಸಲ್ಪಟ್ಟ ಸ್ಥಳಕ್ಕೆ ತೆಗೆದುಕೊಂಡು ಹೋಗುವದರಲ್ಲಿ ಸಮರ್ಥಗ ಳಾದ ಬೆಟ್ಟಗಳನ್ನೂ, ಅಂಥಾ ಮರಗಳನ್ನೂ ಹತ್ತಿದವರಿಗೆ ಬೇಕಾದ ರೂಪವನ್ನುಂ ಟುಮಾಡುವ ಮೃಗ, ಪಕ್ಷಿ, ಪರ್ವತ, ವೃಕ್ಷ ಇವುಗಳನ್ನೂ, ಬಂಧುಜನಗಳಂತೆ ಪರಸ್ಪರಾಲಿಂಗನೆಯಲ್ಲಿ ಆಸಕ್ತಗಳಾದ ವೃಕ್ಷಗಳನ್ನೂ, ಪರ್ವತಗಳನ್ನೂ, ಪ್ರತಿಕ್ಷ ಣದಲ್ಲಿಯೂ ಉದಿರುತ್ತಿರುವ ಮನೋಹರವಾದ ಫಲಗಳುಳ್ಳ ವೃಕ್ಷಗಳನ್ನೂ, ಬುಡವನ್ನು ಕಡಿದರೆ ತಿರಿಗಿ ಕೂಡಿಕೊಳ್ಳುವಮರಗಳನ್ನೂ ಸೂರ್ಯನಸಂಗಡ ಹುಟ್ಟಿ, ವೃದ್ಧಿಹೊಂದಿ ಅಸ್ತಂಗತಗಳಾಗುವ ಪರ್ವತಗಳನ್ನೂ, ಪಾತಾಳ ಗಂಗಾ ಜಲದಲ್ಲಿ ಪ್ರಾತಸ್ನಾನವನ್ನು ಮಾಡುವದರಲ್ಲಿ ಆಸಕ್ತಗಳಾದ ಪರ್ವತ, ವೃಕ್ಷ, ಮೃಗಪಕ್ಷಿಗಳನ್ನೂ, ತೀರ್ಥಪ್ರಕಾಶಗಳಾದ ಬೆಟ್ಟಗಳನ್ನೂ, ಮರಗಳನ್ನೂ, ಒಂ ದಕ್ಕೊಂದು ಮಸೆಯುವದರಿಂದ ಹುಟ್ಟಿದ ಉರಿಗಳಿಂದ ವ್ಯಾಪಿಸಲ್ಪಟ್ಟ ಪರ್ವತ ಗಳನ್ನೂ, ಹಾಲು, ಮೊಸರು, ತುಪ್ಪಗಳನ್ನು ಸುರಿಯುವ ಪರ್ವತಗಳನ್ನೂ ಅಂ ಥಾವೃಕ್ಷಗಳನ್ನೂ, ಆ ವಿಧವಾದ ಕೊಳ, ಭಾವಿ, ಕೆರೆ, ನದಿಗಳನ್ನೂ, ಚಿನ್ನದ ನೆಲದಲ್ಲಿ ಹುಟ್ಟಿ, ಚಿನ್ನದ ಮೊಗ್ಗೆ, ಚಿನ್ನದ ಫಲ, ಇವುಗಳಿಂದ ಕೂಡಿದ ಚಿನ್ನದ ಮರಗಳನ್ನೂ, ಬಾಳೆ, ಹಲಸು, ದ್ರಾಕ್ಷಿ, ನೇರಿಲೆ, ಹತ್ತಿ, ಈ ಜಾತಿಯ ಕೊಂಬೆಗಳಿಂದ ಆಯಾ ಫಲಗಳನ್ನು ವಹಿಸಿರುವ ಉತ್ತಮ ವೃಕ್ಷಗಳನ್ನೂ ಚಿನ್ನದಿಂದಲೂ, ರತ್ನಗಳಿಂದಲೂ, ಮಾಡಲ್ಪಟ್ಟ ಗೋಪುರ, ಅಟ್ಟ, ಕೋಟೆ ಇವುಗಳಿಂದ ಕೂಡಿದ ಉಪ್ಪರಿಗೆಗಳನ್ನೂ, ಮನೆಗಳನ್ನೂ, ಹಳದಿಯಾಗಿಯೂ, ಕಪ್ಪಾಗಿಯೂ, ಕೆಂಪಾಗಿಯೂ, ಅನೇಕ ವರ್ಣಗಳಾಗಿಯೂ ಇರುವ ಕೊಂಬೆ ಗಳಿಂದ ಆವರಿಸಲ್ಪಟ್ಟ ವೃಕ್ಷಗಳನ್ನೂ, ಸೌಗಂಧಿಕ ಕಮಲ, ನೈದಿಲೆ, ತಾವರೆ; ಮಲ್ಲಿಗೆ, ಪಾದರಿ, ಎಂಬ ಪುಷ್ಪಗಳಿಂದಲೂ, ನಾನಾ ವಿಧಗಳಾದ ಇತರ ಪುಷ್ಪಗ ಳಿಂದಲೂ, ಅಲಂಕರಿಸಲ್ಪಟ್ಟ ಕೊಂಬೆಗಳುಳ್ಳ ವೃಕ್ಷಗಳನ್ನೂ ಒಂದೇ ಬುಡವುಳ್ಳವು ಗಳಾಗಿ ಅನೇಕಜಾತಿಯ ಕೊಂಬೆಗಳಿಂದ ಬಳಸಲ್ಪಟ್ಟ ವೃಕ್ಷಗಳನ್ನೂ, ಕೆಂಪು, ಹವಳ, ಚಿನ್ನ, ಇವುಗಳ ವಿಕಾರಗಳಾದ ಶಿಖರಗಳಿಂದ ಆವರಿಸಲ್ಪಟ್ಟ ಪರ್ವತಗ ಳನ್ನೂ, ಗಾಳಿಯಿಂದ ಗುಡಿಸಲ್ಪಟ್ಟಅಂಗಳವುಳ್ಳವುಗಳಾಗಿಯೂ, ಮೇಘಗಳಿಂದ

ಜಲಸೇಚನೆಯನ್ನು ಹೊಂದಿದವುಗಳಾಗಿಯೂ, ಸಸ್ಯಾಭಿಮಾನದೇವತೆಗಳಿಂದ ರಚಿಸಲ್ಪಟ್ಟ ರಂಗವಲ್ಲಿಗಳಿಂದ ಕೂಡಿದವುಗಳಾಗಿಯೂ ಇರುವ ಮನೆಗಳನ್ನೂ, ತೀರ್ಥಗಳಿಂದ ಮಾಡಲ್ಪಟ್ಟ ಸೇಚನೆಯುಳ್ಳದ್ದಾಗಿಯೂ, ಜಾಲ ಮುಂತಾದ ವೃಕ್ಷಗಳಿಂದ ಸಮರ್ಪಿಸಲ್ಪಟ್ಟ ಧೂಪಗಳುಳ್ಳದ್ದಾಗಿಯೂ, ಶ್ರೀಗಂಧದ ಮರಗಳಿಂದ ಹಚ್ಚಲ್ಪಟ್ಟ ಗಂಧವುಳ್ಳದ್ದಾಗಿಯೂ, ಬೆಟ್ಟದಾವರೆ ಮೊದಲಾದ ಹೂವಿನ ಮರಗಳಿಂದ ಪೂಜಿಸಲ್ಪಟ್ಟದ್ದಾಗಿಯೂ, ತೃಣಜ್ಯೋತಿ, ಮುಂತಾದ ಜ್ಯೋತಿಗಳಿಂದ ಬೆಳಗಲ್ಪಟ್ಟ ನಾನಾ ದೀಪಗಳುಳ್ಳದ್ದಾಗಿಯೂ, ಅಡಿಕೆಯ ಮರ, ಎಲೆಯಬಳ್ಳಿ, ಇವುಗಳಿಂದ ಕೊಡಲ್ಪಟ್ಟ ವೀಳಯವುಳ್ಳದ್ದಾಗಿಯೂ, ಆಯಾಯ ಹೆಸರಿನ ಗೃಹಗಳಿಂದ ಅಲ್ಲಲ್ಲಿ ಪ್ರತಿಷ್ಠಿಸಲ್ಪಟ್ಟದ್ದಾಗಿಯೂ ವೃಕ್ಷೇಶ್ವರನೇ ನಿನಗೆ ನಮಸ್ಕಾರವಾಗಲಿ ಎಂದು ವೃಕ್ಷಪಂಕ್ತಿಯಲ್ಲಿ ವೃಕ್ಷಗಳಿಂದ ನಮಸ್ಕರಿಸಲ್ಪಡುವ ವೃಕ್ಷಲಿಂಗವನ್ನೂ, ಪರ್ವತಗಳೊಳಗೆ ಎಲೈ ಗಿರೀಶನೇ! ನಿನಗೆ ನಮಸ್ಕಾರವೆಂದು ಪರ್ವತಗಳಿಂದ ಗಟ್ಟಿಯಾಗಿ ಸ್ತುತಿಸಲ್ಪಡುವ ಪರ್ವತಲಿಂಗವನ್ನೂ ಮೃಗಗಳ ಬೀಡಿನಲ್ಲಿ ಮೃಗೇಶ್ವರನೇ ನಿನಗೆ ನಮಸ್ಕಾರವೆಂದು ಮೃಗಗಳಿಂದ ಪೂಜಿಸಲ್ಪಡುವ ಮೃಗಲಿಂಗವನ್ನೂ, ಪಕ್ಷಿಗಳ ಬೀಡಿನಲ್ಲಿ ಪಕ್ಷೀಶನೇ ನಿನಗೆ ನಮಸ್ಕಾರವೆಂದು ಪಕ್ಷಿಗಳಿಂದ ವಂದಿಸಲ್ಪಡುವ ಪಕ್ಷಿಲಿಂಗವನ್ನೂ, ಸರ್ಪಗಳಿಂದ ಪೂಜಿಸಲ್ಪಡುವ ಸರ್ಪಲಿಂಗವನ್ನೂ ಭ್ರಮರಗಳವಾಸಸ್ಥಳದಲ್ಲಿ ಭ್ರಮರಪತಿಯೇ ನಿನಗೆ ನಮಸ್ಕಾರವೆಂದು ಭ್ರಮರಗಳಿಂದ ಪ್ರೀತಿಪೂರ್ವಕವಾಗಿ ಪೂಜಿಸಲ್ಪಡುವಭ್ರಮರಲಿಂಗವನ್ನೂ, ಅಂತರ್ಮುಖರಾದ ಮುನಿಗಳಿಂದ, ಆರಾಧಿಸಲ್ಪಟ್ಟ ಮುನಿಲಿಂಗವನ್ನೂ, ಬೇಡರ ಪಾಳ್ಯದಲ್ಲಿ ಎಲೈ ಶಬರೇಶನೇ ನಿನಗೆ ನಮಸ್ಕಾರವೆಂದು ಭಕ್ತಿಯಿಂದ ನಮ್ರರಾದ ಕಿರಾತರಿಂದ ಪೂಜಿಸಲ್ಪಡುವ ಶಬರಲಿಂಗವನ್ನೂ, ಕೆಲವುಕಾಲದಮೇಲೆ ಹೊರಗೆ ಬೆಳೆಯುತ್ತಿರುವ ಹುತ್ತಿನೊಳಗೆ ಸೇರಿದವರಾಗಿ ವೀರಾಸನ ಮುಂತಾದ ಆಸನವಂ ಹಾಕಿಕೊಂಡು, ಉದ್ದವಾದ ಜಡೆಗಳಿಂದ ಸುತ್ತಲ್ಪಟ್ಟ ಭೂಮಿಯುಳ್ಳವರಾಗಿ ಎಡಗಾಲಿನ ಹೆಬ್ಬೆರಳನ್ನು ಮಾತ್ರ ಭೂಮಿಯಲ್ಲಿ ಊರಿ, ಬಲಗಾಲನ್ನು ಎತ್ತಿ ತಪಸ್ಸಂ ಮಾಡುವ ತಪಸ್ವಿಗಳನ್ನೂ, ತಲೆಯನ್ನು ಭೂಮಿಯಮೇಲಿಟ್ಟು ಕಾಲುಗಳನ್ನು ಆಕಾಶಕ್ಕೆ ನೀಡಿ ಮಂತ್ರವುನ ಶ್ಚರಣೆಯಂ ಮಾಡಬೇಕೆಂಬ ಆಸಕ್ತಿಯಿಂದ ಮಿಡುಕುತ್ತಿರುವ ತುಟಿಯುಳ್ಳ ತಾಪಸರನ್ನೂ, ಉರಿಯುತ್ತಿರುವ ಅಗ್ನಿಗಳ ಮಧ್ಯದಲ್ಲಿ ಕುಳಿತು ಸೂರ್ಯಮಂಡ

ಲದಲ್ಲಿ ದೃಷ್ಟಿಯನಿಟ್ಟು ತಪಸ್ಸನ್ನು ಮಾಡುತ್ತಿರುವ ತೇಜಸ್ವಿಗಳನ್ನೂ, ಮಳೆಗಾಲದಲ್ಲಿ ನೀರಿನ ನಡುವೆ ಕುತ್ತಿಗೆಯ ಪರ್ಯಂತರ ಮುಳುಗಿದ ಅವಯವವುಳ್ಳವರಾಗಿ ಮಳೆಯ ಹನಿಗಳಿಂದ ನೆನೆಸಲ್ಪಟ್ಟ ಮುಖವುಳ್ಳವರಾಗಿ, ಮಂತ್ರಗಳನ್ನು ಜಪಿಸುತ್ತಿರುವ ಜಪಪರಾಯಣರನ್ನೂ ಮಂಜಿನ ತುಂತುರುಗಳ ಧಾರೆಗಳಿಂದ ವ್ಯಾಪ್ತವಾದ ಆಕಾರವುಳ್ಳವರಾಗಿ ಗಾಳಿಗಳನ್ನು ಸಹಿಸುತ್ತಾ, ಕಲ್ಲುಗಳಮೇಲೆ ಕುಳಿತುಕೊಂಡು, ವೃಕ್ಷಗಳು ಕೊಡುವ ಭಿಕ್ಷಾನ್ನವನ್ನು ಭುಂಜಿಸುವದರಿಂದ ಬಳಲಿದ ದೇಹವುಳ್ಳವರಾಗಿಯೂ, ಹಾಗೆಯೇ ಪರ್ವತಗಳಿಂದ ಕೊಡಲ್ಪಟ್ಟ ಭಿಕ್ಷಾನ್ನವನ್ನು ಭಕ್ಷಿಸುವವರಾಗಿಯೂ ಇರುವ ತಪಸ್ವಿಗಳನ್ನೂ, ವನಗಳಲ್ಲಿ ವಲ್ಲಭೆಯರೊಡನೆ ಕ್ರೀಡಿಸುತ್ತಿರುವ ಗಂಧರ್ವಪುರುಷರನ್ನೂ, ಹಾಗೆಯೇ ಸುಖದಿಂದ ವಿಹರಿಸುತ್ತಿರುವ ದೇವದಂಪತಿಗಳನ್ನೂ, ಜಲಕನ್ಯೆಯರನ್ನೂ, ಅವರ ಪತಿಗಳನ್ನೂ, ಬಿಲಕನ್ಯೆಯರನ್ನೂ, ಅವರಪತಿಗಳನ್ನೂ, ಲತಾಮಂಟಪಗಳನಡುವೆ ವಿಹರಿಸುತ್ತಿರುವ ವನದೇವತೆಗಳನ್ನೂ, ಗಂಡಭೇರುಂಡ, ಆನೆ, ಕ್ರೂರಸರ್ಪ, ಇವುಗಳ ಸಮೂಹಗಳನ್ನೂ, ದೊಡ್ಡ ದೊಡ್ಡ ಶರಭ, ಹುಲಿ, ಸಿಂಹಮೊದಲಾದ ಮೃಗಗಳನ್ನೂ, ಆ ಶ್ರೀಲಶೈಲದಲ್ಲಿರುವ ಇನ್ನೂ ಅನೇಕ ಆಶ್ಚರ್ಯಗಳನ್ನೂ ನೋಡುವವನಾಗಿ ಮಲ್ಲಿಕಾರ್ಜುನಯೋಗಿಯನ್ನು ಹುಡುಕುತ್ತಾ ಸಂಚರಿಸಿದನು. ಮಲ್ಲಿಕಾರ್ಜುನಯೋಗಿಯು ಕೂಡ ಹಾಗೆ ವನದಲ್ಲಿತಿರುಗುತ್ತಿರುವ ಆ ಮಾದರಸನ ಮಾರ್ಗಕ್ಕೆ ಅಡ್ಡಲಾಗಿ ಮತ್ತೊಂದು ಬೆಟ್ಟವೋ ಎಂಬಂತೆ ಮಲಗಿಕೊಂಡನು. ಆ ಮಲ್ಲಿಕಾರ್ಜುನಯೋಗಿಯನ್ನು ಹುಡುಕುತ್ತಿರುವ ಮಾದರಸನು ಆ ರೀತಿಯಾಗಿ ಮಲಗಿಕೊಂಡಿರುವ ಮತ್ತು ಭಸ್ಮ ರುದ್ರಾಕ್ಷಗಳಿಂದ ಅಲಂಕೃತನಾದ ಆತನನ್ನು ಕಂಡು, ಆಲೋಚಿಸಿದನು ಏನಂದರೆ—ಇದೇನುಗಾಳಿಯಿಂದ ಭೂಮಿಗೆ ಕೆಡವಲ್ಪಟ್ಟ ರುದ್ರಾಕ್ಷಿಯ ಮರವೋ? ಅಥವಾ ರುದ್ರಾಕ್ಷಿಯ ಬೆಟ್ಟವೋ ? ಇಲ್ಲವೇ ಭಸ್ಮದ ಬೆಟ್ಟವೋ ? ಮರವಾದರೆ ಅನೇಕ ಶಾಖೆಗಳಿರಬೇಕು ಈ ಆಕಾರವು ಪಂಚಶಾಖೆಗಳಿಂದ (ಐದು ಬೆರಳುಗಳಿಂ) ದಕೂಡಿದೆ, ಪರ್ವತವಾದರೆ, ಅನೇಕ ಶಿಖರಗಳಿರಬೇಕು. ಇದರಲ್ಲಿ ಒಂದು ಶಿಖರವೂ ಕಾಣುವದಿಲ್ಲ. ಇದೇನು ದಿವ್ಯ ತೇಜಸ್ಸೋ ? ಇಲ್ಲವೆ ಉತ್ಕೃಷ್ಟವಾದ ಶಿವರೂಪವೋ ? ಇಲ್ಲದಿದ್ದರೆ ತೆರೆಯಡಗಿದ ಸಮುದ್ರವೋ ? ದಿವ್ಯತೇಜಸ್ಸಾದರೆ ಅದು ಭೂಮಿಯಲ್ಲಿ ಕಾಣಿಸುವದಿಲ್ಲ. ಶಿವರೂಪವಾದರೆ ಅದು ಪತಸ್ವಿಗೆ ದೊರೆಯುತ್ತದೆ. ಸಮುದ್ರವಾದರೆ, ಅದು ಪರ್ವತದಲ್ಲಿರುವದಿಲ್ಲ. ಈರೀತಿಯಾದ

ವಿಚಾರಗಳಿಂದ ತಳವಳಗೊಂಡವನಾಗಿ, ಮತ್ತೂ ಚಿಂತಿಸಿದನು. ಏನಂದರೆ— ಅಥವಾ ನನ್ನ ಅದೃಷ್ಟವು ನನ್ನನ್ನು ಅನುಗ್ರಹಿಸಬೇಕೆಂದು ತೋಳಲಿ, ಬಳಲಿ, ವಿಶ್ರಾಂತಿಯುನ್ನೈದುವದಕ್ಕಾಗಿ ಇಲ್ಲಿಗೆಬಂದಿದೆಯೋ? ಇದನ್ನು ಮೀರಿ ಬೇರೆಕಡೆಗೆ ಹೋಗುವದಕ್ಕಾಗುವದಿಲ್ಲ. ಆದ್ದರಿಂದ ಈ ವೇಳೆಯಲ್ಲಿ ನಾನು ಇಲ್ಲಿ ಮಾಡತಕ್ಕದ್ದೇನು ? ಈಪ್ರಕಾರವಾಗಿ ಆಲೋಚಿಸುತ್ತಿರುವ ಮಾದರಸನ ಕಣ್ಣುಗಳಮುಂದೆ ಸಕಲಪುರುಷಾರ್ಥಗಳನ್ನೂ ಕೊಡುವ ಒಂದಾನೊಂದು ಪುರುಷಾಕೃತಿಯು ಕಾಣಿಸಿತು. ಅದನ್ನು ಕೊಡುವದರಿಂದ ವೃದ್ಧಿಯೊಂದಿದ ಸಂತೋಷದಿಂದ ತುಂಬಲ್ಪಟ್ಟವನಾಗಿ, ಆ ಮೂರ್ತಿಯ ಮುಖವನ್ನು ನೋಡಬೇಕೆಂಬ ಕುತೂಹಲವುಳ್ಳವನಾಗಿ, ಶಿರೋಭಾಗವನ್ನು ಹುಡುಕಿದನು. ಅನಂತರದಲ್ಲಿ ಮೂರುವರ್ಷಗಳ ತನಕ ಸುತ್ತಿಕಾಣದೆ, ಶಿವನಕಿರೀಟವನ್ನು ಕಾಣುವೆನೆಂದು ಹೋಗಿ, ಬಳಲಿದ ಮನಸುಳ್ಳವನಾದ ಬ್ರಹ್ಮನಂತೆ ಹಿಂತಿರಿದವನಾಗಿ;— ಮುಂಚಿತವಾಗಿ ಪಾದಕಮಲವನ್ನು ಹುಡುಕಬೇಕು. ಅದನ್ನು ಬಿಟ್ಟು, ಶಿರಸ್ಸನ್ನು ಹುಡುಕುವದು ಯೋಗ್ಯವಲ್ಲವೆಂಬದಾಗಿ ನಿರ್ಣಯಿಸಿಕೊಂಡು, ಪಾದಕಮಲವನ್ನು ಹುಡುಕುವದಕ್ಕೆ ಹೊರಟು, ಎಂಟುವರ್ಷಗಳತನಕ ಹುಡುಕಿ, ಆ ಪಾದವನ್ನು ಕಾಣದೆ, ಹಿಂದೆಪರಿಶುದ್ಧವಾದ ಶಿವನ ಪಾದವನ್ನು ಕಾಣದೆ, ಹಿಂತಿರುಗಿದ ವಿಷ್ಣುವಿನಂತೆ, ಸಾಕಾಗಿ ಹಿಂತಿರಿಗಿ ಬಂದು, ಆಶ್ಚರ್ಯ ಕುತೂಹಲಗಳಿಂದ ಕೂಡಿದವನಾಗಿ, ವಿನಯದಿಂದ ಹೇಳಿದ್ದೇನಂದರೆ;-ಎಲೈಸ್ವಾಮಿಯೇ, ಪವಿತ್ರವಾದ ನಿನ್ನರೂಪವನ್ನು ಕೃಪೆಯಿಂದ ತೋರಿಸು, ಪ್ರಪಂಚವನ್ನು ವ್ಯಾಪಿಸಿಕೊಂಡಿರುವ, ವೈರಾಗ್ಯದಿಂದ ಕೂಡಿದ, ನಿರ್ಮಲವಾಗಿರುವ ನಿನ್ನ ಮೂರ್ತಿಯನ್ನು ಒಂದು ಕಡೆಯಲ್ಲಿರುವವನಾಗಿಯೂ ವಿಷಯಾಭಿಲಾಷೆಯುಳ್ಳವನಾಗಿಯೂ, ಅಶುದ್ಧನಾಗಿಯೂ, ಇರುವ ನಾನು ಹ್ಯಾಗೆ ನೋಡುವೆನು ? ವೇದಗಳು ಕೂಡ ನಿನ್ನ ಮಹಿಮೆಯನ್ನು ಕಾಣದೆ, ಮನಸ್ಸಿನೊಡನೆ ಹಿಂತಿರಿಗಿದವು. ಹೀಗಿರುವಲ್ಲಿ ಅಲ್ಪಮನಸ್ಸುಳ್ಳವನಾದ ನಾನು ಅದನ್ನು ತಿಳಿದುಕೊಳ್ಳುವದಕ್ಕೆ ಎಷ್ಟರವನು ? ಆದ್ದರಿಂದ ಮರೆಹೊಕ್ಕವರಲ್ಲಿ ಮಮತೆಯುಳ್ಳ ಸ್ವಾಮಿಯೇ, ಕರುಣದಿಂದ ನನ್ನನ್ನು ರಕ್ಷಿಸು. ಈಪ್ರಕಾರವಾಗಿ ಹೇಳಿ ಭೂಮಿಯಮೇಲೆ ತೋಳುಗಳನ್ನು ಮುಂದಕ್ಕೆ ನೀಡಿ, ಅಡ್ಡಬಿದ್ದನು. ತಪಸ್ವಿಯಾದ ಮಲ್ಲಿಕಾರ್ಜುನಸ್ವಾಮಿಯು ಅಡ್ಡಬೀಳುತ್ತಿರುವ ಮಾದರಸನನ್ನುನೋಡಿ, ಕರುಣಾರಸದಿಂದ ತುಂಬಲ್ಪಟ್ಟವನಾಗಿ, ಕೈಯಿಂದಹಿಡಿದುಕೊಂಡು, ಮಂದಹಾಸ

ದಿಂದ ಕೂಡಿದ ಮುಖಕಮಲವುಳ್ಳವನಾಗಿ, ಆತನನ್ನು ಆಲಿಂಗಿಸಿ,—ಅಯ್ಯಾ ನೀನು, ಬಹುಸಾಹಸವುಳ್ಳವನಾಗಿದ್ದೀಯೆ ನೀನು ಇಲ್ಲಿಗೆ ಯಾಕೆ ಬಂದೆ? ಎಂದುಹೇಳಿ, ತನ್ನ ಆಶ್ರಮಕ್ಕೆ ಕರೆದುಕೊಂಡುಹೋಗಿ; ಶಿವಾರ್ಚನೆಯನ್ನು ಮಾಡಿಸಿ, ಶಿವಪ್ರಸಾದವನ್ನು ಸ್ವೀಕರಿಸಿದಮೇಲೆ ಸ್ವಲ್ಪಹೊತ್ತು ಇದ್ದು, ಶಿವ ಕಥಾಪ್ರಸಂಗದಿಂದ ಒಂದುಕ್ಷಣ ಕಾಲವನ್ನು ಕಳೆದು ಆತನನ್ನು ಕುರಿತು ಹೇಳಿದ್ದೇನಂದರೆ;- ಎಲೈ ಪೂಜ್ಯನೇ ನೀನು ತಿರಿಗಿ ಭೂಲೋಕಕ್ಕೆ ಹೋಗಿ, ಕೆಲವುಕಾಲವನ್ನು ಸತ್ಕರ್ಮಗಳಿಂದ ಕಳೆಯಬೇಕು. ಈಪ್ರಕಾರವಾಗಿ ಹೇಳಿದ ಮಲ್ಲಿಕಾರ್ಜುನಯೋಗಿಯಮಾತನ್ನುಕೇಳಿ, ಮಾದರಸನು,—ಮಹಾನಿಧಿ ಸಿಕ್ಕಿರುವಾಗ ಯಾವನು ಪರಸೇವೆಯಲ್ಲಿ ಆಸಕ್ತನಾದಾನು? ಯೋಗಿಶಿರೋಮಣಿಯಾದ ನಿನ್ನನ್ನು ನೋಡಿ, ಹ್ಯಾಗೆ ತಿರಿಗಿ ಸಂಸಾರಿಯಾದೇನು? ಹೀಗೆಹೇಳಲು; ಆಮಲ್ಲಿಕಾರ್ಜುನ ಯತಿಯುಕೇಳಿ, ಒಳ್ಳೇದೊಳ್ಳೇದೆಂದು ಶ್ಲಾಘಿಸಿದವನಾಗಿ, ಆತನನ್ನು ಕರಕೊಂಡುಹೋಗಿ, ಒಂದುಬೂರುಗದಡಿಯಲ್ಲಿ ಕುಳ್ಳಿರಿಸಿ, ಅಯ್ಯಾಮಾದರಸನೇ ನೀನು ಇಲ್ಲಿ ನಿಂತು, ತೇಜೋಮಯವಾಗಿಯೂ, ರೋಗರಹಿತವಾಗಿಯೂ ಇರುವ ಪರವಸ್ತುವನ್ನು ನಿಶ್ಚಲಚಿತ್ತನಾಗಿ ಭಕ್ತಿಯಿಂದ ಏನೊಂದು ಚಿಂತೆಯೂ ಇಲ್ಲದೆ, ಧ್ಯಾನಿಸುತ್ತಿರು, ಎಂದುಆಜ್ಞಾಪಿಸಿ, ತನ್ನಾಶ್ರಮವನ್ನೈದಿದನು. ಮಾರಣೇ ದಿನದಲ್ಲಿ ಕೋಪ ಮೊದಲಾದವುಗಳಿಂದ ದೂಷಿತವಾದ ಆತನ ಮನೋಭಾವವನ್ನು ಆತನಿಗೆ ಪ್ರಕಾಸಪಡಿಸಿ, ತಿರಿಗಿಭೂಲೋಕಕ್ಕೆ ಕಳುಹಿಸಬೇಕೆಂದುಉದ್ಯುಕ್ತನಾದ ಮಲ್ಲಿಕಾರ್ಜುನಯೋಗಿಯು, ಜೇನಿನ ಚಿಗುರಿಗೆ ಸಮಾನಗಳಾಗಿಯು, ಗಾಳಿಗೆ ಅಲ್ಲಾಡುವವುಗಳಾಗಿಯೂ ಇರುವ ತಲೆಕೂದಲುಗಳನ್ನು ಧರಿಸಿದುದಾಗಿಯೂ ಕುರುಚುಗಡ್ಡ, ಕೂದಲುಹುಟ್ಟದಿರುವ ಕೆನ್ನೆ, ಅಗಲವಾದಮೋರೆ, ಅಗಲವಾದಕಿವಿ, ಅಡ್ಡಡ್ಡವಾಗಿರುವ ಮೆಡ್ಡಗೆಣ್ಣು ಗಂಟುಹುಬ್ಬು ಸೊಟ್ಟಾದ ಅಪ್ಪರಮೂಗು, ಚಪಲವಾದಕರೀಕಣ್ಣು, ಇವುಗಳನ್ನುಳ್ಳದ್ದಾಗಿಯೂ, ನೋಡದಂತೆ ಕಪ್ಪುಬಣ್ಣವುಳ್ಳದಾಗಿಯೂ, ಉಡುಕೊಂಡಿರುವ ನರಗಳು, ಬಹಳ ಹಳ್ಳವಾಗಿರುವ ಎದೆ, ಸಣ್ಣಕೈ, ಡೊಂಕಾದ ಮಂಡಿ, ಹಿಂದಕ್ಕೆ ಬಗ್ಗಿದ ಬೆನ್ನು, ನೋಟಾದ ತೊಡೆ, ದಪ್ಪವಾದ ಮೊಳಕಾಲು, ದೂರದೂರಕ್ಕೆ ಇರುವ ಕಾಲ್ಬೆರಳು ಇವುಗಳನ್ನುಳ್ಳದ್ದಾಗಿಯೂ, ಸೊಂಟದಲ್ಲಿ ಕುರಿಹಿಕ್ಕೆ ಹತ್ತಿಕೊಂಡಿರುವ ನಾರುಬಟ್ಟೆಯ ಚಿಂದಿಗಳು, ಮುಳ್ಳುತೆಗೆಯುವ ಚಿಮುಟ, ಸುಡತಕ್ಕ ಬರ

ಗುಳ, ಇವುಗಳನ್ನು ಧರಿಸಿದ್ದಾಗಿಯೂ, ಕೈಯಲ್ಲಿತೊಗಲಚೀಲ, ಕತ್ತರಿ, ಹೆಗಲಲ್ಲಿಮೊಗೆಗಳಿಂದಕೂಡಿದ ನೆಲು, ಕಂಕುಳಲ್ಲಿ ಕುರೀಮರಿ, ಮೈಯಲ್ಲಿ ಬೆವರುಹನಿ, ಇವುಗಳನ್ನು ವಹಿಸಿರುವದಾಗಿಯೂ, ಇರುವ ಗೊಲ್ಲರ ರೂಪನ್ನು ಸ್ವೀಕರಿಸಿ, ಸುಮ್ಮ ಸುಮ್ಮನೆ ಅಲ್ಲಲ್ಲಿ ಕೋಲನ್ನು ಹಾಕುತ್ತಾ, ಒಂದೊಂದುಸಾರಿ ಒಂದೇ ಕಾಲಿನಿಂದ ಇನ್ನೊಂದುಸಾರಿ ಹೆಚ್ಚು ಕಡಿಮೆಯಾದಕಾಲಿನಿಂದ ನಿಲ್ಲುತ್ತಾ ಕೈಯಲ್ಲಿ ಕೋಲನ್ನು ಹಿಡಿದುಕೊಂಡು ಧೂಳಿಸಿಂದ ಮಲಿನನಾಗಿ, ತವಕದಿಂದ ಸನ್ನಾಹದೊಡನೆಕೂಡಿ, ದೂರಸಂಚಾರಕ್ಕೆ ಪ್ರಯತ್ನಿಸಿದ ಕುರಿಗಳ ಹಿಂಡನ್ನು ಶು ಶು ಶೂ, ಎಂಬ ಶಬ್ದದಿಂದ ತಡೆಯುತ್ತಾ, ಬೇರೆ ಬೇರೆ ರೂಪ, ಬೇರೆ ಬೇರೆ ಅಲಂಕಾರಗಳುಳ್ಳ ಇನ್ನು ಕೆಲವು ಗೊಲ್ಲರನ್ನು ಕಟ್ಟಿಕೊಂಡು, ಕುರಿಗಳ ಮಂದೆಯಿಂದೆ ಸಹಿತನಾಗಿ ಮಾದರಸನ ಸಮೀಪಕ್ಕೆ ಬಂದು, ಹಣ್ಣುಗಳ ಭಾರದಿಂದ ಬಗ್ಗಿದ ಕೊಂಬೆಗಳನ್ನು ಕೊಡಲಿಯ ತುದಿಯಿಂದ ಒಗ್ಗಿಸಿ, ಆಕುರಿಗಳಿಂದ ಹಿಡಿಸಿದನು ಆಮೇಲೆ ಆ ಮರಕ್ಕೆ ಹತ್ತಿ, ಆಮಾದರಸನಿಗೆ ನೆಳಲಾಗಿರುವ ಒಂದು ಒಳ್ಳೇ ದೊಡ್ಡ ಕೊಂಬೆಯನ್ನು ಕೊಡಲಿಯಿಂದ ಕಡಿದನು. ಆಗ ಮಾದರಸನು ಹಾಗೆ ಕಡಿಯುತ್ತಿರುವವನನ್ನು ನೋಡಿ ಕೋಪದಿಂದ ಕಣ್ಣು ಕೆಂಪಗೆ ಮಾಡಿಕೊಂಡು;- ಎಲೈ ಮೂಢಬುದ್ಧಿಯುಳ್ಳ ನೀಚಗೊಲ್ಲನೆ, ನೀನು ನೆಳಲಾಗಿರುವ ಈ ಕೊಂಬೆಯನ್ನು ಕಡಿದುದರಿಂದ ನಿನ್ನನ್ನು ಕೊಲ್ಲುತ್ತೇನೆ. ನನ್ನ ಮುಂದೆ ಎಲ್ಲಿಗೆ ಹೋದೀಯೆ; ಈ ಮಹಾರಣ್ಯದಲ್ಲಿ ನನಗೆ ಆಶ್ರಯವಾದ ಈ ಮರವನ್ನೇ ಕಡಿಯಬೇಕೇ! ಎಲಾಪಾಪಿ, ಪರಹಿಂಸಕ ನಿನಗೆ ಬೇರೆ ಮರವಿರಲಿಲ್ಲವೇ ? ಎಂದು ಆಕ್ಷೇಪಿಸಲು; ಮಲ್ಲಿಕಾರ್ಜುನಯೋಗಿಯು ಅವನಮಾತುಗಳನ್ನು ಕೇಳಿ, ನಸುನಗೆಯಿಂದ ಕೂಡಿದಮುಖವುಳ್ಳವನಾಗಿ, ಪರಿಹಾಸವನ್ನು ಮಾಡುತ್ತಾ; ಹೇಳಿದ್ದೇನಂದರೆ;- ಯೋಗಿಶಿರೋಮಣಿಯೇ, ಭಲಾ ! ಭಲಾ !! ಮುನಿಶ್ರೇಷ್ಠನೇ ಭಲಾ ಭಲಾ ! ವೈರಾಗ್ಯ ಸಂಪನ್ನನೇ ಭಲಾ ಭಲಾ ! ಶಾಂತಿಗುಣವುಳ್ಳವನೇ, ಭಲಾ! ಭಲಾ !! ಕೋಪವೆಂಬ ಮದಗಜದಸಂಚಾರದಿಂದ ಕಲಕಲ್ಪಟ್ಟ ಯಾವನಮನಸ್ಸೆಂಬ ಕೊಳವು ತಾನೇ ಬಗ್ಗಡವಾಗುವದಿಲ್ಲ ? ಸ್ವರ್ಗ ನರಕಗಳನ್ನು ಕೊಡುವ ಪುಣ್ಯಪಾಪಗಳ ವ್ಯಾಪಾರವು ನೀರು ಬೆಂಕಿಗಳ ವ್ಯಾಪಾರದಂತೆ ಒಂದಕ್ಕೊಂದು ವಿರುದ್ಧವಾಗಿದೆ. ಕೋಪದಿಂದ ಕ್ರೂರಕರ್ಮವೂ, ಕ್ರೂರಕರ್ಮದಿಂದ ಪಾಪವೂ, ಪಾಪದಿಂದ ನರಕವೂ, ಉಂಟಾಗುವದು. ಆದಕಾರಣ ಕೋಪಿಷ್ಠನು ಪಾಪಿಯಾಗಿ

ಕೆಡುತ್ತಾನೆ. ಕೋಪವು ವಿವೇಕದ ಹೆಚ್ಚಿಗೆಯೋ? ಧ್ಯಾನದ ಸಾರವೋ? ವೈರಾಗ್ಯದ ಅಲಂಕಾರವೋ? ಜ್ಞಾನಕ್ಕೆ ಸಹಾಯವೋ? ಅನೇಕ ವೃಕ್ಷಗಳಿಗಾಶ್ರಯವಾದ ಈ ತಪೋವನದಲ್ಲಿ ನೆಳಲನ್ನು ಮಾತ್ರ ಅಪೇಕ್ಷಿಸುವವನಿಗೆ ಮತ್ತೊಂದು ಮರವಿಲ್ಲವೇ? ನಿನ್ನ ಅಂತರಿಂದ್ರಿಯನಿಗ್ರಹವೂ ನಿನ್ನ ಬಹಿರಿಂದ್ರಿಯನಿಗ್ರಹವೂ ನಿನ್ನ ಸೈರಣೆಯೂ ಆಶ್ಚರ್ಯಕರವಾದದ್ದು. ಲೋಕದಲ್ಲಿ ತಪಸ್ವಿಗಳೊಳಗೆ ಕೋಪ ಮೊದಲಾದ ವಿಕಾರಗಳಿಲ್ಲದ ಪುರುಷನು ನೀನಲ್ಲದೆ ಮತ್ಯಾರೂ ಇಲ್ಲ. ನಿನ್ನ ಸ್ಥಿತಿಯು ಹೊಳೆಯ ನೀರಿನಲ್ಲಿ ಕೊಚ್ಚಿಕೊಂಡು ಹೋಗುತ್ತಿರುವ ಕರಡಿಯನ್ನು ಕಂಬಳಿಯೆಂಬ ಭ್ರಾಂತಿಯಿಂದ ಅಡ್ಡಗಟ್ಟುವದಕ್ಕೆ ಹೋಗಿ, ತಾನು ಬಿಟ್ಟರೂ ಅದು ಬಿಡದಿರಲು, ಗಟ್ಟಿಯಾಗಿ ತಬ್ಬಿಕೊಂಡವನಹಾಗಿದೆ. ಅಗ್ನಿಪ್ರವೇಶವನ್ನು ಮಾಡುವವಳು ತನ್ನ ಸೆರಗನ್ನು ಬೆಂಕಿಯಮೇಲೆ ಹಾಕಿಕೊಳ್ಳುವಹಾಗೂ ಕೋಪದಿಂದ ಭಾವಿಯಲ್ಲಿ ಬೀಳುವವಳು ಮೆಟ್ಟಲುಗಳನ್ನು ಹುಡುಕುವ ಹಾಗೂ ಸಂಸಾರತ್ಯಾಗವನ್ನು ಮಾಡುವದಕ್ಕೆ ಪ್ರಯತ್ನಿಸಿದವನು ತನ್ನ ಮನೆಗೆ ಕಾವಲನ್ನಿಡುವದಕ್ಕೆ ಯತ್ನಿಸುವಹಾಗೂ, ಸರ್ವ ಪ್ರಪಂಚದಲ್ಲಿಯೂ ಆಶೆಯನ್ನು ಬಿಟ್ಟ ನೀನು ಆಶ್ರಯ ವೃಕ್ಷವನ್ನು ಅಪೇಕ್ಷಿಸುತ್ತೀಯೆ. ಹುಚ್ಚುಬಿಟ್ಟಿತು.ಒನಕೆಯನ್ನು ತಲೆಗೆ ಸುತ್ತಿಕೊಳ್ಳುತ್ತೇನೆಂದು ಹೇಳುವ ಭ್ರಾಂತಿಹಿಡಿದವನ ಹಾಗೆ ವಿರಕ್ತನೆಂದು ಹೇಳಿಕೊಂಡು ನೆಳಲಾಸೆಯನ್ನು ಮಾಡುತ್ತೀಯೆ. ಕಬ್ಬಿನ ಜೂಜು ಸ್ವಲ್ಪದಲ್ಲಿ ತಪ್ಪಿದರೆ ಹ್ಯಾಗೆ ಪರಾಜಯವನ್ನು ಹೊಂದುವದೋ ಹಾಗೆ ಶಾಂತಿಗುಣದಿಂದ ಕೊರತೆಯಾದ ತಪಸ್ಸು ತಿರಸ್ಕರಿಸಲ್ಪಡುತ್ತದೆ. ಈ ಪ್ರಕಾರವಾಗಿ ಹೇಳಿ, ತನ್ನ ಪೂರ್ವ ರೂಪನ್ನು ತೋರಿಸಲು, ಮಾದರಸನು ನಾಚಿಕೊಂಡು, ದುಃಖಪೀಡಿತನಾಗಿ ವಿಜ್ಞಾಪಿಸಿಕೊಳ್ಳುವದೇನಂದರೆ.--ಬರೀಮಾತುಗಳನ್ನಾಡುವವನಿಗೆ ಭಕ್ತಿಯೆಲ್ಲಿಯದು? ಉಪಾಯವೆಲ್ಲಿಯದು? ಅಜ್ಞಾನವೆಲ್ಲಿ ಹೋಗುವದು? ಶಿವನು ಹ್ಯಾಗೆ ಪ್ರಸನ್ನನಾಗುತ್ತಾನೆ? ಕಾಯಾಗಿರುವದು ಪ್ರಯತ್ನದಿಂದ ಹಣ್ಣಾದೀತೆ? ಭಕ್ತಿಯಿಲ್ಲದ ಅಪಕ್ವವಾದ ಮನಸ್ಸು ಹ್ಯಾಗೆ ಶಾಂತಿಗುಣಕ್ಕೆ ತಿರಿಗೀತು? ಎಂದು ಹೇಳುತ್ತಿರುವ ಮಾದರಸನನ್ನು ಮಲ್ಲಿಕಾರ್ಜುನ ಯೋಗಿಯು ಮಧುರವಾದ ಮಾತುಗಳೆಂಬ ಅಮೃತದಿಂದ ಸಮಾಧಾನಪಡಿಸಿದನು. ಎಂತೆಂದರೆ,--ಅಯ್ಯಾ ಮಾದರಸನೇ, ನೀನು ಅಪಕ್ವಚಿತ್ತನಾಗಿದ್ದರೆ ನಿನಗೆ ನಾನು ಹಾಗೆ ಕಾಣಿಸಿಕೊಳ್ಳುತ್ತಿದ್ದೆನು. ನಿನ್ನನ್ನು ಭೂಮಿಗೆ ಕಳುಹಿಸಬೇಕೆಂದು ಎಣಿಸಿ, ನಿನ್ನಲ್ಲಿ ಮೋಹ

ವನ್ನು ಕಲ್ಪಿಸಿದೆನು. ಅಯ್ಯಾ ಮಗನೇ. ಅದಕ್ಕೆ ಕಾರಣವನ್ನು ಹೇಳುವೆನು. ವೃಷಭೇಶನು ಶಿವನ ಅಪ್ಪಣೆಯಿಂದ ಭೂಮಿಯಲ್ಲಿ ಭಕ್ತಿಯನ್ನು ವೃದ್ಧಿಪಡಿಸುವದಕ್ಕಾಗಿ ತಾನೇ ಅವತರಿಸಿದ್ದಾನೆ. ಆತನ ಸಮೀಪದಲ್ಲಿ ಶಿವಕಥೆಯೆಂಬ ಅಮೃತ ಸಮುದ್ರದಲ್ಲಿ ಮುಳುಗುತ್ತಾ, ವೀರಶೈವಾಚಾರ ಸಂಪ್ರದಾಯಕ್ಕೆ ಆಚಾರ್ಯನಾಗಿರು. ಐನೂರು ವರ್ಷಗಳತನಕ ನನ್ನ ಅಪ್ಪಣೆಯ ಪ್ರಕಾರ ಅಲ್ಲಿರು. ಆಮೇಲೆ ಅಸಾಧಾರಣವಾದ ಲಿಂಗಾಂಗಸಾಮರಸ್ಯವು ಸಿದ್ಧಿಸುವದು. ಈಗ ನಿನ್ನ ಬಯಕೆಯೇನು ? ಹೇಳು. ಎಂಬದಾಗಿ ಮಲ್ಲಿಕಾರ್ಜುನ ಗುರುವು ಕೇಳಲು, ಮಾದರಸನು ಕೈಗಳನ್ನು ಜೋಡಿಸಿಕೊಂಡು—ಸ್ವಾಮೀ, ಆಯುಷ್ಯವನ್ನು ಕೇಳುವೆನೆಂದರೆ ಅದು ಮಾಯೆಗೆ ಆಶ್ರಯವಾದದ್ದು. ಲಕ್ಷ್ಮಿಯಾದರೋ ವಿಷ್ಣುವಿನ ಸಂಪತ್ತಿ, ಸ್ವರ್ಗವಾದರೆ ಅನಿತ್ಯವಾದದ್ದು. ಮೋಕ್ಷವನ್ನು ಕೇಳುವೆನೆಂದರೆ, ಅದು ಶಿವನ ಪದಾರ್ಥ, ಆದ್ದರಿಂದ ನನಗೆ ಯಾತರಲ್ಲೂ ಇಚ್ಛೆ ಯಿಲ್ಲ. ಎಂದು ಹೇಳಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು. ಅನಂತರದಲ್ಲಿ ಆತನು ಎದ್ದು ಹೊರಟು, ಕಲ್ಯಾಣ ಮಂಟಪದಲ್ಲಿ ಮೊದಲು ಬಸವೇಶನ ಲಿಂಗಮೂರ್ತಿಯಲ್ಲಿ ಕಾಣಿಸಿಕೊಂಡು, ಆಮೇಲೆ ಆತನ ಮುಂದೆ ನಿಂತನು. ಬಸವೇಶ್ವರನು ಆತನ ದರ್ಶನದಿಂದುಂಟಾದ ಸಂತೋಷದಿಂದ ಸಂತೋಷವೆಂಬ ಸಮುದ್ರದಲ್ಲಿ ಮುಳುಗುತ್ತಾ, ಏಳುತ್ತಾ ಇರುವವನೋ ಎಂಬಂತೆ ಆತನಿಗೆ ಬಾರಿಬಾರಿಗೂ ನಮಸ್ಕರಿಸಿದನು. ಮಾದರಸನು ಆ ಬಸವೇಶನ ಸೇವೆಯಿಂದ ಸಂತುಷ್ಟವಾದ ಮನಸ್ಸುಳ್ಳವನಾಗಿ ಅಲ್ಲಿಯೇ ಇದ್ದನು. ಬಸವೇಶನೂ ಕೂಡ ಆತನನ್ನು ಉಪಚಾರಗಳಿಂದ ಸೇವಿಸುತ್ತಿದ್ದನು.

ಮಲ್ಲಿಕಾರ್ಜುನ ಗುರುವಿನ ಕರುಣಾರಸದಿಂದ ಶ್ರೇಷ್ಠವಾದ ಆಶ್ಚರ್ಯಕರವಾದ ಸಕಳೇಶ ಮಾದರಸನ ಚರಿತ್ರೆಯನ್ನು ಭೂಮಿಯಲ್ಲಿ ಪ್ರೀತಿಯಿಂದ ಯಾರು ಓದುತ್ತಾರೋ, ಯಾರು ಬರೆಯುತ್ತಾರೋ ಅವರು ತತ್ವಜ್ಞಾನಿಗಳ ಗತಿಯನ್ನು ಪಡೆಯುತ್ತಾರೆ.

ಬಸವೇಶವಿಜಯದಲ್ಲಿ ಒಂಭತ್ತನೆಯ ಅಧ್ಯಾಯವು

ಸಂಪೂರ್ಣವು.

## ಹತ್ತನೆಯ ಅಧ್ಯಾಯ

### ಮಡಿವಳ್ಳ ಮಾಚಯ್ಯನ ಕಥೆ.

ಲಿಂಗಾಂಗ ಸಾಮರಸ್ಯಜ್ಞಾನದಲ್ಲಿ ನೆಲೆಗೊಂಡ ಮನಸ್ಸುಳ್ಳವನೂ, ಶಿವ ದ್ರೋಹಿಗಳ ವಂಶವನ್ನು ನಾಶಪಡಿಸುವುದರಲ್ಲಿ ಶ್ಲಾಘನೆಹೊಂದಿದ ಪರಾಕ್ರಮ ವುಳ್ಳವನೂ, ವೀರಶೈವರೊಳಗೆ ಮೊದಲು ಎಣಿಸುವದಕ್ಕೆ ಯೋಗ್ಯನೂ, ವೀರಭ ದ್ರನ ಎರಡನೇ ಅವತಾರವೂ, ಸ್ವಾಧೀನವಾದ ಇಂದ್ರಿಯಸಮೂಹವುಳ್ಳವನೂ, ಪ್ರಾಣವಾಯುವನ್ನು ಸ್ವಾಧೀನಪಡಿಸಿಕೊಂಡವನೂ, ತನ್ನ ಅಧೀನವಾದ ಮನ ಸ್ಸುಳ್ಳವನೂ, ವೀರರಲ್ಲಿ ಅಗ್ರೇಸರನೂ, ನಿರ್ಮಲಹೃದಯನೂ, ಜನನಮರಣಗಳಿಗೆ ದೂರನೂ, ದಯಾರಸದಿಂದ ತೋಯಿಸಲ್ಪಟ್ಟವನೂ, ವಿಷ್ಣುಬ್ರಹ್ಮರನ್ನು ಕೂಡ ನಿಗ್ರಹಿಸುವುದರಲ್ಲಿ ಇಲ್ಲವೇ ಅನುಗ್ರಹಿಸುವುದರಲ್ಲಿ ಶಕ್ತನೂ, ನಿರ್ಮಲವಾದ ಮುಖಕಮಲವುಳ್ಳವನೂ ಪ್ರಖ್ಯಾತನೂ, ವಿನಯಸಂಪನ್ನನೂ, ಆದ ಮಾಚ ಯ್ಯನು ಹಿಪ್ಪಲಿಗೆಯಲ್ಲಿ ವಾಸಮಾಡುತ್ತಾ, ನಿರಂಕುಶವಾಗಿಯೂ, ಶ್ರೇಷ್ಠವಾ ಗಿಯೂ, ಇರುವ ಬಸವೇಶನ ಕೀರ್ತಿಸಂಪತ್ತನ್ನು ಕೇಳಿ, ಯಶಸ್ಸೆಂಬ ಬೆಳ್ದಾರೆಗ ಳುಳ್ಳ ಬಸವೇಶನ ದಯೆಯೆಂಬ ಮಡುವಿನಲ್ಲಿ ಭಕ್ತರ ಮನಸ್ಸುಗಳೆಂಬ ಬಟ್ಟೆಗ ಳನ್ನು ತೊಳೆಯಬೇಕೆಂಬ ಇಚ್ಛೆಯುಳ್ಳವನೋ ಎಂಬಂತೆ ಕಲ್ಯಾಣಪಟ್ಟಣಕ್ಕೆ ಬಂದು, ಭಕ್ತಿಸಂಪನ್ನನಾದ ಬಸವೇಶನನ್ನು ಕಂಡು, ಆತನಿಂದ ಪೂಜಿಸಲ್ಪಟ್ಟವ ನಾಗಿ. ತಾನೂ ಭಕ್ತರನ್ನು ಪೂಜಿಸುತ್ತಾ ಅಲ್ಲಿ ವಾಸಿಸಿದನು. ಭಕ್ತರ ವಸ್ತ್ರಗಳ ಮೈಲಿಗೆಗಳನ್ನು ತೊಳೆಯುವದರಿಂದ ಪರೋಪಕಾರ ಹೀನತೆಯೆಂಬ ಕೈಗಳ ಮೈಲಿಗೆಯು ಕೂಡ ತೊಳೆಯಲ್ಪಡುವುದೆಂದು ಮನಸ್ಸಿನಲ್ಲಿ ನಿರ್ಣಯಿಸಿ ಭಕ್ತಿ ವಂತನೂ, ಶ್ರೇಷ್ಠವಾದ ಅಭಿಪ್ರಾಯವುಳ್ಳವನೂ, ಪ್ರಮಥಶ್ರೇಷ್ಠನೂ, ಆದ ಮಾಚಯ್ಯನು ಶಿವಭಕ್ತರಿಗೆ ಅಗಸನಾದನು. ಹೊತಾರೆ ಎದ್ದು ಭಕ್ತರ ವಸ್ತ್ರಗ ಳನ್ನೆಲ್ಲಾ ಕೂಡಿಸಿಕೊಂಡು ಹೋಗಿ, ಆ ಪಟ್ಟಣದ ಹೊರಗೆ ಯಾವದೋಒಂದು ನಿರ್ಜನಸ್ಥಲದಲ್ಲಿರುವ ಮಡುವಿನಲ್ಲಿ ಒಗೆದು, ಸೂರ್ಯಕಿರಣಗಳಿಂದ ಒಣಗಿಸಿ, ಕೈಲಾಸಗಿರಿಗೆ ಸಮಾನವಾದ ಆಕಾರವುಳ್ಳ ಬಟ್ಟೆಯಗಂಟನ್ನು ಬೆನ್ನಿನಲ್ಲಿ ಹೊತ್ತು

ಕೊಂಡು, ತಿರಿಗಿ ಪಟ್ಟಣಕ್ಕೆ ಪ್ರವೇಶಿಸಿ, ಬೀದಿಯಲ್ಲಿ ಬರುವಾಗ;-ಭಕ್ತರ ವಸ್ತ್ರಗಳನ್ನು ಹೊತ್ತಿರುವವನನ್ನು ಯಾವನು ಮುಟ್ಟುತ್ತಾನೋ ಅವನನ್ನು ಕೊಲ್ಲುವೆನು ಎಂದು ಸಾರುತ್ತಾ, ಅಲ್ಲಲ್ಲಿ ಘಂಟೆಯನ್ನು ಧ್ವನಿಮಾಡುತ್ತಾ, ಶೀಘ್ರದಲ್ಲಿ ತನ್ನ ಮನೆಗೈದಿ, ಜಂಗಮಾರ್ಚನೆಯಂಮಾಡಿ, ಸಾಯಂಕಾಲದಲ್ಲಿ ಶಿವಪೂಜಾನಂತರದಲ್ಲಿ ಮೃದುವಾಗಿಯೂ ಮನೋಹರವಾಗಿಯೂ ಇರುವಂತೆ ವಸ್ತ್ರಗಳನ್ನು ಗಟ್ಟಣೆಮಾಡಿ, ಯಾವಭಕ್ತನು ಯಾವ ವಸ್ತ್ರವನ್ನು ಬೇಡುವನೋ ಅವನಿಗೆ ಅದನ್ನು ಕೊಡುವದಲ್ಲದೆ, ಆ ವಸ್ತ್ರದ ಯಜಮಾನನಿಗೂ ಕೊಡುತ್ತಾ ಬಂದನು. ಹೀಗಿರುವಲ್ಲಿ ಇವನ ಯಶಸ್ಸು ಎಲ್ಲೆಲ್ಲಿಯೂ ವ್ಯಾಪಿಸಿತು. ಪೂರ್ವದಲ್ಲಿ ಏಕಾಳಿ,ಧವಳ ಎಂಬ ಇಬ್ಬರು ರಜಕಭಕ್ತರಿದ್ದರು. ಅವರಿಗಿಂತಲೂ ಈ ಮಾಚಯ್ಯನ ಮಹಿಮೆಯು ಅಪರಿಮಿತವಾದದ್ದು. ಹೀಗೆ ಕೆಲವುದಿನಗಳು ಕಳೆಯುತ್ತಿರುವಲ್ಲಿ·ಮತ್ತೊಂದೂರಿನಿಂದ ಬಂದ ಯಾವನೋ ಒಬ್ಬನು ಮಾಚಯ್ಯನ ಆ ಪ್ರತಿಜ್ಞೆಯನ್ನು ತಿಳಿಯದೆ ಸಮೀಪವನ್ನೈದಿ ಅವನ ಮೈ ಸೋಂಕಿದ ಮಾತ್ರದಿಂದ ಕೋಪಾವಿಷ್ಟನಾದ ಮಾಚೈಯ್ಯನು ಅವನನ್ನು ಆಯುಧದಿಂದ ತಿವಿದು ಮೇಲಕ್ಕೆ ಎತ್ತಿ ಆ ದೇಹವನ್ನು ಆಕಾಶಕ್ಕೆ ಎಸೆದನು. ಅವನ ಬಂಧುಗಳೆಲ್ಲರೂ ಕೂಡಿ, ರೋದನಧ್ವನಿಯನ್ನುಮಾಡಿಕೊಂಡು ಸಭೆಗೆಬಂದು, ಸಿಂಹಾಸನದಲ್ಲಿ ಕುಳಿತಿರುವ ಬಿಜ್ಜಳರಾಯನಿಗೆ ನಮಸ್ಕರಿಸಿ ಹೇಳಿದ್ದೇನಂದರೆ;-ಎಲೈ ಸ್ವಾಮಿಯೆ ನಿನ್ನಪಟ್ಟಣದಲ್ಲಿ ಯಾವಾಗಲೂ ಕೈಯ್ಯಲ್ಲಿ ಕತ್ತಿಯನ್ನು ಹಿಡಿದುಕೊಂಡಿರುವುದರಿಂದ ನೋಡುವುದಕ್ಕೆ ಭಯಂಕರನಾಗಿಯೂ, ಶಕ್ತಿಯಲ್ಲಿಕೊಬ್ಬಿದವನಾಗಿಯೂ ಇರುವ ಒಬ್ಬ ಅಗಸನಿದ್ದಾನೆ. ಅವನು ದಾರಿಯಲ್ಲಿ ಹೋಗುವಾಗ ಯಾರಾದರೂ ಎದುರಿಗಿ ಬಂದರೆ, ಈ ಮೂಢಭವಿಯು ನನ್ನನ್ನು ಮುಟ್ಟುತ್ತಾನೆಂದು ಅವನನ್ನು ಕೊಲ್ಲುತ್ತಾನೆ. ಆದ್ದರಿಂದ ಬೀದಿಯಲ್ಲಿ ಬರುತ್ತಿರುವ ಅವನನ್ನು ಜನರೂ, ಆನೆಕುದುರೆಗಳೂ, ದೂರದಲ್ಲಿಯೇ ಕಂಡು ಹೆದರಿ ಮಾರ್ಗವನ್ನು ಬಿಟ್ಟು ಓಡಿಹೋಗುತ್ತಾರೆ. ಅಂಗಡಿಗಳಲ್ಲಿರುವ ಸಕಲರೂ ಅವನನ್ನು ಸ್ತುತಿಸುತ್ತಾರೆ. ಮತ್ತು ನಮಸ್ಕರಿಸುತ್ತಾರೆ. ಅವರನ್ನು ಆತನು ರಾಜನಂತೆ ನೋಡುವದೂಇಲ್ಲ. ಮಾತನಾಡಿಸುವದೂಇಲ್ಲ. ಇದಲ್ಲದೆ ಇನ್ನೊಂದಾಶ್ಚರ್ಯ. ಅವನಿಂದ ಕೊಲ್ಲಲ್ಪಟ್ಟವನ ದೇಹವು ಕಾಣುವುದೇಇಲ್ಲ ಅದನ್ನು ತಿನ್ನುತ್ತಾನೋ ಮಾಯೆಯಿಂದ ಮರೆಮಾಡುತ್ತಾನೋ ತಿಳಿಯಲಿಲ್ಲ. ಹೀಗೆಹೇಳಿದ ಮಾತನ್ನು ಬಿಜ್ಜಳರಾಯನು

ಕೇಳಿ, ಕೋಪದಿಂದ ಕಲಕಲ್ಪಟ್ಟ ಮನಸ್ಸುಳ್ಳವನಾಗಿ, ಬಸವೇಶನನ್ನು ಕುರಿತು ಕೇಳಿದ್ದೇನಂದರೆ;—ಶಿವಭಕ್ತರು ರಾಕ್ಷಸರೋ ? ದೈತ್ಯರೋ ? ಮನುಷ್ಯರೂಪಿ ನಹುಲಿಗಳೋ ? ದಯೆಯಿಲ್ಲದೆ ಮನುಷ್ಯರನ್ನು ಕೊಂದು ತಿನ್ನುತ್ತಾರೆ. ಪಾಂಡ್ಯ, ಕೇರಳ, ಪಾಂಚಾಳ, ಘೂರ್ಜರ, ಮಾಗಧ ಮೊದಲಾದ ದೇಶಾಧೀಶ್ವರರಿಂದಲೂ ಮೀರಲ್ಪಡದನನ್ನ ಆಜ್ಞೆಯನ್ನು ಅಗಸನು ಮೀರುತ್ತಾನೆ. ಬಟ್ಟೆಗಳನ್ನು ತೊಳೆಯುವ ಕೆಲಸದಲ್ಲಿ ಚಾತುರ್ಯವುಳ್ಳ ಆ ಅಗಸನ ಕೈಗಳಿಗೆ ಆಯುಧವನ್ನು ಹಿಡಿಯುವ ಚಾತುರ್ಯವು ಹೇಗೆ ಹೊಂದಿಕೆಯಾಗುವುದು. ಆಯುಧಪಾಣಿಯಾದವನು ಆ ಯುಧವನ್ನು ಹಿಡಿದುಕೊಂಡಿರುವ ಅಪರಾಧಿಯಮೇಲೆ ತನ್ನ ಆಟೋಪವನ್ನು ತೋರಿಸುವದು ನ್ಯಾಯ. ಹೀಗಿರುವಲ್ಲಿ ಶಸ್ತ್ರವಂ ಹಿಡಿದಿರುವವನು ನಿರಪರಾಧಿಯಾದ ನಿರಾಯುಧನನ್ನು ಕೊಂದನು. ಇದು ಆಶ್ಚರ್ಯ. ಮೊದಲು ತಪ್ಪುಮಾಡಿದವನನ್ನು ದೊರೆಯಿಲ್ಲದ ದೇಶದಲ್ಲಿ ಜನರು ತಾವೇ ಶಿಕ್ಷಿಸುತ್ತಾರೆ. ದೊರೆಯಿರುವ ದೇಶದಲ್ಲಿ ಅದೆಂದಿಗೂ ನಡೆಯುವಲ್ಲ. ಯಾವನ ಮಾತುಗಳು ಕೇಳುವುದಕ್ಕೆ ಅಯೋಗ್ಯವೋ ; ಯಾವನು ಹುಟ್ಟುವದಕ್ಕೆ ಅಯೋಗ್ಯನೋ, ಯಾವನು ಗ್ರಾಮಚಂಡಾಲನೋ ; ಅಂಥಾ ಅಗಸನು ಕೈಚಿಟಿಕಿಯಸನ್ನೆಯಿಂದ ತನ್ನಾಗಮನವನ್ನು ಜನಗಳಿಗೆ ಸೂಚಿಸುತ್ತಾನೆ. ಯಾವನನ್ನು ನೋಡಿದರೆ ಸಚೇಲಸ್ನಾನವೇ ಪ್ರಾಯಶ್ಚಿತ್ತವೋ ಅಂಥಾ ಅಗಸನು ಜನಗಳ ಸ್ಪರ್ಶನವನ್ನು ತಾನು ಸಹಿಸುವದಿಲ್ಲವಲ್ಲಾ. ತಮ್ಮ ತಮ್ಮಾಚಾರಗಳನ್ನು ಬಿಟ್ಟು, ಬೇರೆ ಆಚಾರಗಳಲ್ಲಿ ಪ್ರವರ್ತಿಸಿದವನನ್ನು, ರಾಮನು ತಪಸ್ವಿಯಾದ ಶಂಬೂಕನೆಂಬ ಶೂದ್ರನನ್ನು ಕೊಂದಂತೆ ಕೊಲ್ಲಬೇಕು. ಅನುಚಿತವಾಗಿ ಆಯುಧವನ್ನು ಹಿಡಿಯುವವನು ವಧೋದ್ಯುಕ್ತನೆಂದು ಹೇಳಲ್ಪಡುತ್ತಾನೆ. ಆದಕಾರಣ ಆ ರಾಕ್ಷಸಾಧಮನನ್ನು ಕೊಲ್ಲಬೇಕು. ಶಿಕ್ಷಿಸಬಾರದವನನ್ನು ಶಿಕ್ಷಿಸುವದೂ, ಶಿಕ್ಷಿಸಬೇಕಾದವರನ್ನು ಶಿಕ್ಷಿಸದಿರುವುದೂ ರಾಜರಿಗೆಮಹಾ ಪಾಪಕಾರಣವೆಂದು ಧರ್ಮವನ್ನು ತಿಳಿದವರು ಹೇಳುತ್ತಾರೆ. ಈ ರೀತಿಯಾಗಿ ಹೇಳಿ, ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ನಗರರಕ್ಷಕನನ್ನು ಕರೆಸಿ, ವಿಜ್ಞಾಪಿಸಿದ್ದೇನಂದರೆ;—ನೀನು ಶೀಘ್ರದಲ್ಲಿ ಹೋಗಿ, ಭಯಂಕರವಾದ ಅವನ ಘಂಟಾಧ್ವನಿಯನ್ನು ಕೇಳಿ ಅವನು ಬರುವ ದಾರಿಗೆ ಅಡ್ಡಲಾಗಿ ಆನೆಯನ್ನು ಒಡ್ಡಿಕೊಂಡು, ಧೈರ್ಯದಿಂದ ನಿಂತಿದ್ದು ಆಯುಧವನ್ನು ಹಿಡಿದುಕೊಂಡು ಬರುತ್ತಿರುವ ರಜಕನಮೇಲೆ ನುಗ್ಗಿಸಿ ಭಲ್ಲೆಯಂ

ತಿರುವ ಅದರ ಕೊಂಬುಗಳಿಂದ ಆವನ ಎದೆಯನ್ನು ಸೀಳುವಂತೆಮಾಡು. ಹೀಗೆ ನುಡಿಯುತ್ತಿರುವ ಬಿಜ್ಜಳರಾಜನನ್ನು ನೋಡಿ ಬಸವೇಶ್ವರನು.-ಎಲೈ ರಾಯನೇ ಮುಂದಾಗುವ ಫಲವನ್ನು ವಿಚಾರಿಸದೆ ಯಾಕೆ ಹೀಗೆ ಬಾಯಿಗೆಬಂದಂತೆ ಮಾತ ನಾಡಿಕೊಳ್ಳುತ್ತೀಯೆ. ಈ ಮಾಚಯ್ಯನನ್ನು ಕೇವಲ ರಜಕನೆಂಬದಾಗಿ ಭಾವಿಸ ಬೇಡ. ಈ ಕ್ರೂರವಾದ ದುಡುಕನ್ನುಬಿಟ್ಟುನನ್ನ ಮಾತುಗಳನ್ನು ಕೇಳು, "ಬ್ರಾಹ್ಮಣೋ ಭಗವಾರ್ನ್ ರುದ್ರಃ" ಎಂಬ ವಚನಕ್ಕೆ ಸಾಫಲ್ಯವನ್ನು ಹೇಳುವ ಈತನು ಸಕಲ ಯಜ್ಞಗಳಿಗೂ ಅಧಿಪತಿಯಾದ ಮೊದಲನೇ ಬ್ರಾಹ್ಮಣನಾಗಿದ್ದಾನೆ. ಮತ್ತು ರಾಕ್ಷಸರಿಂದಲೂ ಅಸುರರಿಂದಲೂ ಉಂಟಾದ ಉಪದ್ರವಗಳಿಂದ ದೇವತೆಗ ಳನ್ನು ಸಂರಕ್ಷಿಸಿದ ಮತ್ತು ಶತ್ರುಗಳಿಂದ ಅಲ್ಲಾಡಿಸುವದಕ್ಕಾಗದ ಮಹಿಮೆಯು ಳ್ಳ ಆದಿಕ್ಷತ್ರಿಯನಾಗಿದ್ದಾನೆ. ಇದಲ್ಲದೆ ತನ್ನ ಸೃಷ್ಟಿಕರ್ಮವೊಂದರಿಂದಲೇ ಮೂರು ಲೋಕಗಳನ್ನು ಸಂಪಾದಿಸಿದವನಾಗಿಯೂ, ವಿದ್ಯೆಗಳೆಂಬ ರತ್ನಗಳಿಗೆ ಆಸ್ಪದನಾಗಿಯೂ, ಇರುವ ವೈಶ್ಯನಾಗಿದ್ದಾನೆ. ಬ್ರಾಹ್ಮಣನಲ್ಲ ಕ್ಷತ್ರಿಯನಲ್ಲ. ವೈಶ್ಯನಲ್ಲ ಶೂದ್ರನಲ್ಲ. ಮತ್ತೊಂದು ಜಾತಿಯವನೂಅಲ್ಲ. ಬ್ರಹ್ಮಚಾರಿಯಲ್ಲ. ಗೃ ಹಸ್ಥನಲ್ಲ. ವಾನಪ್ರಸ್ಥನಲ್ಲ. ಸನ್ಯಾಸಿಅಲ್ಲ. ತನ್ನಾಜ್ಞೆಗೆ ವಿರೋಧವನ್ನಾಚರಿಸುವ ವರನ್ನು ಶಿಕ್ಷಿಸುವದಕ್ಕಾಗಿಶಿವನೇ ರಜಕನಾಗಿ ಬಂದಿದ್ದಾನೆ. ಇನ್ನೊಬ್ಬನು ಅಲ್ಲ. ಬಲಿಷ್ಠನಾದ ಆತನು ಅಜ್ಞಾನದಿಂದಾದರೂ ತನ್ನನ್ನು ಮುಟ್ಟಿದ ಪ್ರಾಣಿಗಳನ್ನು ಕೊಲ್ಲುತ್ತಿರುವಲ್ಲಿ, ದಾರಿಯನ್ನು ತಡೆಯುವದು ಮೊದಲಾದ ಚೇಷ್ಟೆಗಳಿಂದ ಅಪ ರಾಧವನ್ನು ಮಾಡಿದರೆ ಕೇಳುವದೇನು ? ಆದಕಾರಣ ಈತನನ್ನು ಅನುಸರಿಸಿ ಕೊಂಡು ಹೋಗಬೇಕೇಹೊರತು ವಿರೋಧಿಸಕೂಡದು. ಯಾವಕಾರ್ಯವು ಸಾಮೋ ಪಾಯದಿಂದ ಸಾಧಿಸಲ್ಪಡುತ್ತದೋ ಅದನ್ನು ದಂಡೋಪಾಯದಿಂದ ಸಾಧಿಸುವ ದಕ್ಕಾಗದು. ಶಿವಕಳೆಯಿಂದ ಕೂಡಿದ ಜನದಮೇಲೆ ಬಲಿಷ್ಠರಪ್ರಯತ್ನವೇನೂ ನಡೆಯುವದಿಲ್ಲ. ನಾರಾಯಣಾವತಾರಿಯಾದ ಪರಶುರಾಮನಲ್ಲಿ ಕಾರ್ತವೀರ್ಯಾ ರ್ಜುನನ ಶಕ್ತಿಯೇನೂ ನಡೆಯುವದಿಲ್ಲವಷ್ಟೆ. ಈ ಪ್ರಕಾರವಾಗಿ ಹೇಳಿದ ಬಸವೇಶ ನಮಾತುಗಳನ್ನು ಬಿಜ್ಜಳನು ಗಣನೆಗೆತಾರದೆ. ತಾನುಮುಂಚೆ ಹೇಳಿದಹಾಗೆ ನಡಸಬೇಕೆಂದು ನಗರ ಪಾಲಕರನ್ನು ಕಳುಹಿಸಿದನು. ಅನಂತರದಲ್ಲಿ ಪುರರಕ್ಷಕನು ಕ್ರೂರರಾದ ತನ್ನ ಕೈಕೆಳಗಣ ಭಟರೊಡನೆ ಆನೆಯನ್ನು ತೆಗೆದುಕೊಂಡು ಹೋಗಿ, ಮಾಚಯ್ಯನು ಬರುವ ದಾರಿಗೆ ಅಡ್ಡಲಾಗಿ ಚಾಚಿನಿಂತುಕೊಂಡನು. ಆಗ ಜನರು

ಮಾಚಿದೇವನ ದಾರಿಯನ್ನು ತಡೆದಿರುವ ಆ ಭಟರನ್ನು ಸಿಂಹದ ಮಾರ್ಗವನ್ನು ತಡೆಯುವ ಆನೆಯಂತೆಯೂ, ಹುಲಿಯ ಮಾರ್ಗವನ್ನು ತಡೆಯುವ ಕರುಗಳಂತೆಯೂ ನೋಡಿದರು. ಆಮೇಲೆ ಮಾಚಯ್ಯನು ಶರತ್ಕಾಲದ ಮೇಘವನ್ನು ಹೊತ್ತುಕೊಂಡಿರುವ ವಾಯುವಿನಹಾಗೆ ಮಡಿಬಟ್ಟೆಗಳನ್ನು ಹೊತ್ತುಕೊಂಡುಬರುತ್ತಾ ಪೂರ್ವದಂತೆ ಘಂಟೆಯನ್ನು ಬಡಿದಾಗ್ಯೂ ಮಾರ್ಗಕ್ಕಡ್ಡವಾಗಿ ಅಲ್ಲಾಡದೆ ನಿಂತಿರುವ ರಾಯನ ಗಜರಕ್ಷಕರ ಗುಂಪನ್ನು ನೋಡಿ, ಬಟ್ಟೆಯ ಹೊರೆಯನ್ನು ಬೇಗ ಆಕಾಶಕ್ಕೊಗೆದು, ಮದಿಸಿದ ಗಜಾಸುರನ ಬಳಿಗೆ ಈಶ್ವರನು ಬರುವಂತೆ ಆ ಮದ್ದಾನೆಯ ಬಳಿಗೆಬಂದು, ಹೊಡೆಯುವದಕ್ಕೆ ಉದ್ಯುಕ್ತವಾದ ಆ ಆನೆಯ ಸೊಂಡಿಲನ್ನು ಕೈಯಲ್ಲಿ ಹಿಡಿದುಕೊಂಡು, ಎಳೆದು ಮುಂದಕ್ಕೂ, ಹಿಂದಕ್ಕೂ, ನೂಕಿ, ಕೂಗಿದನು. ಆನೆಯು ಕೆಲವು ಹೆಜ್ಜೆಗಳು ನಡೆದು, ಕೂಡಲೇ ಹಿಂದಕ್ಕೆ ಸರಿದು, ಮಾವಟಿಗರು ಪ್ರೋತ್ಸಾಹಗೊಳಿಸಿದ್ದರಿಂದ ಕೋಪಗೊಂಡು ಎದುರಾಗಿ ನುಗ್ಗಲು; ವೀರನಾದ ಮಾಚಯ್ಯನು ಸೊಂಡಿಲನ್ನು ಮುಂದಕ್ಕೆ ನೀಡಿ, ತಿವಿಯುವದಕ್ಕೆ ಪ್ರಯತ್ನಿಸಿದ ಕೊಂಬುಗಳಿಂದ ಭಯವನ್ನುಂಟುಮಾಡುತ್ತಾ, ಕಿವಿಗಳನ್ನು ಅಲ್ಲಾಡಿಸದಿರುವ ಆನೆಗೆದುರಾಗಿ ಹೋದನು. ಆಗ ಗಜಪಾಲಕರು ಸುತ್ತಲೂ ನಿಂತುಕೊಂಡು, ಮೇಘಗಳು ಪರ್ವತದಮೇಲೆ ಮಳೆಗಳನ್ನು ಸುರಿಯುವಂತೆ ಅವನಮೇಲೆ ಆಯುಧಗಳನ್ನು ಮನಸ್ಸಿಗೆ ತೋರಿದಂತೆ ಸುರಿಸಿದರು. ಪ್ರತಿಭಟರಿಂದ ಪ್ರಯೋಗಿಸಲ್ಪಟ್ಟ ಆಯುಧಗಳು ಮಾಚಯ್ಯನ ಖಡ್ಗಾಯುಧದಲ್ಲಿ, ಮೇಘಗಳಿಂದ ಸುರಿಯಲ್ಪಟ್ಟ ಮಳೆಗಳು ಅರುಣಾಚಲದಲ್ಲಿ ಅಡುಗುವಂತೆ ಅಡಿಗಿಹೋದವು. ಬಳಿಕ ಉತ್ಸಾಹಗುಂದಿದವರೂ ನಿರಾಯುಧರೂ ಆದ ಸಮಸ್ತಭಟರೂಪ್ರಳಯಕಾಲದ ಭೈರವನಂತಿರುವ ಆತನನ್ನು ನೋಡಿ. ಭೀತಿಯಿಂದ ಹಿಡಿಯಲ್ಪಟ್ಟ ಮನಸ್ಸುಳ್ಳವರಾಗಿ ಓಡಿಹೋದರು. ಮಾಚಯ್ಯನು ವೇಗದಿಂದಹಾರಿ ಆ ಮದಗಜದ ತಲೆಯಮೇಲೆ ಹತ್ತಿದವನಾಗಿ, ಪಟ್ಟಣದಲ್ಲಿರುವ ಸಕಲರು ಮೂರ್ಛಿತರಾಗುವಂತೆ ಕಿಲಕಿಲಧ್ವನಿಯನ್ನು ಮಾಡಿ ಮಾವಟಿಗನನ್ನು ಪಾದದಿಂದ ಒದೆಯಲು, ಅವನು ಸಿಡಿಲುಪೆಟ್ಟಿನಿಂದ ಶಿಥಿಲವಾದ ದೊಡ್ಡ ಬಂಡೆಯು ಬೆಟ್ಟದಮೇಲಣಿಂದ ಉರುಳುವಂತೆ ಆನೆಯ ಮೇಲಣಿಂದಉರಿಳಿದನು. ಆಗ ಅದರ ಕೊಂಬುಗಳೆರಡನ್ನೂ ಕಿತ್ತು ಕೆಳಗೆ ಬಿದ್ದ ಆನೆಯನ್ನು ಚಂಡನ್ನು ಮಾಡಿಕೊಂಡು ವೀರಭದ್ರನು ನರಸಿಂಹನನ್ನು ಎಸೆದಾಡಿದಂತೆ ಎಸೆದಾಡಿದನು. ಮಾಚಿದೇವನೆಂಬ

ಮಹಾ ಸಿಂಹವು ಆನೆಯನ್ನು ನೆಲದಲ್ಲಿ ಕೆಡಹಿ, ಕತ್ತಿಎಂಬ ಉಗುರಿನ ತುದಿಯಿಂದ ಸೀಳಿತು. ಇಷ್ಟರೊಳಗೆ ಬಿಜ್ಜಳರಾಯನು ಮಾಚಿದೇವನ ಪರಾಕ್ರಮವನ್ನು ಕೇಳಿ, ಬಸವೇಶನ ಮಾತುಗಳನ್ನು ನೆನೆದು, ನಾಚಿಕೆಯಿಂದ ತಲೆಯನ್ನು ಬಗ್ಗಿಸಿಕೊಂಡನು. ಈ ಸ್ಥಿತಿಯಲ್ಲಿರುವ ಬಿಜ್ಜಳನನ್ನು ಕುರಿತು ಬಸವೇಶನು;— ಎಲೈ ಪ್ರಭುವೇ, ನಿನ್ನ ಮೂರ್ಖತನವನ್ನು ಬಿಟ್ಟು,ನನ್ನ ಮಾತನ್ನು ಹಿತವನ್ನಾಗಿಎಣಿಸಿ, ಕೇಳು.

ಪೂರ್ವದಲ್ಲಿ ಕರಯೂರೆಂದು ಪ್ರಸಿದ್ಧವಾದ ಒಂದು ಪಟ್ಟಣವಿತ್ತು ಅದನ್ನು ಶಿವನ ಪಾದಕಮಲದಲ್ಲಿ ಭಕ್ತಿಯುಳ್ಳ ಚೋಳರಾಯನು ರಕ್ಷಿಸುತ್ತಿದ್ದನು. ಧನವನ್ನು ಕೊಡುತ್ತಿರುವ ಅನೇಕರಿಂದಲೂ, ಅಸಂಖ್ಯಾತರಾದ ವಿದ್ವಾಂಸರಿಂದಲೂ, ಆವರಿಸಲ್ಪಟ್ಟ ಆ ಪಟ್ಟಣವು ಅಲಕಾವತಿಯನ್ನೂ ಅಮರಾವತಿಯನ್ನೂ ಅತಿಕ್ರಮಿಸಿತು. ಅದರಲ್ಲಿ, ಶಿವಾಗಮಾರ್ಥಜ್ಞಾನದಲ್ಲಿ ಎರಡನೆಯ ನಂದೀಶ್ವರನೋ ಎಂಬಂತಿರುವ ಮಹಾತ್ಮನಾದ ಇರುವತ್ತನೆಂಬ ಒಬ್ಬ ಶಿವಭಕ್ತನಿದ್ದನು. ಅವನು ಇಂದ್ರಿಯಗಳನ್ನು ಜಯಿಸಿದವನೂ,ಶೀತೋಷ್ಣಾದಿ ದ್ವಂದ್ವ ದುಃಖಗಳನ್ನು ಸಹಿಸಿದವನೂ, ಶಿವದ್ರೋಹಿಗಳ ಕುಲವನ್ನು ಧ್ವಂಸಮಾಡುವ ಪ್ರತಿಜ್ಞೆಯಲ್ಲಿ ಅತಿಸಾಹಸಿಯೂ, ಅನೇಕವಿಧವಾದ ಯುದ್ಧಕ್ರಿಯೆಗಳಲ್ಲಿ ವೀರಭದ್ರನೂ, ಲೌಕಿಕವಿದ್ಯೆಗಳಲ್ಲಿ ಆಶೆಯಿಲ್ಲದವನೂ, ಶಿವಾಗಮದಲ್ಲಿ ಆಸಕ್ತಿಯುಳ್ಳವನೂ, ಬಾಲ್ಯದಲ್ಲಿಯೇ ಶಿವಾಚಾರಪರಾಯಣನೂ, ಭಕ್ತರಿಗೆ ಬಂಧುವೂ, ವೇದೋಕ್ತವಾದ ಭಸ್ಮ ರುದ್ರಾಕ್ಷಗಳನ್ನು ಧರಿಸುವ ಕ್ರಮವನ್ನು ತಿಳಿದವನೂ, ಶಿವನಲ್ಲಿಯೇ ಸ್ಥಿರವಾದ ಧ್ಯಾನವುಳ್ಳವನೂ, ಭಕ್ತರ ಪ್ರಾಣಗಳನ್ನು ಸಂರಕ್ಷಿಸುವವನೂ, ಅವರ ದ್ವೇಷಿಗಳ ಪ್ರಾಣಗಳನ್ನು ಅಪಹರಿಸುವವನೂ ಆಗಿದ್ದನು.

ಮಹಾತೇಜಸ್ವಿಯಾದ ಆತನು ಒಂದಾನೊಂದು ದಿವಸ, ಪ್ರಾತಃಕಾಲದಲ್ಲಿ ದೇವಾಲಯದೊಳಗೆ ಆಪ್ತರಾದ ಶಿವಭಕ್ತರೊಡನೆ ಕುಳಿತಿದ್ದನು. ಅದಕ್ಕಿಂತ ಮುಂಚೆ ಒಬ್ಬ ಶಿವಭಕ್ತನು ಪೂಜಾಪುಷ್ಪಗಳನ್ನು ತರುವದಕ್ಕೋಸ್ಕರ ಬಹು ಸಂತೋಷದಿಂದ ತೋಟವನ್ನೈದಿ, ಅಲ್ಲಿಗಾಳಿಯಿಂದ ಕೆದರಲ್ಪಟ್ಟವುಗಳೂ ಭ್ರಮರಗಳಿಂದ ಕೆಡಿಸಲ್ಪಟ್ಟವುಗಳೂ, ಸ್ವಲ್ಪವಾಗಿ ಉದುರಿದ ಕೇಸರಗಳುಳ್ಳವುಗಳೂ ಮುರಿದುಹೋದದಳವುಳ್ಳವುಗಳೂ ಬಹಳವಾಗಿ ಅರಳಿದವುಗಳೂ ಬಂದಕ್ಕೊಂದಕ್ಕೆ ತಗಲಿ, ಒಡೆದುಹೋದ ಎಸಳುಗಳ ಸಂದುಗಳಿಂದ ಮಕರಂದವು ಸುರಿದು ಬಾಡಿರುವವುಗಳೂ, ಒಂದುರಾತ್ರಿ ಕಳೆದವುಗಳೂ, ಆದಪುಷ್ಪಗಳನ್ನು

ಬಿಟ್ಟು, ಪರಿಮಳದಿಂದ ಹುದುಗಿರುವವುಗಳೂ, ಒಳಗೆ ಮಕರಂದದಿಂದ ತುಂಬ ಲ್ಪಟ್ಟವುಗಳೂ, ವೃದ್ಧಿಯಾಗುತ್ತಿರುವ ಕೇಸರಗಳಿಂದ ನೂಕಲ್ಪಟ್ಟದ್ದರಿಂದ ಉಬ್ಬು ತ್ತಿರುವ ದಳಗಳುಳ್ಳವುಗಳೂ, ಪಾರ್ಶ್ವದಲ್ಲಿ ಭ್ರಮರಗಳಿಂದ ಕಾಯಲ್ಪಟ್ಟವುಗಳೂ, ಸ್ವಲ್ಪಹೊತ್ತಿನೊಳಗಾಗಿ ಅರಳುವವುಗಳೂ, ಮನೋಹರಗಳೂ, ಆಗಿರುವ ಹೊಸ ವುಗಳನ್ನು ಕೊಯ್ದುಕೊಂಡು ಹಿಂತಿರುಗಿ, ಪಟ್ಟಣದ ಬೀದಿಯಲ್ಲಿ ಬರುತ್ತಿರು ವಾಗ; ಮದಹತ್ತಿದ ಅರಸನ ಒಂದಾನೊಂದಾನೆಯು ವೇಗದಿಂದ ಬಂದು ಹಿಡಿ ಯಲು, ಶಿವ ಮಹಾದೇವ, ಎಂಬದಾಗಿ ಗಟ್ಟಿಯಾಗಿ ಕೂಗಿದನು. ಇರುವತ್ತನು ಆ ಶಬ್ದವನ್ನು ಪರಭಯದಿಂದುಂಟಾದದ್ದೆಂದು ತಿಳಿದು, ತಾನು ಯಾವಾಗಲೂ, ದುಃಖಿಗಳಕಷ್ಟವನ್ನು ನಿವಾರಿಸುದರಲ್ಲಿ ಪ್ರತಿಜ್ಞೆಯನ್ನು ಮಾಡಿರುವವನಾದ್ದರಿಂದ, ಕಯ್ಯಲ್ಲಿಕೊಡಲಿಯನ್ನು ಹಿಡಿದುಕೊಂಡು, ಪೂರ್ವದಲ್ಲಿ ಮಾರ್ಕಂಡೇಯನ ದೀನವಾದ ಮಾತನ್ನು ಕೇಳಿದಶಿವನಂತೆ ಬಹುಶೀಘ್ರವಾಗಿ ಓಡಿಬಂದು, ಸುತ್ತಿ ಕೊಂಡಿರುವ ಆ ಮದಗಜದ ಸೊಂಡಿಲನ್ನೂ, ಅದರ ದಂತಗಳನ್ನೂ ತಾವರೇ ದಂಟನ್ನು ಕತ್ತರಿಸುವಂತೆ ಅನಾಯಾಸದಿಂದ ಕತ್ತರಿಸಿದನು. ಕತ್ತರಿಸಲ್ಪಟ್ಟ ಸೊಂಡಿಲುಳ್ಳ ಆನೆಯಮೇಲೆ ಕುಳಿತಿದ್ದ ಮಾವಟಿಗನು ಬೀಳಲು! ಆ ಆನೆಯು ವಜ್ರಾಯುಧದ ಹೊಡೆತಕ್ಕೆ ಭೂಮಿಯಲ್ಲಿ ಬಿದ್ದ ಶಿಖರವುಳ್ಳ ಪರ್ವತದಂತಿತ್ತು. ರಾಜನು ಇರುವತ್ತನ ವೃತ್ತಾಂತವನ್ನೂ ಆನೆಯವೃತ್ತಾಂತವನ್ನೂ, ಆದ್ಯಂತ ವಾಗಿ ಕೇಳಿ. ಭಯದಿಂದ ತಾನೇ ಆಸ್ಥಳಕ್ಕೆಬಂದು, ಭೃತ್ಯನತಪ್ಪಿಗೆ ಯಜಮಾನ ನನ್ನು ದಂಡಿಸಬೇಕು. ಆದ್ದರಿಂದ ನಾನೇ ಹೇಳುತ್ತೇನೆ. ನಾನು ಈ ಶಿವಭಕ್ತನಿಗೆ ಸಮಾನನಲ್ಲವಾದ್ದರಿಂದ ದುಷ್ಟವಾದ ಆನೆಯ ಯಜಮಾನನಾದ ನಾನೇ ಈ ಅಪರಾ ಧದಲ್ಲಿ ದಂಡನೆಗೆಯೋಗ್ಯನು. ಈ ಪ್ರಕಾರವಾಗಿ ನಿಶ್ಚೈಸಿ. ಖಡ್ಗದಿಂದ ತನ್ನ ಶಿರ ಸ್ಸನ್ನು ಛೇದಿಸುವದಕ್ಕೆ ವುದ್ಯುಕ್ತನಾದನು. ಆಗ ಪರಮೇಶ್ವರನು ಆತನ ಭಕ್ತಿಗೆ ಮೆಚ್ಚಿದವನಾಗಿ, ಅವನ ಕಯ್ಯನ್ನು ಹಿಡಿದುನಿಲ್ಲಿಸಿ, ದೇವತೆಗಳೊಡನೆ ಅವನಿಗೆ ಪ್ರತ್ಯಕ್ಷನಾಗಿ;--ಎಲೈರಾಜನೇ, ಆನೆಯೂ, ಆನೆಯಿಂದ ಕೊಲ್ಲಲ್ಪಟ್ಟ ಭಕ್ತನೂ, ಮಾವಟಿಗನೂ, ಈ ಮೂವರೂ ಎದ್ದು ಬಹುಕಾಲ ಜೀವಿಸಲಿ. ಇರುವತ್ತನಿಗೂ, ನಿನಗೂ, ಬಹುಜಯವಾಗಲಿ, ಕಡೆಗೆ ನಿಮ್ಮೆಲ್ಲರಿಗೂ ಮೋಕ್ಷವಾಗಲಿ. ಎಂದು ಹೇಳಿ, ಬ್ರಹ್ಮವಿಷ್ಣುಮೊದಲಾದ ದೇವತೆಗಳೊಡನೆಯೂ, ಪಾರ್ವತಿಯೊಡನೆಯೂ, ಅಂತರ್ಧಾನನಾದನು.

## ಬೊಮ್ಮದೇವಯ್ಯನ ಕಥೆ.

ಇದಲ್ಲದೆ, ಬಾವೂರೆಂಬ ಗ್ರಾಮದಲ್ಲಿ ವೀರಶೈವಾಚಾರವ್ರತಸ್ಥನೂ, ಯಶಸ್ವಿಯೂ, ವಿದ್ವಾಂಸನೂ, ತೇಜಸ್ವಿಯೂ, ಧೀರನೂ, ಶೂರನೂ, ವೀರನೂ, ಶಿವಭಕ್ತರಲ್ಲಿ ಪ್ರೀತಿಯುಳ್ಳವನೂ, ಯಥಾರ್ಥವಾದಿಯೂ, ಜಂಗಮಪೂಜಾಸಕ್ತನೂ, ಆದ ಬೊಮ್ಮಯ್ಯನೆಂಬ ಭಕ್ತನಿದ್ದನು. ಆತನ ಆಜ್ಞೆಯಿಂದ ಜೋಳದ ರಾಶಿಯು ಶಿವಲಿಂಗರೂಪವಾಯಿತು. ಮತ್ತು ಆತನು ಶತ್ರುಗಳೆಂಬ ಆನೆಗಳಿಗೆ ಸಿಂಹನೆಂಬ ಪ್ರಸಿದ್ಧಿಯನ್ನು ಹೊಂದಿದನು. ಅವನು ಒಂದು ದಿನ ಪ್ರಾತಃಕಾಲದಲ್ಲಿ ಹೂವುಗಳನ್ನು ತರುವದಕ್ಕೋಸ್ಕರ ತನ್ನಿಂದ ನಿರ್ಮಿತವಾಗಿದ್ದ ತೋಟವನ್ನು ಪ್ರವೇಶಿಸಿದನು. ಅಷ್ಟರೊಳಗಾಗಿ ಒಬ್ಬರಾಜನು ಜಯಯಾತ್ರೆ ಹೊರಟು ತನ್ನ ಸೈನ್ಯವನ್ನು ಆ ತೋಟದ ಸಮೀಪದಲ್ಲಿಳಿಸಿದ್ದನು. ಆಗ ಆ ಸೈನ್ಯದಲ್ಲಿದ್ದ ಒಂದಾನೆಯು ಮದಿಸಿ, ಆ ತೋಟಕ್ಕೆ ನುಗ್ಗಿ, ಶಿವಾರ್ಚನೆಗೆ ಹೂಗಳನ್ನು ಕೊಯ್ಯುವದರಲ್ಲಿ ಆಸಕ್ತನಾಗಿದ್ದ ಆ ಭಕ್ತನನ್ನು ನೋಡಿ, ಸೊಂಡಿಲನ್ನು ಎತ್ತಿಕೊಂಡು ಗರ್ಜನೆಯನ್ನು ಮಾಡುತ್ತಾ, ವೇಗದಿಂದ ಓಡಿಸಿಕೊಂಡುಬರಲು; ಶಿವಧ್ಯಾನದಲ್ಲಿದ್ದ ಬ್ರಹ್ಮಯ್ಯನು ತನ್ನ ಮೇಲೆ ಬರುತ್ತಿರುವ ಆನೆಯನ್ನು ನೋಡಿ, ಶಿವನು ಗಜಾಸುರನನ್ನು ನೋಡಿ ಹುಂಕರಿಸಿದಂತೆ ಭಯಂಕರವಾದ ಹುಂಕಾರವನ್ನು ಮಾಡಿದನು. ಆಕ್ಷಣ ವೇ ಆನೆಯು ಆ ಹುಂಕಾರವೆಂಬ ವಜ್ರಾಯುಧದಿಂದ ಒಡೆಯಲ್ಪಟ್ಟ ಹೃದಯವುಳ್ಳದ್ದಾಗಿ ಭೂಮಿಯಲ್ಲಿ ಅಂಗತರನಾಗಿಬಿದ್ದು ಕಾಲುಗಳನ್ನು ನೀಡಿ ರಕ್ತವನ್ನು ಕಾರಿ ಪ್ರಾಣವನ್ನು ಬಿಟ್ಟಿತು. ಅರಸನು ಆ ಪ್ರತಿಜ್ಞೆಯನ್ನು ಕೇಳಿ, ಭಯಾಕ್ರಾಂತನಾಗಿ ಬಂದು, ಬೊಮ್ಮದೇವನ ಪಾದಕಮಲಗಳಿಗೆರಗಿ;—ಎಲೈ ಮಹಾನುಭಾವನೇ! ಶರಣಾಗತರಲ್ಲಿ ಪ್ರೀತಿಯುಳ್ಳವನೇ! ಮದದಿಂದ ಕುರುಡಾದ ನನ್ನ ಆನೆಯು ಮಾಡಿದ ಅಪರಾಧವನ್ನು ಕ್ಷಮಿಸು. ಎಂದು ವಿಜ್ಞಾಪಿಸಲು, ವಿನಯದಿಂದ ಬಗ್ಗಿರುವ ಆ ರಾಯನನ್ನು ನೋಡಿ, ಆ ತಪಸ್ವಿಯು ಕರುಣಾರಸದಿಂದ ನೆನೆದ ದೃಷ್ಟಿಯಿಂದ ಆನೆಯನ್ನು ಬದುಕಿಸಿದನು.

ಆನೆಯನ್ನು ಕೊಂದುಬದುಕಿಸುವದರಲ್ಲಿ ನಿಪುಣವಾದ ಮಹಿಮೆಯುಳ್ಳ ಭಕ್ತರ ಚರಿತ್ರೆಗಳು ಲೋಕದಲ್ಲಿ ಅನೇಕವಿವೆ. ಆದ್ದರಿಂದ ಎಲೈ ಬಿಜ್ಜಳರಾಯನೇ ಮಾಚಯ್ಯನ ಪಾದಗಳನ್ನು ಹಿಡಿದು ಆನೆಯನ್ನೂ, ಶಸ್ತ್ರದಿಂದ ಸೀಳಲ್ಪಟ್ಟ ಆ ಮನುಷ್ಯನನ್ನೂ ಬದುಕಿಸು.

ಈ ಪ್ರಕಾರವಾಗಿ ಬಸವೇಶನಿಂದ ಹೇಳಲ್ಪಟ್ಟ ಕರ್ಣಾಮೃತಪ್ರಾಯವಾದ ಮಾತನ್ನು ಬಿಜ್ಜಳನು ಕೇಳಿ, ಆ ಬಸವೇಶನೊಡನೆ ಕಿನ್ನರಬ್ರಹ್ಮಯ್ಯನಿರುವ ಸ್ಥಳಕ್ಕೆ ಬಂದು ನಮಸ್ಕರಿಸಿದನು. ಬಸವೇಶನು ನಮಸ್ಕರಿಸುವ ಬಿಜ್ಜಳರಾಜನನ್ನು ಮಾಚಯ್ಯನಿಗೆ ತೋರಿಸಿ, ಮಹಾತ್ಮರಾದವರು ನಮಸ್ಕರಿಸಿದವರಲ್ಲಿ ಕೋಪವನ್ನು ತೋರಿಸುವದಿಲ್ಲವಷ್ಟೆ. ಆದ್ದರಿಂದ ದಯವನ್ನಿಡು; ನಿನ್ನ ಕೋಪಕ್ಕೆ ದಕ್ಷಬ್ರಹ್ಮನೂ, ನರಸಿಂಹನೂ ಗುರಿಯಾಗದೆ ಹೋದರು. ಮಿಕ್ಕಾದ ದೇವತೆಗಳೆಲ್ಲರೂ ದೂರದಲ್ಲಿಯೇ ಇರುವರು; ಬಿಜ್ಜಳಾದಿಗಳ ವಿಷಯದಲ್ಲಿ ಹೇಳತಕ್ಕದ್ದೇನು ? ಎನಲು; ಮಾಚಯ್ಯನು ಬಸವೇಶನ ಪ್ರಾರ್ಥನೆಯಿಂದ ಕೋಪಶಾಂತಿಯಂ ಹೊಂದಿದವನಾಗಿ, ಸೀಳಲ್ಪಟ್ಟ ಆನೆಯ ಅಂಗಗಳನ್ನು ಬಿಜ್ಜಳನಾಳುಗಳಿಂದ ಒಂದು ಕಡೆಯಲ್ಲಿ ಕೂಡಿಸಿ, ರಾಸಿಯಾದ ಆ ಅಂಗಗಳಮೇಲೆ ಭಸ್ಮವನ್ನು ಎರಚಿದಮಾತ್ರದಲ್ಲೇ ಆ ಆನೆಯು ಪೂರ್ವದಂತೆ ಆತನ ಆಜ್ಞೆಯಿಂದ ಎದ್ದು ನಿಂತಿತು. ಮೊದಲು ಆತನಿಂದ ಕೊಲ್ಲಲ್ಪಟ್ಟ ಪುರುಷನು ಕೂಡ ಅಂತರಿಕ್ಷಮಾರ್ಗದಿಂದ ಇಳಿದು ಮುಂದೆ ನಿಂತನು. ಮೇಲಕ್ಕೆ ಇಡಲ್ಪಟ್ಟಿದ್ದ ಬಟ್ಟೆಗಳ ಮೂಟೆಯು ಪೂರ್ವದಂತೆ ಬಂದು ಹೆಗಲನ್ನು ಸೇರಿತು. ಅನಂತರದಲ್ಲಿ ಮಾಚೈಯ್ಯನು ಬಿಜ್ಜಳರಾಯನಿಂದ ಪೂಜಿಸಲ್ಪಟ್ಟವನಾಗಿ ನೆರದ ಭಕ್ತರಿಂದ ಪ್ರತಿಕ್ಷಣದಲ್ಲಿಯೂ ಸ್ತುತಿಸಲ್ಪಟ್ಟವನಾಗಿ ತನ್ನ ಮನೆಗೈದಿದನು. ಸತ್ತು ಹೋಗಿದ್ದು ಬದುಕಿದ ಆನೆಯನ್ನು ಪಡೆದ ಬಿಜ್ಜಳರಾಯನು ಆಶ್ಚರ್ಯದಿಂದ ತುಂಬಲ್ಪಟ್ಟ ಮನಸ್ಸುಳ್ಳವನಾಗಿ, ತನ್ನ ರಾಣಿವಾಸವನ್ನೈದಿದ್ದನು. ಬ್ರಹ್ಮ ವಿಷ್ಣುಗಳ ಅಧಿಕಾರವನ್ನು ಕೂಡ ಮನಸ್ಸಿನಲ್ಲಿ ಹುಲ್ಲಿನಂತೆ ಎಣಿಸುತ್ತಿರುವ ಶಿವಭಕ್ತರಿಗೆ ಯಾವ ಉತ್ಕೃಷ್ಟವಸ್ತು ತಾನೇ ದುರ್ಲಭವಾಗಿದ್ದೀತು ?

ಭಯದಿಂದ ಪರವಶರಾದವರಿಗೆ ಅಭಯವನ್ನು ಕೊಡುವದರಿಂದ ಪ್ರಸಿದ್ಧವಾಗಿರುವ ಇರುವತ್ತನೆಂಬ ಭಕ್ತನ ಭುಜಶೌರ್ಯವನ್ನು ಪ್ರಕಟಿಸುವ ಕಥೆಯನ್ನು ಪಠಿಸುವವನಿಗೆ ವೀರರು, ಕುದುರೆ, ಆನೆ, ಇವುಗಳಿಂದುಂಟಾಗುವ ಭೀತಿತಗುಲುವದಿಲ್ಲ. ವಿನಯದಿಂದ ನಮಸ್ಕರಿಸಿದ ರಾಜನನ್ನು ಕರುಣದಿಂದ ನೋಡಿ, ತನ್ನಿಂದ ಕೊಲ್ಲಲ್ಪಟ್ಟಿದ ಮದ್ದಾನೆಯನ್ನು ಬದುಕಿಸಿಕೊಟ್ಟ ಬಾಹೂರ ಬ್ರಹ್ಮಯ್ಯನ ಕಥೆಯನ್ನು ಓದುವವರಿಗೆ ಅಪಮೃತ್ಯುಭಯವುಂಟಾಗುವದಿಲ್ಲ. ಶಿವದೂಷಕರಿಗೆ ಶೂಲಪ್ರಾಯವಾಗಿಯೂ, ಸರ್ವರಿಂದ ಸ್ತುತಿಸಲ್ಪಟ್ಟದ್ದಾಗಿಯೂ ಊಹಿಸುವದಕ್ಕೆ ಅಶ

ಕ್ಯವಾಗಿಯೂ ಇರುವ ಮಾಚಯ್ಯನ ಚರಿತ್ರೆಯನು ಯಾವಾಗಲೂ ಮನಸ್ಸಿನಲ್ಲಿ ಭಾವಿಸುವವನು ಅನಾಯಾಸದಿಂದ ಶಿವಲೋಕವನ್ನೈದುವನು.

ಬಸವೇಶವಿಜಯದಲ್ಲಿ ಹತ್ತನೆಯ ಅಧ್ಯಾಯವು
ಸಂಪೂರ್ಣವು.

## ಹನ್ನೊಂದನೇ ಅಧ್ಯಾಯವು

### ಶಂಕರ ದಾಸಯ್ಯನ ಕಥೆ

ಒಂದಾನೊಂದು ಸಮಯದಲ್ಲಿ ಆ ಮಾಚಯ್ಯನು ಬಸವೇಶನ ಪ್ರತಿಜ್ಞಾ ವಾಕ್ಯಗಳನ್ನು ಗಾಯಕನ ಮುಖದಿಂದ ಕೇಳಿ, ಕಲ್ಲಿನಾಥ! ಇಂಥಾ ದುರ್ಭಾಷೆಗಳನ್ನು ಕೇಳಿದೆನಲ್ಲಾ ಎಂದು ಕಿವಿಗಳನ್ನು ಮುಚ್ಚಿಕೊಂಡು, ಅಲ್ಲಿಂದ ಎದ್ದು ಬಟ್ಟೆಗಳ ಮೂಟೆಯನ್ನು ತೆಗೆದುಕೊಂಡು, ಪ್ರತಿದಿನವೂ ಒಗೆಯುತಿದ್ದ ಮಡುವಿಗೆ ತ್ವರೆಯೊಡನೆ ಹೊರಟನು. ಬಸವೇಶನು ಆ ಮಾತನ್ನು ಕೇಳಿ, ಬಹಳವಾಗಿ ಭಯಪಟ್ಟವನಾಗ್ಗಿ, ಭಕ್ತರನ್ನು ಸಂಗಡ ಕರೆದುಕೊಂಡು ಆತನ ಬಳಿಗೆ ಹೋಗಿ ನಮಸ್ಕರಿಸಿ;—ಹೇಳಿದ್ದೇನಂದರೆ;—ಎಲೈ ಸ್ವಾಮಿಯೇ; ನಾನು ಗರ್ವಿಷ್ಠನೂ, ಕೋಪವನ್ನು ಜೈಸದಿರುವವನೂ, ಸತ್ಯಕ್ಕೆ ದೂರನಾದವನು, ಕೆಟ್ಟ ಹೃದಯವುಳ್ಳವನೂ, ಅಜ್ಞಾನಾಶ್ರಯನೂ, ಶಾಸ್ತ್ರಜ್ಞಾನಕ್ಕೆ ದೂರನಾದವನೂ, ಕಾಮದಿಂದ ಜೈಸಲ್ಪಟ್ಟವನೂ, ಆಗಿದ್ದೇನೆ. ನಾನು ಮಾಡಿದ ಕಾರ್ಯಗಳೆಲ್ಲಾ ವ್ಯರ್ಥವಾದವು. ನನ್ನ ಬದುಕೂ, ನನ್ನ ಜನ್ಮವೂ ನಿಷ್ಫಲವಾದವು. ಸಂಗಮೇಶ್ವರರೂಪನೇ ನಿನ್ನಿಂದ ಅಂಗೀಕರಿಸಲ್ಪಡದ ನಾಲ್ಕು ಲಕ್ಷದ ಅರವತ್ತುನಾಲ್ಕು ಸಾವಿರ ಸಂಖ್ಯೆಯಿಂದ ಕೂಡಿದ ನನ್ನ ಪ್ರತಿಜ್ಞಾಗೀತಗಳೆಲ್ಲಾ ವ್ಯರ್ಥವಾದವು.

ಈ ಪಕಾರವಾಗಿ ಬಸವೇಶನಾಡಿದ ನಾನಾ ವಿಧವಾದ ಮಾತುಗಳನ್ನು ಮಾಚಯ್ಯನು ಕೇಳಿ, ಶ್ರೇಷ್ಠನಾದಗುರುವು ಶಿಷ್ಯನನ್ನು ಧಿಕ್ಕರಿಸುವಂತೆ ದಿಕ್ಕರಿಸಿ, ಹೇಳಿದ್ದೇನಂದರೆ;—

ಎಲೈ ಬಸವೇಶನೇ! ನೀನು ಕೆಟ್ಟನಡತೆಯುಳ್ಳವನು; ದುರಹಂಕಾರಿಯು, ದುಷ್ಟರಿಂದ ಪುರಸ್ಕರಿಸಲ್ಪಟ್ಟವನು. ದುಷ್ಟಹೃದಯುವುಳ್ಳವನು. ಆದಕಾರಣದಿಂದ ಅಂಥಾ ನಿನ್ನಿಂದ ಆತ್ಮಸ್ತುತಿಯು ಮಾಡಲ್ಪಡುವದಕ್ಕೆ ಯೋಗ್ಯವೇ ಸರಿ. ನೀನು ತ್ರಿಭುವನದಲ್ಲಿಯೂ ಸಂಕಲ್ಪಮಾತ್ರದಿಂದ ಪಡೆಯಲ್ಪಟ್ಟ ಇಷ್ಟಾರ್ಥವುಳ್ಳ ಯಾಚಕರಾದ ಭಕ್ತರಿಗೆ ಯಾವಾಗಲೂ ಧನವನ್ನು ಕೊಡುತ್ತಿಯೋ? ಭಕ್ತನಾದವನು ತನ್ನದನ್ನು ತಾನು ಯಾಚಿಸುತ್ತಾನೇ ಹೊರತು ಮತ್ತೊಬ್ಬರದನ್ನು ಯಾಚಿಸುವದಿಲ್ಲ. ಆದಕ್ಕೆ ಒಡೆಯನಾದ ಭಕ್ತನಿಗೆ ನೀನು ಬೊಕ್ಕಸದ ಅಧಿಕಾರಿಯಂತೆ ಕೊಡುತ್ತೀಯೆ. ಆನೆಯನ್ನು ಹಂದಿಯಂತೆಯೂ, ಕುದುರೆಯನ್ನು ನಾಯಿಯಂತೆಯೂ, ದ್ರವ್ಯವನ್ನು ಮಣ್ಣಿನ ಹೆಂಟೆಯಂತೆಯೂ, ಕಾಣುತ್ತಿರುವ ಭಕ್ತರಿಗೆ ನೀನು ಕೊಡುವ ಆನೆ, ಕುದುರೆ, ದ್ರವ್ಯಗಳು ಎಷ್ಟು ಮಾತ್ರವಾದದ್ದು, ಭಕ್ತರಾದವರು ನಿನ್ನನ್ನು ಭಕ್ತನೆಂದು ತಿಳಿದು, ಕರುಣದಿಂದ ನಿನಗೆ ಯಾಚಕರಾಗಿ ನೀನು ಕೊಟ್ಟದ್ದನ್ನು ತೆಗೆದುಕೊಳ್ಳುತ್ತಾರೆಯೇ ಹೊರತು ದರಿದ್ರರಾದ್ದರಿಂದಲ್ಲ. ಶಿವಭಕ್ತರಿಗೆ ದುರ್ಲಭವಾದದ್ದು ಮೂರು ಲೋಕಗಳಲ್ಲಿ ಯಾವದೂ ಇಲ್ಲ. ಅವರಿಗೆ ಅಸಾಧ್ಯವಾದ ಪದಾರ್ಥವನ್ನು ಶಿವನು ಹೊರತು ಮತ್ಯಾವನು ಕೊಟ್ಟಾನು? ಎಲೈ ಬಸವೇಶನೇ! ಅಪಾರವಾದ ಸಾಮರ್ಥ್ಯವುಳ್ಳ ಭಕ್ತರ ವೈಭವವನ್ನು ನೋಡು, ಎಂದು ಹೇಳಿ, ಪಾದದಿಂದ ನೀರನ್ನು ಕೊಳದತಡಿಗೆ ಎರಚಿದನು. ಆ ನೀರಿನ ಹನಿಗಳೆಲ್ಲಾ ಅಲ್ಲಲ್ಲಿ ಸೂರ್ಯನ ತೇಜಸ್ಸನ್ನೂ ಹೊಡೆಯುವಷ್ಟು ಕಾಂತಿಯುಳ್ಳ ರತ್ನರಾಶಿಗಳಾದವು. ಆಗ ಬಸವೇಶನಿಗೆ ವರವನ್ನು ಕೊಡುವದಕ್ಕಾಗಿ ಬಂದ ಶಿವನೋ ಎಂಬಂತಿರುವ ಮಾಚಯ್ಯನಮೇಲೆ ಆಕಾಶದಿಂದ ಹೂವಿನಮಳೆ ಸುರಿಯಿತು. ಅಲ್ಲಿ ಕೂಡಿದ್ದ ತಪಸ್ವಿಗಳ ಸಮೂಹವು ಮಾಚಯ್ಯನ ಮಹಿಮೆಯನ್ನು ನೋಡುವದಕ್ಕೆ ಶಿವನೇ ಅನೇಕರೂಪನ್ನು ಧರಿಸಿಕೊಂಡು ಬಂದನೋ ಎಂಬಂತೆ ಪ್ರಕಾಶಿಸಿತು. ಬಿಜ್ಜಳರಾಯನು ಮಾಚಯ್ಯನ ಮಹಿಮೆಯನ್ನು ನೊಡುವದರಲ್ಲಿ ಕುತೂಹಲವುಳ್ಳವನಾಗಿ, ಪಟ್ಟಣದ ಜನರು, ಪ್ರಧಾನರು, ಪುರೋಹಿತರು ಇವರುಗಳೊಡನೆ ಕೂಡಿದವನಾಗಿ ಶೀಘ್ರವಾಗಿ ಅಲ್ಲಿಗೆ ಹೋದನು. ಮಹಾತ್ಮನಾದ ಆ ಮಾಚಯ್ಯನಿಂದ ಬಹು ವಿಧವಾಗಿ ಹೀಯಾಳಿಸಲ್ಪಟ್ಟ ಬಸವೇಶನು, ಭಯಪಟ್ಟ ಮನಸ್ಸುಳ್ಳವನಾಗಿ ತಿರಿಗಿಹೇಳಿದನು. ಏನಂದರೆ, ನಾನು ಶಿವಭಕ್ತ ಭೃತ್ಯರಭೃತ್ಯನು, ವಿಶೇಷವಾಗಿ ನಿನ್ನ ದಾಸನು. ಬುದ್ಧಿಗೆ ನಿಧಿಯಾಗಿಯೂ, ಸರ್ವವನ್ನು ತಿಳಿದವ

ನಾಗಿಯೂ, ಇರುವ ಸ್ವಾಮಿಯೇ ನನ್ನನ್ನು ಕೃಪೆಯಿಂದ ನೋಡು. ನೀನು ಭಕ್ತರಿಗೆ ಸುಖವನ್ನು ಮಾಡುವವನು. ನಾನು ದಾಸನು. ನೀನು ನಿರ್ಮಲನು. ನಾನು ಕೊಳೆಯುಳ್ಳವನು. ನೀನು ವಿಶೇಸವಾದ ತಿಳಿಯುಳ್ಳವನು. ನಾನು ಅಜ್ಞಾನಿಯು. ನೀನು ದಾತೃವು. ನಾನು ದರಿದ್ರನು. ನೀನು ಮೈತ್ರಿ, ಮುದಿತ, ಕರುಣ, ಉಪೇಕ್ಷೆ. ಎಂಬ ಚಿತ್ತಪರಿಕರ್ಮಗಳಿಂದ ಅಲಂಕರಿಸಲ್ಪಟ್ಟ ಹೃದಯವುಳ್ಳವನು. ನಾನು ಆ ಮೈತ್ರಿಮೊದಲಾದವುಗಳೊಳಗೆ ಒಂದರಿಂದಾದರೂ ಅಲಂಕರಿಸಲ್ಪಡದ ಮನಸ್ಸುಳ್ಳವನು. ನೀನು ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶ ಎಂಬ ಪಂಚಕ್ಲೇಶಗಳಿಂದ ಮುಟ್ಟಲ್ಪಡದವನು. ನಾನು ಅವೆಲ್ಲವುಗಳಿಂದಲೂ ಮುಟ್ಟಲ್ಪಟ್ಟದುಷ್ಟನು. ಮತ್ತು ದುರ್ಗುಣಿಗಳೊಳಗೆ ಮೊದಲನೆಯವನು. ನೀನು ಮೂಢಜೀವರುಗಳಿಗೆ ಪತಿಯು, ನಾನು ಅಜ್ಞಾನಾಶ್ರಯನಾದ ಪಶುವು. ನೀನು ಭಾಗ್ಯವಂತನು. ನಾನು ನಿರ್ಭಾಗ್ಯನು. ನೀನು ನಿಷ್ಕಾಮಿಯು. ನಾನು ಕಾಮಾಂಧನು. ದುರ್ಗುಣಗಳಿಂದ ತುಂಬಲ್ಪಟ್ಟ ನನ್ನಲ್ಲಿ ಸದ್ಗುಣವೆಲ್ಲಿಸಿಕ್ಕೀತು? ಗಾಜುತುಂಬಿದ ಪೆಟ್ಟಿಗೆಯಲ್ಲಿ ಕೌಸ್ತುಭರತ್ನವು ದೊರೆಯುವದುಂಟೇ ? ಸತ್ಪುರುಷರಾದವರು ಆಶ್ರಿತರಲ್ಲಿರುವ ಕೆಟ್ಟತನವನ್ನು ತೆಗೆದು, ಅವನನ್ನು ಸೇರಿಸುತ್ತಾರೆ. ಪರಮೇಶ್ವರನು ಕಳಂಕವನ್ನು ತೆಗೆದು, ಚಂದ್ರನನ್ನು ಧರಿಸಿದ್ದಾನೆಯೇ ಹೊರತು ಕಳಂಕಿಯೆಂದು ಬಿಡುವದಿಲ್ಲ. ಆದರಂತೆ ಎಲೈ ಯೋಗಿಶ್ರೇಷ್ಠನಾದ ಮಾಚಯ್ಯನೇ ನನ್ನನ್ನು ಕಾಪಾಡು, ಪುರಾತನರ ವಚನಗಳ ತಾತ್ಪರ್ಯವನ್ನು ತಿಳಿಯುವದರಲ್ಲಿ ನನ್ನ ಕುತೂಹಲವು ಬಹಳವಾಗಿ ಮುಂಕಾಯಿತು.

ಈ ರೀತಿಯಾಗಿ ಹೇಳಿ ಸಾಷ್ಟಾಂಗ ನಮಸ್ಕಾರವಂಮಾಡಿದ ಬಸವೇಶನನ್ನು ಎತ್ತಿ, ತನ್ನ ದೇಹಾಲಿಂಗನೆಯಿಂದ ಕೃತಾರ್ಥನನ್ನು ಮಾಡಿ, ಹೇಳಿದ್ದೇನಂದರೆ:-ಎಲೈ ಬಸವೇಶನೇ ! ಪ್ರಾಣಿಗಳಲ್ಲಿ ದಯೆಯೂ, ಅಂತರಿಂದ್ರಿಯನಿಗ್ರಹವೂ ಬಹಿರಿಂದ್ರಿಯನಿಗ್ರಹವೂ, ಸತ್ಯವೂ, ಗುರುಜನದಲ್ಲಿ ನಮ್ರತೆಯೂ, ನಿರಹಂಕಾರವೂ, ಸೇವೆಯಲ್ಲಿ ನಿಶ್ಚಲತೆಯೂ, ಪೂಜ್ಯರಲ್ಲಿ ಭಯವೂ, ಎಂಬ ಗುಣಗಳೇ ಭಕ್ತಿಯ ಲಕ್ಷಣವು ಎಲೈ ವಿನಯಸಂಪನ್ನನಾದ ಭಕ್ತಶಿರೋಮಣಿಯಾದ ಬಸವೇಶನೇ ? ಹೆದರಬೇಡ; ಕೆಲವರು ಕೆಲವರನ್ನು ಶಿಕ್ಷಿಸುತ್ತಾರೆ; ಆದರೆ ಹಾಗೆ ಶಿಕ್ಷಿಸುವದು ಅವರಲ್ಲಿ ಸದ್ಗುಣಗಳನ್ನುಂಟುಮಾಡುವುದಕ್ಕೇಹೊರತು ಅವರನ್ನು ಕೊಲ್ಲುವುದಕ್ಕಲ್ಲ. ತಂದೆಯು ಕೋಪಗೊಂಡವನಾಗಿ ಮಗನನ್ನು ಕೊರಡೆ

ಯಿಂದ ಹೊಡೆಯುತ್ತಾನೆ. ಹಾಗೆ ಹೊಡೆಯುವದು ಅವನನ್ನು ವ್ಯಥೆಪಡಿಸುವದಕ್ಕೋ ಅಥವಾ ಅವನಿಗೆ ಒಳ್ಳೇ ದಾರಿಯನ್ನು ಕಲಿಸುವದಕ್ಕೊ? ಅಗಸನು ಬಟ್ಟೆಯನ್ನು ಕಲ್ಲಿನಮೇಲೆ ಬಹಳ ವೇಗದಿಂದ ಬಡಿಯುತ್ತಾನೆ. ಅದೇನು ಬಟ್ಟೆಯನ್ನು ಹರಿಯುವದಕ್ಕೋ? ಅದರಲ್ಲಿರುವ ಕೊಳೆಯನ್ನು ತೆಗೆಯುವದಕ್ಕೋ, ಅಕ್ಕಸಾಲೆಯು ಚಿನ್ನವನ್ನು ಬೆಂಕಿಯಲ್ಲಿ ಅನೇಕಸಾರಿ ಕಾಯಿಸುತ್ತಾನೆ. ಅದು ಬಣ್ಣವನ್ನು ಹೆಚ್ಚಿಸುವದಕ್ಕೋ? ಅದರಲ್ಲಿ ತೂಕವನ್ನು ಕಡಿಮೆಮಾಡುವುದಕ್ಕೋ? ಕಬ್ಬಿನರಸವು ಕೊಪ್ಪರಿಕೆಯಲ್ಲಿ ಮರಳುವಂತೆ ಕುದಿಸಲ್ಪಡುತ್ತದೆ. ಅದೇನು ಸಿಹಿಯನ್ನು ಹೆಚ್ಚಿಸುವದಕ್ಕೋ? ಅಥವಾ ಆ ರಸವನ್ನು ಇಂಗಿಸುವದಕ್ಕೋ? ರತ್ನವು ಸಾಣೆಗೆಕೊಟ್ಟು ಉಜ್ಜಲ್ಪಡುತ್ತದೆ. ಹಾಗೆಮಾಡುವುದು ಅದರ ದೋಷವನ್ನು ತೆಗೆಯುವದಕ್ಕೋ? ಅದರ ಗೌರವವನ್ನು ಪರಿಹರಿಸುವದಕ್ಕೋ? ಹಾಲನ್ನು ಬೆಂಕಿಯಮೇಲಿಟ್ಟು, ಚೆನ್ನಾಗಿ ಸೋಷಿಸುವದೆಂಬುವುದು ಸಕಲರಿಗೂ ಬೇಕಾದ ಮಾಧುರ್ಯವನ್ನುಂಟುಮಾಡುವುದಕ್ಕೋಸ್ಕರವೇ ಹೊರತು ಬೇರೆಯಲ್ಲವಷ್ಟೆ.

ಈ ರೀತಿಯಾಗಿ ಗುರುಗಳಾದವರು, ವಾತ್ಸಲ್ಯವಿಟ್ಟು ಶಿಕ್ಷಿಸುವದರಿಂದಲೂ, ಬೆದರಿಸುವದರಿಂದಲೂ, ಹೊಡೆಯುವದರಿಂದಲೂ, ಪುತ್ರಾದಿಗಳಿಗೆ ಏನೋ ಒಂದು ಶ್ರೇಯಸ್ಸನ್ನು ಮಾಡುತ್ತಾರೆ. ಅವರು ಮಾಡುವ ಶಿಕ್ಷೆ ಮೊದಲಾದವುಗಳು ಸಂಪೂರ್ಣವಾದ ಆಶೀರ್ವಾದಗಳಲ್ಲವೇ? ಶಿಕ್ಷೆಯೆಂಬುವದು ಶಿಕ್ಷೆಗೆಯೋಗ್ಯನಾದವನಿಗೆ ಪ್ರಯೋಜನವುಂಟಾಗುವದಕ್ಕೇ ಹೊರತು ಮತ್ತೊಬ್ಬನ ಪ್ರಯೋಜನಕ್ಕೋಸ್ಕರವಲ್ಲ. ಚಿಲ್ಲದ ಬೀಜದ ಪುಡಿಯು ಕದಡಿದ 'ನೀರನ್ನು ನಿರ್ಮಲಮಾಡುವದಕ್ಕೋಸ್ಕರವಲ್ಲದೆ, ಕೆಸರನ್ನು ನಿರ್ಮಲಮಾಡುವದಕ್ಕೋಸ್ಕರವಲ್ಲ. ಆದಕಾರಣದಿಂದ ಎಲೈ ಬಸವೇಶನೇ! ಶಿಕ್ಷಿಸುವದಕ್ಕೆ ಯೋಗ್ಯನಾದ ನಿನ್ನನ್ನು ಶಿಕ್ಷಿಸುತ್ತೇನೆ. ಯಾವ ಸತ್ಪುರುಷನು ಶಿಕ್ಷಾರ್ಹನಾದವನನ್ನು ಶಿಕ್ಷಿಸುವದಿಲ್ಲವೋ ಆತನು ಅವನಿಗೆ ಶತ್ರುವೆಂದು ಹೇಳಬೇಕು.

ಕೇಳೈ ಬಸವೇಶನೇ ಶಂಕರದಾಸನೆಂಬ ಒಬ್ಬ ಮಹಾತ್ಮನಿರುವನು. ಆತನು ಬಹಳ ತಪಸ್ವಿಯು. ಕಾಲ, ಕರ್ಮ, ಮುಪ್ಪು, ಮರಣ, ಜನ್ಮ, ಇವುಗಳಿಗೆ ದೂರನು; ಜ್ಞಾನಾನಂದಗಳಿಂದ ಪೂರ್ಣನಾದವನು: ಕಾಮಕ್ರೋಧಾದಿಗಳಿಲ್ಲದವನು. ವೀರಭದ್ರನ ಪ್ರೀತಿಗೆ ಪಾತ್ರನು. ಪ್ರಕಾಶಮಾನವಾದ ಹಣೆಗಣ್ಣುಳ್ಳ

ವನೂ, ಯಶಸ್ಸಿನಿಂದ ನಿರ್ಮಲನಾದವನೂ, ಜನನಮರಣಾತ್ಮಕವಾದ ಸಂಸಾರವನ್ನು ನಾಶಮಾಡುವವನೂ, ಅಪರಿಮಿತವಾದ ಪ್ರಭಾವದಿಂದ ವ್ಯಾಪ್ತವಾದ ಮಹಿಮೆಯುಳ್ಳವನು, ವಿಷ್ಣು ಮುಂತಾದ ಕ್ಷುದ್ರ ದೈವಗಳಿಗೆ ಭಯಂಕರನೂ, ಆತನು ಸೂಜಿಯ ಕಾಯಕದಿಂದ ಪಡೆಯಲ್ಪಟ್ಟ ಐದುಮಾನ ಭತ್ತದಿಂದ ಪ್ರತಿದಿನವೂ ಅನೇಕ ಭಕ್ತರನ್ನು ತೃಪ್ತಿಪಡಿಸುತ್ತಾನೆ. ಒಂದಾನೊಂದು ಕಾಲದಲ್ಲಿ ಜೇಡರ ದಾಸಯ್ಯನೆಂಬ ಭಕ್ತನು ಜಡೆಯಶಂಕರನೆಂಬ ಉಪನಾಮವುಳ್ಳ ಆತನನ್ನುನೋಡುವುದಕ್ಕಾಗಿ ಆತನ ಮನೆಗೈದಿದನು. ಈ ಜೇಡರ ದಾಸಯ್ಯನು ಬಹುಕಾಲದ ತನಕ ಅಮೂಲ್ಯವಾದ ಒಂದು ವಸ್ತ್ರವನ್ನು ನೆಯ್ದು ಶಿವನಿಗೆ ಸಮರ್ಪಿಸಿ ಆ ಶಿವನಿಂದ ನಿತ್ಯದಲ್ಲಿಯೂ ಫಲವನ್ನು ಕೊಡುತ್ತಿರುವ ಒಂದು ಅಕ್ಷಯನಿಧಿಯನ್ನು ಪಡೆದಿದ್ದನು. ಆ ಶಂಕರದಾಸಯ್ಯನು ತನ್ನ ಮನೆಗೆಬಂದು ಜೇಡರದಾಸಯ್ಯನನ್ನು ಎದುರುಗೊಂಡು, ತನಗೆ ನಮುಸ್ಕರಿಸಿದ ಆತನನ್ನು ಭಸ್ಮಪ್ರಧಾನ ಮೊದಲಾದ ಉಪಚಾರಗಳಿಂದ ವಿಧಿಪ್ರಕಾರವಾಗಿ, ಪೂಜಿಸಿದನು. ಆಜೇಡರ ದಾಸಯ್ಯನು ಸ್ವಲ್ಪಹೊತ್ತು ಆತನೊಡನೆ ಸಂಭಾಷಣೆಮಾಡಿಕೊಂಡಿದ್ದು, ಅನಂತರ ಆವನಿಂದ ಬಿಡಲ್ಪಟ್ಟವನಾಗಿ ಹೊರಟು ಮನೆಗೆಹೋಗಿ, ಅತ್ಯಾಶ್ಚರ್ಯದಿಂದ ತನ್ನ ಹೆಂಡತಿಯ ಕೂಡ ಹೇಳಿದ್ದೇನಂದರೆ;-ಶಂಕರದಾಸಯ್ಯನು ಶಿವಭಕ್ತರ ಪೂಜೆಯಲ್ಲಿ ಆಸಕ್ತನಾದ ಮನಸುಳ್ಳವನಾದಾಗ್ಯೂ ಶಿವಾನುಭಾವಿಯಾಗಿದ್ದಾಗ್ಯೂ, ಆತನಿಗೆ ಭಯಂಕರವಾದ ಬಡತನವಿರುವದಾಶ್ಚರ್ಯ. ಆದ್ದರಿಂದ ಆತನಿಗೆ ಧಾನ್ಯವನ್ನು ಶೀಘ್ರದಲ್ಲಿ ಕಳುಹಿಸು.

ಈ ಪ್ರಕಾರವಾಗಿ ಶಿವಭಕ್ತರಿಗೆ ಮುಖ್ಯ ಬಂಧುವಾದ ಜೇಡರ ದಾಸಯ್ಯನು ಹೇಳು; ಆತನ ಪತ್ನಿಯಾದ ದುಗ್ಗಾಂಬೆಯು ಆ ಕ್ಷಣವೆ ಧಾನ್ಯವನ್ನು ಕಳುಹಿಸಿದಳು. ಶಿವನಿಗೆ ಎರಡನೇದೇಹವಾಗಿರುವ ಶಂಕರದಾಸನು ಆ ಧಾನ್ಯವನ್ನು ನೋಡಿ,—ಭಲಾ ! ನಾನು ಕೇಳದಿದ್ದಾಗ್ಯೂ ಜೇಡರದಾಸಯ್ಯನು ತಾನಾಗಿ ನನಗೆ ಧಾನ್ಯವನ್ನು ಕಳುಹಿಸಿದನು. ಶಿವನಿಗೆ ವಸ್ತ್ರವನ್ನುಕೊಟ್ಟು, ಆತನಿಂದ ಅಕ್ಷಯನಿಧಿಯನ್ನು ಪಡೆದಿದ್ದಾನೆ. ನನಗೆ ಧಾನ್ಯವನ್ನು ಕಳುಹಿಸಿ, ನನ್ನಿಂದ ಯಾವ ಧನವನ್ನು ಪಡೆದಾನು ? ಎಂದು ಭಕ್ತರೊಡನೆ ಹೇಳಿ, ಆ ಧಾನ್ಯವನ್ನು ತನ್ನ ಹಿಡಿಯಿಂದ ಹಿಡಿದನು. ಅದು ಹ್ಯಾಗಾಯಿತೆಂದರೆ ಅಗಸ್ತ್ಯನು ರತ್ನ ಸಮೂಹಗಳೊಡನೆ ಸಮಸ್ತವಾದ ಸಮುದ್ರ ಜಲವನ್ನು ಹಿಡಿದಹಾಗಾಯಿತು. ದುಗ್ಗಾಂ

ಬೆಯು ತನ್ನ ಮನೆಯ ನಿಧಿಯು ಹಾಳಾದದ್ದನ್ನು ನೋಡಿ, ದುಃಖಗೊಂಡು, ಭಕ್ತನಾದ ಶಂಕರದಾಸಯ್ಯನೆಗೆ ಕಾಣಿಕೆಯನ್ನು ಕೊಟ್ಟದ್ದರಿಂದ ತನ್ನ ಐಶ್ವರ್ಯವು ನಷ್ಟವಾಯಿತಲ್ಲಾ ಎಂದು ಪರವಶಳಾಗಿ, ತನ್ನ ಪತಿಯೊಡನೆ;-ಎಲೈ ಸ್ವಾಮಿಯೇ! ಸತ್ಪುಷರಿಗೆ ಐಶ್ವರ್ಯವಿದೆ; ಇಲ್ಲ, ಎಂಬ ವಿಚಾರದಿಂದೇನಾಗುವದು ? ಮದಗಜದ ಹಲ್ಲು ಗಟ್ಟಿಯಾಗಿದೆಯೋ ಇಲ್ಲವೋ ಎಂದು ಪರೀಕ್ಷಿಸುವದರಿಂದ ಪ್ರಯೋಜನ ವೇನು ? ಸಮುದ್ರದ ಆಳವನ್ನೂ, ಮಹಾತ್ಮರ ಮಹಿಮೆಯನ್ನೂ, ಯಾವನು ತಿಳಿಯಲಪೇಕ್ಷಿಸುತ್ತಾನೋ ಅವನು ತಾನೇ ಕೆಡುತ್ತಾನೆ. ಆ ಭಕ್ತನು ಪ್ರತಿದಿನವೂ ಐದುಮಾನ ಧಾನ್ಯವನ್ನು ಸಂಪಾದಿಸುತ್ತಾನೆ. ಅದರಿಂದನೇಕರು ತೃಪ್ತಿಪಡುತ್ತಾರೆ. ವರವನ್ನು ಕೊಡುವದರಲ್ಲಿ ಆಶಕ್ತನಾಗಿ ತನ್ನಮುಂದೆ ಬಂದು ನಿಂತ ಪರಮೇಶ್ವರನನ್ನು ನಿರಾಶನಾದ ಶಂಕರದಾಸನು ವಿನೋದಕರವಾದ ಮಾತುಗಳಿಂದ ಹಿಂತಿರಿಗಿಸಿದನು. ಕೆಲವು ದಿವಸಗಳು ಹೀಗೆ ಕಳೆಯುತ್ತಿರಲು; ಕರುಣಾಸಮುದ್ರನಾದ ಪರಶಿವನು ವರವನ್ನು ಕೊಡಬೇಕೆಂಬ ಉತ್ಸವದಿಂದ ಆ ಶಂಕರದಾಸನಮುಂದೆ ನಿಂತನು. ಆಗ ಆ ಭಕ್ತನು; ಎಲೈ ದೇವತಾಸಾರ್ವಭೌಮನಾದ ಶಿವನೇ ? ನಾನು ನಿನ್ನನ್ನು ಯಾವದೊಂದು ಪದಾರ್ಥವನ್ನೂ ಬೇಡದಿದ್ದರೆ ನೀನು ನಾಚುತ್ತೀಯೆ. ಎಂದು ಹೇಳಿ, ಫಾಲನೇತ್ರನಾಗಿಯೂ, ಭಸ್ಮಲಿಪ್ತವಾದ ದೇಹವುಳ್ಳವನಾಗಿಯೂ, ಜಟಾಜೂಟವುಳ್ಳವನಾಗಿಯೂ, ಯಮನಿಗೆ ಯಮನಾಗಿಯೂ, ವಿದ್ವಾಂಸನಾಗಿಯೂ ಮಹಾತ್ಮರಿಂದ ತಿಳಿಯಲ್ಪಟ್ಟಿರುವ ಶಿವನನ್ನು ಮನಸ್ಸಿನಲ್ಲಿ ಪರದೈವಗಳೆಂಬ ಪತಂಗದ ಹುಳಗಳನ್ನು ಸುಡಬೇಕೆಂಬ ಅಪೇಕ್ಷೆಯಿಂದ ರಾತ್ರಿಯಲ್ಲಿ ಸೂಜಿಯ ಕಣ್ಣಿಗೆ ದಾರವನ್ನು ಪೋಣಿಸುವ ಕೆಲಸಕ್ಕೆ ಯೋಗ್ಯನಾದ ನೇತ್ರವನ್ನು ಯಾಚಿಸಿದನು. ದೀನರನ್ನು ಉದ್ಧರಿಸುವದರಲ್ಲಿ ಆಸಕ್ತನಾಗಿಯೂ, ಕರುಣಾಸ್ವರೂಪನಾಗಿಯು, ಇರುವ ಸ್ವಾಮಿಯೇ ? ನಿನಗೆ ಮನಸ್ಸಿದ್ದರೆ ಇಂಥಾ ಕಣ್ಣನ್ನು ಕೊಡು. ಇದರಿಂದ ದುರ್ದೇವತೆಗಳ ಗುಡಿಗಳು ಕೂಡ ಶೀಗ್ರದಲ್ಲಿ ಕಾಣಿಸುತ್ತವೆ. ಎನಲು; ಆತನಿಂದ ಪ್ರಾರ್ಥಿಸಲ್ಪಟ್ಟ ಈಶ್ವರನು;-ರಾತ್ರಿಕಾಲದಲ್ಲಿ ಸೂಕ್ಷ್ಮವಸ್ತುವನ್ನು ಕಾಣಿಸುವಂಥಾದ್ದು ಅಗ್ನಿಯೇ ಎಂದು ನಿಶ್ಚೈಸಿ, ಆ ಅಗ್ನಿನೇತ್ರವನ್ನು ಆತನಿಗೆಕೊಟ್ಟನು. ಶಿವನದಿಸೆಯಿಂದ ಪಡೆಯಲ್ಪಟ್ಟ ನೇತ್ರವು ಆ ಶಂಕರದಾಸಯ್ಯನ ಹಣೆಯಲ್ಲಿ ಪ್ರಜ್ವಲಿಸಿತು. ಉರಿಗಳಿಂದ ವ್ಯಾಪಿಸಲ್ಪಟ್ಟ ಆತನ ಹಣೆಗಣ್ಣು ಛಟ ಛಟ ಎಂದು ಉರಿಯುತ್ತಿರಲು; ಗುಡಿಗಳಿಲ್ಲದ

ವನೂ, ಯಶಸ್ಸಿನಿಂದ ನಿರ್ಮಲನಾದವನೂ, ಜನನಮರಣಾತ್ಮಕವಾದ ಸಂಸಾರವನ್ನು ನಾಶಮಾಡುವವನೂ, ಅಪರಿಮಿತವಾದ ಪ್ರಭಾವದಿಂದ ವ್ಯಾಪ್ತವಾದ ಮಹಿಮೆಯುಳ್ಳವನು, ವಿಷ್ಣು ಮುಂತಾದ ಕ್ಷುದ್ರ ದೈವಗಳಿಗೆ ಭಯಂಕರನೂ, ಆತನು ಸೂಜಿಯ ಕಾಯಕದಿಂದ ಪಡೆಯಲ್ಪಟ್ಟ ಐದುಮಾನ ಭತ್ತದಿಂದ ಪ್ರತಿದಿನವೂ ಅನೇಕ ಭಕ್ತರನ್ನು ತೃಪ್ತಿಪಡಿಸುತ್ತಾನೆ. ಒಂದಾನೊಂದು ಕಾಲದಲ್ಲಿ ಜೇಡರ ದಾಸಯ್ಯನೆಂಬ ಭಕ್ತನು ಜಡೆಯಶಂಕರನೆಂಬ ಉಪನಾಮವುಳ್ಳ ಆತನನ್ನುನೋಡುವುದಕ್ಕಾಗಿ ಆತನ ಮನೆಗೈದಿದನು. ಈ ಜೇಡರ ದಾಸಯ್ಯನು ಬಹು ಕಾಲದ ತನಕ ಅಮೂಲ್ಯವಾದ ಒಂದು ವಸ್ತ್ರವನ್ನು ನೆಯ್ದು ಶಿವನಿಗೆ ಸಮರ್ಪಿಸಿ ಆ ಶಿವನಿಂದ ನಿತ್ಯದಲ್ಲಿಯೂ ಫಲವನ್ನು ಕೊಡುತ್ತಿರುವ ಒಂದು ಅಕ್ಷಯನಿಧಿಯನ್ನು ಪಡೆದಿದ್ದನು. ಆ ಶಂಕರದಾಸಯ್ಯನು ತನ್ನ ಮನೆಗೆಬಂದು ಜೇಡರದಾಸಯ್ಯನನ್ನು ಎದುರುಗೊಂಡು, ತನಗೆ ನಮಸ್ಕರಿಸಿದ ಆತನನ್ನು ಭಸ್ಮಪ್ರಧಾನ ಮೊದಲಾದ ಉಪಚಾರಗಳಿಂದ ವಿಧಿಪ್ರಕಾರವಾಗಿ, ಪೂಜಿಸಿದನು. ಆಜೇಡರ ದಾಸಯ್ಯನು ಸ್ವಲ್ಪಹೊತ್ತು ಆತನೊಡನೆ ಸಂಭಾಷಣೆಮಾಡಿಕೊಂಡಿದ್ದು, ಅನಂತರ ಅವನಿಂದ ಬಿಡಲ್ಪಟ್ಟವನಾಗಿ ಹೊರಟು ಮನೆಗೆಹೋಗಿ, ಅತ್ಯಾಶ್ಚರ್ಯದಿಂದ ತನ್ನ ಹೆಂಡತಿಯ ಕೂಡ ಹೇಳಿದ್ದೇನಂದರೆ;-ಶಂಕರದಾಸಯ್ಯನು ಶಿವಭಕ್ತರ ಪೂಜೆಯಲ್ಲಿ ಆಸಕ್ತನಾದ ಮನಸುಳ್ಳವನಾದಾಗ್ಯೂ ಶಿವಾನುಭಾವಿಯಾಗಿದ್ದಾಗ್ಯೂ, ಆತನಿಗೆ ಭಯಂಕರವಾದ ಬಡತನವಿರುವದಾಶ್ಚರ್ಯ. ಆದ್ದರಿಂದ ಆತನಿಗೆ ಧಾನ್ಯವನ್ನು ಶೀಘ್ರದಲ್ಲಿ ಕಳುಹಿಸು.

ಈ ಪ್ರಕಾರವಾಗಿ ಶಿವಭಕ್ತರಿಗೆ ಮುಖ್ಯ ಬಂಧುವಾದ ಜೇಡರ ದಾಸಯ್ಯನು ಹೇಳು; ಆತನ ಪತ್ನಿಯಾದ ದುರ್ಗಾಂಬೆಯು ಆ ಕ್ಷಣವೆ ಧಾನ್ಯವನ್ನು ಕಳುಹಿಸಿದಳು. ಶಿವನಿಗೆ ಎರಡನೇದೇಹವಾಗಿರುವ ಶಂಕರದಾಸನು ಆ ಧಾನ್ಯವನ್ನು ನೋಡಿ,—ಭಲಾ ! ನಾನು ಕೇಳದಿದ್ದಾಗ್ಯೂ ಜೇಡರದಾಸಯ್ಯನು ತಾನಾಗಿ ನನಗೆ ಧಾನ್ಯವನ್ನು ಕಳುಹಿಸಿದನು. ಶಿವನಿಗೆ ವಸ್ತ್ರವನ್ನುಕೊಟ್ಟು, ಆತನಿಂದ ಅಕ್ಷಯನಿಧಿಯನ್ನು ಪಡೆದಿದ್ದಾನೆ. ನನಗೆ ಧಾನ್ಯವನ್ನು ಕಳುಹಿಸಿ, ನನ್ನಿಂದ ಯಾವ ಧನವನ್ನು ಪಡೆದಾನು ? ಎಂದು ಭಕ್ತರೊಡನೆ ಹೇಳಿ, ಆ ಧಾನ್ಯವನ್ನು ತನ್ನ ಹಿಡಿಯಿಂದ ಹಿಡಿದನು. ಅದು ಹ್ಯಾಗಾಯಿತೆಂದರೆ ಅಗಸ್ತ್ಯನು ರತ್ನ ಸಮೂಹಗಳೊಡನೆ ಸಮಸ್ತವಾದ ಸಮುದ್ರ ಜಲವನ್ನು ಹಿಡಿದಹಾಗಾಯಿತು. ದುರ್ಗಾಂ

ಜೆಯು ತನ್ನ ಮನೆಯು ನಿಧಿಯು ಹಾಳಾದದ್ದನ್ನು ನೋಡಿ, ದುಃಖಗೊಂಡು, ಭಕ್ತನಾದ ಶಂಕರದಾಸಯ್ಯನೆಗೆ ಕಾಣಿಕೆಯನ್ನು ಕೊಟ್ಟದ್ದರಿಂದ ತನ್ನ ಐಶ್ವರ್ಯವು ನಷ್ಟವಾಯಿತಲ್ಲಾ ಎಂದು ಪರವಶಳಾಗಿ, ತನ್ನ ಪತಿಯೊಡನೆ;–ಎಲೈ ಸ್ವಾಮಿಯೇ! ಸತ್ಪುಷರಿಗೆ ಐಶ್ವರ್ಯವಿದೆ; ಇಲ್ಲ, ಎಂಬ ವಿಚಾರದಿಂದೇನಾಗುವದು ? ಮದಗಜದ ಹಲ್ಲು ಗಟ್ಟಿಯಾಗಿದೆಯೋ ಇಲ್ಲವೋ ಎಂದು ಪರೀಕ್ಷಿಸುವದರಿಂದ ಪ್ರಯೋಜನ ವೇನು ? ಸಮುದ್ರದ ಆಳವನ್ನೂ, ಮಹಾತ್ಮರ ಮಹಿಮೆಯನ್ನೂ, ಯಾವನು ತಿಳಿಯಲಪೇಕ್ಷಿಸುತ್ತಾನೋ ಅವನು ತಾನೇ ಕೆಡುತ್ತಾನೆ. ಆ ಭಕ್ತನು ಪ್ರತಿದಿನವೂ ಐದುಮಾನ ಧಾನ್ಯವನ್ನು ಸಂಪಾದಿಸುತ್ತಾನೆ. ಆದರಿಂದನೇಕರು ತೃಪ್ತಿಪಡುತ್ತಾರೆ. ವರವನ್ನು ಕೊಡುವದರಲ್ಲಿ ಆಶಕ್ತನಾಗಿ ತನ್ನಮುಂದೆ ಬಂದು ನಿಂತ ಪರಮೇಶ್ವರನನ್ನು ನಿರಾಶನಾದ ಶಂಕರದಾಸನು ವಿನೋದಕರವಾದ ಮಾತುಗಳಿಂದ ಹಿಂತಿರಿಗಿಸಿದನು. ಕೆಲವು ದಿವಸಗಳು ಹೀಗೆ ಕಳೆಯುತ್ತಿರಲು; ಕರುಣಾಸಮುದ್ರನಾದ ಪರಶಿವನು ವರವನ್ನು ಕೊಡಬೇಕೆಂಬ ಉತ್ಸವದಿಂದ ಆ ಶಂಕರದಾಸನಮುಂದೆ ನಿಂತನು. ಆಗ ಆ ಭಕ್ತನು; ಎಲೈ ದೇವತಾಸಾರ್ವಭೌಮನಾದ ಶಿವನೇ? ನಾನು ನಿನ್ನನ್ನು ಯಾವದೊಂದು ಪದಾರ್ಥವನ್ನೂ ಬೇಡದಿದ್ದರೆ ನೀನು ನಾಚುತ್ತೀಯೆ. ಎಂದು ಹೇಳಿ, ಫಾಲನೇತ್ರನಾಗಿಯೂ, ಭಸ್ಮಲಿಪ್ತವಾದ ದೇಹವುಳ್ಳವನಾಗಿಯೂ, ಜಟಾಜೂಟವುಳ್ಳವನಾಗಿಯೂ, ಯಮನಿಗೆ ಯಮನಾಗಿಯೂ, ವಿದ್ವಾಂಸನಾಗಿಯೂ ಮಹಾತ್ಮರಿಂದ ತಿಳಿಯಲ್ಪಟ್ಟಿರುವ ಶಿವನನ್ನು ಮನಸ್ಸಿನಲ್ಲಿ ಪರದೈವಗಳೆಂಬ ಪತಂಗದ ಹುಳಗಳನ್ನು ಸುಡಬೇಕೆಂಬ ಅಪೇಕ್ಷೆಯಿಂದ ರಾತ್ರಿಯಲ್ಲಿ ಸೂಜಿಯ ಕಣ್ಣಿಗೆ ದಾರವನ್ನು ಪೋಣಿಸುವ ಕೆಲಸಕ್ಕೆ ಯೋಗ್ಯನಾದ ನೇತ್ರವನ್ನು ಯಾಚಿಸಿದನು. ದೀನರನ್ನು ಉದ್ಧರಿಸುವದರಲ್ಲಿ ಆಸಕ್ತನಾಗಿಯೂ, ಕರುಣಾಸ್ವರೂಪಪನಾಗಿಯು, ಇರವ ಸ್ವಾಮಿಯೇ ? ನಿನಗೆ ಮನಸ್ಸಿದ್ದರೆ ಇಂಥಾ ಕಣ್ಣನ್ನುಕೊಡು. ಇದರಿಂದ ದುರ್ದೇವತೆಗಳ ಗುಡಿಗಳು ಕೂಡ ಶೀಗ್ರದಲ್ಲಿ ಕಾಣಿಸುತ್ತವೆ. ಎನಲು; ಆತನಿಂದ ಪ್ರಾರ್ಥಿಸಲ್ಪಟ್ಟ ಈಶ್ವರನು;–ರಾತ್ರಿಕಾಲದಲ್ಲಿ ಸೂಕ್ಷ್ಮವಸ್ತುವನ್ನು ಕಾಣಿಸುವಂಥಾದ್ದು ಅಗ್ನಿಯೇ ಎಂದು ನಿಶ್ಚೈಸಿ, ಆ ಅಗ್ನಿನೇತ್ರವನ್ನು ಆತನಿಗೆಕೊಟ್ಟನು. ಶಿವನಡಿಸೆಯಿಂದ ಪಡೆಯಲ್ಪಟ್ಟ ನೇತ್ರವು ಆ ಶಂಕರದಾಸಯ್ಯನ ಹಣೆಯಲ್ಲಿ ಪ್ರಜ್ವಲ್ಲಿಸಿತು. ಉರಿಗಳಿಂದ ವ್ಯಾಪಿಸಲ್ಪಟ್ಟ ಆತನ ಹಣೆಗಣ್ಣು ಛಟ ಛಟ ಎಂದು ಉರಿಯುತ್ತಿರಲು; ಗುಡಿಗಳಿಲ್ಲದ

ಕೆಲವು ದೇವತೆಗಳು ಗುಡಿಗಳುಳ್ಳ ಕೆಲವು ದೇವತೆಗಳ ಅಸುಭಸೂಚನೆಗಳುಳ್ಳಗುಡಿಗಳನ್ನು ಸೇರಿ ಅಲ್ಲಿನ ದುಶ್ಶಕುನಗಳನ್ನು ನೋಡಿ, ಅಲ್ಲಿವಾಸಿಸುವದಕ್ಕೂ ಅಶಕ್ತರಾಗಿ ಅಲ್ಲಿರುವ ದೇವತೆಗಳೊಡನೆ ದೇಶಾಂತರಕ್ಕೆ ಹೋಗಲಿಚ್ಛೈಸಿದವರಾದರು, ಪಟ್ಟಣದಲ್ಲಿ ವಾಸಿಸುವ ಕೆಲವು ದೇವತೆಗಳು ಊರುಹೊರಗೆ ಗುಂಪುಗೂಡಿ, ದೀನಭಾವದಿಂದಒಬ್ಬರಿಗೊಬ್ಬರು ಮಾತಾಡಿಕೊಂಡರು. ಏನಂದರೆ;—ನನ್ನ ಗುಡಿಯಲ್ಲಿ ಅರ್ಧಭಾಗವು ಸುಟ್ಟುಹೋಗಲು; ನಾನು ಹೊರಗೆಬಂದನು. ಅದರಮೇಲೆ ಏನಾಯಿತೋ ನಾನು ಕಾಣೆನು. ಬಿಲ್ಲಿನಿಂದ ಬಿಡಲ್ಪಟ್ಟ ಬಾಣವು ವೇಗದಿಂದ ಹೊರಡುವಂತೆ ಊರ್ಧ್ವಜ್ವಾಲೆಯುಳ್ಳ ಆ ಅಗ್ನಿಯು ಶಂಕರದಾಸಯ್ಯನ ನೇತ್ರದಿಂದ ಹೊರಟು, ಮೈಲಾರನ ಗುಡಿಯುಗೊಪುರವನ್ನು ಪ್ರವೇಶಿಸಿ, ಆತನ ಮೂರು ಕೊಡೆಗಳನ್ನು ಸುಡಲು; ಮೈಲಾರನು ಪಾರ್ಶ್ವದ್ವಾರದಿಂದ ಹೊರಟುಬರುತ್ತಾನೆ. ಏಕನಾಥನು ಶಂಕರದಾಸಯ್ಯನ ಹಣೆಗಣ್ಣಿನಿಂದ ಸುಡಲ್ಪಟ್ಟವಸ್ತ್ರವನ್ನು ಬಿಟ್ಟು, ಕೂದಲುಗಳನ್ನು ಬಿಚ್ಚಿಕೊಂಡಿರುವ ಮಾಲತೀದೇವಿಯಿಂದ ಕೂಡಿದವನಾಗಿ ತನ್ನ ದಿಗಂಬರ ವ್ರತದ ರೀತಿಯನ್ನು ತಾನೇಪ್ರಕಾಶಿಸಿಕೊಳ್ಳುವಂತೆ ಬರುತ್ತಾನೆ. ಅಗ್ನಿಜ್ವಾಲೆಯಿಂದ ಆವರಿಸಲ್ಪಟ್ಟ ಮುಖವುಳ್ಳಪೋತರಾಜನು ಮೊದಲು ಕೂಡಿದ ಆಡಿನರಕ್ತವನ್ನು ಬಾಯಿಂದ ಕಕ್ಕುವನಹಾಗೆ ಓಡುತ್ತಾನೆ. ಯಕ್ಷಣಿಯರು ಆತನ ಕಣ್ಣಿನ ಬೆಂಕಿಯ ಉರಿಗಳಿಂದ ಆಕ್ರಮಿಸಲ್ಪಟ್ಟ ತಮ್ಮದೇಹವನ್ನು ಕೈಯಿಂದ ಸವರಿಕೊಳ್ಳುತ್ತಾ ನರ್ತನವನ್ನು ಮಾಡುವವರಂತೆ ಬರುತ್ತಾರೆ. ಈ ಜಿನೇಶ್ವರನು ವಸ್ತ್ರಹೀನೆಯರಾದ ಯಕ್ಷಿಣೀಯರಿಂದ ಕೂಡಿರುವ ಈ ಜಿನೇಶ್ವರನು ವಸ್ತ್ರರಹಿತೆಯರಾದ ಯಕ್ಷಿಣಿಯರೊಡನೆಕೂಡಿ, ಕಯ್ಯಲ್ಲಿರುವ ನವಿಲುಗರಿಯದೊಂದೆಯಿಂದ ತನ್ನವಿಕಾರವನ್ನು ಮುಚ್ಚಿಕೊಳ್ಳುತ್ತಾನೆ ಕಾಟ, ಮೋಟ ಮುಂತಾದವರೆಲ್ಲರು ಚಂಡಾಲರಂತೆ ಆತನ ದೃಷ್ಟಿಮಾರ್ಗವನ್ನು ಬಿಟ್ಟು ಬೆವತುಕೊಂಡು, ಓಡಿಹೋಗುತ್ತಾರೆ. ಕಾಳಿಯರು, ಕ್ಷೇತ್ರಪಾಲ, ಗಣೇಶ ಇವರೊಡನೆಕೂಡಿ ಕಳವಳದಿಂದಮನಸ್ಸಿನಲ್ಲಿ ದಿಗಿಲುಪಡುತ್ತಾ, ವಿಷ್ಣುವನ್ನು ಮರೆಹೊಕ್ಕರು. ಅಯ್ಯೋವಿಷ್ಣುವು ಕೂಡ ಆವರಿಗೆ ಹೇಳಿದ್ದೇನಂದರೆ,—ಹೋಗಿರಿ ? ಎಲ್ಲಾದರೂನಿಂತುಕೊಳ್ಳಿರಿ. ನಮ್ಮಪ್ರತಿಷ್ಠೆಯು ಉಳಿದರೆ ನಾವು ಹೇಳುವೆವು. ತಾನೇನೀರನ್ನು ದಾಟದವನು ಮತ್ತೊಬ್ಬನನ್ನು ದಾಟಿಸುವದರಲ್ಲಿ ಸಮರ್ಥನಾದಾನೇ ? ಹಸಿವಿನಿಂದ ಕಷ್ಟಪಡುವವನು ಯಿತರರಿಗೆ ತೃಪ್ತಿಯ ಮಾಡುವನೇ ?

ದಕ್ಷಬ್ರಹ್ಮನ ಯಜ್ಞದಲ್ಲಿ ವೀರಭದ್ರನಂತಿರುವ ಶಂಕರದಾಸಯ್ಯನ ನೇತ್ರ ಪ್ರತಾಪವನ್ನು ನೋಡಿ, ನನ್ನಮನಸ್ಸು ನಡುಗುತ್ತದೆ ಎಲೈ ಗಣೇಶನೇ ಕ್ಷೇತ್ರಪಾಲನೇ ನೀವು ನಮ್ಮ ಗುಡಿಗಳಲ್ಲಿ ಇದ್ದುಕೊಂಡಿರಿ. ಕರುಣಾಸಮುದ್ರನಾದ ಆತನನ್ನು ನೀವು ನೋಡಿದರೆ ವಿನಯದಿಂದ ನಮ್ರರಾಗಿರಿ, ಎಂದು ಹೇಳಿದನು. ಎಲೈ ಕರುಣಾನಿಧಿಯೇ ನಾವು ಮಾಡತಕ್ಕ ಕೆಲಸವೇನು ಅಪ್ಪಣೆಕೊಡು; ಎಂದು ಕಾಳಿಯರಿಂದ ಪ್ರಾರ್ಥಿಸಲ್ಪಟ್ಟ ವಿಷ್ಣುವು ಅವರಿಗೆ ಹಿತವನ್ನು ಹೇಳಿದನು,- (ಏನಂದರೆ) ನೀವುಗಳು ಮೈಲಾರ, ಮುಂತಾದ ದೇವರುಗಳೊಡನೆ ಕೂಡಿದವರಾಗಿ ಉಳಿದ ದೇವತೆಗಳನ್ನೂ ಕರೆದುಕೊಂಡು ಹೋಗಿ, ಆ ಶಂಕರದಾಸನ ಸೇವೆಯಂಮಾಡಿದರೆ ಆತನೇ ನಿಮ್ಮ ಭಯವನ್ನು ಪರಿಹರಿಸುವವನಾಗುತ್ತಾನೆ. ನಾನು ಕಾಶಿಯಲ್ಲಿ ಮಂಜಣ್ಣಪಂಡಿತನಾಜ್ಞೆಯ ಸೇವೆಯಿಂದ ವಿಶ್ವೇಶನ ಸನ್ನಿಧಾನದಲ್ಲಿ ನಿರಂತರವೂ ಸಾಷ್ಟಾಂಗನಮಸ್ಕಾರವೆಂಬ ಐಶ್ವರ್ಯವನ್ನು ಸಂಪಾದಿಸಿದೆನು. ವ್ಯಾಸಮುನಿಯು ವಿದ್ಯಾಗರ್ವದಿಂದ ಕೇಶವನಿಗಿಂತಲೂ ಉತ್ಕೃಷ್ಟವಾದ ದೈವವಿಲ್ಲವೆಂಬ ದುರ್ವಚನದಲ್ಲಿ ಉದ್ಯುಕ್ತನಾಗಿ ನಂದಿಕೇಶನಾಜ್ಞೆಯಿಂದ ಅಹಂಕಾರವಡಗಿದ ಮನಸ್ಸುಳ್ಳವನಾಗಿ, ಸುಖವನ್ನು ಹೊಂದಿದನು. ಹಾವುಗೆ, ಕೊಡೆ, ವೀಳ್ಯದಸಂಬಳಿಗೆ ಬೀಸಣಿಗೆ, ಚಿನ್ನದ ಗಿಂಡಿ, ಸೂಜಿನೂಲುಗಳ ಸಂಚಿ, ದರ್ಭಾಸನ, ಇವುಗಳನ್ನು ಹಿಡಿದು ಉಳಿದ ಕೆಲಸಗಳನ್ನು ಮಾಡುತ್ತಿದ್ದರೆ, ಆತನು ತಾನೇ ಕರುಣದಿಂದ ನಿಮ್ಮ ಆಲಯಗಳನ್ನು ಕಟ್ಟಿಸುವುದರಲ್ಲಿ ಸಮ್ಮತಿಪಟ್ಟಾನು. ಈ ಪ್ರಕಾರವಾಗಿ ಹೇಳಿಕಳುಹಿಸಲ್ಪಟ್ಟ ಸಮಸ್ತ ಶಕ್ತಿಗಳೂ ನಾವು ಹೋಗುವೆವೆಂದು ಅಪ್ಪಣೆಯಂ ತೆಗೆದುಕೊಂಡು, ಒಟ್ಟಾಗಿಸೇರಿ ಹೊರಟರು. ಕಾಳಿಯರು ಪಟ್ಟಣದ ಹೊರಗೆ ಎಲ್ಲೋ ಒಂದುಕಡೆ ಇದ್ದುಕೊಂಡು ಮೈಲಾರ ಮುಂತಾದ ದೇವರುಗಳೊಡನೆ ನಾರಾಯಣನು ಹೇಳಿದ ಮಾತನ್ನು ತಿಳಿಸಿದರು. ದೇವತಾಸಮೂಹವು ವಿಷ್ಣುವಿನ ಆಜ್ಞೆಯನ್ನು ಕೇಳಿ, ಇದು ನ್ಯಾಯವೆಂದು ನಿರ್ಣಯಿಸಿ, ಬಹು ಸಂಭ್ರಮದೊಡನೆ ಆ ಶಂಕರದಾಸನನ್ನು ನೋಡುವದಕ್ಕೆ ಯೋಗ್ಯವಾದ ಸನ್ನಾಹವನ್ನು ಮಾಡಿತು. ಕೆಲವರು ಕುತ್ತಿಗೆಗೆ ಪಾಗನ್ನು ಸುತ್ತಿಕೊಂಡರು. ಕೆಲವರು ಹುಲ್ಲಿನ ಮೊಳಕೆಗಳನ್ನು ಕಚ್ಚಿಕೊಂಡರು. ಕೆಲವರು ಕೈಗಳನ್ನು ಮುಗಿದುಕೊಂಡರು. ಕೆಲವರು ಸ್ತೋತ್ರಪಠನದಲ್ಲಿ ಆಸಕ್ತರಾದ ಮುಖವುಳ್ಳವರಾದರು. ಹೀಗೆ ಎಲ್ಲಾ ದೇವರೂ ದೇವತೆಗಳೂ ಕೂಡಿ

ಪೂಜ್ಯನಾದ ಶಂಕರದಾಸನ ಪಾದವನ್ನು ಮರೆಹೊಕ್ಕರು. ಆಗ ಫಾಲನೇತ್ರನಾದ ಆ ಶಂಕರದಾಸನು ತನ್ನ ಹಣೆಗಣ್ಣಿನ ಬೆಂಕಿಯಿಂದ ನಾಶಮಾಡಲ್ಪಟ್ಟ ಆಲಯಗಳುಳ್ಳವರಾಗಿಯೂ, ಕಾಂತಿವಿಹೀನರಾಗಿಯೂ, ಇರುವ ಅವರನ್ನು ನೋಡಿ, ಹೇಳಿದ್ದೇನಂದರೆ,-ಇತರ ದೇವತೆಗಳನ್ನು ಸಹಿಸದ ಮಹಾಸ್ವಾಮಿಯ ಆಜ್ಞೆಯಿಂದ ತುಂಬಲ್ಪಟ್ಟ ಈ ಪಟ್ಟಣದಲ್ಲಿ ಯಾವ ಉಪಾಯದಿಂದ ನೀವು ನಿಶ್ಚಿಂತರಾಗಿ ವಾಸಿಸುವದಕ್ಕೆ ಅಪೇಕ್ಷಿಸುತ್ತೀರಿ. ಎಂದು ಹೇಳಲು, ದೇವತೆಗಳ ಸಮೂಹವು ಆ ಮಾತನ್ನು ಕೇಳಿ, ಭಯದಿಂದ ಕಳವಳಗೊಂಡು ಕಾರ್‍ಯದಿಂದಲೇ ಉತ್ತರವನ್ನು ಕೊಡಬೇಕೆಂದು ತಮ್ಮತಮ್ಮ ಮನಸ್ಸಿನಲ್ಲಿ ಅಪೇಕ್ಷಿಸಿದರು. ಮೈಲಾರನು ಕೊಡೆಯನ್ನೂ, ಭೈರವನು ರತ್ನದಹಾವುಗೆಯನ್ನು, ಕಾಮವಲ್ಲಿಯು ವೀಳ್ಯದ ಭರಣಿಯನ್ನೂ, ಪರಿಶುದ್ಧವಾದ ಬ್ರಹ್ಮರಾಕ್ಷಸನು ವಿಭೂತಿಯ ಚೀಲವನ್ನೂ ಡಾಕಿನಿಯು ಸೂಜಿದಾರಗಳನಿಟ್ಟಿರುವ ಪೆಟ್ಟಿಗೆಯನ್ನೂ, ಹಿಡಿದು ಓಲೈಸಿದರು. ಏಕನಾಥೆಯು ಗರ್ವವನ್ನುಬಿಟ್ಟು, ತನ್ನ ಕೈಯಲ್ಲಿರುವ ನವಿಲುಗರಿಯ ದೊಂದೆಯನ್ನು ಕಸಬರಲು ಮಾಡಿಕೊಂಡು ಶಂಕರದಾಸಯ್ಯನ ಮನೆಯ ಕಸವನ್ನು ಗುಡಿಸುವ ದಾಸಿಯಾದಳು. ಕಾಳಿಯರು ಜಂಗಮರ ಆಹಾರಕ್ಕೋಸ್ಕರ ಪ್ರತಿದಿವಸದಲ್ಲಿಯೂ ಆತನಯಶಸ್ಸುಗಳನ್ನು ಹಾಡುತ್ತಾ ಭತ್ತವನ್ನು ಕುಟ್ಟುತ್ತಾರೆ. ಈಪ್ರಕಾರವಾಗಿ ಆ ದೇವತೆಗಳು ಆ ಹಣೆಗಣ್ಣಿನ ಉರಿಯಿಂದ ವ್ಯಾಪ್ತವಾದ ನೋಟವನ್ನು ನೆನಸಿಕೊಂಡು ಆ ಶಂಕರದಾಸಯ್ಯನನ್ನು ಅಹೋರಾತ್ರಿಗಳಲ್ಲಿ ಸೇವಿಸುತ್ತಾರೆ. ಆಲಯವಿಲ್ಲದೆ ಹಗಲಿರುಳುಗಳಲ್ಲಿಯೂ ಸೇವೆಮಾಡುವುದರದಲ್ಲಿ ಆಸ್ತರಾಗಿ ಜಾಗರೂಕತೆಯಿಂದಿರುವ ಆ ದೇವತೆಗಳನ್ನು ಶಂಕರದಾಸಯ್ಯನು ಕರುಣದಿಂದನೋಡಿ ಅವರಿಗೆ ಆಲಯಗಳನ್ನು ಕಟ್ಟಿಸಿ, ಅವರಮುಂದೆ ತ್ರಿಶೂಲಗಳನ್ನೂ, ಶಿವನ ಪಾದುಕೆಯನ್ನೂ ಇಟ್ಟು "ನಿಮ್ಮ ನಿಮ್ಮ ಸೇವೆಯು ತೀರಿದನಂತರದಲ್ಲಿ ನಿಮ್ಮ ಆಲಯಗಳಲ್ಲಿ ವಾಸಿಸಿರಿ" ಎಂದು ಕಟ್ಟುಮಾಡಿದನು. ಆ ಬಳಿಕ ಆ ದೇವತೆಗಳು ಶಂಕರದಾಸಯ್ಯನ ದಯೆಯಿಂದದೊರೆತ ತಮ್ಮ ತಮ್ಮ ಸ್ಥಾನವನ್ನು ಪೂರ್ವದಂತೆ ಆಶ್ರೈಸಿ ಪ್ರೀತಿಯನ್ನು ತೋರಿಸುತ್ತಾ ಆತನನ್ನು ಹಗಲು ರಾತ್ರಿಗಳಲ್ಲಿ ಸೇವಿಸುತ್ತಾರೆ ಹೀಗಿರುವ ಆತನಪ್ರರಾಕ್ರಮಾಗ್ನಿಯ ವಿಲಾಸವನ್ನು ಜಗದೇಕಮಲ್ಲನೆಂಬ ಅರಸನು ಸೈರಿಸದೆ, ತಾನುಉಕ್ಕಿನ ಒಂದು ವಿಷ್ಣುವಿಗ್ರಹವನ್ನು ಮಾಡಿಸಿ, ಅದರಮೇಲೆ ಪಂಚಲೋಹಗಳಿಂದ ವರಸೆಯಾಗಿ ಐದು

ಕವಚಗಳನ್ನು ತೊಡಿಸಿ, ಆಗನುದಲ್ಲಿ ಹೇಳಿರುವ ಪ್ರಕಾರದಿಂದ ಪ್ರತಿಷ್ಠೆ ಮಾಡಿ, ಬಳಿಕ ಒಂದಾನೊಂದು ವಸಂತಕಾಲದಲ್ಲಿ ವೈಭವದೊಡನೆ ಉತ್ಸವವನ್ನು ಮಾಡಿಸುವದಕ್ಕೆ ಆರಂಭಿಸಿ, ಶಂಕರದಾಸಯ್ಯನು ಸೃಷ್ಟಿಕರ್ತನಾದ ಬ್ರಹ್ಮನನ್ನು ನಿಗ್ರಹಿಸಿದವನೇ ? ಸ್ಥಿತಿಕರ್ತನಾದ ವಿಷ್ಣುವನ್ನು ನಿಗ್ರಹಿಸಿದವನೇ ? ಸಾಮಾನ್ಯ ದೇವತೆಗಳನ್ನು ನಿಗ್ರಹಿಸುವದರಿಂದ ಯಾವಪ್ರತಾಪವು ಪ್ರಕಾಶವಾದೀತು ? ಮೂರುಕಣ್ಣಿನವನಾಗಲಿ, ನಾಲ್ಕುಕಣ್ಣಿನವನಾಗಲಿ, ಅಚ್ಯುತನಾದ ವಿಷ್ಣುವನ್ನು ನೋಡಲಿ, ಆಗ ಏನಾಗುವದೋ ಅವನ ಪ್ರತಾಪಾತಿಶಯವನ್ನು ನೋಡೋಣ, ಎಂದು ಹೇಳಿದನು.

ಈರೀತಿಯಾದ ದುರ್ವಚನವನ್ನು ಶಂಕರದಾಸನು ಕೇಳಿ, ಮಂದಹಾಸದಿಂದಕೂಡಿದ ಮುಖಕಮಲವುಳ್ಳವನಾಗಿ ಆ ದಾಮೋದರನ ಆಲಯಕ್ಕೆ ಹೋಗಬೇಕೆಂದು ಅಪೇಕ್ಷಿಸಿದನು. ಈ ಸಂದರ್ಭದಲ್ಲಿ ಆ ದಾಮೋದರನ ಆಲಯದ ಕಂಭಗಳಲ್ಲಿ ರಚಿಸಲ್ಪಟ್ಟಿದ್ದ ಬೊಂಬೆಗಳು ಕಣ್ಣಿನಲ್ಲಿ ನೀರಂ ಸುರಿಸಿಕೊಂಡು ಅತ್ತವು. ಆ ವಿಷ್ಣುವಿನ ಗುಡಿಯ ಅಂಗಣವು ರಕ್ತಧಾರೆ ಬಿದ್ದು ನೆನೆದುಹೋಯಿತು. ಗೋಪುರವು ಪ್ರತಿಮೆಗಳ ಸಮೂಹದೊಡನೆ ಕಂಪಿಸಿತು. ವಿಷ್ಣುವಿನ ಕಂಠದಲ್ಲಿ ಹಾಕಿದ್ದ ಪುಷ್ಪಮಾಲಿಕೆಯ ಕಟ್ಟು ಕಿತ್ತುಹೋದ್ದರಿಂದ ವಿಷ್ಣುವಿನ ಕೊರಳವಿಯೋಗದಿಂದುಂಟಾದ ದುಃಖದಿಂದ ರೋದನವಂಮಾಡುವಂತೆ ತುಂಬಿಗಳ ಝಂಕಾರವುಳ್ಳದ್ದಾಗಿ ಜಾರಿಬಿತ್ತು ಆ ದಾಮೋದರನ ಶಿರಸ್ಸಿನಲ್ಲಿ ಧರಿಸಿದ್ದ ರತ್ನಕಿರೀಟವು ಯಾವನಿಂದಲೋ ಹಾರಿಸಲ್ಪಟ್ಟಹಾಗೆ ಕೆಳಗೆ ಬಿದ್ದು ಒಡೆದುಹೋಯಿತು, ಚಿನ್ನದ ಬಟ್ಟಲಲ್ಲಿ ಪೂಜಕನು ತಂದು ಸಮೀಪದಲ್ಲಿಟ್ಟಿದ್ದ ನೈವೇದ್ಯವು ಅಲ್ಲಿರಲಿಲ್ಲ.

ಅನಂತರದಲ್ಲಿ ಶಂಕರದಾಸಯ್ಯನು ಸೇವಕರಾದ ದೇವತೆಗಳಿಂದಲೂ, ಭಕ್ತರಿಂದಲೂ ಕೂಡಿದವನಾಗಿ ವಿಷ್ಣುವಿನ ಗುಡಿಯ ಪ್ರಕಾರದ ಬಾಗಿಲಿಗೆ ಬಂದು ಮುಖದಮೇಲೆ ಹೊದ್ದುಕೊಂಡಿದ್ದ ವಸ್ತ್ರವನ್ನು ತೆಗೆದು, ಉರಿಯುವ ಬೆಂಕಿಯಿಂದ ಕೂಡಿದ ಕಣ್ಣನ್ನು ತೆರೆದನು. ಸ್ವಲ್ಪವಾಗಿ ತೆರೆದ ಕಡೆಗಣ್ಣಿನಿಂದ ಒಂದಾನೊಂದು ಕಿಡಿಯು ಹೊರಟು, ವಿಸ್ತರಿಸಲ್ಪಟ್ಟ ಆಕಾರವುಳ್ಳದ್ದಾಗಿ, ವಿಷ್ಣುವಿನ ಮುಂದೆ ಕುಣಿದು ಮೊದಲು ಆ ದೇವಾಲಯದ ಬಾಗಲನ್ನು ಸುಟ್ಟು ಬೂದಿಮಾಡಿ ಆಮೇಲೆ ಆ ವಿಷ್ಣುವಿಗ್ರಹವನ್ನು ಕಾಲಿನಿಂದ ತಲೆಯತನಕ ವ್ಯಾಪಿಸಿತು.

ಅದರ ತಾಪದಿಂದ ಕರಗಿದ ಪಂಚಲೋಹಸಮುದಾಯವು ಶಂಕರದಾಸನ ಪಾದದಲ್ಲಿ ನಮಸ್ಕಾರವನ್ನು ಮಾಡುವದಕ್ಕೋಸ್ಕರವೋ ಎಂಬಂತೆ ಆತನ ಸಮೀಪಕ್ಕೆ ಹರಿದುಹೋಯಿತು. ಅದರ ವೇಗದಿಂದ ಆ ವಿಷ್ಣುವಿನ ಆಲಯವು ಶತಪ್ರಕಾರವಾಗಿ ಭಿನ್ನವಾಗಿ, ಆಗ ಹುಟ್ಟಿದ ಚಟಚಟತ್ಕಾರದಿಂದ ದಿಕ್ಕುಗಳೆಲ್ಲವೂ ಶಬ್ದಾಯಮಾನಗಳಾದವು. ಜಗದೇಕಮಲ್ಲನು ಕೂಡ ಈ ಆಶ್ಚರ್ಯಕರವಾದ ವೃತ್ತಾಂತವನ್ನು ಕೇಳಿ, ತಾನು ಮಾಡಿದ ಅವಿಧೇಯತ್ವವನ್ನು ನೆನಸಿಕೊಂಡು ಮನಸ್ಸಿನಲ್ಲಿ ಬಹಳ ಭಯಪಟ್ಟನು. ಈಪ್ರಕಾರವಾದದ್ದು ಅವನ ಮಹಿಮೆಯು. ಆದಕಾರಣದಿಂದ ನಾವು ಆತನ ಪಾದಗಳಿಗೆರಗಿ, ಮಾಯುವಾಗಿರುವ ಅಕ್ಷಯ ನಿಧಿಯನ್ನು ಶಿವಭಕ್ತರ ಸೇವೆಗೋಸ್ಕರ ಪಡೆದುಕೊಳ್ಳಬೇಕು.

ಈ ರೀತಿಯಾಗಿ ಹೇಳಿದ ಹೆಂಡತಿಯ ಮಾತನ್ನು ಕೇಳಿ ಜೇಡರದಾಸಯ್ಯನು ಹಾಗೇ ಆಗಲೆಂದು ಒಪ್ಪಿ ಆಕೆಯನ್ನು ಸಂಗಡಕರೆದುಕೊಂಡು ಶಂಕರದಾಸನಿಗೆ ನಮಸ್ಕಾರವಂ ಮಾಡಬೇಕೆಂಬ ಕುತೂಹಲದಿಂದ ಆತನ ಮಠಕ್ಕೈದಿನೋಡುವಲ್ಲಿ ನಾನಾ ಕಡೆಗಳಿಂದಲೂ ಅನೇಕ ದ್ವೀಪಗಳಿಂದಲೂ ಬಂದು, ಅಪ್ಪಣೆಯ ಮೇರೆಗೆ ಸೇವೆಯನ್ನು ಮಾಡುತ್ತಿರುವ ದೇವತೆಗಳಾಡಿಕೊಳ್ಳುವ ಮಾತುಗಳು ಕೇಳಬಂದವು. ಏನಂದರೆ;—ಎಲೇ ಕಾಳಿಯೇ ನೀನು ಪಾದಪೂಜೆಗೆ ಪರಿಶುದ್ಧ ಜಲವನ್ನು ತೆಗೆದುಕೊಂಡು ಬಾ. ಎಲೇ ಗಂಗೆಯೇ ನೀನು ಪತ್ರಪುಷ್ಪಗಳನ್ನೂ, ಗಂಧವನ್ನೂ ಮುಂದಿಡು. ಎಲೇ ಲಂಕೇಶ್ವರಿಯಾದ ಶಂಕರಿಯೇ ನೀನು ಪಾದಪೂಜೆಯನ್ನು ಮಾಡು; ಎಲೇ ಜಾಲಂಧ್ರದೇವಿಯೇ ನೀನು ಸಖಿಯರೊಡನೆ ಗದ್ದುಗೆಗಳನ್ನು ಇಡು ಎಲೇ ಶಾರದೆಯೇ ನೀನು ವಿಭೂತಿಯನ್ನು ಕೊಡು ಎಲೇ ಹಿಂಗುಳಾದೇವಿ ನೀನು ವೀಳೆಯವನ್ನು ನೀಡು ಎಲೇ ಮಣಿಕಾದೇವಿಯೇ ನೀನು ಬೀಸಣಿಗೆಯನ್ನು ತೆಗದುಕೊಂಡು ಮೆಲ್ಲಗೆಬೀಸು.

ಈ ವಿಧವಾದ ಮಾತುಗಳನ್ನು ಜೇಡರದಾಸಯ್ಯನು ಕೇಳಿ, ಶಿಷ್ಯರೊಡನೆಯೂ, ಪತ್ನಿಯೊಡನೆಯೂ ಕೂಡಿಕೊಂಡವನಾಗಿ, ಜಗತ್ಪೂಜ್ಯನಾದ ಆ ಶಂಕರದಾಸಯ್ಯನ ಶಿವಪೂಜೆಯ ವೇದಿಕೆಯ ಬಳಿಗೆ ಬಂದು ಪತಿವ್ರತೆಯರಿಂದ ಪೂಜಿಸಲ್ಪಟ್ಟ ಪಾದಗಳುಳ್ಳ ಪತ್ನಿಯೊಡನೆ ಕೂಡಿರುವದರಿಂದ ಪಾರ್ವತೀಸಮೇತನಾದ ಶಿವನಂತಿರುವನಾಗಿಯು, ಅನೇಕರಾದ ತಪಸ್ವಿಗಳಾದ ಭಕ್ತರಿಂದ ಆಶ್ರಯಿಸಲ್ಪಟ್ಟ, ಉಭಯಪಾರ್ಶ್ವಗಳುಳ್ಳವನಾಗಿಯೂ, ಎನೋಬಂದು ಕಥೆಯನ್ನು ಹೇಳುತ್ತಿರು

ವವನಾಗಿಯೂ, ತಾನು ಬಂದದ್ದನ್ನು ಕಾಣದವನಂತಿರುವವನಾಗಿಯೂ ಇರುವ ಆತನನ್ನು ನೋಡಿ, ಶರಣಾರ್ಥಿ ಎಂದು ಹೇಳಿಕೊಂಡು ನಮಸ್ಕರಿಸಿದನು.

ಶಂಕರದಾಸಯ್ಯನು, ಪ್ರತ್ಯುತ್ಥಾನ ಮೊದಲಾದ ಮರ್ಯಾದೆಗಳಿಂದ ಆತನನ್ನು ಉಪಚರಿಸಿ ಜೇಡರದಾಸಯ್ಯನ ನಿಧಿ ನಾಶವಾದ ಸಂಗತಿಯನ್ನು ಕೇಳಿ ಹುಸಿನಗೆಯೊಡನೆ ಮೆಲ್ಲಮೆಲ್ಲನೆ ಹೇಳಿದ್ದೇನಂದರೆ,— ಎಲೈ ಶಿವನಚಿತ್ತವನ್ನು ಎಳೆಯುವದರಲ್ಲಿ ಸಮರ್ಥನಾದವನೇ! ನೀನು ಸೂಕ್ಷ್ಮವಾದ ವಸ್ತ್ರವನ್ನು ನೈದು ಕೊಟ್ಟು ಕರುಣಾಸಮುದ್ರನಾದ ಶಿವನಿಂದ ಐಶ್ವರ್ಯಗಳನ್ನು ಪಡೆಯುವದಕ್ಕೆ ಸಮರ್ಥನಾಗಿದ್ದೀಯೆ, ನೀನು ಸಂಪಾದಿಸಿದ್ದ ನಿಧಿಯನ್ನು ಕುಶಲರಾದ ಕಳ್ಳರೇನಾದರೂ ಕದ್ದುಕೊಂಡುಹೋದರೋ? ಅಥವಾ ಬಹಳವಾಗಿವಿನಿಯೋಗಿಸಿದರಿಂದ ಕ್ಷೀಣವಾಯಿತೋ? ಅದು ಮನೆಯನ್ನುಬಿಟ್ಟು ರಾತ್ರಿಕಾಲದಲ್ಲಿಹೋಯಿತೋ ಹಗಲಲ್ಲಿ ಹೋಯಿತೋ ಘನವಾದನಿಧಿಯನ್ನು ಖಡ್ಗಪಾಣಿಗಳಾದ ಅನೇಕವೀರರಿಂದ ಕಾಪಾಡಬೇಕು. ಭೂಮಿಯಲ್ಲಿ ಕಾಪಾಡಲ್ಪಡದ ಉತ್ತಮಪದಾರ್ಥವು ಮರೆಯಾಗಿ ಹೋಗುವದು. ಕಮಲಾಕ್ಷನಾದ ವಿಷ್ಣುವು ಕೂಡ, ಆಯುಧವನ್ನು ಧರಿಸಿರುವ ತೋಳುಗಳ ಮಧ್ಯಭಾಗವೆಂಬ ಮಂಟಪದೊಳಗೆ ಲಕ್ಷ್ಮಿಯನ್ನಿಟ್ಟು ಮಲಗಿಕೊಂಡಿರುವವನಾದಾಗ್ಯೂ ಎಚ್ಚರದಿಂದ ಸಂರಕ್ಷಿಸುತ್ತಾನೆ. ಇಂದ್ರನು ಅಮೃತವನ್ನು ಬೆಂಕಿಯ ಕಿಡಿಗಳನ್ನೇ ಕೆದರುತ್ತಿರುವ ಕಣ್ಣುಗಳುಳ್ಳ ಸರ್ಪಗಳಸಂಗಡ ರಕ್ಷಿಸುತ್ತಾನೆ. ಇವು ಮುಂತಾದ ಮಾತುಗಳಿಂದ ಶಂಕರದಾಸಯ್ಯನು ಶಿವದಾಸಯ್ಯನನ್ನು ಮೂದಲಿಸಿ, ಸಿಕ್ಕಿದ್ದು ನಾಶವಾದದ್ದರಿಂದ ಬಹುದುಃಖಗೊಂಡಿರುವ ಆತನ ಕಯ್ಯಲ್ಲಿ ಗುದ್ದಲಿಯನ್ನು ಕೊಟ್ಟು, ಇದರಿಂದ ಈ ಭೂಮಿಯನ್ನು ಅಗಿಯೆಂದು ಹೇಳಲು; ಜೇಡರದಾಸಯ್ಯನು ಶಂಕದಾಸಯ್ಯನ ಆಜ್ಞೆಯನ್ನು ಶಿರಸಾವಹಿಸಿ ಮಹೇಶ್ವರರ ಚರಣಕಮಲ ಧೂಳುಬಿದ್ದು ಪವಿತ್ರವಾಗಿರುವ ಆನೆಲವನ್ನು ಅಗದನು. ಆಗ ಅಗಿದ ಮಣ್ಣೆಲ್ಲಾ ಸುವರ್ಣರಾಶಿಯಾಯಿತು ಅದನ್ನು ಶಂಕರದಾಸಯ್ಯನು ಜೇಡರದಾಸಯ್ಯನಿಗೆ ನಿನಗೆ ಬೇಕಾದಷ್ಟು ತೆಗೆದುಕೊಳ್ಳೆಂದು ಹೇಳಿದಕ್ಕೆ ಅದನ್ನು ಅಪೇಕ್ಷಿಸದೆ, ಪಾದದಲ್ಲಿಬಿದ್ದಿರುವ ಆತನನ್ನು ಕರುಣಾರಸದಿಂದ ತುಬಿದ ಘನವಾದ ತನ್ನ ದೃಷ್ಟಿಯಿಂದ ಅನುಗ್ರಹಿಸಿದನು ಗುರುವಾದ ಶಂಕರದಾಸಯ್ಯನ ಕರುಣಾಕಟಾಕ್ಷವು ಜೇಡರದಾಸಯ್ಯನಮೇಲೆ ಬೀಳುವದಕ್ಕೆ ಉದ್ಯುಕ್ತವಾಗುವದರೊಳಗೆ ಅಕ್ಷಯನಿಧಿಯು ಪೂರ್ವದಂತೆ ಆತನ

ಮನೆಯನ್ನು ಸೇರಿತು. ಬಳಿಕ ಶಂಕರದಾಸಯ್ಯನು ವಿನಯದಿಂದ ನಮಸ್ಕರಿದ ಗರ್ವವನ್ನುಬಿಟ್ಟು ಶಿವದಾಸಯ್ಯನ ಹಣೆಗೆ ಭಸ್ಮವನ್ನು ಧರಿಸಿ, ಕಳುಹಿಸಿದನು ಆದಕಾರಣ ಕರುಣಾಸಮುದ್ರನಾದ ಪರಶಿವನು ಅಹಂಕಾರಪಡುವವರಿಗೆ ದೂರ ನಾಗಿಯೂ ಅಹಂಕಾರವಿಲ್ಲದವರಿಗೆ ಸಮೀಪಸ್ತನಾಗಿಯೂ ಇದ್ಧಾನೆ ಈವಿಷ ಯದಲ್ಲಿ ಶಂಕರದಾಸ ಶಿವದಾಸರೇ ದೃಷ್ಟಾಂತವು.

ಈರೀತಿಯಾಗಿ ಮಾಚಿದೇವಯ್ಯನು ಬಸವಣ್ಣನಿಗೆ ಶಂಕದಾಸಯ್ಯನ ಮಹಿ ಮೆಯನ್ನು ಹೇಳಿ, ಮತ್ತೊಬ್ಬಪ್ರಮಥನ ಆಶ್ಚರ್ಯಕರವಾದ ಚರಿತ್ರೆಯನ್ನು ಹೇಳು ವದಕ್ಕೆ ಉದ್ಯುಕ್ತನಾದನು.

ಬಸವೇಶವಿಜಯದಲ್ಲಿ ಹನ್ನೊಂದನೇ ಅಧ್ಯಾಯವು
ಸಂಪೂರ್ಣವು.

---

## ಹನ್ನೆರಡನೇ ಅಧ್ಯಾಯವು

### ಸಿರಿಯಾಳ್ವನ ಕಥೆ

ಇದಲ್ಲದೆ ಶತೃಗಳಿಗೆ ಅಯೊಧ್ಯೆಯಾದಾಗ್ಯು (ಯುದ್ಧಮಾಡುವದಕ್ಕೆಶಕ್ಯ ವಿಲ್ಲದಿದ್ದಾಗ್ಯೂ) ಮದುರೆಎಂದು (ಮನೋಹರವೆಂದು) ಜನಗಳಿಂದ ತಿಳಿಯ ಲ್ಪಟ್ಟ ಪರಿಶುದ್ದವಾದ ಕಾಂಚೀಪಟ್ಟಣವು ದ್ರವಿಡದೇಶದಲ್ಲಿ ಇದೆ. ಆಪಟ್ಟಣ ದಲ್ಲಿ ಗಾಣ, ಬೀಸುವಕಲ್ಲು ಮೊದಲಾದವುಗಳು ತನ್ನಷ್ಟಕ್ಕೆತಾನೇ ತಿರುಗುತ್ತಿ ರುವವು. ದೀಪಗಳು ಬತ್ತಿಯನ್ನು ಎತ್ತಿದ್ದರೂ ಉರಿಯುವವು. ಅದರಲ್ಲಿ ಕುಚ ಗಳೆಂಬ ಗುಚ್ಚಗಳುಳ್ಳದ್ದಾಗಿಯೂ, ತುಟಿಯೆಂಬ ಚಿಗುರುಳ್ಳದ್ದಾಗಿಯೂ, ಇ ರುವ ಕಾಮಾಕ್ಷಿದೇವಿಯೆಂಬ ಲತೆಯು, ಕಂಪಾನದೀ ತೀರದಲ್ಲಿ ಧರ್ಮಾರ್ಥಕಾ ಮಮೋಕ್ಷಗಳೆಂಬ ಫಲಗಳನ್ನು ಕೊಡುತ್ತದೆ. ಪರಿಶುದ್ಧವಾದ ಆ ಪುರದಲ್ಲಿ ದೇಹವನ್ನು ಬಿಡುತ್ತಿರುವ ಸಕಲಪ್ರಾಣಿಗಳ ಕಿವಿಗಳಲ್ಲಿ ಪಾರ್ವತೀಪತಿಯು ಪ್ರಾ ಣಮಂತ್ರೋಪದೇಶವನ್ನು ಮಾಡುತ್ತಾನೆ ಮತ್ತು ಆ ಪುರದಲ್ಲಿ ಒಂದು ಮಾ

ವಿನಮರವು ತನ್ನ ಬುಡದಲ್ಲಿ ತ್ರಿಭುವನಕ್ಕೂ ಕಾರಣರಾಗಿಯೂ, ಪರಸ್ಪರದರ್ಶನದಲ್ಲಿ ಇಚ್ಛೆಯುಳ್ಳವರಾಗಿಯೂ ಇರುವ ಸುಂದರರಾದ ದಂಪತಿಗಳನ್ನು ಧರಿಸಿ, ಪ್ರಕಾಶಿಸುತ್ತದೆ. ಮುನಿಗಳು ಕಾಶೀಪಟ್ಟಣದಲ್ಲಿ ಮೋಕ್ಷಪ್ರದವಾದ ಮರಣವನ್ನು ಹ್ಯಾಗೆ ಅಪೇಕ್ಷಿಸುತ್ತಾರೋ, ಹಾಗೆಯೇ ಆ ಪಟ್ಟಣದಲ್ಲಿ ಕರ್ಮಧ್ವಂಸಕವಾದ ಜನನವನ್ನು ಅಪೇಕ್ಷಿಸುತ್ತಾರೆ. ಅಲ್ಲಿ ಭರಣೀನಕ್ಷತ್ರದಿಂದ ಕೂಡಿದ ಚೈತ್ರಮಾಸದ ದಿನದ ಮಧ್ಯಾಹ್ನದಲ್ಲಿ ಶಿವನ ವೃಷಭದ ಕೊರಳಿನಲ್ಲಿ ಧರಿಸಿರುವ ಘಂಟೆಯ ಧ್ವನಿಯು ಕೇಳಿಬರುವುದು. ಇಂಥಾ ಕಾಂಚೀನಗರಿಯಲ್ಲಿ ಭಕ್ತವಂತರುಗಳೊಳಗೆ ಶ್ರೇಷ್ಠನಾಗಿಯೂ, ಪ್ರತಿದಿನದಲ್ಲಿ ಅನೇಕ ಶಿವಭಕ್ತರ ಸಮೂಹವನ್ನು ತೃಪ್ತಿಪಡಿಸುವವನಾಗಿಯೂ, ತನು, ಮನ, ಧನಗಳನ್ನು ಶಿವನಿಗೆ ಅರ್ಪಿಸಿದವನಾಗಿಯೂ, ಭಸ್ಮೋದ್ಧೂಳಿತ ಶರೀರನಾದವನನ್ನು ಶಿವನೆಂದೇ ತಿಳಿಯುವವನಾಗಿಯೂ, ಶಿವನ ಅನೇಕ ಲೀಲೆಗಳಲ್ಲಿ ಧರಿಸಿದ ಕಾಪಾಲಿಕಾದಿ ರೂಪಗಳನ್ನು ಶಿವನೆಂಬ ಬುದ್ಧಿಯಿಂದ ನಿರಂತರದಲ್ಲಿ ಪೂಜಿಸುವವನಾಗಿಯೂ, ಇರುವ ಶಿರಿಯಾಳ್ವನೆಂಬ ಒಬ್ಬ ಭಕ್ತನಿದ್ದನು. ಆತನು ಹೀಗೆ ಪ್ರತಿದಿನವೂ ಸಹಸ್ರ ಮಾಹೇಶ್ವರಪೂಜೆಯನ್ನು ಆಚರಿಸುತ್ತಾ ನಿರಂಕುಶವಾದ ವ್ರತವುಳ್ಳವನಾಗಿ ಶೀಲಾಳನೆಂಬ ಮಗನೊಡನೆಯೂ, ಚಂಗಳೆಎಂಬ ಪತ್ನಿಯೊಡನೆಯೂ ಇದ್ದನು. ಶಿವನು ಆತನ ಅದ್ಭುತವಾದ ಭಕ್ತಿಭಾವವನ್ನು ಪ್ರಕಾಶಪಡಿಸಬೇಕೆಂಬ ಇಚ್ಛೆಯುಳ್ಳವನಾಗಿ ಕಾಪಾಲಿಕ ವೇಷವನ್ನು ಧರಿಸಿದನು.

ಸರ್ಪದಿಂದ ಸುತ್ತಲ್ಪಟ್ಟದ್ದಾಗಿಯೂ, ಚಂದ್ರಕಳೆಯಿಂದ ಕೂಡಿದ್ದಾಗಿಯೂ ಇರುವ ಜಟಾಜೂಟವು ತಾಳೇಗರಿಯನ್ನು ಒಳಗಿಟ್ಟು ಪುಷ್ಪಮಾಲಿಕೆಯಿಂದ ಸುತ್ತಿದ ಕೂದಲಾಯಿತು. ವಿಷ್ಣು ಬ್ರಹ್ಮರ ತಲೆಯೋಡುಗಳನ್ನು ಕರ್ಣಾಭರಣಗಳನ್ನಾಗಿ ಮಾಡಿಕೊಂಡನು. ಪ್ರಳಯದಲ್ಲಿ ಕೊಲ್ಲಲ್ಪಟ್ಟ ದಿಗ್ಗಜಗಳ ಕುಂಭಸ್ಥಲದಲ್ಲಿದ್ದ ಶಂಕಿನಂತೆ ಬಿಳುಪಾಗಿರುವ ಮುತ್ತುಗಳಿಂದ ಮಾಡಲ್ಪಟ್ಟ ಕಂಠಮಾಲಿಕೆಯನ್ನು ಧರಿಸಿಕೊಂಡನು. ನರಸಿಂಹ, ಗಜಾಸುರ, ವ್ಯಾಘ್ರಾಸುರ, ಇವರ ಚರ್ಮಗಳಿಂದ ಮಾಡಲ್ಪಟ್ಟ ಚಿತ್ರವರ್ಣದ ಕಪಿಸಿಯಿಂದ ಕತ್ತಿನ ಭಾಗವನ್ನು ಮುಚ್ಚಿಕೊಂಡನು. ನರಸಿಂಹನ ಮತ್ತು ವರಾಹನ ಕೋರೆದಾಡೆಗಳನ್ನು ಮಧ್ಯದಲ್ಲಿ ಸೇರಿಸಿ, ದೇವತೆಗಳ ಎಲುವುಗಳ ಸಮೂಹದಿಂದ ಮಾಡಲ್ಪಟ್ಟ ಮಾಲಿಕೆಯಿಂದ ಎದೆಯನ್ನು ಅಲಂಕರಿಸಿಕೊಂಡನು. ಒಳಗೆ ಅಡರುವ ಅಮೋ

ಘವಾದ ತತ್ವಾರ್ಥದಿಂದ ಶಬ್ದಾಯಮಾನವಾಗಿ ಮಾಡಲ್ಪಟ್ಟ ವೇದವನ್ನು ಬಲಗಾಲಲ್ಲಿ ಕಡಗವನ್ನಾಗಿ ಮಾಡಿಕೊಂಡನು. ಪೃಥ್ವಿವ್ಯಾಧಿತತ್ವಗಳ ಪಂಗ್ತಿಯೆಂಬ ನಾಳವುಳ್ಳದ್ದಾಗಿಯೂ ಇರುವ ಆ ತ್ರಿಶೂಲವನ್ನು ಎಡಗೈಯಲ್ಲಿ ಹಿಡಿದುಕೊಂಡನು. ನಾದ, ಬಿಂದು, ಎಂಬ ಎರಡು ಮಣಿಗಳ ತಾಡನೆಯಿಂದ ವ್ಯಕ್ತವಾಗಿ ಧ್ವನಿಮಾಡುತ್ತಿರುವ ಪ್ರಣವವೆಂಬ ಡಮರುಗವನ್ನು ಬಲಗೈಯ್ಯಲ್ಲಿ ಧರಿಸಿದನು.

ಹೀಗೆ ಶಿವನು ಆಶ್ಚರ್ಯಕವಾದ ಭೈರವವೇಷವನ್ನು ಹಾಕಿಕೊಂಡು ಕಾಂಚೀಪಟ್ಟಣದ ಬೀದಿಗೆ ಪ್ರವೇಶಿಸಿ, ಒಂದು ವಿಘ್ನೇಶ್ವರನ ಗುಡಿಯಮುಂದೆ ಒಂದು ಮರದಡಿಯಲ್ಲಿ ಒಂದು ಕಂಬಳಿಯನ್ನು ಹಾಸಿ, ಅದರಮೇಲೆ ತನ್ನಮುಂದೆ ಡಮರುಗವನ್ನಿಟ್ಟು ಕುಳಿತುಕೊಂಡನು. ಆ ದಿವಸ ಶಿವನ ಅಪ್ಪಣೆಯಿಂದ ಯಾರೊಬ್ಬ ಜಂಗಮರೂ ಬಾರದೇಹೋದದ್ದರಿಂದ ಸಿರಿಯಾಳನು ದುಃಖಗೊಂಡು ಜಂಗಮರನ್ನು ಹುಡುಕಿಕೊಂಡು ಬೀದಿಯಲ್ಲಿ ಬರುತ್ತಾ, ಭೈರವವೇಷದ ಶಿವನನ್ನು ನೋಡಿ, ಬಾಯಾರಿಕೆಯಿಂದ ಪೀಡಿಸಲ್ಪಟ್ಟ ಪ್ರಾಣಿಯು ಅಮೃತಸರೋವರವನ್ನು ನೋಡಿದಂತೆ ಮನಸ್ಸಿನಲ್ಲಿ ಬಹಳ ಸಂತೋಷಪಟ್ಟು, ಬಹಳ ಭಕ್ತಿಯಿಂದ ಆತನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಎದ್ದು-ನನ್ನಮನೆಗೆ ಅತಿಥ್ಯಕ್ಕೆ ದಯಮಾಡಿಸಬೇಕೆಂದು ಪ್ರಾರ್ಥಿಸಲು, ಆ ಭೈರವನು ಇತರರಿಗೆ ಮನಸ್ಸಿನಿಂದಾದರೂ ಆಲೋಚಿಸುವುದಕ್ಕೆ ಅಶಕ್ಯವಾದ ತನ್ನ ಭೋಜನ ನಿಯಮವನ್ನು ಹೇಳಿದನು. ಏನಂದರೆ,—

ಎಲೈ ಭಕ್ತನೇ ಕೇಳು. ನಮಗೆ ಆರುತಿಂಗಳಿಗೆ ಒಂದಾವರ್ತಿ ಭೋಜನವು. ಮಧ್ಯಾಹ್ನವಾದಮೇಲೆ ಅದೂ ಇಲ್ಲ. ಇದಲ್ಲದೆ ಮನೋಹರವಾದ ಸೌಂದರ್ಯದಿಂದ ವ್ಯಾಪಿಸಲ್ಪಟ್ಟ ಆಕಾರವುಳ್ಳವನಾಗಿಯೂ, ನಿಷ್ಕಪಟವಾದ ಸೌಜನ್ಯವುಳ್ಳವನಾಗಿಯೂ, ಕುಲವೃದ್ಧಿಗೆ ಕಾರಣಭೂತನಾಗಿಯೂ ಇರುವ ಐದುವರ್ಷದ ಮಗನನ್ನು ತಂದೆತಾಯಿಗಳೇ ಪುತ್ರಪ್ರೇಮವಿಲ್ಲದೆ ಕೊಂದು ಅವನ ದೇಹದಮಾಂಸವನ್ನು ಬೇಯಿಸಿ ಭೋಜನವಂ ಮಾಡಿಸುವದಾದರೆ ಆಗಬಹುದು. ಈ ಮಾತನ್ನು ಸಿರಿಯಾಳ್ವನು ಕೇಳಿ, ಮನೆಗೆಹೋಗಿ, ಭೈರವನ ಭೋಜನ ನಿಯಮದ ಸಂಗತಿಯನ್ನು ಹೆಂಡತಿಗೆ ತಿಳಿಸಿ, ಹೇಳಿದ್ದೇನಂದರೆ;—ನಾನು ಪೂರ್ವ ಸಂಪಾದಿಸಿರುವ ದ್ರವ್ಯವನ್ನು ಕೊಡು, ಎಲ್ಲಿಯಾದರೂ ಒಬ್ಬ ಹುಡುಗನನ್ನು ಕ್ರಯಕ್ಕೆ ತೆಗೆದು

ಕೊಂಡು ತಂದು ಆ ಭೈರವಮುನಿಯ ಭೋಜನನಿಯಮವನ್ನು ನೆರವೇರಿಸುತ್ತೇನೆ ಎನಲು, ಆತನ ಪತ್ನಿಯಾದ ಶ್ವೇತವನನಾಯಕೆಯೆಂಬ ಪರ್ಯಾಯನಾಮವುಳ್ಳ ಚಂಗಳೆಯು ಕೇಳಿ, ಎಲೈ ಪತಿಯೇ ನಿನಗೇನು ಭ್ರಾಂತಿಹಿಡಿಯಿತೇ? ಭೂಮಿಯಲ್ಲಿ ಯಾವ ತಂದೆತಾಯಿಗಳು ಹಣಕ್ಕಾಗಿ ಮಗನನ್ನು ಕೊಡುವರು? ಇದಲ್ಲದೆ ಹ್ಯಾಗೆತಾನೇ ತಮ್ಮ ಮಕ್ಕಳನ್ನು ಕಯ್ಯಾರ ಕೊಲ್ಲುವುದಕ್ಕೆ ಉದ್ಯುಕ್ತರಾದಾರು ಮನೋಜ್ಞವಾಗಿರುವ ತೋಟದಲ್ಲಿ ಬಿಟ್ಟಿರುವ ಯೋಗ್ಯವಾದ ತನ್ನ ಹಣ್ಣನ್ನು ಬಿಟ್ಟು, ಯಾವ ವಿವೇಕಿಯು ತಾನೇ ಇತರರ ತೋಟದಲ್ಲಿ ಬಿಟ್ಟಿರುವ ಹಣ್ಣಿನಲ್ಲಿ ಇಚ್ಛೆಯನ್ನು ಇಟ್ಟಾನು? ಆದಕಾರಣ, ಪಾಠಶಾಲೆಯಿಂದ ಶೀಘ್ರವಾಗಿ ನಮ್ಮ ಮಗನಾದ ಚೀಲಾಳನನ್ನು ಕರೆದುಕೊಂಡುಬಾ. ನೀನು ದೇಹವನ್ನೂ, ಮಕ್ಕಳನ್ನೂ ಹೆಂಡತಿಯನ್ನೂ ಶಿವನಿಗೆ ಸಮರ್ಪಿಸಿದ್ದೀಯೇ ಎಂದಳು. ಸಿರಿಯಾಳ್ವನು ಚಂಗಳೆ ಹೇಳಿದಮಾತುಗಳೆಂಬ ಅಮೃತದಮಳೆಯಿಂದ ತನ್ನ ಬಯಕೆಯೆಂಬ ವೃಕ್ಷವು ಫಲಿಸಿದಂತೆ ತಿಳಿದು, ಚೀಲಾಳನು ಓದುವವಿದ್ಯಾಶಾಲೆಗೆ ಹೋಗಿ, ಮೋಕ್ಷನೆಂಬ ಕೋಟೆಯ ಮಾರ್ಗವನ್ನು ತೋರಿಸುವದರಲ್ಲಿ ಉಪದೇಶಕನಾಗಿಯೂ, ವಂಶಕ್ಕೆ ಅಲಂಕಾರವಾಗಿಯೂ ಇರುವ ತನ್ನ ಮಗನನ್ನು ಬಹುಸಂತೋಷದಿಂದ ಕರೆತಂದನು. ಬಂದಂಥಾ ಆಚೀಲಾಳನಿಗೆ ಸ್ನಾನವನ್ನು ಮಾಡಿಸಿ, ಭಸ್ಮತ್ರಿಪುಂಡ್ರವನ್ನು ಧರಿಸಿ, ಶಿವನಿಗೆ ಪ್ರೀತಿಪಾತ್ರನಾದ ಆ ಮಗನನ್ನು ತಾಯಿಯು ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳಲು, ತಂದೆಯು ಶಸ್ತ್ರದಿಂದ ಶಿವನಿಗೋಸ್ಕರ ಎಂದು ಉಚ್ಚರಿಸುತ್ತಾ, ಆ ಪುತ್ರನತಲೆಯನ್ನು ಆತನ ಜನನಕಷ್ಟಗಳೊಡನೆ ಕತ್ತರಿಸಿ, ಆ ತಲೆ ಕೂದಲುಗಳಿಂದ ನಿಂದಿತವಾದದ್ದೆಂದುಬಿಡಲು; ಚಂದನಿಕೆಯೆಂಬ ದಾಸಿಯು ಇದನ್ನು ಆ ಕಾಪಾಲಿಕನು ಕೇಳಿ ಯೇನೆಂದು ತಿಳಿದು, ಶೀಘ್ರವಾಗಿ ಬೇಯಿಸಿ ಬೇರೆ ಮಡಗಿದಳು. ಚಂಗಳೆಯು ಅನೇಕ ರಸಗಳಸುವಾಸನೆಯು ಹೊರಡುವಂತೆ ಮಿಕ್ಕಾದ ಅನ್ನವನ್ನು ಪಾಕಮಾಡಿದಳು. ಪಾರ್ವತಿಯ ಅಡಿಗೆಯನ್ನೂ, ನಳಪಾಕ ಭೀಮಪಾಕಗಳನ್ನೂ ಅತಿಕ್ರಮಿಸಿದ ಶಾಕಪಾಕಗಳನ್ನೆಲ್ಲಾ ನೋಡಿ, ಸಿರಿಯಾಳ್ವನು ಸಂತೋಷಿಸಿದನು. ಆಗ ಚಂಗಳೆಯು, ಎಲೈ ಪ್ರಿಯನೆ ಮಧ್ಯಾಹ್ನವಾಗುತ್ತಾಬಂತು. ಆದ್ದರಿಂದ ಆಭೈರವಮುನಿಯನ್ನು ಕರತರಬೇಕೆಂದು ಹೇಳಲು, ಸಿರಿಯಾಳ್ವನಿಂದ ಕರತರಲ್ಪಟ್ಟ ಆ ಭೈರವನನು ಬಂದು ಮನೆಯ ಬಾಗಲಮುಂದೆ ನಿಂತು, ಪ್ರಳಯಕಾಲದ ಮೇಗಗಳಲ್ಲಿ ಪರಸ್ಪರ ಸಂಘಟ್ಟನೆಯಿಂದುಂಟಾದ ಧ್ವನಿ

ಯಹಾಗೆ ಕೊಬ್ಬಿದ ಡಮರುಗಧ್ವನಿಯನ್ನು ಮಾಡಿದನು. ಆಶಬ್ದವನ್ನು ಕೇಳಿದ ಕೂಡಲೇ ಚಂಗಳೆಯು ಹೊರಗೆಬಂದು, ನಿರ್ಮಲವಾದ ಮುಖಕಮಲವುಳ್ಳವಳಾಗಿ ಭೈರವನಿಗೆ ನಮಸ್ಕರಿಸಿದಳು. ಭೈರವನು ಎಲೈ ಮಗಳೇ! ಪುತ್ರವತಿಯಾಗೆಂದು ಆಕೆಯನ್ನು ಆಶೀರ್ವದಿಸಿದನು. ಆ ಮಾತಿಗೆ ದಂಪತಿಗಳು ಒಬ್ಬರೊಬ್ಬರ ಮುಖವನ್ನು ನೋಡಿಕೊಂಡು; ಸಕ್ಕು ಮೇಲ್ಕಟ್ಟು ಮೊದಲಾದವುಗಳಿಂದ ಅಲಂಕರಿಸಲ್ಪಟ್ಟ ಮನೆಯೊಳಕ್ಕೆ ಕರೆದುಕೊಂಡುಹೊಗಿ, ಪಾದಾರ್ಚನೆಯನ್ನು ಮಾಡಿ; ಪೀಠದಮೇಲೆ ಕುಳ್ಳಿರಿಸಿದರು. ಚಂಗಳೆಯು ಆತನಮುಂದೆ, ಅಕ್ಕಿಯಹಿಟ್ಟಿನಿಂದ ಅಷ್ಟದಳಕಮಲವನ್ನು ಬರೆದು, ಅದರಮೇಲೆ ಕಂಚಿನಿಂದಮಾಡಲ್ಪಟ್ಟ ಭೋಜನಪಾತ್ರೆಯನ್ನಿರಿಸಿ ಕೋಮಲವಾಗಿಯೂ, ರುಚಿಕರವಾಗಿಯೂ, ಲಘುವಾಗಿಯೂ, ಜಿಡ್ಡುಳ್ಳದ್ದಾಗಿಯೂ ತುಪ್ಪವನ್ನು ಹಿಡಿದಿರುವದದಾಗಿಯೂ ನಿರ್ಮಲವಾದ ಕಾಂತಿಯುಳ್ಳದ್ದಾಗಿಯೂ ಶಾಖವಾಗಿಯೂ ಇರುವ ನೆಲ್ಲಕ್ಕಿಯ ಅನ್ನವನ್ನು ಎರಡುಸೌಟಿನಷ್ಟು ಬಡಿಸಿ, ತುಪ್ಪವನ್ನುಹುಯ್ದು ಅದರಮೇಲೆ ಅತಿಥವಳವಾದ ಅನ್ನವನ್ನು ಬಡಿಸಿ, ಅನಂತರದಲ್ಲಿ ಮಗನ ದೇಹದಿಂದ ತೆಗೆದು ಪಾಕವಂ ಮಾಡಿದ್ದ ಮಾಂಸವನ್ನು ಸಮರ್ಪಿಸಿದಳು. ಭೈರವನು ಅದರಲ್ಲಿ ಶಿರೋಮಾಂಸವನ್ನು ಕಾಣದೆ, ಕೈಯನ್ನು ಎತ್ತಿ, ಸಿರಿಯೊಳ್ವನ ಮುಖದಲ್ಲಿ ದೃಷ್ಟಿಯನ್ನಿಟ್ಟು ಅಯ್ಯಾ ಭಕ್ತನೇ ಸಕಲ ಅವಯವಂಗಳೊಳಗೂ ಶಿರಸ್ಸೇ ಮುಖ್ಯವಾದದ್ದೆಂದು ಶಾಸ್ತ್ರವಿರುವುದು. ಆ ಶಿರೋಮಾಂಸವು ಇದರಲ್ಲಿಲ್ಲ. ಆದ್ದರಿಂದ ಇದನ್ನು ನಾನು ಸ್ವೀಕರಿಸುವದಿಲ್ಲವೆಂದು ಹೇಳವುದಕ್ಕೆ ಉಪಕ್ರಮಿಸಿದನು. ಆಗ ಚಂಗಳೆಯು ಭಯದಿಂದ ನಡಗುವ ತನ್ನ ಹಸ್ತಕಮಲವನ್ನು ಕೊಡಹಿಕೊಂಡವಳಾಗಿ, ತನಗೆ ದೈವವು ಪ್ರತಿಕೂಲವಾಯಿತೆಂದು ಆಲೋಚಿಸಿಕೊಂಡು, ದುಃಖದಿಂದ ಹೃದಯದಲ್ಲಿ ಸುಡಲ್ಪಟ್ಟಳು. ಬಳಿಕ ಚಂದನಿಕೆಯು ತಾನು ಸಿದ್ಧಮಾಡಿ ಪ್ರತ್ಯೇಕವಾಗಿ ಇಟ್ಟಿದ್ದ ಶಿರೋಮಾಂಸವನ್ನು ತಂದುಕೊಡಲು, ಚಂಗಳೆಯು, ಸಂತುಷ್ಟ ಹೃದಯಳಾಗಿ ಭೈರವನಬಟ್ಟಲಲ್ಲಿ ಬಡಿಸಿದಳು. ಆಗ ಭೈರವನು,— ಎಲೈ ಭಕ್ತನೇ ಗೃಹಸ್ಥನಾದವನು ಅತಿಥಿಯ ಎಡಗಡೆಯಲ್ಲಿ ಊಟಕ್ಕೆ ಕೂತುಕೊಳ್ಳಬೇಕು. ಎಂದು ಹೇಳಲು, ಹೆಂಡತಿಯ ಅನುಮತಿಯಿಂದ ಹಾಗೇಆಗಲಿಯೆಂದು ಕೂತುಕೊಂಡನು. ಆಗ ಚಂಗಳೆಯು ಆತನಮುಂದೆ ಶುದ್ಧೀಕರಿಸಲ್ಪಟ್ಟ ಭೂಮಿಯಮೇಲೆ, ಬಟ್ಟಲನ್ನು ಮಡಗಿ. ಅನ್ನವನ್ನು ಮಗನ ಮಾಂಸನ್ನು ವಿನಯದಿಂದಬಡಿಸಿದಳು, ಬಳಿಕ ಭೈರ

ವಜಂಗಮನು,— ಎಲೈ ಭಕ್ತನೇ ಗೃಹಸ್ತನಾದವನು, ತನ್ನ ಹೆಣ್ಣುಮಕ್ಕಳು ಗಂಡುಮಕ್ಕಳು ಸಹಿತವಾಗಿ ಭೋಜನವನ್ನುಮಾಡಬೇಕಲ್ಲವೇ? ಎಲಾ ಮಗಳೇ ನೀನುಮಕ್ಕಳನ್ನು ಕರೆದುಕೊಂಡುಬಾ, ಇದೇ ಅಲ್ಲವೆ ಸಂಸಾರಿಗಳಿಗೆ ಸುಖವು, ಅಥವಾ ನಿನಗೆ ಪರಲೋಕಸಹಾಯಕನಾದ ಪುತ್ರನಿಲ್ಲವೋ? ಪುತ್ರರಿಲ್ಲದ ಗೃಹಸ್ಥನಿಗೆ ಪರಲೋಕವಿಲ್ಲವೆಂದು ವೇದವಚನವುಂಟು. ಪರಲೋಕಕ್ಕೆ ದೂರರಾದವರ ಕೈಯಲ್ಲಿ ಅನ್ನವನ್ನು ಸ್ವೀಕರಿಸಕೂಡದು, ಎಂದು ಹೇಳಿ, ಬಟ್ಟಲಿಂದ ಕೈಯ್ಯನ್ನು ತೆಗೆದು, ಅನ್ನವನ್ನುಬಿಟ್ಟು ಸುಮ್ಮನೆ ಕುಳಿತುಕೊಂಡನು.

ಸಿರಿಯಾಳ್ವನು ಸ್ವಾಮಿ ಆರೋಗಣೆಯಂಮಾಡಿರಿ; ನನಗೆ ಮಗನುಂಟು. ಅವನು ವಿದ್ಯಾಶಾಲೆಗೆ ಹೋಗಿದ್ದಾನೆ. ಎಂದು ಪ್ರಾರ್ಥಿಸಲು, ಭೈರವನು ಚಂಗಳೆಯನ್ನು ಕುರಿತು,–ಅಮ್ಮಾ ಮಗಳೇ ನೀನು ಪುತ್ರವತಿಯಾಗಿದ್ದರೆ, ಪ್ರೀತಿಯಿಂದ ಕೂಡಿ ಸಂತೋಷಗೊಂಡು ಮುಖಕಮಲವುಳ್ಳವಳಾಗಿ ನಿನ್ನ ಗಂಡನೊಡನೆ ಹೊರಗೆಹೋಗಿ ಮಗನನ್ನು ಕರೆ ಎಂದು ಹೇಳಲು, ಚಂಗಳೆಯುಬಾಗಿಲಬಳಿಗೆ ಹೋಗಿ, ಎಲೈ ಮಗನೇ ಭೈರವನು ನಿನ್ನನ್ನು ನೋಡಬೇಕೆಂದು ಅಪೇಕ್ಷಿಸುತ್ತಾನೆ. ಬೇಗಬಾ ತಾಯಿತಂದೆಗಳ ಜನ್ಮಾಂತರದಲ್ಲಿಮಾಡಿದ ಕರ್ಮಗಳನ್ನು ನಿರ್ಮೂಲವಮಾಡುವುದರಲ್ಲಿ ಸಮರ್ಥನಾದ ಮಗನೇ, ನಿನ್ನತಂದೆಯು ಪುತ್ರವಂತರೊಳಗೆ ಶ್ರೇಷ್ಠನಾಗುತ್ತಾನೆ. ಎಂದುಕರೆದಳು. ಹೀಗೆ ತಾಯಿಯಿಂದ ಕರೆಯಲ್ಪಟ್ಟ ಚೀಲಾಳನು ಮುಂಚೆಗಿಂತಲೂ ವಿಶೇಷವಾದ ಸೌಂದರ್ಯವುಳ್ಳವನಾಗಿಯೂ, ತಾಯಿಯಮುಖವನ್ನು ನೋಡುವದರಲ್ಲಿ ಲವಲವಿಕೆಯಿಂದ ವಿಕಸಿತವಾದ ನೇತ್ರವುಳ್ಳವನಾಗಿಯೂ ಜಲುವಿನಿಂದ ಅಲಂಕರಿಸಲ್ಪಟ್ಟವನಾಗಿಯೂ, ಶುಭ್ರವಾದ ಭಸ್ಮತ್ರಿಪುಂಡ್ರದಿಂದ ಶೋಭಿಸಲ್ಪಟ್ಟ ಹಣೆಯುಳ್ಳವನಾಗಿಯೂ ಶರತ್ಕಾಲದ ಚಂದ್ರಮಂಡಲದಂತೆ ಮನೋಹರವಾದ ಮುಖವುಳ್ಳವನಾಗಿಯೂ, ಆರಾರು ರುದ್ರಾಕ್ಷಿಗಳನ್ನು ಸೇರಿಸಿ ಕಟ್ಟಿದ ಚಿನ್ನದ ಕುಂಡಲಗಳಿಂದ ಶೋಭಿಸುತ್ತಿರುವ ಕರ್ಣಗಳುಳ್ಳವನಾಗಿಯೂ, ಕಂಠದಲ್ಲಿ ರುದ್ರಾಕ್ಷಿಮಾಲಿಕೆಯನ್ನು ಧರಿಸಿದವನಾಗಿಯೂ, ಕಯ್ಯಲ್ಲಿ ಪುಸ್ತಕವನ್ನು ಹಿಡಿದುಕೊಂಡಿರುವನಾಗಿಯೂ ತೋರುತ್ತಾ ಜೊತೆಯಮಕ್ಕಳೊಡನೆ ಕೂಡಿಬಂದನು.

ಆಗ ಚಂಗಳೆಯು ಬಂದ ಪುತ್ರನನ್ನು ಆಲಿಂಗಿಸಿ, ನಿರರ್ಗಳವಾದ ಸಕಲ ಸಂಪತ್ತುಗಳನುಂಟುಮಾಡುವ ಭೈರವನ ಆಶೀರ್ವಾದಗಳನ್ನು ನೆನಸಿದಳು. ಭೈರ

ವೇಶ್ವರನು ಪುತ್ರನನ್ನು ಪಡೆದದಂಪತಿಗಳ ದೃಢಭಕ್ತಿಯನ್ನು ಪ್ರಕಾಶಪಡಿಸಬೇಕೆಂಬ ಇಚ್ಛೆಯುಳ್ಳವನಾಗಿ ಸ್ವಲ್ಪಹೊತ್ತು ಮರೆಯಾದಾನು—ಆ ದಂಪತಿಗಳು ಆ ಮಗನನ್ನು ಕರೆದುಕೊಂಡು ಸಂತೋಷದಿಂದ ಮನೆಯ ಒಳಗೆ ಬಂದು ಭೈರವನನ್ನು ಕಾಣದೆ, ದುಃಖಿತರಾಗಿ ಮಗನನ್ನು ನೆಲದಲ್ಲಿಬಿಟ್ಟು ಎಲೈ ಭೈರವನೇ ನಿನ್ನಿಂದ ಪ್ರಾರ್ಥಿಸಲ್ಪಟ್ಟ ಭೃತ್ಯನು ಬಂದನು. ನೀನುನಮಗೆ ಕಾಣಿಸಿಕೋ, ಎಲೈ ಪಾಪರಹಿತನೇ ಇಗೋ ಬಾಲಕನು ಬಂದಿದ್ದಾನೆ. ಇವನನ್ನು ನೋಡಿ, ಭೋಜನ ಮಾಡುವದುಯುಕ್ತವಲ್ಲವೇ ? ನನ್ನ ಪ್ರಾಣಬಂಧುವಾದ ಎಲೈ ಭೈರವಸ್ವಾಮಿಯೇ ನೀನು ಎಲ್ಲಿದ್ಧೀಯೆ ? ಎಲ್ಲಿಗೆಹೋದೆ ? ನಿನ್ನ ದರ್ಶನವನ್ನು ಕೊಡು. ನೀನು ನಮ್ಮ ಕಣ್ಣಿಗೆ ಗೋಚರನಾಗದಿದ್ದರೆ ಬದುಕಿದಮಗನಿಂದಾಗಲಿ, ಈ ನಮ್ಮ ಪ್ರಾಣದಿಂದಾಗಲಿ ಏನು ಪ್ರಯೋಜನ ? ಮತ್ತು ನಮಗೆ ಪರಲೋಕವು ಕಾಣುವದಿಲ್ಲ. ಈಪ್ರಕಾರವಾಗಿ ಮೃತನಾಗಿದ್ದ ಪುತ್ರನನ್ನು ಪಡೆಯುವದರಿಂದುಂಟಾದ ಅಪರಿಮಿತವಾದ ಸಂತೋಷವುಳ್ಳವನಾಗಿದ್ದಾಗ್ಯೂ, ಭೈರವರೂಪನಾದ ಈಶ್ವರನನ್ನು ಕಾಣದೆಇದ್ದದರಿಂದ ದುಃಖಪಡುತ್ತಿರುವ ಆ ದಂಪತಿಗಳಮೇಲೆ ಭ್ರಮರಧ್ವನಿಇಂದಶಬ್ದಾಯಮಾನವಾಗಿ ಮಾಡಲ್ಪಟ್ಟ ದಿಕ್ಕುಗಳುಳ್ಳ ಪುಷ್ಪವೃಷ್ಟಿಯು ಸ್ವರ್ಗದಿಂದ ಸುರಿಯಿತು. ಅನಂತರದಲ್ಲಿ ಭಕ್ತಿಯನ್ನು ಪ್ರಸಿದ್ಧಿಗೊಳಿಸುವ ಪಾರ್ವತೀಕಾಂತನು ಪ್ರಮಥರಿಂದಬಳಸಲ್ಪಟ್ಟವನಾಗಿ, ವೃಷಭೇಶ್ವರನ ಮೇಲೆಕುಳಿತು ಪ್ರತ್ಯಕ್ಷನಾಗಿ ಶಿವಭಕ್ತಪ್ರಿಯನಾದ ಆ ಸಿರಿಯಾಳ್ವನನ್ನು ಆತನ ಹೆಂಡತಿಮಕ್ಕಳೊಡನೆಯೂ, ಆ ಪಟ್ಟಣದ ಜನಗಳೊಡನೆಯೂ, ಕೈಲಾಸಕ್ಕೆ ಕರೆದುಕೊಂಡುಹೋದನು.

ಬಸವೇಶವಿಜಯದಲ್ಲಿ ಹನ್ನೆರಡನೇ ಅಧ್ಯಾಯವು
ಸಂಪೂರ್ಣವು.

---

## ಹದಿಮೂರನೇ ಅಧ್ಯಾಯವು.

### ನಿಂಬವ್ವೆಯ ಕಥೆ.

ಸಿರಿಯಾಳ್ವನು ಕರುಣಾಸಮುದ್ರನಾದ ಪರಶಿವನ ಪ್ರತಿ ಬಾಗಿಲುಗಳಲ್ಲಿಯೂ ಕಟ್ಟಲ್ಪಟ್ಟ ನಂದಿಧ್ವಜಗಳಿಂದ ಮನೋಹರವಾದ ಪಟ್ಟಣವನ್ನು ಸೇರಿ

ದನು. ತನ್ನ ಮಗನು ಷಣ್ಮುಖನಿಗೆ ಮಿತ್ರನಾಗಿಯೂ, ತನ್ನ ಹೆಂಡತಿಯು ಪಾರ್ವತಿಗೆ ಸಖಿಯಾಗಿಯೂ, ಇರುತ್ತಿರಲು ತಾನು ಶಿವನ ಸೇವಕನಾಗಿ ಕೈಲಾಸದಲ್ಲಿ ವಾಸಿಸುತ್ತಿದ್ದನು. ಹೀಗಿರುವಲ್ಲಿ ಸಕಲರೂ ಶಿವನಿಗೆ ಪತ್ರಪುಷ್ಪಗಳನ್ನು ಸಮರ್ಪಿಸಿ ಶಿವನ ಕೈವಲ್ಯವನ್ನು ಪಡೆದರು. ನಾನಾದರೋ ಮಗನನ್ನೇ ಸಮರ್ಪಿಸಿ ಆತನ ಕಿಂಕರನಾದೆನು. ಎಂದು ಅಹಂಕಾರದಿಂದ ತುಂಬಲ್ಪಟ್ಟವನಾಗಿ ಶಾಂತರಾದ ಪ್ರಮಥರುಗಳಲ್ಲಿ ಸಂಚರಿಸುತ್ತಾ ಸಕಲ ಭಕ್ತರೊಳಗೂ ತನ್ನನ್ನೇ ಶ್ರೇಷ್ಠನನ್ನಾಗಿ ಭಾವಿಸಿಕೊಂಡನು. ಶಿವನು ಅವನ ಅಹಂಕಾರವನ್ನು ಪರಿಹರಿಸುವುದರಲ್ಲಿ ಇಚ್ಛೆಯುಳ್ಳನಾಗಿ; ಆ ಸಿರಿಯಾಳ್ವನನ್ನು ಸಂಗಡ ಕರೆದುಕೊಂಡು ಭೂಮಿಗೆ ಬಂದನು. ನಿಂಬನಾಥಪುರದಲ್ಲಿ ವಾಸಿಸುವ ನಿಂಬವ್ವೆಯ ಮನೆಗೈದಿ ಆಕೆಯನ್ನು ಕಾಣದವನಂತೆ, ಆಕೆ ಎಲ್ಲಿಹೋದಳೆಂದು ನೆರೆಹೊರೆಯವರನ್ನು ಕೇಳಿದನು. ಅವರು ಭಕ್ತರ ಪೂಜೆಗೆ ಅರ್ಘ್ಯಜಲವನ್ನು ತರುವದಕ್ಕೆ ಹೋಗಿದ್ದಾಳೆ ಆಕೆಯ ಮಗನು ಮಂದೆಯನ್ನು ಕಾಯುವದಕ್ಕೆ ಹೋಗಿದ್ದಾನೆ. ಅವಳಿಗೆ ಅದೇ ಜೀವನವು. ಆ ಕೆಲಸದಿಂದ ದೊರೆಯುವ ಹಣದಿಂದ ಶಿವಭಕ್ತರಿಗೆ ತೃಪ್ತಿಯನ್ನು ಮಾಡುತ್ತಿದಾಳೆ. ಆಕೆಯು ನಿಮ್ಮನ್ನು ನೋಡಿದರೆ ಶಿವನೆಂದೇ ತಿಳಿಯುತ್ತಾಳೆ. ತನ್ನ ಕೆಲಸವನ್ನು ಆಗಮಾಡಿಕೊಂಡು ಬರುವಳು. ಒಂದು ಕ್ಷಣಕಾಲ ಅಂಗಳದಲ್ಲಿ ನಿಂತುಕೊಂಡಿರಿ, ಎದು ಹೇಳಲು, ಶಿವನು ಹಾಗೆ ಮಾಡಿದನು. ಅಷ್ಟರೊಳಗೆ ನಿಂಬವ್ವೆಯು ಬಂದು ನೋಡಿ, ಸಾಷ್ಟಾಂಗ ನಮಸ್ಕಾರವಂಮಾಡಿ, ಪಾದಾರ್ಚನೆಯ್ಗಂ ಗೈದು, ವಿಭೂತಿಯನ್ನು ಕೊಟ್ಟು, ಅಡಿಗೆಯನ್ನು ಮಾಡುವುದಕ್ಕೆ ಉಪಕ್ರಮಿಸಿ ಭಕ್ಷ್ಯಭೋಜ್ಯ ಮೊದಲಾದ ಐದುವಿಧವಾದ ಆಹಾರವನ್ನು ಮಾಡಿ, ಶುಚಿಯಾದ ಸ್ಥಳದಲ್ಲಿಟ್ಟು, ಕೊಡವನ್ನು ತಗೆದುಕೊಂಡು, ಅರ್ಘ್ಯೋದಕವನ್ನು ತರುವುದಕ್ಕೋಸ್ಕರ ಕಲ್ಯಾಣಿಗೆ ಹೋದಳು. ಅಷ್ಟರೊಳಗೆ ಶಿವನು ಆಕೆಯ ಮಗನಬಳಿಗೆ ಹೋಗಿ;—ನಿಮ್ಮ ತಾಯಿಯು ಈ ದಿವಸ ಕಜ್ಜಾಯವನ್ನೂ ತುಪ್ಪದಿಂದ ಕೂಡಿದ ಪಾಯಸವನ್ನೂ ಮಾಡಿದ್ದಾಳೆ, ಈಗಹೋಗಿ ತಿಂದುಕೊಂಡುಬಾ ಎಂದು ಪ್ರೇರಿಸಲು, ಆ ಹುಡುಗನು ಹಸಿದಿದ್ದದರಿಂದ, ಜಾಗ್ರತೆಯಾಗಿ ಮನೆಗೆಬಂದು, ತಾಯಿ ಇಲ್ಲದ್ದರಿಂದ ಒಂದು ಕಜ್ಜಾಯವನ್ನು ಪಾತ್ರೆಯಿಂದ ಎತ್ತಿ ತಿನ್ನುವುದಕ್ಕೆ ಉಪಕ್ರಮಿಸಿದನು. ಇಷ್ಟರಲ್ಲಿ ತಾಯಿಯು ಬಂದು ಮನೆಯಬಾಗಿಲು ತೆರೆದಿರುವದನ್ನು ಕಂಡು, ನಾಯಿನುಗ್ಗಿದೆಯೆಂದು

ತಿಳಿದು, ಒಂದು ಒನಕೆಯನ್ನು ತೆಗೆದುಕೊಂಡು ಒಳಗೆ ಪ್ರವೇಶಿಸಿ, ನಾಯಿಯಂತೆ ತಿನ್ನುತ್ತಿರುವ ಮಗನನ್ನು ಹೊಡೆದಳು. ಆಗ ಆ ಹುಡುಗನು ಒನಕೆಯ ಪೆಟ್ಟಿನಿಂದ ಭೂಮಿಗೆಬಿದ್ದು, ಪ್ರಾಣವನ್ನು ಬಿಟ್ಟನು. ನಿಂಬವ್ವೆಯು ಅವನ ಕಾಲನ್ನು ಹಿಡಿದು ಎಳೆದುಕೊಂಡು ಹೋಗಿ, ಒಂದು ಹಳ್ಳದಲ್ಲಿಹಾಕಿ ಹುಲ್ಲಿನಿಂದ ಮುಚ್ಚಿ, ಬಂದು ಭಸ್ಮಸ್ನಾನವನ್ನುಮಾಡಿಕೊಂಡು ಉಚಿಷ್ಟವನ್ನೆಲ್ಲಾ ಹೊರಗೆ ಬಿಸಾಡಿ, ಹೊಸಭಾಂಡಗಳಲ್ಲಿ ಮೊದಲಿನಂತೆ ಎಲ್ಲಾ ಅಡಿಗೆಯನ್ನೂ ಸಿದ್ಧಮಾಡಿ, ತಪಸ್ವಿಯನ್ನು ಕರೆದು; ಶಿಷ್ಯಸಹಿತನಾಗಿ ಬಂದು ಆತನನ್ನು ಒಂದು ಪೀಠದಲ್ಲಿ ಕುಳ್ಳಿರಿಸಿ, ವಿಧ್ಯುಕ್ತಪ್ರಕಾರದಿಂದ ಪಾದಾರ್ಚನೆ ಮೊದಲ್ಗೊಂಡು ಪೂಜೆಯಂ ಮಾಡಿ, ಪೂರ್ವದಲ್ಲಿ ಸಾರಿಸಿ ರಂಗವಲ್ಲಿಯನ್ನು ಬಿಟ್ಟು ಅಲಂಕಸಿದ್ದ ಸ್ಥಳದಲ್ಲಿ ಅಖಂಡವಾದ ಬಾಳೆಯೆಲೆಯನ್ನು ಹಾಸಿ, ಅದರಮೇಲೆ ಅನೇಕ ಶಾಕಪಾಕಗಳಿಂದ ಕೂಡಿದ್ದಾಗಿಯೂ, ಬಿಸಿಯಾಗಿಯೂ, ಇರುವ ಅನ್ನವನ್ನು ಬಡಿಸಿ, ನಾಲಿಗೆಗೆ ಬಹಳ ರುಚಿಕರವಾದ ತುಪ್ಪವನ್ನು ಬಿಟ್ಟು, ಶಿವನೇಕೊಡುವವನು. ಶಿವನೇ ತೆಗೆದುಕೊಳ್ಳುವವನು. ಈ ಸ್ಥಾವರ ಜಂಗಮಾತ್ಮಕವಾದ ಲೋಕವೆಲ್ಲಾ ಶಿವನೇ. ಎಂದುಹೇಳಿ, ಪುಷ್ಪಾಂಜಲಿಯನ್ನುಮಾಡಿ ನಮಸ್ಕರಿಸಿ ಲಿಂಗಾರ್ಪಣವಂಮಾಡಬೇಕೆಂದು ಹೇಳಿದಳು.

ಶಿವನುಕೇಳಿ ನಿನ್ನ ಮಗನನ್ನು ಕರೆ. ಆತನಿಲ್ಲದಿದ್ದರೆ ಊಟವಂಮಾಡುವದಿಲ್ಲ. ಎಂದುಹೇಳಿ ಕೈಯನ್ನು ಇಟ್ಟುಕೊಂಡು ಸುಮ್ಮನೆ ಕುಳಿತುಕೊಂಡನು. ಅದನ್ನು ಕೇಳಿ ಕಣ್ಣುಗಳನ್ನು ಕೆರಳಿಸಿಕೊಂಡು ಕಠಿನವಾಗಿ ಹೇಳಿದ್ದೇನಂದರೆ.—ಎಲೈಸ್ವಾಮಿಯೇ ನೀನೇಕೆ ಸಂಸಾರದಲ್ಲಿ ಬಹುಆಸೆಯುಳ್ಳವರಂತೆ ಮಾತನಾಡುತ್ತಿಯೆ. ತನ್ನ ಕಯ್ಯಾರ ಕೊಂದಮಗನನ್ನು ಯಾವನು ಕರೆಯುತ್ತಾನೆ. ನಾನೇನು ಸಿರಿಯಾಳ್ವನಂತೆ ಮಗನನ್ನು ಅಪೇಕ್ಷಿಸುವಳೋ? ಸಿರಿಯಾಳ್ವನ ಮನೆಯಲ್ಲಿ ಹಾಗೆಅನ್ನವನ್ನುಬಿಟ್ಟು ಹೋದೆಯೋ ಹಾಗೆ ಇಲ್ಲಿಯೂ ಬಿಟ್ಟುಹೊಗಬೇಕೆಂದು ಅಪೇಕ್ಷಿಸುತ್ತಿಯೋ? ಆದರೆ ಕೇಳು ಪೂರ್ವದಲ್ಲಿ ಅರ್ಜುನನ ತನ್ನ ಕಠಿನವಾದ ಬಿಲ್ಲಿನ ಪೆಟ್ಟುಗಳಿಂದ ನಿನ್ನನ್ನು ಸಂತೋಷ ಪಡಿಸಿದನು. ಸಾಂಖ್ಯ ತೊಂಡನ ಮೂರು ಕಲ್ಲುಗಳ ಏಟುಗಳಿಂದ ಸಂತೋಷ ಪಡಿಸಿದನು. ನಾನಾದರೊ ಒನಕೆಯಪೆಟ್ಟುಗಳಿಂದ ನಿನ್ನನು ಸಂತೋಷಪಡಿಸುತ್ತೇನೆ. ಈ ರೀತಿಯಾಗಿ ಹೇಳಿ, ಕಬ್ಬಿಣದ ಬಳೆಯನ್ನು ಹಾಕಿರುವ ಒಂದು ಉದ್ದವಾದ

ಒನಕೆಯನ್ನು ತೆಗೆದುಕೊಂಡಳು. ಆಗ ಶಿವನು ಕೂಡ ಆರೋಗಣೆಗೆ ಅನ್ನವನ್ನು ತೆಗದುಕೊಂಡನು. ಅನಂತರದಲ್ಲಿ ಆಕೆಯು ಒನಕೆಯನ್ನು ಬಿಟ್ಟು, ನೀರಿಂದಕಯ್ಯನ್ನು ತೊಳೆದುಕೊಂಡು, ಶಿವನಾಮಗಳನ್ನು ಹಾಡುತ್ತಾ ಆನಂದದಿಂದ ತುಂಬಲ್ಪಟ್ಟವಳಾಗಿ ಕುಣಿದಳು. ತಿರಿತಿರಿಗಿ ರುಚಿಕರಗಳಾಗಿಯೂ ಸುವಾಸನೆಯುಳ್ಳವುಗಳಾಗಿಯೂ ಇರುವ ಶಾಕಪಾಕಗಳನ್ನು ಬೇಡಬೇಡವೆಂದು ಎಷ್ಟುವಿಧವಾಗಿ ತಡೆದಾಗ್ಯೂ ಆವೇಶಬಂದವಳಂತೆ ಬಡಿಸಿದಳು. ಶಿವಾನಂದರಸವನ್ನಾಸ್ವಾದಿಸುವದರಿಂದ ಪರವಶಳಾಗಿ ಶಿವನಾಮಾಂಕಿತವಾದ ಪದಗಳನ್ನು ಅನುಲೋಪವಿಲೋಮವಾಗಿ ಹೇಳಿದಳು. ಸಿರಿಯಾಳ್ವನು ಹುಲ್ಲಿನಲ್ಲಿ ಮರೆಮಾಡಲ್ಪಟ್ಟವನಾಗಿಯೂ ಆಶಿವನಿಂದ ತೋರಿಸಲ್ಪಟ್ಟವನಾಗಿಯೂ, ಇದ್ದ ಆ ನಿಂಬಮ್ಮನ ಮೃತಪುತ್ರನನ್ನೂ ಮಗನಲ್ಲಿ ಸ್ವಲ್ಪವಾದರೂ ಅಭಿಮಾನವಿಲ್ಲದಿರುವ ಆಕೆಯನ್ನೂ ನೋಡಿ ಆಶ್ಚರ್ಯಪಟ್ಟವನಾಗಿ ಭೋಜನವಂಮಾಡಿ, ತಾಂಬೂಲವನ್ನ ತೆಗೆದುಕೊಂಡನು ಶಿವನಿಂದ ತೋರಿಸಲ್ಪಟ್ಟ ತ್ರಿಣೇತ್ರಸಹಿತವಾದ ನಿಜರೂಪದಲ್ಲೂ ಆತನಿಂದ ಕೊಡಲ್ಪಟ್ಟ ಲೋಕದಲ್ಲೂ ಪ್ರಾಣಸಹಿತನಾದ ಪುತ್ರನಲ್ಲೂ ಆಶೆಇಲ್ಲದ ಆ ನಿಂಬವ್ವೆಯು ಹೇಳಿದ್ದೇನಂದರೆ,—

ಎಲೈ ಸ್ವಾಮಿಯೆ ನೀನು ಮಾನಕಂಜರನ ಮಗಳಜಡೆಯನ್ನು ತೆಗೆದುಕೊಂಡು, ಆತನಿಗೆ ಮೋಕ್ಷವನ್ನು ಕೊಡಲಿಚ್ಛೈಸುವನಾಗಿ ಯಾವವೃಷಭನನ್ನು ಹತ್ತಿಕೊಂಡು ಆತನ ಮನೆಗೆ ಹೋಗಿದ್ಧೆ? ತಿರುನೀಲಕಂಠನನ್ನು ಅನುಗ್ರಹಿಸುವದಕ್ಕಾಗಿ ಅವನ ಮನೆಗೆ ಹೋಗುವಾಗ ನಿನ್ನ ಕೊರಳು ಯಾವಕರೆಯಿಂದ ಅಲಂಕರಿಸಲ್ಪಟ್ಟಿತು? ವಸ್ತ್ರವನ್ನು ತೆಗೆದುಕೊಂಡು, ಜೇಡರದಾಸಯ್ಯನಿಗೆ ಅಕ್ಷಯಸಿಧಿಯನ್ನು ಕೊಡಲಿಚ್ಛೈಸಿದವನಾಗಿ, ಹೋದಾಗ ಆಯುಧಗಳನ್ನು ಧರಿಸುವಯಾವ ನಾಲ್ಕುಭುಜಗಳಿಂದ ಕೂಡಿದವನಾಗಿದ್ದೆ? ಹೆಗಲುಮೇಲೆ ಸತ್ತಕರುವನ್ನು ಹೊತ್ತುಕೊಂಡು ಸಾಮವೇದಿಯಯಾಗಶಾಲೆಗೆ ಯಾವಪಾರ್ವತಿಯಿಂದಕೂಡಿದ ದೇಹವುಳ್ಳವನಾಗಿ ಪ್ರವೇಶಿಸಿದೆ? ವೇದವಚನಗಳಿಗೂ ಗೋಚರವಾಗಲಾರದ ನೀನು ಯಾವ ಫಾಲನೇತ್ರವನ್ನು ಧರಿಸಿಕೊಂಡು, ಬಿಬ್ಬಭಾಸ್ಕರನ ಮನೆಯನ್ನೈದಿದೆ? ಅಧಿಕವಾದಗುಣಗಳುಳ್ಳ ಸಿರಿಯಾಳ್ವನನ್ನು ರಕ್ಷಿಸುವದಕ್ಕಾಗಿ ಜಟಾಜೂಟದಲ್ಲಿ ಯಾವ ಚಂದ್ರಕಲೆಯಿಂದ ಕೂಡಿದವನಾಗಿ ಬಂದಿದ್ದೆ? ಎಲೈದೇವನೇ ಶಿವಲೋಕಕ್ಕೆ ಸಮಾನವಾದ ಯಾವದೇಶದಲ್ಲಿ ಭಕ್ತರಪಾದಪೂಜೆಯುಂಟೋ ಆ ದೇಶದಲ್ಲಿ ಈಗ

ನೀನು ತೋರಿಸಿದರೂಪವು ಭಕ್ತರಲ್ಲಿ ನೋಡಲ್ಪಡುತ್ತದೆ. ನನ್ನ ಮಗನು ದ್ರೋಹಿಯು ನನ್ನಿಂದ ಪ್ರಾರ್ಥಿಸಿಕೊಳ್ಳಲ್ಪಡುವದಕ್ಕೆ ಯೋಗ್ಯನಲ್ಲ. ಆದಕಾರಣದಿಂದವರನ್ನು ಕೊಡಬೇಕೆಂಬ ಚಿಂತೆಯನ್ನು ಬಿಡು ಹೀಗೆ ಕೇವಲವೈರಾಗ್ಯವನ್ನೆ ತೋರಿಸಿದ ರಿಂದ ಶಿವನು ಸಂತೋಷಿಸಿ ಹೇಳಿದ್ದೆನಂದರೆ,—ಸಿರಿಯಾಳ್ವನೇ ಕೇಳು. ಪೂರ್ವ ದಲ್ಲಿ ಕಾಟಕೂಟನೆಂಬ ಇಬ್ಬರು ತಂದೆಯನ್ನು ಕೈಯ್ಯಾರೆ ಕೊಂದು, ಮರಳಿ ನನ್ನಿಂದ ಪಡೆದರು. ಪೂರ್ವಗಲ್ಲಿ ನರಸಿಂಗನೆಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಿದ್ದ ಒಬ್ಬರಾಜನು ಭೂತಲದಲ್ಲಿದ್ದನು. ಆತನ ಹೆಂಡತಿಯು ನನಗೆ ನಮ ಸ್ಕರಿಸುವುದಕ್ಕೋಸ್ಕರ, ನನ್ನ ಆಲಯಕ್ಕೆ ಬಂದು, ಅರಳುವ ಸೌಗಂಧಿಕ ಕಮ ಲಂಗಳ ಮೊಗ್ಗುಗಳಲ್ಲಿ ವಿಶೇಷವಾದ ಪ್ರೀತಿಯುಳ್ಳವಳಾಗಿ ನನಗೋಸ್ಕರ ಉದ್ದೇ ಶಿಸಿ ತಂದ ಹೂವುಗಳಲ್ಲಿ ಒಂದನ್ನು ತೆಗೆದುಕೊಂಡು ಮೂಸಿದಳು. ಅರ್ಚಕ ನಾದ ಶಿವಕೆಂಕರನು ಕೋಪಗೊಂಡವನಾಗಿ, ಆಕೆಯ ಮೂಗನ್ನು ಕೊಯ್ದುಹಾ ಕಿದನು. ಆ ವರ್ತಮಾನವನ್ನು ಕೇಳಿ ರಾಜನು ಪುನಃಸಿಕ್ಷೆಯನ್ನು ಮಾಡಿಸಿದನು. ಹ್ಯಾಗೆಂದರೆ ಹೂವನ್ನು ತೆಗೆದುಕೊಳ್ಳುವದಕ್ಕೆ ಪ್ರಯತ್ನಿಸಿ ಅದನ್ನು ಹಿಡಿದ ಆಕೆಯ ಎರಡುಬೆರಳುಗಳನ್ನು ಮೊದಲುಕಡಿದು, ಆಮೇಲೆ ಮೊಳಕೈಯನ್ನು ಕತ್ತರಿಸಿ, ತೋ ಳನ್ನು ಛೇದಿಸುವದಕ್ಕೆ ಉದ್ಯುಕ್ತನಾದನು. ಇಷ್ಟರೊಳಗಾಗಿ ನಾನು ಪ್ರಸನ್ನನಾಗಿ ಹೋಗಿ ಅವನಕೆಲಸವನ್ನು ನಿಲ್ಲಿಸಿ, ಅನುಗ್ರಹದಿಂದ ಪುನಃ ಹಸ್ತವನ್ನುಂಟುಮಾಡಿ ಕೊಡಲು, ಆತನು ಆಕೆಯನ್ನು ಅಂಗೀಕರಿಸಿದನು.

ವೀರಚೋಳನೆಂದು ಪ್ರಸಿದ್ಧನಾದ ವೀರಮಾಹೇಶ್ವರಶ್ರೇಷ್ಠನಾದ ಒಬ್ಬರಾ ಜನು ಶತ್ರುಗಳನ್ನು ಜಯಿಸುವದಕ್ಕಾಗಿ ಜಯಪ್ರಯಾಣದಲ್ಲಿ ಆಸಕ್ತನಾಗಿ ಹೊರಟನು. ರಾಜ್ಯಕ್ಕೆ ಶಿವನೇ ಒಡೆಯನೆಂದು ಆತನಿಗೆ ತಾನುಮಂತ್ರಿಯೆಂದೂ ಭಾವಿಸಿಕೊಂಡು ಶತ್ರುಗಳಸಮೂಹವನ್ನು ಜೈಸಿದವನಾಗಿ, ಕೆಲವುಕಾಲ ಅಲ್ಲಿ ಯೇಕಳೆದನು. ಅಷ್ಟರೊಳಗಾಗಿ, ಆ ರಾಜನಹೆಂಡತಿಯ ನೆಂಟರು ಕೆಲವರು ಬಂದರು. ಆಕೆಯು ಅವರಿಗೆ ಆ ಕಾಲದಲ್ಲಿ ಸ್ವಲ್ಪ ಧನವನ್ನೂ, ಧಾನ್ಯವನ್ನೂ ಕೊಡಿಸಿದಳು. ಆಮೇಲೆ ನಾನು ರಾಜನ ಕನಸ್ಸಿನಲ್ಲಿ ಹೋಗಿ;—ತನ್ನ ಧನಧಾ ನ್ಯಗಳು ವ್ಯಯವಾದ ಸಂಗತಿಯನ್ನು ತಿಳುಹಲು, ರಾಜನು ಕೇಳಿ, ಪಟ್ಟಣಕ್ಕೆ ಹಿಂತಿರುಗಿಬಂದನು. ಅನಂತರದಲ್ಲಿ ತನ್ನ ಪಟ್ಟದರಾಣಿಯ ನೆಂಟರನ್ನು ಕರೆಸಿ, ಅವರನ್ನೆಲ್ಲಾ ಕೊಲ್ಲಿಸಿ, ರಾಣಿವಾಸಕ್ಕೆ ಪ್ರವೇಶಿಸಿ, ಹೆಂಡತಿಯು ಗರ್ಭಿಣಿಯಾಗಿ

ರುವುದನ್ನು ನೋಡಿ, ಅವಳ ಹೊಟ್ಟೆಯನ್ನೂ, ಅದರಲ್ಲಿದ್ದ ಶಿಶುವನ್ನೂ ಮೇಲ ಕ್ಕೆಸೆದು, ಮೊನೆಯಾದ ಕತ್ತಿಯನ್ನು ಒಡ್ಡಿದನು. ಇಷ್ಟರೊಳಗೆ ನಾನುಹೋಗಿ, ಆ ಪ್ರಯತ್ನವನ್ನು ನಿಲ್ಲಿಸಿದೆನು. ಆಗ ಆ ರಾಜನು ಕತ್ತಿಯನ್ನು ಬಿಟ್ಟು, ಬೇಗ ಪಾದಗಳಿಗೆನಮಸ್ಕರಿಸಿದನು. ಗಾಯವಡೆಯದ ಬಸುರುಳ್ಳವಳಾಗಿಯೂ, ಮೊದ ಲಿನಂತೆ ಕರಚರಣಾದಿ ಅವಯವಪುವಳ್ಳವಳಾಗಿಯೂ, ಇರುವ ರಾಣಿಯೊಡನೆ ನಾನು ಕೊಟ್ಟ ಸಾರೂಪ್ಯ ಪದವಿಯನ್ನು ಸಂತೋಷದಿಂದ ಸ್ವೀಕರಿಸಿದನು.

ಈ ರೀತಿಯಾಗಿ ಲೋಕದಲ್ಲಿ ಅನೇಕರು ತಂದೆ, ತಾಯಿ, ಹೆಂಟತಿ, ಮಕ್ಕ ಳನ್ನು ನನಗೋಸ್ಕರ ಕೊಂದು, ಪುನಃ ನನ್ನಿಂದ ಪಡೆದುಕೊಂಡರು. ಈ ನಿಂಬ ವ್ವೆಗೆ ನನ್ನಮೇಲಣ ಇಚ್ಛೆಯೂ ಇಲ್ಲವಲ್ಲಾ ! ಈ ವೈರಾಗ್ಯವು ಆಶ್ಚರ್ಯಕರವಾ ದದ್ದು. ಎಂದು ಶ್ಲಾಘಿಸಿ, ಆಕೆಯ ಮಗನನ್ನು ಕೈಲಾಸಕ್ಕೆ ಕಳುಹಿಸದನು,

## ಹಲಾಯುಧ ವೃತ್ತಾಂತ.

ಅನಂತರದಲ್ಲಿ ಅಲ್ಲಿಂದಹೊರಟು, ಸಿರಿಯಾಳ್ವನನ್ನು ಸಂಗಡ ಕರೆದುಕೊಂ ಡು ಶಿವಭಕ್ತರ ಸಮೂಹದಿಂದ ವ್ಯಾಪ್ತವಾದ ಹಲಾಯುಧಯ್ಯನ ಪಟ್ಟಣಕ್ಕೆ ಹೋದನು. ಹಲಾಯುಧನು ಪೀಠದಲ್ಲಿ ಕುಳ್ಳಿರಿಸಿ, ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ,—ಆತನ ಜನನ ಮೊದಲಾದ ವೃತ್ತಾಂತವನ್ನು ಕೇಳಲು, ಶಿವನು ಕ್ರಮ ವಾಗಿ ಹೇಳಿದನು. ಏನಂದರೆ;—ಆದಿಯಲ್ಲಿ ನಾನುಹುಟ್ಟಿ ನಿರಂಜನಪುರದಲ್ಲಿ ದ್ದೆನು. ಬಾಲ್ಯಾವಸ್ಥೆಯಲ್ಲಿರುವ ನನ್ನನ್ನು ಬಿಜ್ಜಮಹದೇವಿಯು ಮಗನಂತೆ ಸಾಕಿದಳು. ಒಬ್ಬ ಹುಡುಗಿಯು ನನ್ನಮೇಲಣ ವಾತ್ಸಲ್ಯದಿಂದ ನನಗೆ ಹಾಲ ನ್ನು ಕುಡಿಸಿದಳು. ಸುರುಗಿಯ ಚೌಡಯ್ಯನು ಅನ್ನಪ್ರಾಶನವನ್ನು ಮಾಡಿಸಿದನು. ಕೆಂಬಾವಿಭೋಗಣ್ಣನಿಂದ ಹೆಜ್ಜೆಗಳನ್ನಿಡುವುದರಲ್ಲಿ ಜಾಣತನವನ್ನು ಕಲಿತೆನು. ಚನ್ನಯ್ಯನಿಂದ ಜೊತೆಯಲ್ಲಿ ಊಟಮಾಡುವಶಕ್ತಿಯು ಬಂತು. ದಯಾಳುವಾದ ಜೇಡರದಾಸಯ್ಯನಿಂದ ವಸ್ತ್ರವನ್ನುಡುವ ಜಾಣ್ಮೆಯನ್ನು ಕಲಿತೆನು. ಜ್ಞಾನಸಂ ಬಂಧಿಯು ಸ್ನೇಹದಿಂದ ಭಸ್ಮವನ್ನು ಧರಿಸುವ ವಿಧಾನವನ್ನು ತಿಳಿದುಕೊಂಡೆನು. ಮಾನಕಂಜಾರನು ಜಡೆಗಳನ್ನು ಹೊಸೆದುಕೊಳ್ಳುವುದರಲ್ಲಿ ನನಗೆ ಸಹಾಯಕನಾ ದನು. ನನಗೆ ಕೆಲಸಮಾಡುವ ರಹಸ್ಯಗಳನ್ನು ಪಿಟ್ಟವ್ವೆಯು ಕಲಿಸಿದಳು. ಸುಂದರನಂಬಿಯಿಂದ ಪ್ರೌಢವಾಗಿ ಮಾತನಾಡುವುದನ್ನು ಕಲಿತೆನು. ಭಿಕ್ಷುಕನಾದ ನನಗೆ ಸಿಂಧುಬಲ್ಲಾಳನು ಹೆಂಡತಿಯನ್ನು ಕೊಟ್ಟನು. ಮುನಯಭೂಪಾಲನು

ಸಂಬಳವನ್ನು ಕೊಟ್ಟನು. ಹುಟ್ಟಿದಾಗಿನಿಂದಲೂ ನಾನು ಯಾವಾಗಲೂ ನನ್ನ ತಂದೆತಾಯಿಗಳನ್ನು ಕಾಣೆನು. ಜಂಗಮರಲ್ಲಿಯೂ, ಭಕ್ತರಲ್ಲಿಯೂ, ನನಗೆ ಒಡ್ಯಾಟವು ಪ್ರಸಿದ್ಧವಾಗಿದೆ. ಸಕಲಭಕ್ತರಿಂದಲೂ ಶ್ಲಾಘ್ಯಗಳಾದ ದಿನಗಳು ಕಳೆದವು. ಏಣಾಧಿನಾಥನು, ವಾಗೀಶನಾಥನು, ಶ್ವಪಚಯ್ಯನು, ವಲಗೊಂಡ ಪತಿಯು, ನೀಲಕಂಠನು, ಆರ್ಯಮನು, ಚೇರಮನು, ಕರಿಕಾಲನು, ಸೇದಿರಾಜನು, ಜ್ಞಾನಸಂಬಂಧಿಯು, ಸುಂದರನು, ಇವರು ಮೊದಲಾದಭಕ್ತರು ಅಲ್ಲಲ್ಲಿ ಪ್ರಸಿದ್ಧರಾಗಿದ್ದಾರೆ. ಅವರೆಲ್ಲರೂ ಶಿವನನ್ನು ಪೂಜಿಸುವಹಾಗೆ ನನ್ನನ್ನು ಪೂಜಿಸುತ್ತಾರೆ. ಭೂಮುಂಡಲದಲ್ಲಿ ನಾನು ಕಾಣದ ದೇಶವೇಇಲ್ಲ. ಆಶ್ಚರ್ಯವನ್ನು ನೋಡಬೇಕೆಂಬ ಇಚ್ಛೆಯುಳ್ಳನಾನು, ಕಾಂಚೀಪಟ್ಟಣದಲ್ಲಿ ಬಹುದಿವಸವಿದ್ದೆನು. ಸಿರಿಯಾಳ್ವನ ಆಶ್ಚರ್ಯಕರವಾದ ಒಂದು ಭಕ್ತಿಯನ್ನು ನೋಡಿದೆನು. ಆ ಭಕ್ತಿಯು ಆ ಸಿರಿಯಾಳ್ವನಲ್ಲದೆ ಇತರ ಭಕ್ತರು ಮನಸ್ಸಿನಿಂದ ಆಲೋಚಿಸುವದಕ್ಕೂ ಅಶಕ್ಯವಾದದ್ದು. ನೋಡುವವರಿಗೆ ಭಯವನ್ನುಂಟುಮಾಡುವಂಥಾದ್ದು, ಕೇಳುವವರಿಗೆ ರೋಮಾಂಚವನ್ನುಂಟುಮಾಡುವಂಥಾದ್ದು. ಶಿವನನ್ನು ಎಳಯುವಂಥಾದ್ದು, ಋಣತ್ರಯವನ್ನು ನಾಶಮಾಡುವಂಥಾದ್ದು. ಶಿವಭಕ್ತರ ಮನಸ್ಸನ್ನು ನಾಚಿಕೆ ಪಡಿಸುವಂಥಾದ್ದು, ಅವನ ಮನಸ್ಸು ಪುರಾತನರ ಮನಸ್ಸಿನಂತೆ ಮಂಜುಳವಾದದ್ದು. ಪೂರ್ವದಲ್ಲಿ ಕಾಟಕೋಟಚಂಡೇಶ್ವರ ಮುಂತಾದ ಕೆಲವು ಭಕ್ತರಿದ್ದರಷ್ಟೆ. ಈ ಕಾಲದಲ್ಲಿ ಈತನನ್ನು ಬಿಟ್ಟರೆ ನಿರ್ವಂಚಕನಾದ ಭಕ್ತನು ಎಲ್ಲಿಯೂ ಇಲ್ಲ. ಆತನ ಹೆಂಡತಿಯು ಅವನಿಗೆ ಸರಿಯಾದವಳು ಐದಾರುವರುಷ ವಯಸ್ಸುಳ್ಳ ಆತನ ಮಗನೂ ಅಂಥಾ ಗುಣಗಳುಳ್ಳವನೇ, ಗುಣಗಳಿಗೆ ಆಸ್ಪದನಾಗಿಯೂ, ಕುಲಕ್ಕೆ ಆಧಾರನಾಗಿಯೂ ಇರುವ ಆ ಕುಮಾರನನ್ನು ಕೊಂದು, ನಾನಾವಿಧವಾದ ಶಾಕಪಾಕವನ್ನು ಮಾಡಿ, ಶಿವನನ್ನು ಸಂತೋಷಪಡಿಸಿದನು. ಕಾಡಕೋಟ ಮೊದಲಾದವರು ಶಿವಕಾರ್ಯಕ್ಕೆ ವಿರೋಧಿಗಳಾದ ತಮ್ಮ ಬಂಧುಗಳನ್ನು ಕೊಂದು, ಶಿವನಿಗೆ ಸಂತೋಷವನ್ನು ಮಾಡಿ, ಕೈಲಾಸವನೈದಿದರು. ಈತನಾದರೋ ಹಾಗಲ್ಲ, ಶಿವಕಾರ್ಯಕ್ಕೆ ಅನುಕೂಲನಾಗಿಯೂ, ಗುಣಾಢ್ಯನಾಗಿಯೂ, ಇರುವ ತನ್ನ ಏಕಪುತ್ರನನ್ನು ಶಿವನಿಂದ ಬೇಡಲ್ಪಟ್ಟವನಾಗಿ ಕೊಂದನು. ಕೊಂದರೂ ಕೊಲ್ಲಲಿ, ಆತನ ಹೆಂಡತಿಯು ಮಗನ ದೇಹವನ್ನು ಈಳಿಗೆಯಿಂದ ಕತ್ತರಿಸಿ ಕತ್ತರಿಸಿ ಪಾತ್ರೆಯಲ್ಲಿ ಹಾಕಿದಳು. ಇದಕ್ಕಿಂತ

ಲೂ ಏನು ಇಶ್ಚರ್ಯವು? ಕತ್ತರಿಸಿದರೆ ಕತ್ತರಿಸಲಿ. ಮಗನ ಮಾಂಸವನ್ನು ನೀರಿನಿಂದ ತೊಳೆದು ನಾನಾ ವಿಧವಾದ ಅಡಿಗೆಗಳನ್ನು ಮಾಡುವಾಗ ಪರಿಮಳವುಂಟಾಗುವಂತೆ ಬೇಯಿಸಿದಳು. ಏನ ವರ್ಣಿಸಲಿ? ಈರೀತಿಯಾಗಿ ಇತರರಿಗೆ ಅಶಕ್ಯವಾದ ಕಾರ್ಯವನ್ನು ಮಾಡಿದ್ದರಿಂದ ಆಶ್ಚರ್ಯಗೊಂಡ ಶಿವನು ಅವನನ್ನು ಅವನ ಪಟ್ಟಣದ ಏಳುಬೀದಿಯ ಜನಗಳು ಸಹಿತವಾಗಿ ತನ್ನ ಲೋಕಕ್ಕೆ ಕರದೊಯ್ದನು. ಸಿರಿಯಾಳ್ವನಿಗೆ ಸಮಾನನಾದ ಭಕ್ತನೂ, ಆತನ ಹೆಂಡತಿಗೆ ಸಮಾನಳಾದ ಭಕ್ತೆಯೂ, ಅವರ ಮಗನಿಗೆ ಸಮಾನನಾದ ಮಗನೂ, ಮೂರು ಲೋಕದಲ್ಲಿಯೂ ಇಲ್ಲ. ಆ ಗಂಡಹೆಂಡಿರೂ ಇರಲಿ, ಚಂದನಿಕೆಯೆಂಬ ದಾದಿಯು ಸತ್ಪುರುಷರ ಶಿರಸ್ಸಿನಿಂದ ಶ್ಲಾಘಿಸಲ್ಪಡತಕ್ಕವಳು. ಈ ಪ್ರಕಾರವಾಗಿ ಸಿರಿಯಾಳ್ವನ ಭಕ್ತಿಮಹಿಮೆಯನ್ನು ಮರಳಿ ಮರಳಿ ಬಹುವಿಧವಾಗಿ ವಿವರಿಸುತ್ತಿರುವ ಶಿವನನ್ನು ಕುರಿತು ಹಲಾಯುಧನು ಹೇಳಿದನು. ಏನಂದರೆ;—ಶಿವನು ಮನುಷ್ಯರನ್ನು ಕೊಲ್ಲುವುದಕ್ಕೆ ಉದ್ಯುಕ್ತನಾದ ರಾಕ್ಷಸನಾದನು ತನ್ನ ದೇಹವನ್ನು ವಂಚಿಸಿ, ಭಕ್ತನಾದ ಪುತ್ರನನ್ನು ಕೊಲ್ಲುವ ಸಿರಿಯಾಳ್ವನೂ ಹಾಗೆ ಆದನು. ಭಕ್ತರ ಮನೋಭಾವವನ್ನು ಪರೀಕ್ಷಿಸುವುದಕ್ಕೆ ಇಚ್ಛೈಸಿದ ಶಿವನು ಜಾಣನಾಗಿದ್ದರೆ ಮಗನನ್ನು ಕೊಲ್ಲುವುದಕ್ಕೆ ಕೈಯ್ಯಲ್ಲಿ ಶಸ್ತ್ರವನ್ನು ತೆಗೆದುಕೊಂಡಕೂಡಲೇ ಆ ಕೆಲಸವನ್ನು ನಿಲ್ಲಿಸಬೇಕಾಗಿತ್ತು. ಭೈರವನಿಂದ ಪ್ರಾರ್ಥಿಸಲ್ಪಟ್ಟಮಾಂಸವುಳ್ಳ ಆ ಭಕ್ತನು ಧೀರನಮ್ಮನಾಗಿದ್ದರೆ, ತನ್ನನ್ನುಕೊಂದು, ಭೈರವನಿಗೆ ಭೋಜನವನ್ನು ಮಾಡಿಸಬೇಕಾಗಿತ್ತು. ಭೃತ್ಯನಾದವನು ತನ್ನ ಒಡೆಯನಿಗೋಸ್ಕರ ಮನುಷ್ಯನನ್ನಾದರೂಕೊಂದು ಅವನ ಮಾಂಸವನ್ನು ಕೊಡುತ್ತಾನೆ. ಒಡೆಯನಂತೆ ಸೇವಕನು, ಎಂಬ ಮಾತುಪ್ರಸಿದ್ಧವಾಗಿದೆ. ತನ್ನ ಸೇವಕನನ್ನು ರಕ್ಷಿಸುವದರಲ್ಲಿ ಉದ್ಯುಕ್ತನಾದಶಿವನು ಸೇವಕನನ್ನು ಹ್ಯಾಗೆಕೊಲ್ಲಿಸಿದನು ? ಭಕ್ತರನ್ನು ಕಾಪಾಡುವದರಲ್ಲಿ ಆಸಕ್ತನಾದ ಭಕ್ತನುಹ್ಯಾಗೆ ಭಕ್ತನನ್ನು ಕೊಂದನು? ಕರುಣಾರಸಭರಿತವಾದ ಮನಸ್ಸುಳ್ಳ ಸ್ವಾಮಿಭೃತ್ಯರಿಗೆ ಈ ವೃತ್ತಿಯು ಸರಿಬೀಳುವದಿಲ್ಲ. ಇದಲ್ಲದೆ ನಿಮ್ಮಂಥಾದೊಡ್ಡವರಮಾತುಗಳು ಸುಳ್ಳಾಗುವದುಂಟೇ? ಹಾಗಾದಾಗ್ಯೂ ಇನ್ನುಮೇಲೆ ಭಕ್ತಿವಂತರಾದ ಜನಗಳು ಈ ಮಾತನ್ನು ಕೇಳಲೇಕೂಡದು. ಹೀಗೆಂದು ಆ ಜಂಗಮವೇಶಧೀಶ್ವರನಮಾತನ್ನು ಆಕ್ಷೇಪಿಸಿ ಆತನನ್ನೂ ಸ್ತುತಿಸಿ, ಘಂಟೆಯನ್ನು ಹೊಡಿಸಿ ಸಾರಿಸಿದನು. ಇದೆಷ್ಟಾಶ್ಚರ್ಯ? ಸಾರಿಸಿ

ದ್ದೇನಂದರೆ,—ಈ ಕ್ರೂರಕೃತ್ಯವನ್ನಾಲೋಚಿಸಿದ ಸ್ವಾಮಿಯು ಅದಕ್ಕೆ ಸಹಾಯಕನು ಇವರಿಬ್ಬರೂ ಇನ್ನು ಭೂಮಿಯಲ್ಲಿ ಹೊರಗು, ಸಿರಿಯಾಳ್ವನ ಕಥೆಯಲ್ಲೂ ಶಿವನಕಥೆಯಲ್ಲೂ ಯಾವನು ಪ್ರೀತಿಯುಳ್ಳವನಾಗುವನೋ ಅವನು ಭಕ್ತರಗುಂಪಿಗೆ ಹೊರಗು. ಈ ಭಯಂಕರವಾದ ಮಾತನ್ನು ಶಿವನು ಕೇಳಿ, ಭಯಪಟ್ಟವನಂತೆ ಅಭಿನಯಿಸಿ, ಜಾಗ್ರತೆಯಾಗಿ ಚಂಗಳೆಯೊಡನೆ ಬರುವಂತೆ ಪಾರ್ವತಿಯನ್ನು ನೆನೆದನು ಶಿವನಿಂದ ಸ್ಮರಿಸಲ್ಪಟ್ಟಪಾರ್ವತಿಯು ಚಂಗಳೆಯೊಡನೆ ಮುನಿಪತ್ನಿಯರ ವೇಷವನ್ನು ಧರಿಸಿದವಳಾಗಿ ಆ ಹಲಾಯುಧನಮನೆಗೆ ಬಂದಳು. ಹಲಾಯುಧಯ್ಯನು ಶಿಷ್ಯರೊಡನೆ ಕೂಡಿದ ಸರ್ವಮಂಗಳೆಯನ್ನು ನೋಡಿ, ಇದರೆದ್ದು ನಮಸ್ಕರಿಸಿ, ಪಾದ್ಯಾದಿಗಳಿಂದ ಪ್ರೀತಿಪೂರ್ವಕವಾಗಿ ಪೂಜಿಸಿದನು. ಆತನಿಂದ ಪೂಜಿಸಲ್ಪಟ್ಟ ಪಾರ್ವತಿಯು ಹಲಾಯುಧಯ್ಯನನ್ನು ಕುರಿತು,—ಎಲೈ ಹಲಾಯುಧನೇ ನೀನು ಭಕ್ತರೊಳಗೆ ಶಿರೋಮಣಿಯಾಗಿದ್ದೀಯೆ. ಭಕ್ತರಿಗೆ ನಿರಂತರದಲ್ಲೂ ಕೇಳಿದವಸ್ತುಗಳನ್ನು ಪ್ರೀತಿಯಿಂದ ಕೊಡುತ್ತೀಯೆ. ಎಲೈ ಕರುಣಾನಿಧಿಯೆ ನಮ್ಮ ಇಷ್ಟಾರ್ಥವನ್ನು ಕೊಡುವವನಾಗು. ಎಂದು ಹೇಳಿದಳು. ಹಲಾಯುಧನು ಕೇಳಿ, ಎಲೌತಾಯೇ ನಿನ್ನ ಬಯಕೆಯೇನು ಹೇಳು. ಭಕ್ತರಪಾದಧೂಳಿಯಲೇಶನಾದ ನಾನ್ಯಾರು? ದಯಾನಿಧಿಗಳಾದ ಈ ಭಕ್ತರು ಕೊಡುತ್ತಾರೆ. ಎನಲು; ಪಾರ್ವತಿಯು,—ಅಯ್ಯಾ ಭಕ್ತವರ್ಯನೇ ಲೋಕದಲ್ಲಿ ಯಾವಸ್ತ್ರೀಯಾದರೂ ಹೀನಪತಿಯುಳ್ಳವಳಾದರೆ ಪ್ರಕಾಶಿಸುವದಿಲ್ಲ. ಮತ್ತು ಗಂಡನ ಮಗ್ಗುಲಲ್ಲಿರುವವಳಾದರೂ ದೂಷ್ಯಳೇಸರಿ, ಲೋಕದಲ್ಲಿ ಲಕ್ಷ್ಮಿಯೂ ಸರಸ್ವತಿಯೂ ಅನ್ಯಪತಿಗಳನ್ನು ಪಡೆಯುವದುಂಟು. ಒಬ್ಬಪತಿಯಲ್ಲೇ ಆಸಕ್ತರಾದವರು ಹಾಗೆ ಮಾಡುವದಕ್ಕಾಗುವದಿಲ್ಲ. ನಾನುಪಾರ್ವತಿಯು, ಇಗೋನಿನ್ನಪಾದಕ್ಕೆರಗಿರುವ ಈಕೆಯು ಸಿರಿಯಾಳ್ವನ ಹೆಂಡತಿಯು, ಶಿವನೇ ನನ್ನಪತಿಯು, ಸಿರಿಯಾಳ್ವನೇ ಈಕೆಯಪತಿಯು, ನಾವು ದೊಡ್ಡವರಿಂದ ತಿರಸ್ಕರಿಸಲ್ಪಟ್ಟಪತಿಗಳನ್ನು ಹೋದುವದರಲ್ಲಿ ಬಯಪಟ್ಟವರಾಗಿ, ಪತಿಬಿಕ್ಷವನ್ನು ಕೇಳುವದಕ್ಕಾಗಿ ನಿನ್ನ ಸಭೆಗೆ ಬಂದೆವು,–

ಈತನೇ ಶಿವನು. ಈತಪಸ್ವಿಯೇ ಸಿರಿಯಾಳ್ವನು, ಈರೀತಿಯಾಗಿ ಪಾರ್ವತಿಯು ಹೇಳಿದ ಮಾತುಗಳನ್ನು ಕೇಳಿ ಸಭೆಯುಬೆರಗಾಯಿತು. ಸಭೆಯಲ್ಲಿದ್ದ ದೊಡ್ಡಮನುಷ್ಯರಿಂದ ಅಭಯಪ್ರದಾನವನ್ನು ಹೊಂದಿದ ಶಿವನು ಸಿರಿಯಾಳ್ವನು ಇವರಿಬ್ಬರೂ ಸಮೀಪಕ್ಕೆಬಂದರು. ಪಾರ್ವತಿಯೂ, ಚಂಗಳೆಯೂ ಭಯವನ್ನು

ಬಿಟ್ಟು ನಿಂತರು. ಬಳಿಕ ಷಡ್ಗುಣೈಶ್ವರ್ಯ ಸಂಪನ್ನನಾದ ಪರಮೇಶ್ವರನು ಪ್ರತ್ಯಕ್ಷ ನಾದನು. ನಂದಿ, ಭೃಂಗಿ ಮೊದಲಾದ ಪ್ರಮಥರು ಸಮೀಪದಲ್ಲಿನಿಂತರು. ಬ್ರಹ್ಮ ವಿಷ್ಣು ಮೊದಲಾದ ದೇವತಾಶ್ರೇಷ್ಠರು ಸುತ್ತಲೂ ಬಳಸಿದರು. ಸಿದ್ಧರೂ, ವಿದ್ಯಾಧರರೂ, ಯಕ್ಷ ಕಿನ್ನರರೂ, ಸೇವಿಸಿದರು. ಸ್ತೋತ್ರದಲ್ಲಿ ಆಸಕ್ತರಾದ ದೇವ ತೆಗಳೂ, ಮೋಕ್ಷಾಪೇಕ್ಷೆಯುಳ್ಳಮುನಿಗಳೂ, ಸ್ತುತಿಸಿದರು. ಮಂತ್ರ, ಲಯ, ಹಠ, ರಾಜ ಎಂಬ ನಾಲ್ಕು ವಿಧವಾದ ಯೋಗದಲ್ಲಿ ನೆಲೆಗೊಂಡಯೋಗಿಗಳು ಸುತ್ತಿಕೊಂಡರು. ಆಗ ಸೂರ್ಯ, ಚಂದ್ರ, ಅಗ್ನಿಗಳೆಂಬ ಮೂರುನೇತ್ರಗಳಿಂದ ಅಲಂಕರಿಸಲ್ಪಟ್ಟ ಮುಖಕಮಲವುಳ್ಳವನಾಗಿಯೂ, ಹುಲಿದೊಗಲಿಂದ ಸುತ್ತ ಲ್ಪಟ್ಟ ನಡುವುಳ್ಳವನಾಗಿಯೂ, ಬ್ರಹ್ಮನಿಷ್ಠರಿಂದ, ಜ್ಞಾನನೇತ್ರದಿಂದ ನೋಡಲ್ಪ ಟ್ಟವನಾಗಿಯೂ, ಇರುವ ಶಿವನನ್ನು ಹಲಾಯುಧನು ಬಾಹ್ಯನೇತ್ರದಿಂದ ನೋಡಿ ದನು. ಹಲಾಯುಧನು ಕರುಣಾರಸದಿಂದ ಪೂರ್ಣವಾದ ದೇಹವುಳ್ಳ ಶಿವನನ್ನು ನೋಡಿ, ನಾನಾವಿಧವಾದ ಅಭಿನಯಗಳಿಂದ ಮನೋಹರವಾಗಿರುವಂತೆ ನರ್ತನ ವಂಮಾಡುತ್ತಾ, ಚಂದ್ರಶೇಖರನ ದಿವ್ಯನಾಮಗಳನ್ನು ನಮ್ರತೆಯಿಂದ ಗಟ್ಟಿ ಯಾಗಿಹಾಡಿದನು. ತ್ರಿಪುರಧ್ವಂಸಿಯಾದ ಪರಶಿವನು ರೋಮಾಂಚ ಕಂಚುಕಿ ತಾಂಗನಾಗಿಯೂ, ಆನಂದಬಾಷ್ಪದಿಂತುಂಬಿದ ನೇತ್ರವುಳ್ಳವನಾಗಿಯೂ ಇದ್ದ ಹಲಾಯುಧಯ್ಯನನ್ನು ಇತರರಿಂದ ಪಡೆಯಲಾಗದ ತನ್ನ ಶ್ರೇಷ್ಠವಾದ ತೋಳು ಗಳಿಂದ, ಗಾಢಾಲಿಂಗನವಂ ಮಾಡಿಕೊಂಡನು. ಬಳಿಕ ಪಾರ್ವತಿಯು ಕರುಣಾ ರಸಭರಿತಳಾದ ಕಡೆಗಣ್ಣೋಟಗಳಿಂದ ನೋಡಲ್ಪಟ್ಟ ಹಲಾಯುಧಯ್ಯನಿಗೆ ಶಿವನು ಹತ್ತುಗಾವುದವಿಸ್ತಾರವುಳ್ಳ ಉತ್ತಮವಾದ ಒಂದುವಿಮಾನವನ್ನು ಕೊಟ್ಟನು. ಹಲಾಯುಧನು ಅಂಥಾಐಶ್ವರ್ಯಗಳಿಂದ ಕೂಡಿದ ವಿಮಾನವನ್ನು ಪಡೆದು, ಶಿವನ ಅನುಮತಿಯಿಂ ಒಂಬತ್ತುಪಟ್ಟಣಗಳನ್ನು ಕುಳ್ಳಿರಿಸಿಕೊಂಡನು. ಶಿವನು ಹಲಾ ಯುಧನಿಗೆ ಹರ್ಷವನ್ನುಂಟುಮಾಡಿ, ಸಿರಿಯಾಳ್ವನಿಗೆ ಅಹಂಕಾರವನ್ನು ಹೋಗ ಲಾಡಿಸಿ, ಉಭಯಪಾರ್ಶ್ವಗಳಲ್ಲಿ ಅವರಿಬ್ಬರಿಂದ ಚಾಮರವನ್ನು ಹಾಕಿಸಿಕೊ ಳ್ಳುತ್ತಾ, ದೇವತೆಗಳನ್ನು ಕಳುಸಿ, ಕೈಲಾಸವನ್ನೈದಿದನು. ಈಪ್ರಕಾರವಾದ ಹಲಾಯುಧನ ಉತ್ತಮಚರಿತ್ರೆಯನ್ನು ಯಾವನು ಪ್ರತಿದಿವಸದಲ್ಲಿಯೂ ಪ್ರೀತಿ ಯಿಂದ ಪಠಿಸುತ್ತಾನೋ ಅವನು ಭೂಲೋಕದಲ್ಲಿ ಬಂಧುಗಳೊಡನೆ ಸುಖಗಳನ್ನು ಅನುಭವಿಸಿ, ಕಡೆಗೆ ಶಿವಲೋಕವನ್ನು ಹೊಂದುತ್ತಾನೆ.

ಬಸವೇಶವಿಜಯದಲ್ಲಿಹದಿಮೂರನೇ ಅಧ್ಯಾಯವು

ಸಂಪೂರ್ಣವು.

---

# ಹದಿನಾಲ್ಕನೇ ಅಧ್ಯಾಯವು

## ಸುಂದರನಂಬಿ ಕಥೆ

ಆದ್ದರಿಂದ ಎಲೈ ಬಸವೇಶನೇ ನೀನುಗರ್ವವನ್ನು ಬಿಡು, ಭಕ್ತಿಗೂ ಅಹಂಕಾರಕ್ಕೂ ಸಂಬಂಧವು ಹಾಲಿಗೂ, ಮದ್ಯಕ್ಕೂ, ಇರುವ ಸಂಬಂಧಕ್ಕೆ ಸಮಾನವಾಗಿಧೆ.

ಇದಲ್ಲದೆ ಬಸವೇಶನೇ ಶಿವಭಕ್ತರಮಹಿಮೆಯನ್ನೂ ಅಹಂಕಾರಪಟ್ಟ ಶಿವಭಕ್ತನಿಗೆ ಪ್ರಾಪ್ತವಾದ ವಿಪತ್ತನ್ನೂ ಹೇಳುತ್ತೇನೆಕೇಳು. ಜೇಗೊಂಡವೆಂಬ ಪಟ್ಟಣದಲ್ಲಿ ಮಿರುಮಿಂಡನೆಂದು ಪ್ರಸಿದ್ಧನಾಥ ಒಬ್ಬಭಕ್ತನಿದ್ದನು. ಆತನು ಜಂಗಮಾರ್ಚನೆಯಿಂದ ನಿರಂತವೂ ಅಧಿಕವಾದಸುಖವುಳ್ಳವನೂ, ಹೆಚ್ಚಾದಪ್ರತಾಪದಿಂದಲೂ ಶಕ್ತಿಯಿಂದಲೂ ಕೂಡಿದ ಭುಜಗಳುಳ್ಳವನೂ, ಶಿವಾದ್ವೈತಭಾವನೆಯಲ್ಲಿ ಆಸಕ್ತವಾಗಿರುವದರಿಂದ ಪರಿಶುದ್ಧವಾದ ಮನಸ್ಸುಳ್ಳವನೂ, ದುಷ್ಟರಸನ್ನಾಹವನ್ನು ನಾಶಮಾಡುವವನೂ, ಸತ್ಪುರುಷರ ಸದ್ವೃತ್ತಿಯನ್ನು ಕಾಪಾಡುವವನೂ, ಶಿವಭಕ್ತನನ್ನು ಶಿವನೆಂದೇತಿಳಿಯುುವನೂ, ಅಹಂಕಾರವಿಲ್ಲದವನೂ, ಮಮಕಾರವಿಲ್ಲದವರೊಳಗೆ ಶ್ರೇಷ್ಠನೂ, ಆಗಿದ್ದನು. ಹೀಗಿರುವಲ್ಲಿ ಒಂದುವೇಳೆ ಶಿವರಾತ್ರಿವ್ರತವನ್ನು ಮಾಡುವದಕ್ಕಾಗಿ ತನ್ನ ಪಟ್ಟಣದಿಂದ ತಿರುವಾಲೂರೆಂಬ ಶಿವಪುರವನ್ನೈದಿ, ಅಲ್ಲಿರುವ ವಲ್ಮೀಕೇಶ್ವರನ ಸನ್ನಿಧಿಯಲ್ಲಿ ಜಾಗರಣವಂಮಾಡಿ, ಭಕ್ತರ ಸಮೂಹದಿಂದ ಸುತ್ತಲ್ಪಟ್ಟವನಾಗಿ, ರಂಗಮಂಟಪದಲ್ಲಿ ಕುಳಿತುಕೊಂಡನು. ಆ ಸಮಯದಲ್ಲಿ ಸುಂದರನಾಯಕನು ವೇಶ್ಯಾಗೃಹದಿಂದ ಶಿವನನ್ನು ಸಾವಿರವರಹ ಸಂಬಳವನ್ನು ಕೇಳುವದಕ್ಕೋಸ್ಕರ ಪಟ್ಟಣ್ಣಾದಜನಗಳಿಂದ ಕೂಡಿದವನಾಗಿ ಮಂದಿಗಳಿಂದಲೂ, ಮಾಗಧರಿಂದಲೂ, ಸ್ತುತಿಸಲ್ಪಡುವವನಾಗಿ, ಕವೀಶ್ವರರಿಂದಮಾಡಲ್ಪಟ್ಟ ರಸಭರಿತಗಳಾದ ಗದ್ಯಪದ್ಯಗಳಿಂದ ಕೀರ್ತಿಸಲ್ಪಡುವವನಾಗಿ ಮುಂದೆಹೊಡುತ್ತಿರುವ ಸಂಗೀತಗಾರರಿಂದ ನಾನಾವಿಧವಾಗಿಕೀರ್ತಿಸಲ್ಪಟ್ಟ ಯಶಸ್ಸುಳ್ಳವನಾಗಿ, ತಪಸ್ವಿಗಳ ಆಶೀರ್ವಾದಗಳಿಂದ ಪೋಷಿಸಲ್ಪಡುವವನಾಗಿ, ವಿಟ, ವಿದೂಷಕ, ಪೀಠಮರ್ದಕರೆಂಬ ಭೋಗಸಖರಿಂದ ಬಳಸಲ್ಪಟ್ಟವನಾಗಿ, ಅನೇಕ ಬಿರುದಾವಳಿಗಳನ್ನು

ಹೇಳುತ್ತಿರುವ ಸ್ತುತಿಪಾಠಕರುಗಳಿಂದ ಸುತ್ತಲ್ಪಟ್ಟವನಾಗಿ, ಅವರಿಗೆ ಇಷ್ಟವಾದ ಆಭರಣಮುಂತಾದ ಬಯಕೆಗಳನ್ನು ಕೊಡುವವನಾಗಿ, ಸಮಾನವಯಸ್ಕರಾದ ಮಿತ್ರರನ್ನು ಕ್ರೀಡಾಲಾಪಗಳಿಂದ ಸಂತೋಷಪಡಿಸುವವನಾಗಿ, ರತ್ನದ ಸಣ್ಣ ಸಣ್ಣ ಘಂಟೆಗಳಗೊಂಚಲುಗಳಿಂದ ಮುಚ್ಚಲ್ಪಟ್ಟ ತುದಿಯಿಂದ ಮನೋಹರವಾದ ಚಿನ್ನದ ಬೆತ್ತದಕೋಲನ್ನು ಕೈಯಿಂದ ಅಲ್ಲಾಡಿಸುತ್ತಾಬಂದು, ಭಕ್ತರಸಭೆಗೆ ನಮಸ್ಕರಿಸದೆ, ಚಿನ್ನದ ಹಾವುಗೆಗಳನ್ನು ಪಾಡದಲ್ಲಿ ಮೆಟ್ಟಿಕೊಂಡಿರುವವನಾಗಿಯೇ ಶಿವಾಲಯವನ್ನು ಪ್ರವೇಶಿಸಿದನು. ಆಗ ಪರಾಕ್ರಮಿಯಾದ ಮಿರುಮಿಂಡಯ್ಯನು ಆ ವಿಧವಾದ ಸುಂದರನಂಬಿಯನ್ನು ನೋಡಿ ಕೊಬ್ಬಿದನಡತೆಯುಳ್ಳ ಈ ಧೂರ್ತನ್ಯಾರೆಂದು ಕೋಪಿಸಿಕೊಂಡನು. ಆ ಸಭೆಯು ಆ ಮಿರುಮಿಂಡಯ್ಯನ ಪ್ರತಾಪವನ್ನೂ, ಸುಂದರನಂಬಿಯಪ್ರಭಾವವನ್ನು ಪೂರ್ವದಲ್ಲೇತಿಳಿದದ್ದರಿಂದ ಮುಖವನ್ನು ಬಗ್ಗಿಸಿಕೊಂಡು ಸುಮ್ಮನಿತ್ತು. ಮಿರುಮಿಂಡಯ್ಯನಮಾತನ್ನು ಒಬ್ಬ ಮುದುಕನಾದ ಶಿವದ್ವಿಜನುಕೇಳಿ, ನೀನುಕೋಪವನ್ನು ಮಾಡಬೇಡ, ಆತನು ಶಿವನಿಂದ ತಿರಸ್ಕರಿಸಲ್ಪಟ್ಟವನು. ಈವಲ್ಮೀಕೇಶ್ವರನು ಆತನಿಗೆ ಪ್ರತಿದಿನವೂ ಸಾವಿರವರಹಗಳನ್ನು ಕೊಡುತ್ತಾನೆ. ಯಾವಾಗವೇಶ್ಯಾಸ್ತ್ರೀಗೂ ಸುಂದರನಂಬಿಗೂ, ಕಲಹವುಂಟಾಗುತ್ತದೆಯೋ ಆಗಶಿವನು ಮಿತ್ರನಂತೆ ಅವರಿಬ್ಬರನ್ನು ಸೇರುತ್ತಾನೆ. ಆಕೆಯಪ್ರಣಯಕೋಪವು ಪ್ರಿಯವಚನಗಳಿಂದ ನಿವಾರಿಸುವದಕ್ಕೆ ಅಸಾಧ್ಯವಾದರೆ, ಆ ಸುಂದರನಂಬಿಯುಬಾಡಿದಮುಖವುಳ್ಳವನಾಗಿಶಿವನನ್ನು ಬೇಡುಕೊಳ್ಳುತ್ತಾನೆ. ವಲ್ಮೀಕಿನಾಥನು, ಈತನಭಕ್ತಿಯಿಂದಲೋ ತುಂಬುರುನಾರದರನ್ನು ಅತಿಕ್ರಮಿಸಿದ ಈತನಗಾನದಿಂದಲೋ ಮಗನಲ್ಲಿ ವಾತ್ಸಲ್ಯವಿಟ್ಟಿರುವಂತೆ ಈತನಲ್ಲಿ ವಾತ್ಸಲ್ಯವಿಟ್ಟಿದ್ದಾನೆ. ಇದಲ್ಲದೇ ಶಿವನು ಸುಂದರನಂಬಿಯುಹೆಸರುಳ್ಳ ಒಬ್ಬ ಬಾಲಕನು ಮೊಸಳೆಯಿಂದ ಹಿಡಿಯಲ್ಪಟ್ಟಿರಲು; ಮೂರುವರ್ಷಗಳಮೇಲೆ ಶಿವನು ಅದರಬಾಯಿಂದ ಬಿಡಿಸಿಕೊಡಿಸಿದನು. ಮಿರುಮಿಂಡಯ್ಯನು ಶಿವದ್ವಜನಿಂದಹೇಳಲ್ಪಟ್ಟ ಆ ಮಾತನ್ನು ಕೇಳಿ ಶಿವನಿಗೂ ಭಯವನ್ನುಂಟುಮಾಡುವ ದಾರುಣವಾದವಾಕ್ಯವನ್ನು ಹೇಳಿದನು. ಏನಂದರೆ;— ಶಿವನಿಗೆ ಅವಮಾನವನ್ನು ಮಾಡುವ ಇವನು ಭಕ್ತನೋ ? ಸಭೆಯಲ್ಲಿರುವಭಕ್ತರನ್ನು ಹುಲ್ಲಿನಂತೆ ಎಣಿಸಿ, ಶಿವಾಲಯಕ್ಕೆ ಪ್ರವೇಶಿಸಿದನು. ಶಿವನು ಕೋಪಿಸಿಕೊಂಡರೆಭಕ್ತನು ಕಾಪಾಡುವನು. ಭಕ್ತನು ಕೋಪಿಸಿಕೂಂಡರೆ ಶಿವನು ರಕ್ಷಿಸಲಾರನು. ಅದೆಲ್ಲಾ ಹಾಗಿರಲಿ. ಈಗ ಆತನವೈಭವವನ್ನು ನೋಡುವೆವು. ಧೂರ್ತ

ಧುರಂಧರನಾದ ಈ ಜಾರನು ಇವನಿಗೆ ಸೇವಕನಾದಶಿವನು ಇವರಿಬ್ಬರೂ ಧೂರ್ತನಾದ ಸ್ವಾಮಿಯಿಲ್ಲದಿರುವವರಾಗಿಯೂ, ಧೂರ್ತತ್ವಕ್ಕೆ ದೂರರಾಗಿಯೂ ಇರುವ ನಮಗೆ ಹೊರಗು. ಈ ಪ್ರಕಾರವಾಗಿಹೇಳಿ, ಸಭೆಯಲ್ಲಿ ಕೋಪದಿಂದ ಕೈಗಳನ್ನು ಮೂರುಬಾರಿ ತಟ್ಟಿದನು. ಆಗ ಹರಶಬ್ದ ಪೂರ್ವಕವಾಗಿ ಒಂದು ಕಲಕಲಧ್ವನಿಯುಂಟಾಯಿತು. ವಲ್ಮೀಕೇಶ್ವರನು ಆಮಾತನ್ನು ಕೇಳಿ. ಸುಂದರನಿಗೆ ತನ್ನ ಭಕ್ತ ದೆಹೀಕತ್ವವನ್ನು ಪ್ರಕಾಶಪಡಿಸಲಿಚ್ಛೈಸಿದವನಾಗಿ, ಲಿಂಗವಿಗ್ರಹದಿಂದ ಸಾಕಾರನಾಗಿ ಆವಿರ್ಭವಿಸಿ, ಬಹಳವಾಗಿ ನಡುಗುತ್ತಾ ಭಯವನ್ನು ಹುಟ್ಟಿಸುತ್ತಾ;— ಅಯ್ಯಾ ಸುಂದರನೇ ಇನ್ನು ನಾವು ಇಲ್ಲಿರತಕ್ಕದ್ದು ಯೋಗ್ಯವಲ್ಲ. ಎಲ್ಲಿಗಾದರೂ ಹೋಗಬೇಕು. ಎಂದು ಕೇಳಿ. ಸುಂದರನನ್ನು ಕರೆದುಕೊಂಡು, ಪಾರ್ಶ್ವದಬಾಗಲಿಂದಹೊರಟು, ಒಂದುಹರಿದಾರಿದೂರದಲ್ಲಿ ಮನೋಹರವಾದ ಉದ್ಯಾವನವನ್ನು ಪ್ರವೇಶಿಸಿದನು. ಆವನವು ಎಂಥಾದ್ದೆಂದರೆ;—ಚಲಿಸುತ್ತಿರುವ ಭ್ರಮರಗಳ ಸಮೂಹದಿಂದ ವ್ಯಾಪ್ತವಾದ ಮೊಗ್ಗೆಗಳಕೊನೆಗಳುಳ್ಳ ಅಶೋಕ, ಅಡಿಕೆ, ಸುರಹೊನ್ನೆ. ಬಕುಳ, ನಿಂಬೆ, ಸೀಮಾವು, ಮಲ್ಲಿಗೆ, ಮೊಲ್ಲೆ, ಬಂದುಗೆ, ಹೊಂಗೇದಗೆ, ತಾಳೆ, ಹೊಂಗೆ, ಮೊದಲಾದ ವೃಕ್ಷಗಳಿಂದ ಅಲಂಕರಿಸಲ್ಪಟ್ಟಿದ್ದಾಗಿಯೂ, ಮಕರಂದಪಾನದಿಂದುಂಟಾದ, ಮದದಿಂದ ನಿಶ್ಚಲವಾದ ತುಂಬಿಗಳಿಂದ ತುಂಬಿದ್ದಾಗಿಯೂ, ಸುವಾಸನೆಯುಳ್ಳ ಮಂದಮಾರುತನುಳ್ಳದ್ದಾಗಿಯೂ, ಸಕಲದಿಕ್ಕುಗಳನ್ನು ಸುಗಂಧಮಯವಾಗಿ ಮಾಡುವದಾಗಿಯೂ, ವಸಂತನಿಗೆ ಆಶ್ರಯವಾಗಿರುವರಾಜ್ಯವಾಗಿಯೂ, ಶೃಂಗಾರರಸ ಚಕ್ರವರ್ತಿಯಾದ ಮನ್ಮಥನಿಗೆ ದಂಡಿನಪಾಳೆಯವಾಗಿಯೂಇತ್ತು. ಅಲ್ಲಿ ಬಳ್ಳಿಗಳ ಗುಂಪಿನಿಂದ ಸುತ್ತಲ್ಪಟ್ಟಿದ್ದಾಗಿಯೂ, ಹಗಲಿನಲ್ಲಿಕೂಡ ಹೂಗೊಂಚಲುಗಳಲ್ಲಿ ಆಸಕ್ತಳಾದ ಭ್ರಮರಗಳ ಸಮೂಹದಿಂದ ಕತ್ತಲೆಯಾಗಿಮಾಡಲ್ಪಟ್ಟದ್ದಾಗಿಯೂ, ಮೊಳಕಾಲುದ್ದಕ್ಕೆ ತನ್ನಷ್ಟಕ್ಕೆ ತಾನೇಸುರಿದಿರುವ ಹೂವುಗಳಹಾಸಿಗೆಯಿಂದಕೂಡಿದ್ದಾಗಿಯೂ ಪರಿಮಳಿಸುವ ಮೂವಿನಹುಡಿಯಿಂದಮಾಡಲ್ಪಟ್ಟ ಜಗಲಿಯುಳ್ಳದ್ದಾಗಿಯೂ ಇರುವ ರಹಸ್ಯವಾದ ಒಂದು ಮೂಲೆಯಲ್ಲಿ ಕುಳಿತುಕೊಂಡು, ತನ್ನನಿಟ್ಟುಸುರುಗಳಿಂದ ಬಹು ಆಯಾಸವುಂಟಾಗಿದೆಯೆಂಬರ್ಥವನ್ನು ತೋರಿಸುತ್ತಾ, ಅಲ್ಲಾಡಿದಾಗ್ಯೂ ದಾರಿಯನ್ನು ಆವರಿಸಿ ನೋಡಿದನು. ಹಣೆಯಲ್ಲಿ ಚಂದ್ರನ ಅಮೃತಕಲೆಗಳಂತೆ ತೋರುವ ಬೆವರಿನ ಹನಿಗಳಂತೆ ತೋರುವ ಬೆವರಿನ ಹನಿಗಳನ್ನು ಬೆರಳಿನಿಂದ ತೆಗೆದಿಟ್ಟನು. ಸುಂದರನು

ಕೂಡ ಮಕರಂದರಸದಿಂದ ವ್ಯಾಪ್ತವಾಗಿಯೂ, ಮೆಲ್ಲಮೆಲ್ಲನೆ ಬೀಸುವುದಾಗಿಯೂ, ಇರುವ ಆ ಉದ್ಯಾನದ ವಾಯುವಿಗೆ ಸಂತೋಷಪಟ್ಟವನಾಗಿ ಶಿವನಪಾದಗಳನ್ನು ತನ್ನ ತೊಡೆಯಮೇಲೆ ಮಡಗಿಕೊಂಡು ಒತ್ತುತ್ತಾ,-ಎಲೈ ಸ್ವಾಮಿಯೇ, ಜಗಧೀಶನಾದ ನಿನಿಗೆ ಭಯವೇಕೆಂದು ಬಿನ್ನೈಸಲು ಶಿವನು,--ಅಯ್ಯಾ ಸುಂದನೇ ಬೆಂಕಿಗೂ ಉರಿಗೂ ಭೇದವಿಲ್ಲದಂತೆಯೂ, ಸ್ಪಟಿಕಕ್ಕೂ ಕಾಂತಿಗೂ ಭೇದವಿಲ್ಲದಂತೆಯೂ, ನನಗೂ ನನ್ನ ಭಕ್ತರಿಗೂ ಸ್ವಲ್ಪವಾದರೂ ಭೇದವಿಲ್ಲ. ಭಕ್ತರ ಪ್ರಾಣಗಳೇ ನನ್ನ ಪ್ರಾಣಗಳು. ಭಕ್ತರ ದೇಹವೇ ನನ್ನ ದೇಹವು, ಭಕ್ತರ ದೂಷಣೆಯೇ ನನ್ನ ದೂಷಣೆಯು. ಭಕ್ತರಸ್ತೋತ್ರವೇ ನನ್ನ ಸ್ತೋತ್ರವು. ಭಕ್ತರನ್ನು ಪೂಜಿಸದೆ ನನ್ನನ್ನು ಪೂಜಿಸುವುದು ನಿಷ್ಪ್ರಯೋಜನವು.

ಮಮಾಪಿಕೋಪಿ ಭಕ್ತಾನಾಮಪಿಭೆದೊಲ್ಪಕೋಪಿನ || ಅಗ್ನೇರ್ಹತೆರಿವಾವಶ್ಯಂಸ್ಫಟಿಕಸ್ಯದ್ಯುತರಿವ || ಭಕ್ತಪ್ರಾಣಾ ಮಮಪ್ರಾಣಾಃ ಭಕ್ತಾಂಗಂತುಮಮಾಂಗಕಂ | ಭಕ್ತನಿಂದ್ಯೆವಮನ್ನಿಂದಾಮತ್ಸ್ತವೊಭಕ್ತಸಂಸ್ತವಃ || ಭಕ್ತಪೂಜಾಂವಿನಾಪೂಜಾ ನಿಷ್ಫಲಾ ಮಮನಿಶ್ಚಿತಾ || ||ಎಂಬುವುದು ಮೊದಲಾದ ಆಗಮ ವಚನವು ಪ್ರಮಾಣದಿಂದ ನನಿಗೆ ಭಕ್ತನೇ ಆಶ್ರಯವು. ಭಕ್ತನೇದೇಹವು. ಭಕ್ತನ ಮನಸ್ಸೇ ನನ್ನ ಮನಸ್ಸು, ಭಕ್ತರನ್ನುಬಿಟ್ಟು ಒಂದು ನಿಮಿಷವಾದರೂ ಇರಲಾರೆನು. ಬಾಣಾಸುರನು ಪ್ರತಿದಿನವೂ ಸಾವಿರಸಾರಿ ನನ್ನನ್ನ ಪೂಜಿಸುವ ವ್ರತವನ್ನು ಹಿಡಿದದ್ದರಿಂದ ಅವನಿಗೆ ಯಾವದೊಂದು ದೇಹಧರ್ಮಕ್ಕೂ ಅವಕಾಶವಿಲ್ಲದಂತಾಯಿತು. ಅವನ ಪ್ರತಿಜ್ಞೆಯನ್ನು ನಾನು ತಿಳಿದು, ಅವನಿಗೆ ಸಾವಿರ ತೋಳುಗಳನ್ನು ಕೊಟ್ಟೆನು. ಅಂದಿನಿಂದ ಅವನು ಒಂದೇಸಾರಿ ನನ್ನನ್ನು ಪೂಜಿಸುತ್ತಾನೆ. ನಾನು ಗರ್ವಶೂನ್ಯನಾಗಿಯೂ, ಭಕ್ತರ ಸೇವೆಯಲ್ಲಿ ಕುತೂಹಲವುಳ್ಳವನಾಗಿಯೂ, ಇರುವ ಅವನಿಂದ ಪೂಜಿಲ್ಪಟ್ಟವನಾಗಿ, ಅವನ ಮನೆಯ ಬಾಗಿಲನ್ನು ಕಾಯುತ್ತೇನೆ.

ಕರಿಕಾಲನೆಂಬ ರಾಜನು ಕಾವೇರೀ ನದಿಗೆ ಕಟ್ಟೆಯನ್ನು ಕಟ್ಟಿಸುವಾಗ ನಾನು ಪಿಟ್ಟವ್ವೆಗೆ ಸೇವಕನಾಗಿ ಮಣ್ಣು ಹೊತ್ತೆನು. ನನಗೂ ನಿರಹಂಕಾರಿಗಳಾದ ನನ್ನ ಭಕ್ತರಿಗೂ ಗರ್ವವಿಲ್ಲದವರೆ ಬಂಧುಗಳು.

ಕಲಿಕಾಮನೆಂಬ ಭಕ್ತನು ಗ್ರಾಮಾಂತರದಲ್ಲಿ ವಾಸಿಸುವನಾಗಿ ನಮ್ಮಿಬ್ಬರಿಗಿರುವ ಸಾಮರಹಸ್ಯವನ್ನೂ ವೇಶ್ಯಾಗೃಹದಲ್ಲಿ ನಾನು ಮಾಡುವ ದೌತ್ಯವನ್ನೂ

ಕೇಳಿ;--ಯಾವಾಗಲೂ ಸೂಳೆಯರ ಮನೆಗೆ ದೌತ್ಯಕ್ಕೆ ಓಡಿಸಿಡುವ ಸ್ವಾಮಿಯ ಪಾದಕಮಲವು ಕೆಂಪಾಗುವದೆಂದು ಯಾವನೂ ಆಲೋಚಿಸುವದಿಲ್ಲವಲ್ಲಾ! ಭಕ್ತರಲ್ಲಿ ಅಧಮನಾದ ಸುಂದರನು ಭಕ್ತರಿಗೆ ಬಂಧುವಾಗಿಯೂ ಭಕ್ತವತ್ಸಲನಾಗಿಯೂ, ಇರುವದನ್ನು ಕೆಲಸಗಳಲ್ಲಿ ನೇಮಿಸುತ್ತಾನೆಂದು ಯಾರೂ ಚಿಂತಿಸುವದಿಲ್ಲ. ಸುಂದರನು ಸ್ವಾಮಿಯನ್ನು ನಿಜಕಾರ್ಯಗಳಲ್ಲಿ ಹ್ಯಾಗೆ ನೇಮಿಸುತ್ತಾನೆ. ಆ ಸ್ವಾಮಿಯು ಹೇಗೆ ಭೃತ್ಯನಿಗೆ ಭೃತ್ಯತ್ವವನ್ನು ಮಾಡುತ್ತಾನೆ. ಸ್ವಾಮಿಯಾದವನು ಯಾವಾಗಲೂ ಭೃತ್ಯನನ್ನು ಕೆಲಸದಲ್ಲಿ ನೇಮಿಸುವದುಂಟು. ಭೃತ್ಯನು ಸ್ವಾಮಿಯನ್ನು ಕೆಲಸಗಳಲ್ಲಿ ನೇಮಿಸುವದೆಲ್ಲಿಯೂ ಇಲ್ಲ. ಇದು ಕಲಿಯ ವಿಲಾಸವು. ನಾನು ಸುಂದರನ ಕೆಟ್ಟ ನಡತೆಯನ್ನು ಸೈರಿಸಲಾರೆನು, ಎಂದು ಕೋಪದಿಂದ ನಿನ್ನನ್ನು ಕೊಲ್ಲುವುದಕ್ಕೆ ಉದ್ಯುಕ್ತನಾಗಲು, ನಾನು ಅವನನ್ನು ಅನುಸರಿಸಿ ಶಾಂತಿಪಡಿಸಲಿಲ್ಲವೇ?. ಯಾವಯಾವಕಾಲದಲ್ಲಿ ನೀನು ಹೆಚ್ಚಾದ ಹಣವನ್ನು ಅಪೇಕ್ಷಿಸುತ್ತಿಯೋ ಆಯಾಕಾಲದಲ್ಲಿ ಕೊಡುತ್ತೇನಲ್ಲಾ. ನಿನಗೆ ನಿಧಿಯು ಸಿಕ್ಕಿದೆಯೋ? ಸಿದ್ಧರಸವು ದೊರಿಕಿದಿಯೊ; ನಿಮ್ಮ ಅಜ್ಜನಿಂದ ನಮ್ಮಜ್ಜನು ತೆಗೆದುಕೊಂಡಿದ್ದ ಹಳೇ ಸಾಲವೇನಾದರೂ ಇದ್ದರೆ ಹೇಳು. ಭಕ್ತರಮುಂದೆ ನೀನು ಯಾರು? ಅವರಲ್ಲಿ ಅಹಂಕಾರ ತೋರಿಸುವುದಕ್ಕೆ ನಿನಗೆ ಶಕ್ತಿಯುಂಟೇ? ಬ್ರಹ್ಮ, ವಿಷ್ಣು ಇಂದ್ರ ಮೊದಲಾದ ದೇವತೆಗಳಿಗೂ ಶಕ್ತಿಯಿಲ್ಲ. ಈ ಪ್ರಕಾರವಾದ ಶಿವನ ವಚನವನ್ನು ಸುಂದರನುಕೇಳಿ, ಭಯದಿಂದ ನಡುಗುತ್ತಾ, ಶಿವನ ಪಾದಗಳಿಗೆರಗಿ, ಭಕ್ತರನ್ನು ಸ್ತುತಿಸು ವುದಕ್ಕೆ ಉಪಕ್ರಮಿಸಿದನು.

ಯಾವನು ಶಿವನಿಗೆ ಪ್ರತಿದಿನವೂ ಗಂಧಸಮರ್ಪಣವಂ ಮಾಡುತ್ತೇನೆಂದು ವ್ರತವಂ ಪಿಡಿದು, ಅದರ ನಿಮಿತ್ತದಿಂದ ದ್ರವ್ಯವೆಲ್ಲವೂ ವ್ರಯವಾಗಿ ವ್ರತಭಂಗವುಂಟಾಗುತ್ತಿರಲು, ಮೊಳಕೈಯ್ಯನ್ನು ಗಂಧದ ಕೊರಡು ಮಾಡಿಕೊಂಡು ಒಂದಾನೊಂದು ಕಲ್ಲಿನಮೇಲೆ ತೇದು, ಸುವಾಸನೆಯುಳ್ಳ ಗಂಧವನ್ನು ಕೊಟ್ಟು ಶಿವನಿಗೆ ತೃಪ್ತಿಪಡಿಸಿ, ವ್ರತವನ್ನು ನೆರವೇರಿಸಿದನೋ ಆ ಅಣುಮೂರ್ತಿಗೆ ನಾನು ದಾಸಾನುದಾಸನು.

ಪ್ರತಿದಿನವೂ ಶಿವನಿಗೆ ಸಾವಿರ ದೀಪಗಳನ್ನು ಸಮರ್ಪಿಸುತ್ತೇನೆಂದು ವ್ರತವನ್ನನುಸರಿಸಿ, ಆ ಕಾರಣದಿಂದ ದ್ರವ್ಯವೆಲ್ಲವೂ ಬರಿದಾಗಲು, ಧೈರ್ಯಗೆಡದೆ ಕಡೆಗೆ ದೇಹವನ್ನೇ ದೀಪಸ್ತಂಭವನ್ನಾಗಿಯೂ ಮಸ್ತಕವನ್ನೇ ದೀಪಪಾತ್ರೆಯನಾ

ಗಿಯೂ, ಜಡೆಯನ್ನು ಭಕ್ತಿಯೆಂಬ ತೈಲರಸದಿಂದ ನೆನೆದ ಬತ್ತಿಯನ್ನಾಗಿಯೂ ಮಾಡಿ, ದೀಪವನ್ನು ಹಚ್ಚಿ ಶಿವನನ್ನು ಮೆಚ್ಚಿಸಿದ ಕಡವಲ ನಂಬಿಗೆ ಭೃತ್ಯಾನುಭೃತ್ಯನಾಗಿದ್ದೇನೆ.

ಯಾವನು ತ್ರಿಕಾಲದಲ್ಲೂ ಮಹಿಸಾಕ್ಷಿ ಧೂಪವನ್ನು ಸಮರ್ಪಿಸುತ್ತೇನೆಂದು ಸ್ಥಿರವಾದ ಪ್ರತಿಜ್ಞೆಯನ್ನು ಮಾಡಿ, ಒಂದು ಕಾಲದಲ್ಲಿ ಅದು ದೊರೆಯದ ಕಾರಣದಿಂದ ವ್ಯಸನಗೊಂಡವನಾಗಿ, ನಾಗಕನ್ಯೆಯರ ಗೀತವನ್ನು ಕೇಳಿ ಶ್ಲಾಘನೆಗಾಗಿ ತಲೆಯನಲ್ಲಾಡಿಸುವ ನಾಗನಾಥಲಿಂಗದಬಳಿಗೆ ಬಂದು, ಆ ಲಿಂಗದ ಚಲನೆಗೆ ಭಯಪಟ್ಟಿರುವ ರಾಜನಿಂದ ಪಡೆಯಲ್ಪಟ್ಟ ಧೂಪದ ರಾಸಿಯನ್ನು ನಿಶ್ಚಲವಾಗಿ ಸಮರ್ಪಿಸಿದನೋ ಆ ಕಲ್ಲಿನಾಥನಿಗೆ ನಾನು ಯಾವಾಗಲೂ ದಾಸಾನುದಾಸನಾಗಿದ್ದೇನೆ.

ಯಾವನು ಪ್ರತಿದಿನವೂ ಶಂಕರನಿಗೆ ನೆಲ್ಲಕ್ಕಿಯ ಪಾಯಸವನ್ನು ಸಮರ್ಪಿಸುವ ವ್ರತವನ್ನು ಹಿಡಿದು, ಆದರಿಂದ ಧನವೆಲ್ಲವೂ ಕ್ಷೀಣವಾದಾಗ್ಯೂ ವ್ರತಪ್ರಯತ್ನವು ಕ್ಷೀಣವಾಗದೆ, ಯಾವನ ಸಮೀಪದಲ್ಲಾಗಲೀ, ಎಂಥಾ ಕೆಲಸವನ್ನಾಗಲೀ ಮಾಡಿ, ಭತ್ತವನ್ನು ತಂದು, ವ್ರತವನ್ನು ನಡೆಸುತ್ತಾ. ಕೆಲವುದಿನದ ಮೇಲೆ ಭತ್ತವನ್ನು ಕೊಡತಕ್ಕ ಕೆಲಸಗಳು ದೊರೆಯದಿರಲು, ಐದುದಿನಗಳವರಿಗೂ ಉಪವಾಸವಿದ್ದು, ಆರನೇ ದಿನದಲ್ಲಿ ಶಿವನ ಕೃಪೆಯಿಂದ ಎರಡುವಾನ ನೆಲ್ಲಕ್ಕಿಯನ್ನು ಪಡೆದು ತೆಗೆದುಗೊಂಡು ಬರುವಲ್ಲಿ ಕಾಲುಜಾರಿ ಭೂಮಿಯಮೇಲೆ ಬೀಳುವಾಗ ಆ ತಂಡುಲಸಮೂಹವು ಕೈಬೆರಳ ಉಗುರುಗಳನ್ನಿಡುವುದಕ್ಕೂ ಅಸಾಧ್ಯವಾದ ಒಂದು ಬಿಲದಲ್ಲಿ ಬೀಳಲು, ಮೆಲ್ಲನೆ ಎದ್ದು, ಯಾವ ಉಪಾಯದಿಂದಲೂ, ಸಾಧ್ಯವಾಗದಿರುಉದನ್ನು ನೋಡಿ, ಸೊಂಟದಿಂದ ಕತ್ತಿಯನ್ನು ತೆಗೆದು ತೀಕ್ಷ್ಣವಾಗಿರುವ ಅದರಿಂದ ತಲೆಯನ್ನು ಛೇದಿಸಿಕೊಳ್ಳಲುದ್ಯುಕ್ತನಾಗಿ ಕರುಣಾಶಾಲಿಯಾದ ಶಿವನಿಂದ ರಕ್ಷಿಸಲ್ಪಟ್ಟನೋ ಪಾರ್ವತಿಯ ದಯಾರಸಭರಿತವಾದ ಕಡೆಗಣ್ಣೋಟದಿಂದ ರಕ್ಷಿಸಲ್ಪಟ್ಟ ದೇಹವುಳ್ಳ ಆ ಅರಿವಾಲನಿಗೆ ನಾನು ನಿರಂತರವೂ ಭೃತ್ಯನಾಗಿದ್ದೇನೆ.

ನೀರಿನಲ್ಲಿ ಬಲೆಯನ್ನು ಬೀಸಿ, ಮೊದಲುಸಿಕ್ಕಿದ ಮೀನನ್ನು ಶಿವನಿಗೆಂದು ಬಿಟ್ಟು ಆಮೇಲೆಸಿಕ್ಕಿದ ಮೀನುಗಳಿಂದ ದೊರೆದ ಧನದಿಂದ ಜಂಗಮಸೇವೆಯಂ ನಿರಂಕುಶವಾಗಿ ನಿರಂತರದಲ್ಲೂ ಮಾಡುತ್ತಿರಲು, ಒಂದುಸಾರಿ ಎಲ್ಲಿಯೂ ಬೇಟೆ

ಯು ದೊರೆಯದೆ ಹೋದದ್ದರಿಂದ ಐದು ದಿನಗಳನ್ನು ಕಳೆದು ಆರನೇದಿನ ನೀರಿನಲ್ಲಿ ಬಲೆಯನ್ನು ಹಾಕಿ, ಅದರಲ್ಲಿ ಸಿಕ್ಕಿದ ಮೀನು ಸುವರ್ಣಮಯವಾದದ್ದಾಗಿರಲು; ಅದನ್ನು ಶಿವನಿಗೆಂದುಬಿಟ್ಟು, ಆಮೇಲೆ ಎಲ್ಲಿ ಬಲೆಯನ್ನು ಬೀಸಿದಾಗ್ಯೂ ತಿರಿತಿರಿಗಿ ಆಮೀನನ್ನೇ ಕಂಡು, ಇನ್ನೊಂದುಮಡುವಿಗೆ ಹೋಗಿ, ಅಲ್ಲಿಯೂ ಅದನ್ನೇಕಂಡು, ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ, ಪ್ರತಿಜ್ಞೆಯಂಮಾಡಿ ಬಲೆಯನ್ನು ಬೀಸಿ, ಅದರಲ್ಲಿ ನಂದಿವಾಹನನಾಗಿಯೂ, ಪಾರ್ವತೀಸಮೇತನಾಗಿಯೂ, ನಾಶರಹಿತನಾಗಿಯೂ ಇರುವ ಶಿವನನ್ನು ನೋಡಿ, ಆತನಿಂದ ಗಣಪದವಿಯನ್ನು ಪಡೆದನೋ ಆ ಇರುವೋತ್ತನಿಗೆ ನಾನು ದಾಸಾನು ದಾಸನಾಗಿದ್ದೇನೆ.

ಯಾವನು ಭಸ್ಮರುದ್ರಾಕ್ಷಧಾರಿಯನ್ನು ಸಾಕ್ಷಾತ್ಪರಶಿವನೆಂದು ಭಾವಿಸುತ್ತಾ, ಸಮಸ್ತವೈರಿರಾಜರಿಂದಲೂ ಕಪ್ಪವನ್ನು ತೆಗೆದುಕೊಳ್ಳಬೇಕೆಂದು ಪ್ರಯತ್ನಿಸಿ, ಒಬ್ಬಶತ್ರುವಿನ ಸಂಗಡ ಯುದ್ಧವನ್ನುಮಾಡುತ್ತಿರುವಲ್ಲಿ ಅವನು ತನಗೆ ಅಪಜಯವಾಗುವದೆಂದು ನೆನಸಿ, ಕಪಟದಿಂದ ಭಸ್ಮರುದಾಕ್ಷ ಮೊದಲಾದ ಶೈವಚಿಹ್ನೆಗಳನ್ನು ಧರಿಸಿಕೊಂಡು, ಓಡಿಹೋಗುತ್ತಿರಲು; ಅವನನ್ನು ನೋಡಿ, ಬೇಗ ಕತ್ತಿಯನ್ನು ಬಿಟ್ಟು, ಅವನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದವನಾಗಿ ಅವನಿಂದ ಪ್ರಯೋಗಿಸಲ್ಪಟ್ಟ ಕಮಲಮಾಲಿಕೆಯಂತಿರುವ ಖಡ್ಗದಿಂದ ಆಲಿಂಗಿಸಲ್ಪಟ್ಟ ಕಂಠಉಳ್ಳವನಾಗಿ, ಶಿವನಿಂದ ನಿತ್ಯತ್ವವನ್ನು ಪಡೆದನೋ ಆ ಏಣಾಧಿನಾಥನ ದಾಸಾನು ದಾಸನಾಗಿದ್ದೇನೆ.

ಯಾವನು ದಿಗ್ವಿಜಯಕಾಲದಲ್ಲಿ ಸೈನ್ಯಾಧಿಪತಿಗಳಿಂದ ಮೂವತ್ತು ಬಂಡಿಗಳಲ್ಲಿ ತುಂಬಿಕೊಂಡುತರಲ್ಪಟ್ಟ ಶತ್ರುಗಳತಲೆಗಳ ಸಮೂಹದೊಳಗೆ ರಕ್ತದಿಂದ ನೆನದು ಜಡೆಯಂತಿರುವ ಒಬ್ಬನಕೂದಲನ್ನು ನೋಡಿ, ಇದು ಶಿವಭಕ್ತನತಲೆಯೆಂದು ತಿಳಿದು, ತನ್ನ ತಲೆಯನ್ನು ಕತ್ತರಿಸಿ ಮಡಗಿ, ಶಿವನಿಂದ ಮೋಕ್ಷವನ್ನು ಪಡೆದನೋ ಆ ಕರೆಯೂರಚೋಳನಿಗೆ ನಾನು ದಾಸಾನುದಾಸನಾಗಿದ್ದೇನೆ.

ಪೂರ್ವದಲ್ಲಿ ವ್ಯಾಘ್ರಪುರದಲ್ಲಿ ವಾಸಿಸುವವನೂ, ಸತ್ಯಸಂಧನೂ, ತಪಸ್ವಿಯೂ ಆದ ಯಾವನು ಒಂದಾನೊಂದುದಿನ ರಾತ್ರಿಯಲ್ಲಿ ಶಿವಾಲಯಕ್ಕೆಹೋಗಿ ಶಿವನ ದರ್ಶನವಂ ಮಾಡಿಕೊಂಡು, ಹಿಂತಿರಿಗಿ ತನ್ನ ಮನೆಗೆಬರುತ್ತಾ, ಬೀದಿಯಲ್ಲಿ ಉಪ್ಪರಿಗೆಯ ಮೇಲಣದಿಂದ ಒಬ್ಬಗಣಿಕೆಯಿಂದ ಚೆಲ್ಲಲ್ಪಟ್ಟ ನೀರಿನತುಂತುರುಗಳಿಂದ ಸೋಕಲ್ಪಟ್ಟವನಾಗಿ ತಾನು ಉಚ್ಚರಿಸಿದ ನೀಲಕಂಠಾ ಎಂಬ ಶಬ್ದವನ್ನು ಆ

ವೇಶಿಯು ಕೇಳಿ ಭಯಪಟ್ಟುಕೊಂಡು ಬಂದು ನಮಸ್ಕರಿಸಿ ತನ್ನ ಮನೆಗೆ ಕರೆದು ಕೊಂಡು ಹೋಗಿ ಎಣ್ಣೆಯನ್ನು ಒತ್ತಿ, ನೀರೆರೆದು, ನಿರ್ಮಲವಾದ ವಸ್ತ್ರವನ್ನು ಕೊಟ್ಟು, ಕಸ್ತೂರಿ, ಕುಂಕುಮಕೇಸರಿ, ಪಚ್ಚಕರ್ಪೂರ ಇವುಗಳನ್ನು ಬೆರಸಿದ ಗಂಧವನ್ನು ಲೇಪಿಸಿ, ಹೂವಂಮುಡಿಸಿ, ಮರ್ಯಾದೆಯ ತಾಂಬೂಲವನ್ನು ಕೊಟ್ಟು, ಸ್ವಲ್ಪದೂರ ಜೊತೆಯಲ್ಲಿಯೇ ಬಾಗಿಲತನಕ ಬಂದು ಬಿಡಲು; ಅಲ್ಲಿಂದಹೊರಟು, ಮೆಲ್ಲ ಮೆಲ್ಲಗೆತನ್ನ ಮನೆಗೆಸೇರಿ, ತನ್ನ ಆಗಮನವನ್ನೇ ನೋಡುತ್ತಾ ಬಾಗಿಲಲ್ಲಿ ನಿಂತಿದ್ದ ತನ್ನ ಪತ್ನಿಯು ತನ್ನ ಅಪೂರ್ವವಾದ ಅಲಂಕಾರವನ್ನು ನೋಡಿ, ಕಲುಷವಾದಮನಸ್ಸುಳ್ಳವನಾಗಿ, ರತಿಕ್ರೀಡೆಗೆಳಸಿಕೈಯಿಂದ ಮುಟ್ಟುವದಕ್ಕೆ ಬಂದಾಗ ನೀಲಕಂಠನಾಣೆಯೆಂದು ತಡೆಯಲು; ಅದು ಮೊದಲುಗೊಂಡು, ಬ್ರಹ್ಮಚಾರ್ಯ ವ್ರತವನ್ನವಲಂಬಿಸಿ, ಅನೇಕಸಂವತ್ಸರಗಳನ್ನು ಕಳೆದು, ಮುದುಕನಾಗಿರುವಾಗ, ಜಂಗಮವೇಶವನ್ನು ಧರಿಸಿಕೊಂಡರುವನಾಗಿ ಬಂದು, ಒಂದುಪಾತ್ರೆಯನ್ನು ಮಡಗಿರೆಂದು ಕೊಟ್ಟು, ಕೂಡಲೇಮಾಯದಿಂದ ತೆಗೆದುಕೊಂಡು, ಪ್ರಮಾಣವಂಮಾಡಿಸುವದಕ್ಕಾಗಿ, ಪಟ್ಟಣದ ಜನಗಳಿಂದ ಬಳಸಲ್ಪಟ್ಟ ತೀರವುಳ್ಳ ಒಂದುಕೊಳದೊಳಗೆ ಕರಕೊಂಡು ಹೋಗಿ, ಒಂದು ಕೋಲಿನತುದಿಗಳನ್ನು ಹಿಡಿಸಿದ ಶಿವನಿಂದ ಹೆಂಡತಿಸಹಿತವಾಗಿ ಆ ಕೊಳದನೀರಿನಲ್ಲಿ ಮುಳುಗಿಸಿ ಮುಳುಗಿಸಿ ಎತ್ತಲ್ಪಟ್ಟವನಾಗಿ ಹಿಂದೆಯಾರೂನೋಡದಿದ್ದಂಥಾ ಆಶ್ಚರ್ಯಕರವಾದ ಪ್ರಾಯವನ್ನು ಎಂಬತ್ತು ವರ್ಷಗಳವೇಲೆ ಪಡೆದು, ತಿರಿಗಿಭೂಲೋಕದಲ್ಲಿ ಎಂಬತ್ತುವರ್ಷಗಳಿದ್ದು, ಅಪರಿಮಿತ ಸುಖಗಳನ್ನು ಅನುಭವಿಸಿ, ಮಹಾಪುರುಷರಸೇವೆಯನ್ನು ಮಾಡಿ ಪತ್ನಿಯೊಡನೆ ಕೈಲಾಸವನ್ನು ಹೊಂದಿದನೋ ಆ ತಿರುನೀಲಕಂಠನಿಗ ನಾನು ದಾಸಾನುದಾಸನಾಗಿದ್ದೇನೆ.

ಯಾವನು ಶಿವಪೂಜೆಗೋಸ್ಕರ ತರಲ್ಪಟ್ಟಿದ್ದ ಪುಷ್ಪವನ್ನು ಆಸೆಯಿಂದ ತೆಗೆದು ಕೊಂಡ ತನ್ನ ಹೆಂಡತಿಯ ಹಸ್ತವನ್ನೂ ತೋಳನ್ನೂ ನಿಸ್ಪೃಹನಾಗಿಕತ್ತರಿಸಿ, ಶಿವನ ಅನುಗ್ರಹವನ್ನು ಪಡೆದನೋ ಆ ನರಸಿಂಗ ಮೊನೆಯಾರಿಗೆ ನಾನು ಭೃತ್ಯಾನು ಭೃತ್ಯನಾಗಿದ್ದೇನೆ.

ಸೇವೆಯಂಮಾಡಲಾರದೆ, ಭಸ್ಮ, ರುದ್ರಾಕ್ಷಿ, ಕಾಷಾಯಮುಂತಾದ ಶಿವಚಿಹ್ನೆಗಳನ್ನು ಧರಿಸಿಕೊಂಡು, ದೇಶಾಂತರಕ್ಕೆ ಹೋಗಿದ್ದು ಬಂದ ಮಲ್ಲನೆಂಬ ಹೆಸರುಳ್ಳ ತನ್ನ ದಾಸೀಪುತ್ರನನ್ನು ಸಾಕ್ಷಾನ್ಮಲ್ಲಿಕಾರ್ಜುನನಂಥೇ ಭಾವಿಸಿ, ಅವನ

ಪಾದೋದಕವನ್ನು ತೆಗೆದುಕೊಂಡವನಾಗಿ, ಗರ್ವದಿಂದ ಪಾದಗಳನ್ನು ತೊಳೆಯುವದಕ್ಕೆ ಅಪೇಕ್ಷಿಸದೆಹೋದ ತನ್ನ ಪಟ್ಟದಹೆಂಡತಿಯ ಕೈಗಳನ್ನು ಕಡಿದು, ಯಾವನು ಶಿವನ ಕಟಾಕ್ಷದಿಂದ ಮುಕ್ತಿಸಂಪತ್ತನ್ನು ಪಡೆದನೋ ಭಸ್ಮ ರುದ್ರಾಕ್ಷಧಾರಿಗಳನ್ನು ನೋಡಿ ಶಿವನೆಂದೇ ಬಾವಿಸತಕ್ಕ ಸ್ವಭಾವವುಳ್ಳ ಅಕವಿಕಂಬನ ಆಳಿನ ಆಳಾಗಿದ್ದೇನೆ.

ಭಕ್ತರಿಗೆ ಧನವನ್ನು ಕೊಡುತ್ತಾ, ಕೆಲವುಕಾಲದಮೇಲೆ ದರಿದ್ರನಾಗಿ, ಒಂದಾನೊಂದುದಿನ ಮಳೆಯಲ್ಲಿ ನೆನೆದು ನಡುಗಿಕೊಂಡು ಚಳಿಯಿಂದಬಾಧೆಪಟ್ಟುಕೊಂಡುಬಂದ ಒಬ್ಬಮುದುಕನನ್ನು ತನ್ನಗುಡಿಸಲಿಗೆ ಕರೆದು, ಆಮನೆಯ ಮರೆಮುಟ್ಟುಗಳನ್ನು ಮುರಿದು, ಅವುಗಳಿಂದ ಬೆಂಕಿಯನ್ನು ಪುಟಮಾಡಿ, ಅದರ ಉರಿಯಿಂದ ಶೀತಬಾಡೆಯನ್ನು ಪರಿಹರಿಸಿ, ಹಸಿವಾಗುತ್ತದೆಂದು ಹೇಳಿದ ಆ ವೃದ್ಧನಿಗೆ ಕೆಸರುಗದ್ದೆಯಲ್ಲಿ ನಾಟಿದ್ದಬೀಜದ ಬತ್ತವನ್ನು ಪ್ರಯಾಸದಿಂದ ತಂದು, ನೀರಿನಿಂದ ತೊಳೆದು, ಕಾದಹುರಿಯೋಡಿನಲ್ಲಿ ಹಾಕಿ, ಹುರಿದು, ಅದರಿಂದ ಅಕ್ಕಿಯನ್ನು ತೆಗೆದು, ಅನ್ನವನ್ನು ಮಾಡಿ, ಅದರಿಂದ ತೃಪ್ತಿಪಡಿಸಿ ಶಿವನನ್ನು ಮೆಚ್ಚಿಸಿ, ಪತ್ನಿಸಹಿತನಾಗಿ ಗಣಪದವನ್ನು ಪಡೆದನೋ ಶಿವಪಾದಕಮಲಧ್ಯಾನದಲ್ಲಿ ಆಸಕ್ತನಾದ ಮನಸುಳ್ಳವನಾದ ಆ ದಂಗುಳಿಮಾರನ ಭಂಟರ ಭಂಟನಾಗಿದ್ದೇನೆ.

ಯಾವನು ತನ್ನ ದೇಶದಲ್ಲಿಭವಿಗಳಾಗಿರುವರನ್ನೆಲ್ಲಾ ಕರಿಸಿ ವೇದಶಾಸ್ತ್ರಪುರಾಣಾಗಮಾದಿಗಳಿಂದ ಭೋಧಿಸಿ, ಅದಕ್ಕೆ ಯೋಗ್ಯವಲ್ಲದವರನ್ನು ಮನೆ, ತೋಟ, ಗದ್ದೆ ಇವುಗಳನ್ನು ಕೊಡುವದರಿಂದಾಗಲಿ ಹಣ, ದವಸ, ಇವುಗಳನ್ನು ಕೊಡುವದರಿಂದಾಗಲಿ ಸ್ವಾಧೀನಮಾಡಿಕೊಂಡು. ಅವರಿಗೆ ಆಕ್ಷಣವೇ ಲಿಂಗಧಾರಣೆಯನ್ನುಮಾಡುತ್ತಾ, ಒಂದಾನೊಂದುದಿನ ವಕ್ಕಲಿಗವೇಷವನ್ನು ಧರಿಸಿಕೊಂಡು ಬಂದು;-ನಿನ್ನದೇಶದ ಅಧಿಕಾರಿಗಳು ನನಗೆ ಕಂದಾಯವನ್ನು ಹೆಚ್ಚಿಸಿ, ಪೀಡಿಸುತ್ತಾರೆಂದು ಹೇಳಲು; ಅಯ್ಯಾಕೃಷಿಕನೇ ನಿನಗೆ ಮನೆ, ತೋಟ, ಮೊದಲಾದದ್ದಕ್ಕೆ ಕಂದಾಯವೇ ಇಲ್ಲದಂತೆ ಮಾಡುತ್ತೇನೆ, ನೀನು ಭಕ್ತನಾಗಿ ಲಿಂಗವನ್ನು ಕಟ್ಟಿಕೋ ನಿನ್ನಪುಣ್ಯಾದಲಬದಿಂಡ ಇಲ್ಲಿಗೆಬಂದೆ ಎಂದು ಹೇಳಿ, ನಮ್ಮ ಕುಲಕ್ಕೆ ಭಕ್ತಿಯೂ ಸರಿಬೀಳುವುದಿಲ್ಲ. ಭಕ್ತಕುಲಕೆ ಸೇರುವವನು ನಮ್ಮಲ್ಲಿ ಬದುಕುವದಿಲ್ಲ ಆದ್ದರಿಂದ ನಾನು ಶಿವಭಕ್ತಿಗೆ ಹೆದರುತ್ತೇನೆಂದುಕೂಗುವದಕ್ಕೆ ಪ್ರಾರಂಭಿಸಿದ ಆತನನ್ನು ಬರೆಯಿಂದ ಕತ್ತಿಯನ್ನು ಹಿರಿದು ಕೊಲ್ಲುವದಕ್ಕೆ ಪ್ರಯತ್ನಿಸಿ, ಪ್ರತ್ಯಕ್ಷನಾಗಿ ವರ

ವನ್ನು ಕೊಡುವಕ್ಕೆ ಉದ್ಯುಕ್ತನಾದ ಶಿವನಿಂದತಡೆಯಲಟ್ಟವನಾಗಿ,-ನೀನು ಲಿಂಗ ಧಾರಣವಂ ಮಾಡಿಕೊಳ್ಳುವದೇ ನನಗೆ ವರವೆಂದು ಶಿವನಿಗೆ ಲಿಂಗವನ್ನು ಕಟ್ಟಿ ತನ್ನ ಧೃಡಮತಕ್ಕೆ ಮೆಚ್ಚಿದ ಪರಮೇಶ್ವರನಿಂದಕೊಡಲ್ಪಟ್ಟ ಗಣಪದವನ್ನು ಆಪ್ತ ರಾದ ಭಕ್ತರೊಡನೆ ಪಡೆದನೋ ಆಗಣಪಾಲನಿಗೆನಾನು ದಾಸಾನುದಾಸನಾಗಿದ್ದೇನೆ.

ಯಾವನು ಪ್ರತಿದಿನವು ಪೂರ್ಣವಾದ ಅನ್ನದಾನದಿಂದ ಸಾವಿರಭಕ್ತರಿಗೆ ಪೂಜೆಯನ್ನು ಕಡೆಗುತಪ್ಪದೆ ನಡಿಸಿ, ಶಿವನಿಂದ ಮೋಕ್ಷವನ್ನು ಪಡೆದನೋ ಹಸಿವಿ ನಿಂದ ಪೀಡಿತರಾದವರ ಮುಖವನ್ನು ನೋಡಲಾರದೆ ಕರುಣಾಮಯನಾದ ಆ ಮುಕ್ತಿನಾಥನ ದಾಸಾನು ದಾಸನಾಗಿದ್ದೇನೆ.

ಯಾವನು ಗುರುಕರುಣವನ್ನು ಚನ್ನಾಗಿ ಪಡೆದು, ರಾಜ್ಯವನ್ನು ಹುಲ್ಲಿಗೆ ಕಡೆಯಾಗಿ ಎಣಿಸಿಬಿಟ್ಟು, ಮೋಕ್ಷಪದವಿಯೇ ಶ್ರೇಷ್ಠವಾದದ್ದೆಂದು ತಿಳಿದು, ನಿರ್ವಾಣಸುಖವನ್ನು ಪಡದನೋ ಅವಿದ್ಯಾದಿ ಪಂಚಕ್ಲೇಶಗಳಿಗೆವಿಮುಖವಾದ ಮನಸ್ಸುಳ್ಳ ಆ ಕಲ್ಲಿನಾಥನಿಗೆ ನಾನು ದಾಸಾನುದಾಸನಾಗಿದ್ದೇನೆ.

ವಿಕ್ರಮ ಚೋಳನೆಂಬುವನು ಜಗತ್ಪತಿಯಾದ ಚಂದ್ರಶೇಕರಮೂರ್ತಿಗೆ ಮನೋಹರವಾದ ಒಂದು ಚಿನ್ನದ ಗುಡಿಯನ್ನು ಕಟ್ಟಿಸಲು; ಅದನ್ನು ತಿಳಿದು ತನ್ನಮನಸ್ಸಿನಲ್ಲಿ ಸುಂದರವಾದ ರತ್ನದಗುಡಿಯನ್ನು ನಿರ್ಮಿಸಿ, ಅಲ್ಲಿ ಈಶ್ವರನನ್ನು ಪ್ರತಿಷ್ಠಿಸಿ, ಅದರಿಂದ ಯಾವನುಶಿವನನ್ನು ಸಂತೋಷ ಪಡಿಸಿದನೋ ಮಾನಸಪೂ ಜೆಯಲ್ಲಿ ಬಹುಚತುರನಾದ ಆ ಪೂಸಲನಾಥ ನೆಂಬ ಮಹಾತ್ಮನ ದಾಸಾನು ದಾಸನಾಗಿದ್ದೇನೆ.

ಪರಮೇಶ್ವರನಿಂದ ನಿತ್ಯವೂ ಒಂದು ವರಹವನ್ನು ಪಡೆದು, ಭಕ್ತರ ಪೂಜೆ ಯನ್ನು ಮಾಡುತಿದ್ದ ಬಾಲ ಭಕ್ತನಿಗೂ ರೂಪರುಚಿಗಳನ್ನು ಸಮರ್ಪಿಸುವದರಿಂದ ಶಿವನನ್ನು ಮೆಚ್ಚಿಸಿ ಸಾಯುಜ್ಯವನ್ನು ಪಡೆದ ಕೂರ್ಮದೇವನಿಗೂ, ದಾಸಾನು ದಾಸನಾಗಿದ್ದೇನೆ.

ಹಿಂದೆ ಇದ್ದ, ಈಗ ಇರುವ, ಮುಂದೆಹುಟ್ಟುವ ಭಕ್ತರಿಗೆಲ್ಲರಿಗೂ ನಾನು ಗರ್ವವನ್ನು ಬಿಟ್ಟು, ದಾಸಾನು ದಾಸನಾಗಿದ್ದೆನೆ.

ಈಪ್ರಕಾರವಾಗಿ ಸುಂದರನಂಬಿಯು ಅನೇಕ ತಿರುಪಾಟುಗಳಿಂದ ಸ್ತುತಿಸು ತ್ತಾ, ಹೆಜ್ಜೆಹೆಜ್ಜೆ ಗೂ ನಮಸ್ಕರಿಸುತ್ತಾ, ಶಿವನಿಂದ ಅನುಸರಿಸಲ್ಪಟ್ಟವನಾಗಿ, ಬಹು ಪ್ರೀತಿಯಿಂದ,— ನಿಮ್ಮ ಪಾದಸೇವಕರ ಭೃತ್ಯರ ಆಳುಗಳಿಗೆ ಆಳಾದವನು ನಿಮ್ಮ

ಪಾದಕಮಲವನ್ನು ಮರೆ ಹೊಗುತ್ತಾನೆ; ಎಂದು ಅನೇಕವಿನಿಯೋಕ್ತಿಗಳನ್ನಾಡುತ್ತಾ, ಬಹು ಜಾಗರೂಕನಾಗಿ, ಆ ಮಿರುಮಿಂಡಯ್ಯನ ಗಣಸಭೆಗೆದುರಾಗಿ ಬಂದನು. ಪ್ರಕಾಶವಾದ ವಿನಯವಚನಗಳಿಂದಲೂ, ಅನೇಕ ಸಾಷ್ಟಾಂಗನಮಸ್ಕಾರಗಳಿಂದಲೂ, ಸಭೆಯಲ್ಲಿರುವ ಭಕ್ತರನ್ನು ಕೃಪೆಯುಳ್ಳವರನ್ನಾಗಿಮಾಡಿ, ಶಿವನಿಂದ ಕೊಡಲ್ಪಟ್ಟ ಪರಿಶುದ್ಧವಾದ ಮೋಕ್ಷವನ್ನು ಹೊಂದಿದನು.

ಆದ್ದರಿಂದ ಎಲೈ ಬಸವೇಶನೇ ನಿರಹಂಕಾರದಿಂದಲೂ, ಭಕ್ತಿಯಿಂದಲೂ, ಯಾವದುತಾನೇ ಸಾಧ್ಯವಾಗುವದಿಲ್ಲ? ಎಂದು ಮಾಚಿದೇವಯ್ಯನು ಹೇಳಿದನು. ಬಸವೇಶನು ಮಾಚಯ್ಯನ ಶಿಕ್ಷಾವಚನಗಳೆಂಬ ಜಲಸ್ನಾನದಿಂದನಿರ್ಮಲವಾದ ಮನಸ್ಸುಳ್ಳವನಾಗಿ, ಆತನ ಪಾದೋದಕದ ಹನಿಗಳಿಂದಾದ ರತ್ನಗಳನ್ನು ಕೇಳಿದವರಿಗೆ ಕೊಟ್ಟುಬಿಟ್ಟನು.

ಬಸವೇಶವಿಜಯದಲ್ಲಿ ಹದಿನಾಲ್ಕನೇಯ ಅಧ್ಯಾಯವು
ಸಂಪೂರ್ಣವು.

---

## ಹದಿನೈದನೇ ಅಧ್ಯಾಯವು.

### ಕಿನ್ನರಬ್ರಹ್ಮಯ್ಯನ ಕಥೆ

ಸತ್ಯಸಂಧನಾಗಿಯೂ, ತಪಸ್ಸಿಗೆಆಶ್ರಯನಾಗಿಯೂ, ಯೋಗೀಶ್ವರರಿಂದ ಪೂಜಿಸಲ್ಪಟ್ಟವನಾಗಿಯೂ, ಇತರರಿಂದ ಪಡೆಯುವದಕ್ಕೆ ಅಶಕ್ಯಗಳಾದ ಸಾಪರಹಿತಗಳಾದ, ನಿರುಪಾಧಿಕಗಳಾದ ಪರಿಪೂರ್ಣವಾಗಿ ಇರುವ ಮೈತ್ರಿಮುಂತಾದ ಗುಣಗಳಿಂದ ಅಲಂಕರಿಸಲ್ಪಟ್ಟ ಹೃದಯಕಮಲವುಳ್ಳವನಾಗಿಯೂ ಶಬ್ದಮೊದಲಾದ ವಿಷಯಗಳನ್ನು ಶಿವಲಿಂಗಕ್ಕೆ ಸಮರ್ಪಿಸುವಚಾತುರ್ಯವನ್ನು ಹೊಂದಿದಮನಸ್ಸುಳ್ಳವನಾಗಿಯೂ ಇರುವ ಕಿನ್ನರ ಬ್ರಹ್ಮಯ್ಯನೆಂಬ ಒಬ್ಬ ಶಿವಯೋಗಿಇದ್ದನು. ಆತನು, ತನ್ನದೇಹವನ್ನು ಶಿವನಿಗೆ ದೇಹವನ್ನು ಮಾಡಿ ತಾನು ವಿಲಕ್ಷಣನಾಗಿದ್ದನು. ಮತ್ತು, ವೀರಶೈವಮಾರ್ಗದ ಆಚಾರಗಳನ್ನು ನಡಿಸುವದರಲ್ಲಿ ಪ್ರೀತಿಯುಳ್ಳವನು.

ಸತ್ಪುರುಷರನ್ನು ಪೂಜಿಸುವನು. ಸಕಲಲೋಕಗಳಿಂದಲೂ ಪೂಜಿಸಲ್ಪಡತಕ್ಕವನು. ಅತ್ಯಂತ ಭಕ್ತಿಯುಳ್ಳವನು. ಸರ್ವವನ್ನು ತಿಳಿದವನು. ಶಾಂತವಾದ ಮನಸ್ಸುಳ್ಳವನು ಸಕಲಪ್ರಾಣಿಗಳಲ್ಲಿಯೂ ದಯಾಶಾಲಿಯಾದವನು. ಎಲ್ಲರಿಗೂ ಸಂಮತವಾದ ನಡತೆಯುಳ್ಳವನು. ಆಶ್ಚರ್ಯಕರವಾದ ಮಹಿಮೆಯುಳ್ಳವನು. ಸಕಲ ವಿದ್ಯೆಗಳಲ್ಲಿಯೂ ವಿದ್ವಾಂಸನು. ಶಿವದ್ರೋಹಿಗಳನ್ನು ಧ್ವಂಸಮಾಡುವನು. ಇಂದ್ರಿಯಗಳೆಂಬ ಆನೆಗಳನ್ನು ಶಿಕ್ಷಿಸಿದವನು. ಶೈವಸಂಪತ್ತಿನಿಂದ ಅಲಂಕರಿಸಲ್ಪಟ್ಟವನೂ, ಮನಸ್ಸನ್ನೂ, ದ್ರವ್ಯವನ್ನೂ ದೇಹವನ್ನೂ ಭಕ್ತರಿಗೆ ಕೊಟ್ಟವನಾದ್ದರಿಂದ ಕ್ಷೀಣವಾದ ಬಾಹ್ಯದ್ರವ್ಯವುಳ್ಳವನು. ನಷ್ಟವಾದ ಮನೋವ್ಯಾಪಾರವೆಂಬ ಮಹಾದ್ರವ್ಯವುಳ್ಳವನು. ಇಂಥಾ ಕಿನ್ನರೈಯ್ಯನು ಕಿನ್ನರಿಯೆಂಬ ವೀಣೆಯನ್ನು ತೆಗೆದುಕೊಂಡು, ಶಿವಸನ್ನಿಧಿಗೆ ಹೋಗಿ, ತುಂಬುರನನ್ನೂ, ನಾರದನನ್ನೂ, ಅತಿಕ್ರಮಿಸಿ ಮಧುರವಾಗಿ ಗಾನವಂ ಮಾಡಿದನು. ಆ ಗಾನಮಾಧುರ್ಯದಿಂದ ಎಳೆಯಲ್ಪಟ್ಟ ಮನಸ್ಸುಳ್ಳ ಪರಮೇಶ್ವರನು ಪ್ರತಿದಿನವೂ ಮೂರುನರಹಾಕೂತದಷ್ಟು ಸುವರ್ಣವನ್ನು ಕೂಲಿಯನ್ನಾಗಿ ಗೊತ್ತುಮಾಡಿದನು. ಆ ಧನದಿಂದ ಪ್ರತಿದಿನವೂ ಭಕ್ತರ ಸೇವೆಯನ್ನು ಮಾಡುತ್ತಾ ಪೂಡೂರೆಂಬ ಪಟ್ಟಣದಲ್ಲಿ ಸಜ್ಜನರಿಂದ ಸೇವಿಸಲ್ಪಡುವವನಾಗಿ ವಾಸಿಸಿದನು. ಹೀಗಿರುತ್ತಾ ಬಸವೇಶನ ಕೀರ್ತಿಪರಂಪರೆಯೆಂಬ ಪಚ್ಚಕರ್ಪೂರದ ಪರಿಮಳದ ಮೊಳಕೆಗಳಿಂದ ಸುವಾಸನೆಗೊಳಿಸಲ್ಪಟ್ಟ ಲೋಕವನ್ನು ನೋಡಿ, ಆಶ್ಚರ್ಯಪಟ್ಟವನಾಗಿ ಬಸವೇಶನನ್ನು ನೋಡಬೇಕೆಂಬ ಆಶೆಯಿಂದ ಪ್ರೇರಿಸಲ್ಪಟ್ಟ ಬುದ್ಧಿಯುಳ್ಳವನಾಗಿ ತನ್ನೂರಿನಿಂದ ಹೊರಟು ಕಲ್ಯಾಣಪಟ್ಟಣವನ್ನು ಕುರಿತು ಹೋದನು. ಕ್ರಮವಾಗಿ ಪಟ್ಟಣದ ಸಮೀಪದಲ್ಲಿ ಬರುತ್ತಿರುವ ಕಿನ್ನರೈಯ್ಯನ ಪ್ರತಿಬಿಂಬವನ್ನು ಬಸವೇಶನು ತನ್ನ ಇಷ್ಟಲಿಂಗಮೂರ್ತಿಯಲ್ಲಿ ಕಂಡು ಆತನ ದರ್ಶನವನ್ನು ಮಾಡಲಿಚ್ಛೈಸಿದವನಾಗಿ, ಸದ್ಭಕ್ತರೊಡನೆ ಹೊರಟು, ಕಿನ್ನರೈಯ್ಯನನ್ನು ನೋಡಿ, ಸಾಷ್ಟಾಂಗ ನಮಸ್ಕಾರವಂಮಾಡಿ, ಆತನನ್ನು ಪೂಜಿಸಿ, ತನ್ನ ಮನೆಗೆ ಕರತಂದು, ರತ್ನಸಿಂಹಾಸನದ ಮೇಲೆ ಕುಳ್ಳಿರಿಸಿದನು. ಆಗ ಕಿನ್ನರಬ್ರಹ್ಮಯ್ಯನು ಬಸವೇಶ ಮೊದಲಾದವರಿಂದ ಸೇವಿಸಲ್ಪಡುವವನಾಗಿ, ಆಯಾಯ ಶಿವಕಥಾಮೃತಗಳಿಂದ ಸ್ವಲ್ಪ ಹೊತ್ತನ್ನುಕಳೆದು, ಆಮೇಲೆ ಶಿವಾರ್ಚನೆಯಂಮಾಡಿದನು. ಈ ಪ್ರಕಾರವಾಗಿ ಪ್ರತಿದಿನವೂ ಬಸವೇಶನ ಸೇವೆಯಂ ಕೈಕೊಳ್ಳುತ್ತಾ, ತತ್ವಗೋಷ್ಠಿಗಳಿಂದ ಕೆಲವು ಕಾಲವನ್ನು ಕಳೆದನು.

ಆತನು ಒಂದಾನೊಂದು ಕಾಲದಲ್ಲಿ ಪ್ರತಿದಿನವೂ ಶಿವನಿಂದ ಕೊಡಲ್ಪಡುವ ಸುವರ್ಣವನ್ನು ತೆಗೆದುಕೊಳ್ಳುವುದಕ್ಕೋಸ್ಕರ ತ್ರಿಪುರಾಂತಕೇಶ್ವರನ ಆಲಯಕ್ಕೈದಿ, ಆ ದೇವನಿಂದ ಸುವರ್ಣವನ್ನು ಪಡೆದು, ಆ ಗುಡಿಯ ಬಾಗಿಲಲ್ಲಿ ಏಕಾಂತವಾಗಿ ಶಾಂತಚಿತ್ತನಾಗಿ, ಕುಳಿತುಕೊಂಡನು. ಆ ವೇಳೆಯಲ್ಲಿ ಒಬ್ಬ ವಿಟನು ವೇಶ್ಯೆಯುಮನೆಯ ಹಬ್ಬಕ್ಕಾಗಿ ತೆಗೆದುಕೊಂಡು ಹೋಗುತ್ತಿದ್ದ ಕುರಿಯು ಕತ್ತಿನ ಹಗ್ಗವನ್ನು ಹರಿದುಕೊಂಡು, ದೈವಾದೀನದಿಂದ ತ್ರಿಪುರಾಂತಕೇಶ್ವರನ ಗುಡಿಯನ್ನು ಪ್ರವೇಶಿಸಿತು. ಆ ವಿಟನು ಆ ಕುರಿಯನ್ನು ಹಿಡಿದುಕೊಳ್ಳುವುದಕ್ಕೋಸ್ಕರ, ಅದನ್ನು ಬೆನ್ನಟ್ಟುತ್ತಿರಲು; ದಯಾಳುವಾದ ಕಿನ್ನರಬ್ರಹ್ಮಯ್ಯನು ಇದನ್ನು ಹಿಡಿಯಬೇಡ. ಬಿಡು ಈ ಕುರಿಯು ಪ್ರಾಣಭೀತಿಯಿಂದ ಈ ದೇವಾಲಯವನ್ನು ಹೊಕ್ಕಿತು. ಆದ್ದರಿಂದ ಇದು ಕೊಲ್ಲುವುದಕ್ಕೆ ಯೋಗ್ಯವಲ್ಲ. ಆದಕಾರಣ ಇದರ ಕ್ರಯವನ್ನು ತೆಗೆದುಕೊಂಡು ಇದನ್ನು ಬಿಡು, ನೀನು ಕೃತಾರ್ಥನಾಗುತ್ತೀಯೆ ಎನಲು, ಆ ವಿಟನು ಸಾವಿರ ವರಹಗಳನ್ನು ಕೊಟ್ಟು ನನ್ನ ಕೈಯಿಂದ ಇದನ್ನು ಬಿಡಿಸು. ಎಂದು ಹೇಳಿದನು. ಅವನ ಮಾತಿನಂತೆ ಕಿನ್ನರಬ್ರಹ್ಮಯ್ಯನು ಸಾವಿರ ವರಹಗಳನ್ನು ತರಿಸಿಕೊಟ್ಟು;—ಅಯ್ಯಾ ಈ ಹಣಕ್ಕೆ ನೀನು ಒಡೆಯನು. ಕುರಿಗೆ ನಾನೇ ಒಡೆಯನು. ಇದು ನಿಶ್ಚಯವು ಎಂದು ಹೇಳಿದಕ್ಕೆ ವಿಟನು ಹಾಗೇ ಆಗಲೆಂದು ಒಪ್ಪಿ ಹಣವನ್ನು ತೆಗೆದುಕೊಂಡು ಸಂತುಷ್ಟಚಿತ್ತನಾಗಿ ಹೊರಟುಹೋದಮೇಲೆ ಆ ಕುರಿಗೆ ಲಿಂಗಮುದ್ರೆಯನ್ನು ಒತ್ತಿದನು. ವಿಟನು ಎರಡುಮೂರು ಹೆಜ್ಜೆಗಳು ಹೋಗಿದ್ದು, ಪುನಃ ಹಿಂತಿರುಗಿ ಕೂಡಲೇ ಮತ್ತೊಂದು ಕುರಿಯನ್ನು ಕ್ರಯಕ್ಕೆ ತೆಗೆದುಕೊಂಡು, ತನ್ನ ಸೂಳೆಯಮನೆಯನ್ನು ಪ್ರವೇಶಿಸಿದನು. ಕುರಿಯ ಸಮಾಚಾರವನ್ನು ತಿಳಿಯದ ಆ ವೇಶ್ಯೆಯು ಬಹುಕಾಲವಾಯಿತು ಇನ್ನೂ ಬರಲಿಲ್ಲವಲ್ಲಾ! ಎಂದುಕೋಪದಿಂದ ಮುಖವನ್ನು ತಿರಿಗಿಸಿಕೊಂಡದ್ದನ್ನು ನೋಡಿ, ವಿಟನು;-ಎಲೆ ಪ್ರಾಣವಲ್ಲಭೆ! ಈ ದಿವಸ ದೈವಗತಿಯಿಂದ ನನಗೆ ಪ್ರಯೋಜನಕರವಾದ ಒಂದು ವಿವಾದವು ದೊರೆಯಿತು. ಅದರಿಂದ ಇಷ್ಟು ತಡವಾಯಿತೆಂದು ಬಹು ಸಂತೋಷದಿಂದ ಆ ಕುರಿಯ ಸಮಾಚಾರವನ್ನು ಮೊದಲಿಂದ ಕೊನೆಯತನಕ ವಿಸ್ತಾರವಾಗಿ ಹೇಳಿ;-ಇಗೋ ಇದು ಸಾವಿರ ವರಹವೆಂದು ಹಣದ ಚೀಲವನ್ನು ಅವಳಮುಂದೆ ಮಡಗಿದನು. ಆ ಸೂಳೆಯು ಆ ಹಣವನ್ನು ಕಯ್ಯಿಂದ ನೂಕಿ ವಿಟನನ್ನು ಕರಿತು;—ಎಲಾದು

ಷ್ಟನೇ ಕುರಿಯುನ್ನು ನನ್ನ ದೇವತೆಗಾಗಿ ತಂದೆಯೋ? ಮಾರಿ ಲಾಭವನ್ನು ಸಂಪಾದಿಸುವದಕ್ಕೆ ತಂದೆಯೋ? ದೇವತೆಗೆಂದು ಸಂಕಲ್ಪಿಸಲ್ಪಟ್ಟ ಮುಂಚಿನ ಕುರಿಯನ್ನೇ ತಂದುಕೊಟ್ಟರೆ ನನ್ನ ವ್ರತವು ಪೂರೈಸುವುದು; ಇಲ್ಲದಿದ್ದರೆ ನಾನು ಊಟವಂ ಮಾಡುವದಿಲ್ಲವೆನಲು, ವಿಟನು ಕೋಪದಿಂದ ಕಠಿನವಾದ ಆ ಮಾತನ್ನು ಕೇಳಿ, ಭಯಪಟ್ಟವನಾಗಿ ಆ ಕುರಿಯನ್ನೇ ತಿರಿಗಿ ತರಬೇಕೆಂಬ ಇಚ್ಛೆಯಿಂದ ತ್ರಿಪುರಾಂತಕೇಶ್ವರನ ಆಲಯಕ್ಕೆ ಬಂದು, ಹೇಳದೇ ಕೇಳದೇ ಲಿಂಗಮುದ್ರೆಯನ್ನೊತ್ತಿರುವ ಆ ಕುರಿಯನ್ನು ವೇಗದಿಂದ ಹಿಡಿದನು. ಕಿನ್ನರಬ್ರಹ್ಮಯ್ಯನು ಕೋಪಗೊಂಡು, ಕುರಿಯನ್ನು ಹಿಡಿದ ಆ ವಿಟನನ್ನು ಕುರಿತು;— ಎಲಾ ಧೂರ್ತನೇ ನೀನು ಮೊದಲು ಕುರಿಯನ್ನು ನನಗೆ ಮಾರಿ ನನ್ನಿಂದ ಕ್ರಯವನ್ನುತೆಗೆದುಕೊಂಡು ಹೋಗಿದ್ದು ಈಗ ತಿರಿಗಿ ಬಂದು ಹ್ಯಾಗೆಹಿಡಿಯುತ್ತೀಯೆ? ಇದಲ್ಲದೆ ಇದುಕುರಿಯಲ್ಲ. ಬಸವನು. ಎಂದು ಹೇಳಿದನು. ಆದಾಗ್ಯೂ ಆ ವಿಟನು ಆ ಮಾತನ್ನು ಲಕ್ಷ್ಯೆಗೆತಾರದೆ ಬಲಾತ್ಕಾರದಿಂದ ಆ ವೃಷಭನನ್ನು ಎಳೆಯುತ್ತಿರಲು; ಕಿನ್ನರಬ್ರಹ್ಮಯ್ಯನು ಆ ಧೂರ್ತನತಲೆಯುನ್ನು ಕಠಾರಿಯಿಂದ ಕತ್ತರಿಸಿ ಪ್ರಾಕಾರದಹೊರಗೆ ಬಿಸಾಟು ಮುಂಡವನ್ನು ಎಳತಂದು, ಅಗಳಲ್ಲಿಹಾಕಿದನು.

ಅನಂತರದಲ್ಲಿ ಅವನ ಬಂಧುಗಳೆಲ್ಲರೂ ಗೋಳಾಡುತ್ತಾ ಹೋಗಿ ಆಸ್ಥಾನ ಮಂಟದಲ್ಲಿ ಕುಳಿತಿರುವ ಬಿಜ್ಜಳರಾಯನಿಗೆ ನಮಸ್ಕರಿಸಿ ಬಿನ್ನೈಸಿಕೊಂಡರೂ ಏನಂದರೆ; ಸ್ವಾಮಿಾ! ನಮ್ಮ! ಒಬ್ಬಹುಡುಗನು ಒಂದು ಕುರಿಯನ್ನು ಕ್ರಯಕ್ಕೆ ತೆಗೆದುಕೊಂಡು ಬೀದಿಯಲ್ಲಿ ಬರುವಾಗ ಅದು ಹಗ್ಗವನ್ನು ಹರಿದುಕೊಂಡು, ಶಿವಾಲಯವನ್ನು ಪ್ರವೇಶಿಸಲು; ಆ ಹುಡುಗನು ಅದರ ಹಿಂದೆಯೇ ಹೋಗಿ ಅದನ್ನು ಹಿಡಿದು ಕೊಳ್ಳುವದಕ್ಕೆ ಪ್ರಯತ್ನಿಸುವಲ್ಲಿ ಒಬ್ಬ ಜಂಗಮನು;-ಎಲಾ ಈ ಕುರಿಯು ಶಿವಾಲಯಕ್ಕೆ ನುಗ್ಗಿತು. ಇದು ಹಿಡಿಯುವದಕ್ಕೆ ಯೋಗ್ಯವಲ್ಲವೆಂದು ಹೇಳಿ ಆ ಹುಡುಗನನ್ನು ಕೊಂದುಹಾಕಿದನು ಎಂದು ನೊರೆಯಿಟ್ಟರು. ಬಿಜ್ಜಳನು ಆ ಮಾತನ್ನು ಕೇಳಿ, ಉರಿದು ಬಿದ್ದವನಾಗಿ ಬಸವೇಶನ ಕಡೆಗೆ ತಿರಿಗಿಕೊಂಡು,-ಅಯ್ಯಾ ಬಸವೇಶಾ! ದುಷ್ಟಜಂಗಮನ ವ್ಯಾಪಾರವನೆಲ್ಲಾ ಕೇಳಿದೆಯಾ? ಶಿವಭಕ್ತರು ಕರುಣಾಶಾಲಿಗಳು. ಕೋಪಾದಿಗಳನ್ನು ಜೈಸಿದ ಮನಸ್ಸುಳ್ಳವರು ಎಂದು ನೀನು ಹೇಳುತ್ತಿದ್ದೆಯಷ್ಟೆ. ಈಗನೋಡು ಕ್ರೂರರೂ, ದಯಾಶೂನ್ಯರೂ, ಆಯುಧಪಾಣಿಗಳೂ, ಆಗಿದ್ದಾರೆ. ಬಾಯಲ್ಲಿ ತುಂಬಿಕೊಂಡ

ನೀರಿಂದ ಅಭಿಶೇಕಮಾಡುವದು, ಕೆರಗಾಲಿಂದ ಒದೆಯುವದು, ಮಾಂಸವನ್ನು ನಿವೇಧಿಸುವದು, ಕಲ್ಲೆಸೆಯುವದು, ಮಗನನ್ನು ಕೊಲ್ಲುವದು, ತಂದೆಯನ್ನು ವಧಿಸುವದು. ಸ್ವಜಾತಿಯನ್ನು ಬಿಡುವದು, ಹೆಂಡತಿಯನ್ನು ಕೊಡುವದು ಇದೆಲ್ಲವೂ ಮಾಡಬಾರದಕೆಲಸವಲ್ಲವೇ? ಭಕ್ತರ ವಿಷಯದಲ್ಲಿಯಾದರೆ ಕೃತ್ಯವು. ಮಿಕ್ಕವರ ವಿಷಯದಲ್ಲಿಯಾದರೆ ಅಕೃತ್ಯವು ಎಂದು ಹೇಳುತ್ತೀರಿ. ವಿಟನು ತರುತ್ತಿದ್ದ ಕುರಿಗೂ, ಶಿವಯೋಗಿಗಳಿಗೂ ಏನು ಸಂಬಂಧವು? ಪ್ರಾಣಿಗಳು ಬದುಕುವದನ್ನು ಶಿವಭಕ್ತರು ಅಪೇಕ್ಷಿಸದೆ ರಾಕ್ಷಸರಂತೆ ಕೊಲ್ಲುತಾರೆ. ನಿನ್ನ ಬಲದಿಂದ ದುಷ್ಟಭಕ್ತರು ತಮಗೆ ಯಾವಭಯವೂ ಇಲ್ಲವೆಂದು ತಿಳಿದವರಾಗಿ, ಊರನ್ನೇ ಸುಡುತ್ತಾರೆ. ತೊಡೆಯುತ್ತಾರೆ. ಬಾಧಿಸುತ್ತಾರೆ. ಅಪರಾಧವಿಲ್ಲದ ಮನುಷ್ಯನು ಅಲ್ಪನಾಗಿದ್ದರೂ ಅವನನ್ನು ಅರಸನಾದಾಗ್ಯೂ ಕೊಲ್ಲುವದಿಲ್ಲ. ಈ ದೇಶವನ್ನು ನೀವೇಆಳಿಕೊಂಡಿರಿ. ನಮಗೆ ಪ್ರಭುತ್ವವೇಕೆ? ಎಂದು ನಿಷ್ಠುರವಾಗಿ ಹೇಳಲು; ಬಸವೇಶನು ಕೇಳಿ;-ಅಯ್ಯಾ ಪೃಥ್ವೀಪತಿಯೇ ನಡೆದ ಸಂಗತಿಯನು ನಿಜವಾಗಿ ತಿಳಿಯದೆ, ಈ ಪ್ರಕಾರವಾಗಿ ಆಡಬೇಡ. ಕರ್ಮನಿರತರಾದವರು, ಅಧರ್ಮಕ್ಕೆ ಪ್ರವೇಶಿಸಬಹುದು. ಶಿವಭಕ್ತರು ಎಂದಿಗೂ ಪ್ರವೇಶಿಸರು. ವಯೊವೃದ್ಧನಾಗಿಯೂ, ಜ್ಞಾನಾಧಿಕನಾಗಿಯೂ ಇರುವ ಕಿನ್ನರಬ್ರಹ್ಮಯೋಗಿಯು ಮೂಢನಂತೆ ನಿರಪರಾಧಿಯಾದ ಮನುಷ್ಯನನ್ನು ಕೊಲ್ಲುವನೇ? ಎತ್ತು ಕರುವನ್ನು ಹಾಕಿತು ಎಂದು ಅರಿಯದವನು ಹೇಳಿದರೆ ಆ ಮಾತನ್ನು ಕೇಳಿ, ಎಷ್ಟು ಹಾಲನ್ನು ಕರೆಯುತ್ತದೆಂದು ಪ್ರಶ್ನೆಮಾಡಿದವರುಂಟೇ? ವಾದಿಪ್ರತಿವಾದಿಗಳಿಬ್ಬರ ಮಾತುಗಳನ್ನೂ ಕೇಳಿದಮೇಲೆ, ಕಾರ್ಯವನ್ನು ನಿರ್ಣಯಿಸಬೇಕಲ್ಲದೆ ಒಬ್ಬನ ಮಾತಿನಿಂದಲೇ ಹ್ಯಾಗೆನಿರ್ಣಯಿಸಬಹುದು? ಆತನನ್ನು ಕರಿಸಿದರೆ ಬರುವದಿಲ್ಲ. ಯಾಕಂದರೆ ಯೋಗಿಗಳು ಸ್ವತಂತ್ರರು. ಆದ್ದರಿಂದ ಈಗ ಮಧ್ಯಸ್ಥನಾದ ಪುರುಷನಿಂದ ನಡೆದ ಸಂಗತಿಯನ್ನು ನಿಶ್ಚಯವಾಗಿ ತಿಳಿಯಬೇಕು. ಎಂದು ಹೇಳಲು; ಬಿಜ್ಜಳರಾಯನು ಆಗಲಿಯೆಂದು ಒಪ್ಪಿಕೊಂಡು, ಬುದ್ಧಿಶಾಲಿಗಳಾದ ಆಪ್ತರನ್ನು ಕಳುಹಿಸಿ ಕೊಡಲು; ಅವರು ತ್ರಿಪುರಾಂತಕೇಶ್ವರನ ಗುಡಿಯಲ್ಲಿರುವ ತಪಸ್ವಿಶ್ರೇಷ್ಠನಾದ ಕಿನ್ನರಯ್ಯನ ಬಳಿಗೈದಿ;-ಎಲೈ ಶಿವಯೋಗಿಯೇ ಈಗ ಸಮಸ್ತ ರಾಕ್ಷಸರೂ ಶಿವಭಕ್ತರೂಪದಿಂದ ಹಗಲೂ ರಾತ್ರಿ ತಿರುಗುತ್ತಾ, ಮನಸ್ಸಿಗೆ ಬಂದಂತೆ ಸಾಧುಗಳನ್ನು ಬಾಧಿಸುತ್ತಾರೆ. ಶಿವಭಕ್ತರು ಶಾಂತಿಯಿಲ್ಲದವರು ಆಯುಧಪಾಣಿಗಳು

ಪ್ರಾಣಿಹಿಂಸೆಯಲ್ಲಿ ನಿರತರು ಎಂಬ ಅಪಯಶಸ್ಸು ಬಹಳವಾಗಿಉಂಟಾಯಿತು. ಬಿಜ್ಜಳರಾಯನು ನಿನ್ನಿಂದ ಕೊಲ್ಲಲ್ಪಟ್ಟ ಆ ಮನುಷ್ಯನ ಬಂಧುಗಳ ಮೊರೆಯನ್ನು ಕೇಳಿ. ನಡೆದ ಸಂಗತಿಯನ್ನು ತಿಳಿಯುವದಕ್ಕಾಗಿ ನಮ್ಮನ್ನು ಕಳುಹಿಸಿಕೊಟ್ಟಿದ್ದಾನೆ. ನಾವು ಏನನ್ನು ಹೇಳಬೇಕು. ಎಂದು ನುಡಿಯಲು; ಕಿನ್ನರಬ್ರಹ್ಮಯ್ಯನು ‹‹ಅಯ್ಯಾ ಈ ವಿಷಯದಲ್ಲಿ ಹೇಳುವದೇನು? ನೀವು ಯುಕ್ತಾಯುಕ್ತಪರಿಜ್ಞಾನವುಳ್ಳವರು ನನ್ನ ವಿರೋಧಿಗಳ ಮಾತನ್ನು ವಿಚಾರಿಸಿದಂತೆ ನನ್ನ ಮಾತನ್ನೂ ವಿಚಾರಿಸಿರಿ. ನಾನು ಸ್ವಾಮಿಯ ಸೇವೆಗೋಸ್ಕರ ಬಂದು ಇಲ್ಲಿ ಸ್ವಲ್ಪಹೊತ್ತು ನಿಂತಿದ್ದೆನು. ಆ ಸಮಯದಲ್ಲಿ ಒಂದು ಕುರಿಯು ಭಯಪಟ್ಟು ಹಗ್ಗವನ್ನು ಹರಿದುಕೊಂಡು, ಓಡಿಬಂದು ಈ ಶಿವಾಲಯವನ್ನು ಪ್ರವೇಶಿಸಿತು. ಒಬ್ಬ ನೀಚವಟನು ನಡುಗುತ್ತಿರುವದಾಗಿಯೂ, ಚಪಲವಾದ ಕಣ್ಣುಗಳುಳ್ಳದ್ದಾಗಿಯೂ, ಬಾರಿಬಾರಿಗೂ, ದೀನಸ್ವರದಿಂದಕೂಗುವದಾಗಿಯೂ ಇರುವ ಆ ಕುರಿಯನ್ನು ಬೆನ್ನಟ್ಟಿಬಂದು ಹಿಡಿದುಕೊಂಡನು. ಆಗ ನಾನು ಈ ಕುರಿಯು ಪ್ರಾಣಭಯದಿಂದ ದೇವಾಲಯವನ್ನು ಪ್ರವೇಶಿಸಿತು. ಆದ್ದರಿಂದ ಇದು ಕೊಲೆಗೆ ಯೋಗ್ಯವಾದದ್ದಲ್ಲ. ಇದರ ಕ್ರಯವನ್ನು ತೆಗೆದುಕೊಂಡು ಇದನ್ನು ಬಿಟ್ಟುಕೊಡೆಂದು ಹೇಳಿದೆನು. ಅವನು ನನ್ನ ಮಾತನ್ನು ಕೇಳಿ;-ಸಾವಿರ ವರಹಗಳನ್ನು ಕೊಟ್ಟು ನನ್ನ ಕೈಯಿಂದಬಿಡಿಸು ಎಂದು ಹೇಳಲು; ನಾನು ಅಷ್ಟುಧನವನ್ನು ತರಿಸಿಕೊಟ್ಟೆನು. ಅವನು ಅದನ್ನು ತೆಗೆದುಕೊಂಡು ಸಂತುಷ್ಟಚಿತ್ತನಾಗಿ ಹೋದಮೇಲೆ ನಾನು ಬಸವನಿಗೆ ಒತ್ತುವಂತೆ ಆ ಕುರಿಗೆ ಲಿಂಗಮುದ್ರೆಯನ್ನು ಒತ್ತಿದೆನು. ಆ ವಿಟನು ಸ್ವಲ್ಪಹೊತ್ತು ಬಿಟ್ಟು ತಿರಿಗಿ ಬಂದು; ಗರ್ವದಿಂದ ನನ್ನನ್ನೂ ಗಣನೆಗೆ ತಾರದೆ ವೇಗದಿಂದ ಕುರಿಯನ್ನೆಳೆದನು. ಆಗ ನಾನು;-ಎಲೈ ವಿಟನೇ ನನ್ನಿಂದ ಸಾವಿರವರಹಗಳನ್ನು ತೆಗೆದುಕೊಂಡು ಈ ಕುರಿಯನ್ನು ಈಗ ತಾನೇ ನನಗೆಮಾರಿದೆ. ಅದನ್ನು ಹ್ಯಾಗೆ ಹಿಡಿಯುತ್ತೀಯೆ. ಇದಲ್ಲದೆ ಇದು ಕುರಿಯಲ್ಲ. ಬಸವನು. ಎಂದು ಹೇಳಿದ್ದಕ್ಕೆ ಅವನು ನನ್ನ ಮಾತನ್ನು ತಿರಸ್ಕರಿಸಿ, ನನ್ನಮೇಲೆ ಕತ್ತಿಯನ್ನೆತ್ತಿದನು. ನನ್ನ ಸ್ವಾಮಿಯು ಆ ದುಷ್ಟನತಲೆಯನ್ನು ಕತ್ತಿಯಿಂದ ಕತ್ತರಿಸಿದನು. ಮಧ್ಯಸ್ಥರಾದ ನೀವು ನ್ಯಾಯವ್ಯಾರದು ? ಅನ್ಯಾಯವ್ಯಾರದು ಎಂದು ವಿಮರ್ಶೆಮಾಡಿರಿ. ಶಿವಭಕ್ತರು ಕನಸಿನಲ್ಲಾದರೂ ನ್ಯಾಯವನ್ನು ಮೀರಿ ನಡೆಯುವದಿಲ್ಲ. ಇದಲ್ಲದೆ ಈ ಅರ್ಥದಲ್ಲಿ ನನಗೆ ಈ ತ್ರಿಪುರಾಂತಕೇಶ್ವರನೇ ಸಾಕ್ಷಿ. ಈತನ ಮುಖದಿಂದ ಅವನ

ಧೂರ್ತತ್ವವನ್ನೂ ನನ್ನ ಸಾಧುತ್ವವನ್ನೂ ತಿಳಿಸುತ್ತೇನೆ '' ಎಂದು ಹೇಳಿದನು. ಆ ರಾಜಪುರುಷರು ಕಿನ್ನರಬ್ರಹ್ಮಯ್ಯನ ಮಾತನ್ನು ಕೇಳಿ, ಹೋಗಿ ಮೊದಲಿಂದ ಕೊನೆಯು ತನಕ ಕುರಿಯ ಸಂಗತಿಯನ್ನೂ ತ್ರಿಪುರಾಂತಕೇಶ್ವರನಿಂದ ಸಾಕ್ಷಿ ಹೇಳಿಸುವದನ್ನೂ ಬಿಜ್ಜಳರಾಯನಿಗೆ ತಿಳಿಸಿದರು. ರಾಯನು ಆ ಮಾತನ್ನು ಕೇಳಿ, ಪರಿಹಾಸವನ್ನು ಮಾಡಿ, ಆಶ್ಚರ್ಯದೊಡನೆ ಕೂಡಿರುವ ಆ ಸಭಿಕರೊಡನೆ ಸಿಂಹಾಸನದಿಂದೆದ್ದು ತ್ರಿಪುರಾಂತಕೇಶ್ವರನ ಗುಡಿಯು ಬಳಿಗೈದಿದನು. ಆಗ ಬಸವೇಶನು;- ಎಲೈ ಮಂಗಳಗಳಿಗೆ ಆಶ್ರಯನಾದವನೇ ಜಯಕ್ಕೆ ಸಿಕ್ಷೇಪವಾದವನೇ ವಿದ್ಯೆಗೆ ಆಸ್ಥಾನದೀಪವಾದವನೇ ಆಗಮಮಾರ್ಗಕ್ಕೆ ಆಧಾರವಾದವನೇ ಯೋಗಕ್ಕೆ ಅಪಲಂಬಸವಾದವನೇ ವೈರಾಗ್ಯಕ್ಕೆ ಕಣಿಯಾದವನೇ ಸಂತೋಷಕ್ಕೆ ಸಮುದ್ರನಾದವನೇ ಅವಿದ್ಯೆಮೊದಲಾದ ಪಂಚಕ್ಲೇಶಗಳಿಗೆ ದೂರನಾದವನೇ ಕರುಣಾನಿಧಿಯೇ ಶಾಂತಿಯ ಪುಂಜವೇ ಭಕ್ತಿಯೆಂಬಪುಷ್ಪಕ್ಕೆ ಪರಿಮಳವಾದವನೇ ಎಂದು ಸ್ತೋತ್ರವಂಮಾಡಿ, ಕಿನ್ನರಯ್ಯನ ಬಳಿಯಲ್ಲಿ ನಿಂತುಕೊಂಡನು. ಇಷ್ಟರೊಳಗೆ ಪೂಜಕನು ವಿಟನ ಪಥಿಗೆಹೆದರಿ, ಗದಗಳಿಗೆ ಅಗುಳಿಯನ್ನು ಹಾಕಿ ಕೂಚಿಯನ್ನು ತೆಗೆದುಕೊಂಡು ಹೊರಟುಹೋಗಿದ್ದನು. ಆಗ ಕಿನ್ನರಬ್ರಹ್ಮಯ್ಯನು ಮಂದಹಾಸದೊಡನೆ ಕೂಡಿದ ಮುಖವುಳ್ಳವನಾಗಿ, ಅಗುಳಿಯನ್ನು ಬಿಗಿದಿರುವ ಕದವನ್ನು ಆತುರದಿಂದ ನೋಡಿದನು. ಆತನ ದೃಷ್ಟಿಯೆಂಬ ಕೂಚಿಯ ಕೋಲಿನಿಂದ ಒಳಗಡೆಯಲ್ಲಿದ್ದ ಅಗುಳಿಯು ಜಾರಿ, ಶಿವನ ಅಪ್ಪಣೆಯಿಂದ ಕದವು ತೆರೆಯಲು; ಪಟ್ಟಣದ ಜನಗಳು;-‹‹ಪೂರ್ವದಲ್ಲಿ ಯಾವನೋ ಒಬ್ಬ ಭಕ್ತನಿಗೆ ಶಿವನು ಬಾಗಿಲನ್ನು ತೆರೆದನೆಂದು ಕೇಳಿದ್ದೆವು. ಈಗ ಕಿನ್ನರಬ್ರಹ್ಮಯ್ಯಂಗೆ ಬಾಗಿಲತೆರೆದದ್ದನ್ನು ಪ್ರತ್ಯಕ್ಷವಾಗಿ ಕಂಡೆವು. ಕಿನ್ನರಬ್ರಹ್ಮನ ಸದಾಚಾರಕ್ಕೆ ಸಂತುಷ್ಟವಾದ ಮನಸ್ಸುಳ್ಳ ಭಕ್ತವತ್ಸಲನಾದ ಈ ಸ್ವಾಮಿಯು ಸಾಕ್ಷಿಯನ್ನು ಹೇಳದೆ ಬಿಡನು''ಎಂದು ಮಾತನಾಡಿಕೊಳುತ್ತಿರಲು; ಕಿನ್ನರಬ್ರಯ್ಯನು ಕೇಳಿ, ಎದ್ದು, ತ್ರಿಪುರಾಂತಕೇಸರನ ಸಮೀಪಕ್ಕೈದಿ,-‹‹ ಎಲೈ ಶಿವನೇ ಸುಂದರನು ಸ್ತನವನ್ನು ಪೀಠವನ್ನಾಗಿಯೂ, ಸ್ತನಾಗ್ರವನ್ನು ಲಿಂಗವನ್ನಾಗಿಯೂ ಭಾವಿಸಿ ನಿನ್ನನ್ನು ಕರೆದನು. ಈಗ ಹೋ ಎಂಬ ಶಬ್ದವನ್ನು ಮಾಡು. ಜೇಡರದಾಸಯ್ಯನು ತನಗೆ ಜೈನಗುರುಗಳೊಡನೆ ವಾದವು ಬಿದ್ದಾಗ ಇರುವೆಯಲ್ಲಿ ನಿನ್ನನ್ನು ಕರೆದನು. ಈಗ ಹೋ ಶಬ್ದವನ್ನು ಮಾಡು. ನಿತ್ಯಸಂತೋಷಿಯಾದ ಬಾವೂರಬ್ರಹ್ಮಯ್ಯನು ಜೋಳದರಾ

ತಿಯಲ್ಲಿ ನಿನ್ನನ್ನು ಕರೆದನು. ಈಗ ಹೋಶಬ್ದವನ್ನು ಮಾಡು. ಎಲೈ ತ್ರಿಪುರಾಂತಕಸ್ವಾಮಿಯೇ ನಾನು ಒಳ್ಳೇಮಾರ್ಗದಲ್ಲಿ ನಡೆದವನಾಗಿದ್ದರೆ, ನೀನು ಮಾತನಾಡಿ ನನ್ನನ್ನು ರಕ್ಷಿಸು '' ಎಂದು ಶಿವನನ್ನು ಕರೆದನು.

ಅನಂತರದಲ್ಲಿ ಹೋ ಎಂಬ ಶಬ್ದವು ಸಾಂದ್ರವಾಗಿ ಆವಿರ್ಭವಿಸಿ ಸಕಲ ದಿಕ್ಕುಗಳನ್ನೂ ದಾಟಿಮೂರುಲೋಕಗಳನ್ನೂ ವ್ಯಾಪಿಸಿತು. ಗೋವುಗಳೂ, ಪಕ್ಷಿಗಳೂ, ಮೃಗಗಳೂ. ಆನೆಗಳೂ, ಕುದುರೆಗಳೂ ಲಿಂಗಾಂಗಸಂಗಿಗಳಾದ ವೀರಶೈವರು ಹೊರತಾಗಿ ಸಕಲ ಮನುಷ್ಯರೂ ಮೂರ್ಛಿತರಾಗಿ ಬಿದ್ದರು. ಭೂಮಿಯಮೇಲೆ ಗಾಳಿ ಬಿಸಲಿಲ್ಲ. ಬೆಂಕಿಯು ಊರ್ಧ್ವಮುಖವಾದ ಜ್ವಾಲೆಗಳುಳ್ಳದ್ದಾಗಿ ಉರಿಯಲಿಲ್ಲ. ಆದಿಕೂರ್ಮನೂ, ದಿಗ್ಗಜಗಳೂ, ಭಯದಿಂದ ಕೂಡಿದವರಾದರು. ಭೂಮಿಯೂ, ಸೂರ್ಯಚಂದ್ರರೂ, ಪರ್ವತಗಳೂ ಚಲಿಸಿದವು. ಇಂದ್ರನೂ, ಬ್ರಹ್ಮವಿಷ್ಣುಗಳೂ, ಸಕಲ ದೇವತೆಗಳೂ, ಆ ಶಬ್ದವನ್ನು ತಾಳಲಾರದೆ ಬಿದ್ದರು. ಆಗ ಕಲ್ಯಾಣಪಟ್ಟಣಲ್ಲಿದ್ದ ಭವಿಮಂಡಲಿಯೆಲ್ಲಾ ಮೃತವಾಯಿತು. ಭಕ್ತಮಂಡಲಿಯೆಲ್ಲಾ ಬದುಕಿತ್ತು. ಮತ್ತು ಕಲ್ಯಾಣಪಟ್ಟಣವು ಹಾಡುವ, ಕುಣಿಯುವ, ಮತ್ತು ತ್ರಿಪುರಾಂತಕೇಶನನ್ನು ಪೂಜಿಸುವ ಪ್ರಮಥರಿಂದ ಕೈಲಾಸಪುರಿಗೆ ಸಮಾನವಾಗಿತ್ತು. ಈ ಪ್ರಕಾರವಾಗಿ ಏಳುದಿವಸಗಳು ಕಳೆಯುತ್ತಿರಲು, ಬಸವೇಶನು ಕಿನ್ನರೈಯ್ಯನ ಸಮೀಪಕ್ಕೆ ಬಂದು ಸ್ತೋತ್ರಪೂರ್ವಕವಾಗಿ ವಿಜ್ಞಾಪಿಸಿದ್ದೇನಂದರೆ;—ಸದ್ಭಕ್ತಜನಕ್ಕೆ ಶೃಂಗಾರದ ಬೆಳೆಯಾದವನೇ, ಗಾಂಭೀರ್ಯಗುಣದಿಂದ ಪ್ರಕಾಶಿಸುವವನೇ, ಶಿವಸ್ವರೂಪಿಯೇ, ಲೋಕಕ್ಕೆ ಆಶ್ರಯನಾದವನೇ, ಮನ್ಮಥನನ್ನು ಜೈಸಿದವನೇ, ಬ್ರಹ್ಮದಲ್ಲಿ ಕ್ರೀಡಿಸುವವನೇ, ದಯಾನಿಧಿಯೇ, ಗುಣಸಮೂಹದಿಂದ ಮನೋಹರವಾದವನೇ, ಶಿವಲಿಂಗದಿಂದ ಶೋಭಿಸುವವನೇ, ನಿತ್ಯದಲ್ಲಿಯೂ ಹೆಚ್ಚುವ ಪ್ರತಾಪವುಳ್ಳವನೇ, ಶತ್ರುಗಳನ್ನು ಭೇಧಿಸುವವನೇ, ಸಾಧುಗಳಿಗೆ ಉಪಕಾರವನ್ನು ಮಾಡುವವನೇ, ಅಹಂಕಾರವನ್ನು ಜೈಸಿದವನೇ, ದುಷ್ಟರಿಗೆ ದೂರನಾದವನೇ, ಹೊತ್ತುಕೊಂಡಿರುವ ಸಂಸಾರವನ್ನೆಲ್ಲಾ ಕೆಡಿಸುವವನೇ, ಮುಪ್ಪಿಲ್ಲದವನೇ, ಕಿನ್ನರಬ್ರಹ್ಮಯೋಗಿಯೇ ರಕ್ಷಿಸು, ಕೃಪಾದೃಷ್ಟಿಯಿಂದ ನೋಡು. ಈ ಪಟ್ಟಣದಲ್ಲಿ ಪ್ರಮಥರು ಹೊರತಾಗಿ ಸಕಲಪ್ರಾಣಿಗಳೂ ಮೂರ್ಛಿತರಾಗಿ ಬಿದ್ದಿದ್ದಾರೆ. ಎಂದು ಹೇಳಲು ಕಿನ್ನರೈಯ್ಯನು ಕೇಳಿ, ಆತನ ಕೈಮೇಲೆ ತನ್ನ ಕೈಯ್ಯನ್ನಿಟ್ಟುಕೊಂಡವನಾಗಿ ತ್ರಿಪು

ರಾಂತಕೇಶ್ವರನಿಗೆ ಎದುರಾಗಿ ನಿಂತು, ಅಹೋ ಎಂಬ ಮಾತನ್ನುಚ್ಚರಿಸಿದನು. ಅಹೋ ಎಂಬ ಶಬ್ದವನ್ನು ಎತ್ತಿದಕೂಡಲೇ ಶಿವನ ಹೋ ಎಂಬ ಶಬ್ದವು ನಿಂತಿತು. ಕಿನ್ನರಬ್ರಹ್ಮಯ್ಯನ ಅಹೋ ಶಬ್ದಧ್ವನಿಯು ಶಿವನ ವಾಕ್ಸ್ತಂಭವನ್ನು ಮಾಡತಕ್ಕ ಮಂತ್ರವೋ ? ಮೊದಲು ಹ್ಯಾಗೆ ಕ್ಷಣಕಾಲದಲ್ಲಿ ಪಟ್ಟಣದಲ್ಲಿರುವ ಪ್ರಾಣಿಗಳೆಲ್ಲವೂ ಆಶ್ಚರ್ಯಕರವಾಗಿ ಮೃತವಾದವೋ ತಿರಿಗಿ ಹಾಗೆಯೇ ಆಶ್ಚರ್ಯಕರವಾಗಿ, ಒಂದು ನಿಮಿಷಮಾತ್ರದಲ್ಲಿ ಸಕಲ ಪ್ರಾಣಿಗಳೂ ಬದುಕಿದವು. ಆಗ ಮೂರ್ಛೆಯಿಂದ ಬಿಡಲ್ಪಟ್ಟವನಾಗಿ ಎದ್ದು ಕಿನ್ನರಬ್ರಹ್ಮಯ್ಯನಿಗೆ ನಮಸ್ಕರಿಸಿ, ಸಂತುಷ್ಟವಾದ ಮನಸ್ಸುಳ್ಳವನಾಗಿ ಸ್ತೋತ್ರವನ್ನು ಮಾಡಿದನು. ಹ್ಯಾಗಂದರೆ.–

ಬಹು ಆಶ್ಚರ್ಯಕರವಾದ ಯಶಸ್ಸುಳ್ಳವನೇ, ಮಹಿಮೆಯಿಂದ ತುಂಬಲ್ಪಟ್ಟವನೇ, ದೇವತೆಗಳಿಂದ ನಮಸ್ಕರಿಸಲ್ಪಡುವುದಕ್ಕೆ ಯೋಗ್ಯನಾದವನೇ, ಮೋಕ್ಷಪ್ರದಾಯಕನೇ, ಕ್ಷಣಮಾತ್ರ ದೃಷ್ಟಿಯನ್ನಿಡು. ನಿನ್ನಿಂದ ಕರೆಯಲ್ಪಟ್ಟ ಈಶ್ವರನು ಹೋ ಎಂಬ ಮಾತನ್ನು ಹೇಳಿದವನಾದನು. ನೀನು ಅಹೋ ಎಂಬ ಮಾತನ್ನು ಹೇಳಲು ಸುಮ್ಮನಾದನು. ನೀನೇ ಗುರು, ನೀನೇ ಭಕ್ತನು, ನೀನೇ ಜಂಗಮನು, ನೀನೇ ಈಶ್ವರನು, ಅಪರಾಧಿಗಳಾದ ನಮಗೆ ಕರುಣದಿಂದ ಅಭಯವನ್ನು ಮಾಡು. ನೀನುಹೊರತು ನಮಗೆ ಶಿಕ್ಷಕನಾಗಲಿ ರಕ್ಷಕನಾಗಲಿ ಬೇರೊಬ್ಬನಿಲ್ಲ. ಮೂಢರಾದ ನಮಗೆ ನೀನೇ ಪದೇಪದೇ ರಕ್ಷಕನಾಗಿದ್ದಿ, ನಾವು ಅಜ್ಞಾನದಿಂದ ನಡಿಸಿದ್ದದ್ದನ್ನು ನೀನು ಮನಸ್ಸಿಗೆ ತರಕೂಡದು. ಈ ಪ್ರಕಾರವಾಗಿ ಹೇಳಿ, ಬಿಜ್ಜಳರಾಯನುಭೂಮಿಯಮೇಲೆ ಸಾಸ್ಟಾಂಗಪ್ರಣಾಮವಂಮಾಡಲು, ಆ ಕಿನ್ನರಬ್ರಹ್ಮಯ್ಯನು,—ಎಲೈ ಭೂಪತಿಯೇ ಏಳು. ಶಿವಭಕ್ತರಲ್ಲಿ ವಿನಯವಂತನಾಗಿರು ಎಂದು ಅಪ್ಪಣೆ ಕೊಟ್ಟು, ಸೈನ್ಯಸಹಿತವಾಗಿ ಆ ಬಿಜ್ಜಳರಾಯನನ್ನು ಕಳುಹಿಸಿದನು.

ಬಿಜ್ಜಳರಾಯನು ಹೋದಮೇಲೆ ಪ್ರತಾಪಕ್ಕೆ ನಿಧಿಯಾಗಿಯೂ, ನಿಸ್ಪೃಹನಾಗಿಯೂ ಇರುವ ಕಿನ್ನರಬ್ರಹ್ಮಯ್ಯನು ತನ್ನ ಖಡ್ಗದಿಂದ ಹತನಾಗಿದ್ದ ವಿಟನನ್ನು ಬದುಕಿಸಿ, ಬಸವೇಶನನ್ನು ಶಿವಗಣಸಹಿತವಾಗಿ ಅಲ್ಲೇಬಿಟ್ಟು ತನ್ನ ಮನೆಯನ್ನೈದಿದನು.

ಬಸವೇಶವಿಜಯದಲ್ಲಿ ಹದಿನೈದನೇ ಅಧ್ಯಾಯವು

ಸಂಪೂರ್ಣವು.

## ಹದಿನಾರನೇ ಅಧ್ಯಾಯವು.

---

### ಕಲಕೇತ ಬ್ರಹ್ಮಯ್ಯನ ಕಥೆ.

ಆ ಕಲ್ಯಾಣಪಟ್ಟಣದಲ್ಲಿ ನಿರ್ಮಲವಾದ ಭಕ್ತಿಯಿಂದ ಕೂಡಿದವನಾಗಿಯೂ, ಬಹಳ ಶುದ್ಧವಾದ ಯಶಸ್ಸುಳ್ಳವನಾಗಿಯೂ, ದುಃಖಿತರನ್ನು ರಕ್ಷಿಸುವದರಲ್ಲಿ ನಿರತನಾಗಿಯೂ, ಜಂಗಮವನ್ನು ಆಶ್ರೈಸಿದವರಲ್ಲಿ ವಿಶ್ವಾಸವುಳ್ಳವುನಾಗಿಯೂ. ಲಿಂಗಾಂಗಸಂಗಿಗಳಲ್ಲಿ ಮಮತೆಯುಳ್ಳವನಾಗಿಯೂ, ಗುರು; ಲಿಂಗ, ಜಂಗಮಗಳ ಮುಖದಿಂ ಬಂದ ಪ್ರಸಾದಗಳಲ್ಲಿ ಪ್ರೀತಿಯುಳ್ಳವನಾಗಿಯೂ, ಲಿಂಗದಲ್ಲಿ ಬೆರೆಯುವಸ್ಥಿತಿಯಲ್ಲಿ ಆಸಕ್ತನಾಗಿಯೂ, ಜೀವನ್ಮುಕ್ತನಾಗಿಯೂ, ಮಾಯಾರಹಿತನಾಗಿಯೂ, ಬ್ರಹ್ಮ ವಿಷ್ಣು ಇಂದ್ರ ಮುಂತಾದ ದೇವತೆಗಳನ್ನು ಹುಲ್ಲಿನಂತೆ ಎಣಿಸಿದವನಾಗಿಯೂ ,ಬಹು ಪರಾಕ್ರಮಿಯಾಗಿಯೂ, ವೀರಭದ್ರನಂತೆ ಮಂಗಳಕರವಾಗಿಯೂ, ಪೂಜ್ಯವಾಗಿಯೂ, ಇರುವ ಆಕಾರವುಳ್ಳವನಾಗಿಯೂ, ಭಕ್ತರ ಪಾದಗಳನ್ನು ಪೂಜಿಸುವವನಾಗಿಯೂ ಇರುವ ಕಲಕೇತಬ್ರಹ್ಮಯ್ಯನೆಂಬ ಒಬ್ಬ ಭಕ್ತಶಿರೋಮಣಿ ಯಿದ್ದನು. ಆತನು ಪ್ರತಿದಿನವೂ, ಕುರಿತಲೆಯ ದಕ್ಷಬ್ರಹ್ಮನ ಕೋಡಿನಂತಿರುವ ಟಗರಿನ ಕೊಂಬನ್ನು ಒಂದು ಹಸ್ತದಲ್ಲಿಯೂ, ವಿಷ್ಣುವಿನ ಕಂಕಾಳದಂತಿರುವ ಗದೆಯನ್ನು ಮತ್ತೊಂದು ಹಸ್ತದಲ್ಲಿಯೂ, ಹಿಡಿದು, ಭಕ್ತರ ಮನೆಗಳಿಗೆಹೋಗಿ;-ಅವ್ಮಾ ! ಅಕ್ಕಾ ! ತಂಗೀ ! ಭಕ್ತರ ಭೃತ್ಯನಾದ ನಾನುಬಂದೆನು. ಶಿವನ ಫಾಲನೇತ್ರದ ಕಿಡಿಯಾದ ನಾನು ಬಂದೆನು. ಶಿವದ್ವೇಷಿಗಳನ್ನು ಧ್ವಂಸ ಮಾಡಿದ ವೀರಭದ್ರನ ನಿರಂಕುಶವಾಗಿಯೂ, ಮದರಹಿತವಾಗಿಯೂಇರುವ ಮದ್ದಾನೆಯಾದ ನಾನು ಬಂದೆನು. ಮಹಾಶರಣರು ಪ್ರೀತಿಯಿಂದ ಪೋಷಿಸಿದ ಶಿಶುವಾದ ನಾನು ಬಂದೆನು. ನಿರಹಂಕಾರಿಯಾದ ದುಗ್ಗಾಂಬೆಯ ಮಗನಾದ ನಾನು ಬಂದೆನು. ಉಡುತಡಿಯ ಮಹಾದೇವ ಜಂಗಳೆ, ಇವರ ಅಣ್ಣತಮ್ಮನಾದ ನಾನು ಬಂದೆನು. ಬಿಜ್ಜಮಹಾದೇವಿಯ ಒಬ್ಬ ಮೊಮ್ಮಗನಾದ ನಾನು ಬಂದೆನು. ಎಂದು ಭಕ್ತರ ಹೆಂಗಸರನ್ನು ಕುರಿತು ಹೇಳುತ್ತಾ, ಅವರಿಂದ ಕೊಡಲ್ಪಟ್ಟ ಎರಡು ಕೊಳಗದಷ್ಟು ಭತ್ತವನ್ನು ತಂದು, ಆದರಿಂದ ಹಗಲೂ ರಾತ್ರಿಯೂ

ಅನೇಕ ಭಕ್ತರಿಗೆ ತೃಪ್ತಿಯನ್ನು ಮಾಡುತ್ತಾ, ಸರಸವಾದ ಮಾತುಗಳಿಂದ ನಗಿಸುತ್ತಾ ಇದ್ದನು. ಒಂದಾನೊಂದು ದಿನ ಎಂದಿನಂತೆ ಹೊರಟು ತನ್ನ ಮನೆಯ ಬಾಗಿಲ ಮುಂದಣ ಜಗಲಿಯಮೇಲೆ ಕುಳಿತಿರುವವನಾಗಿಯೂ, ಬಹಳವಾದ ಬಳಲಿದ ಹೃದಯಕಮಲ ಮುಖಕಮಲಗಳುಳ್ಳವನಾಗಿಯೂ, ಇರುವ ಒಬ್ಬ ಭಕ್ತನನ್ನು ಕಂಡು:—ನೀನುಎಲ್ಲಿ ವಾಸಮಾಡುವವನೆಂದುಕೇಳಲು, ಆ ಮಹಾತ್ಮನ ವಚನವೆಂಬ ಬೆಳದಿಂಗಳ ಸೋಂಕಿನಿಂದ ಪರಿಹರಿಸಲ್ಪಟ್ಟ ಮಾರ್ಗಾಯಾಸವುಳ್ಳ ಆ ಭಕ್ತನು ಹೇಳಿದ್ದೇನಂದರೆ;—ನಾನು ಶಿವಭಕ್ತರ ಸೇವಕನು, ಪತ್ನೀಪುತ್ರಾದಿಗಳುಳ್ಳವನು, ಶಿವನ ಮಗನು. ಬಡತನದಿಂದ ಬಾಧಿಸಲ್ಪಟ್ಟವನಾಗಿ ಪೂರ್ವದಲ್ಲಿ ಶಿವನು ಸುಂದರನಂಬಿಗೆ ಸಂಬಳವನ್ನು ಕೊಟ್ಟನು. ಈಗ ಕಿನ್ನರಬ್ರಹ್ಮಯ್ಯನಿಗೆ ಕೊಡುತ್ತಾಇದ್ದಾನೆಂಬ ವಾರ್ತೆಯನ್ನು ಕೇಳಿ, ಆತನಿಂದ ಧನವನ್ನು ಪಡೆದು ನನ್ನ ಬಡತನವನ್ನು ಪರಿಹರಿಸಿಕೊಳ್ಳಬೇಕೆಂಬ ಇಚ್ಛೆಯಿಂದ ಈ ಕಲ್ಯಾಣಪಟ್ಟಣಕ್ಕೆ ಬಂದೆನೆಂದು ಹೇಳಿದನು. ಆ ಮಾತನ್ನು ಕೇಳಿ, ಕಲಕೇತಬ್ರಹ್ಮಯ್ಮನು:—“ ಆ ಕಿನ್ನರಬ್ರಹ್ಮಯ್ಯನ ಮಹಿಮೆಯನ್ನು ನನ್ನಮುಂದೆ ಹೇಳಬೇಡ. ಅವನು ಸಂಬಳಕ್ಕಾಗಿ ಶಿವನನ್ನು ಸೇವಿಸುತ್ತಾನೆ. ಶಿವನು ಪ್ರತಿದಿನವೂ ಅದನ್ನು ಕೊಡುತ್ತಾನೆ. ಯಾವನು ಫಲಾಪೇಕ್ಷೆಯಿಂದ ಸೇವಿಸುತ್ತಾನೋ ಅವನು ಆ ಫಲವನ್ನು ಮಾತ್ರ ಪಡೆಯುತ್ತಾನೆ. ಅವನಿಗೆ ಮಹಾಲಿಂಗದ ನಿರಂತರ ಧ್ಯಾನದಿಂದುಂಟಾಗುವ ಉತ್ತಮವಾದ ಆನಂದವು ಎಲ್ಲಿ ಬಂದೀತು ? ಭಕ್ತರಾದವರು, ಉನ್ನತ ಪದವಿಯಲ್ಲಿರುವ ಬ್ರಹ್ಮ ವಿಷ್ಣು ಮೊದಲಾದ ದೇವತೆಗಳನ್ನು ಕೂಡ ಹುಲ್ಲಿನಂತೆ ಎಣಿಸುತ್ತಾರೆ. ದ್ರವ್ಯಸಂಪತ್ತನ್ನು ಕುರಿತು ಹೇಳತಕ್ಕದ್ದೇನು ? ಇದಲ್ಲದೆ ಆ ಕಿನ್ನರಬ್ರಹ್ಮಯ್ಯನ ಮನೆಯುಇನ್ನೂ ದೂರದಲ್ಲಿದೆ. ಅಲ್ಲಿತನಕಹೋಗುವದಕ್ಕೆ ನೀನು ಅಸಕ್ತನಾಗಿದ್ದೀ. ಆದ್ದರಿಂದ ನಾನೇ ನಿನ್ನ ಇಷ್ಟಾರ್ಥವನ್ನು ಕೊಡುತ್ತೇನೆ. ” ಎಂದು ಹೇಳಿ, ಆಗ ಶೀಘ್ರವಾಗಿ ತನ್ನ ಮುಂದೆ ಇರುವ ಟಗರಕೊಂಬನ್ನು ತನ್ನ ಬಲಗಯ್ಯಲ್ಲಿರುವ ಗದೆಯಿಂದ ಬಡಿದನು. ಕೂಡಲೆ ಆ ಕೊಂಬಿನ ರಂಧ್ರದಿಂದ ಸುವರ್ಣಧಾರೆಯೂ ಸಾಕುಸಾಕೆಂದು ಆ ಯಾಚಕನು ಕೂಗುವತನಕ ಸುರಿಯಿತು. ಆಗ ಆ ಮನುಷ್ಯನು ತಾನು ಹೊದಿದ್ದ ದುಪಟಿಯನ್ನು ಜೋಳಿಗೆ ಮಾಡಿಕೊಂಡು, ನಾಕುವೀಪುಷ್ಪಗಳ ಸಮೂಹದಂತಿರುವ ಆ ಸುವರ್ಣರಾಶಿಯನ್ನು ಅದರಲ್ಲಿ ಹಾಕಿ, ಚನ್ನಾಗಿ ಕಟ್ಟಿ, ಎರಡು ತೋಳುಗಳಿಂದಲೂ, ಎತ್ತಿ

ತಲೆಯುಮೇಲಿಟ್ಟು, ಹೊತ್ತಿಕೊಂಡು ಹೋಗಲಾರದೆ, ಒಬ್ಬ ಸಹಾಯಕನನ್ನು ಕೇಳಬೇಕೆಂದು ಬಸವೇಶನ ಸನ್ನಿಧಿಗೆ ಹೋಗಿ, ಆ ಸುವರ್ಣಭಾರವನ್ನು ಅಲ್ಲಿಳಿಸಿ, ಬಸವೇಸನ ಸಂಗಡ, ತನ್ನ ಸಂಗತಿಯನ್ನು ಆತ್ಯಂತವಾಗಿ ಸ್ವಲ್ಪವೂ ಬಿಡದೆ ಹೇಳಿದನು. ಬಸವೇಶನು ಆ ಕಲಕೇತ ಬ್ರಹ್ಮಯ್ಯನ ಮಹಿಮೆಯನ್ನು ಕೇಳಿ ಆತ್ಯಾಶ್ಚರ್ಯಪಟ್ಟವನಾಗಿ, ಆ ಭಾರವನ್ನು ಹೊರುವದಕ್ಕಾಗಿ ಒಂದಾಳನ್ನು ಕೊಟ್ಟು ಕಳುಹಿಸಿ, ಐಶ್ವರ್ಯವಾದರೋ ವೃತ್ತಿಗೆ ಸದೃಶವಾದದ್ದು, ವಾಕ್ಕಿಗೂ ಮನಸ್ಸಿಗೂ ದೂರವಾದ ಶಿವಭಕ್ತರ ಸಾಮರ್ಥ್ಯವನ್ನು ಶಿವನು ಹೊರತು ಯಾವನು ತಾನೇ ತಿಳಿದಾನು ? ಕಲ್ಪವೃಕ್ಷವು ಕಲ್ಪಿಸಿದ್ದನ್ನು ಕೊಡುವದು. ಚಿಂತಾಮಣಿಯು ಚಿಂತಿಸಿದ್ದನ್ನು ಕೊಡುವದು. ಕಾಮಧೇನುವು ಕಾಮಿಸಿದ್ದನ್ನು ಕೊಡುವದು, ಮತ್ತೇನನ್ನೂ ಕೊಡುವದಿಲ್ಲ. ಕಾಮಧೇನು ಕಲ್ಪವೃಕ್ಷ, ಚಿಂತಾಮಣಿಗಳನ್ನು ಜೈಸಿದ ಕಲಕೇತ ಬ್ರಹ್ಮಯ್ಯನು ಸಂಕಲ್ಪಿಸದೆಯೂ, ಚಿಂತಿಸದೆಯೂ, ಕಾಮಿಸದೆಯೂ ಇದ್ದದ್ದನ್ನು ಭಕ್ತನಿಗೆ ಕೊಟ್ಟನು. ಪ್ರಭುದೇವನು ಸಿದ್ಧರಾಮನಾಮಕನಾದ ಶಿವಯೋಗಿಯನ್ನು ತಿರಸ್ಕರಿಸಿದ ಹಾಗೆ, ಕಲಕೇತಬ್ರಹ್ಮಯ್ಯನು ಹೊರತು ಕಿನ್ನರಬ್ರಹ್ಮಯ್ಯನನ್ನು ತಿರಸ್ಕರಿಸುವದಕ್ಕೆ ಮತ್ತಾವನು ಸಮರ್ಥನಾದಾನು. ? ಎಂದು ಹೇಳಿ, ಆತನನ್ನು ನೋಡುವದಕ್ಕೋಸ್ಕರ ಆಪ್ತರಾದ ಭಕ್ತರಿಂದ ಬಳಸಲ್ಪಟ್ಟವನಾಗಿ, ಆತನ ಮನೆಗೈದಿ ಆತನಿಂದ ಇದಿರೇಳುವದು ಮೊದಲಾದ ಉಪಚಾರಗಳಿಂದ ಪೂಜಿಸಲ್ಪಟ್ಟವನಾಗಿ, ಆತನ ಪಾದಗಳಿಗೆ ನಮಸ್ಕರಿಸಿ, ಕೈಮುಗಿದುಕೊಂಡು ಸಮೀಪದಲ್ಲಿ ನಿಂತನು. ಕಲಕೇತಬ್ರಹ್ಮಯ್ಯನು ಬಸವೇಶನನ್ನು ಕುರಿತು;—ಅಯ್ಯಾ ನಿನ್ನ ಕಿನ್ನರಯ್ಯನ ಮಹಿಮೆಯು ಆಶ್ಚರ್ಯಕರವಾದದ್ದು, ಆತನು ಪ್ರತಿದಿನವೂ ಶಿವನಿಂದ ಸಂಬಳವನ್ನು ತೆಗೆದುಕೊಳ್ಳುತ್ತಾನೆ. ಕಲ್ಯಾಣಪಟ್ಟಣವು ಮೂರ್ಛೆಯಿಂದ ನಿಶ್ಚೇಷ್ಟವಾಗುವ ಹಾಗೆ ಶಿವನನ್ನು ಮಾತಾಡಿಸಿದನು. ಇದಲ್ಲದೆ ಕೈಲಾಸಕ್ಕೆ ಹೋಗಿತಿರಿಗಿ ಭೂಮಿಗೆ ಬಂದನು. ನಮಗೆ ಪ್ರತಿದಿನವೂ ಎರಡು ಕೊಳಗದಷ್ಟು ಧಾನ್ಯವು ಸಿಕ್ಕುತ್ತದೆ. ಹಾಗಾದಾಗ್ಯೂ ಸಾಮಾನ್ಯವಾದ ನಮ್ಮ ಕೆಲಸದಿಂದ ಸಂಪಾದಿಸಿದ ಸುವರ್ಣವಿದೆ. ಆದ್ದರಿಂದ ಅದನ್ನು ಶಿವನಿಂದ ಕೊಡಲ್ಪಡುವ ಸುವರ್ಣಕ್ಕೆ ಸಹಾಯವಾಗಿ ಕೊಡುತ್ತೇನೆ. ಎಲೈ ಬಸವೇಶನೇ ಸಾವಿರ ಬಂಡಿಗಳನ್ನು ತರಿಸು. ನಾವು ಜೇಡರ ದಾಸಯ್ಯನಿಗೆ ನಿಧಿಯನ್ನು ಲೀಲಾಮಾತ್ರದಿಂದ ಕೊಟ್ಟ ಶಂಕರದಾಸಯ್ಯನ ಭೃತ್ಯರು. ನಮಗೆ ಧನಧಾನ್ಯವೆಂಬು

ವದು ಎಷ್ಟುಮಾತ್ರದ್ದು. ಎಂದು ಹೇಳಿ, ಕಯ್ಯಿಂದ ದೂಳನ್ನು ಹಿಡಿದು ತೋರಿಸಿದನು. ಆ ಧೂಳಿಯು, ಆತನ ಕೈಸೋಂಕಿನಿಂದ ತನ್ನ ರೂಪನ್ನು ಬಿಟ್ಟು, ಸುವರ್ಣವಾಗಿತ್ತು. ಬಸವೇಶನು ನೋಡಿ ಆಶ್ಚರ್ಯಪಟ್ಟನು. ಈ ಸಂಗತಿಯನ್ನೆಲ್ಲಾ ಕಿನ್ನರಬ್ರಹ್ಮಯ್ಯನು ಕೇಳಿ, ಬಂದು, ಕಲಕೇತಬ್ರಹ್ಮಯ್ಯನ ಪಾದಗಳಲ್ಲಿ ನಮ್ರನಾಗಿರಲು, ಕಲಕೇತಯ್ಯನು ಎತ್ತಿ, ಪ್ರೀತಿಯಿಂದ ಆಲಿಂಗಿಸಿ, ಕೃಪಾಕಟಾಕ್ಷದಿಂದ ನೋಡಿ, ಉತ್ಕೃಷ್ಟವಾದ ಲಿಂಗಾಂಗ ಸಾಮರಸ್ಯದ ರಹಸ್ಯವನ್ನು ಆತನಿಗೆ ತಿಳಿಸಿದನು. ಆ ರಹಸ್ಯವನ್ನು ಕೇಳಿ ಕೃತಾರ್ಥನಾದ ಕಿನ್ನರಬ್ರಹ್ಮಯ್ಯನೊಡನೆ ಬಸವೇಶನು ಆತನ ಮನೆಯಲ್ಲಿ ಭಕ್ತಿಭರಿತನಾಗಿ ಲಿಂಗಾರ್ಚನೆಯನ್ನು ಮಾಡಿದನು. ಅನಂತರದಲ್ಲಿ ಶಿವಯೋಗಿಯಾದ ಕಲಕೇತಬ್ರಹ್ಮಯ್ಯನಿಂದ ಬಿಡಲ್ಪಟ್ಟ ಬಸವೇಶ ಕಿನ್ನರಬ್ರಹ್ಮರಿಬ್ಬರೂ ತಮ್ಮ ತಮ್ಮ ಮನಿಗೈದಿದರು. ಕಲಕೇತಬ್ರಹ್ಮಯ್ಯನು ಮುಂಚಿನಂತೆ ಸುಖವಾಗಿದ್ದನು.

ಯಾವನು ಕಲಕೇತಬ್ರಹ್ಮದೇವಯ್ಯನ ಚರಿತ್ರೆಯನ್ನು ಓದುತ್ತಾನೋ ಪ್ರೌಢರಾದ ಭಕ್ತರಿಂದ ಓದಿಸುತ್ತಾನೋ ತನ್ನ ಹೃದಯದಲ್ಲಿ ಅರ್ಥವನ್ನವಗಾಹನೆ ಮಾಡಿಕೊಂಡು ಬರೆಯುತ್ತಾನೋ ಅವನು ಪರಶಿವನ ಕರುಣಾದೃಷ್ಟಿಗೆ ಪಾತ್ರನಾಗುತ್ತಾನೆ.

ಬಸವೇಶವಿಜಯದಲ್ಲಿ ಹದಿನಾರನೇ ಅಧ್ಯಾಯವು
ಸಂಪೂರ್ಣವು.

## ಹದಿನೇಳನೇ ಅಧ್ಯಾಯವು.

### ಮೋಳಿಗೆ ಮಾರಯ್ಯನ ಕಥೆ

ಆ ಕಲ್ಯಾಣಪಟ್ಟಣದಲ್ಲಿ ಮಹಾತ್ಮನಾಗಿಯೂ, ಪುಚ್ಛನ್ನರುದ್ರನಾಗಿಯೂ ಪ್ರಸಿದ್ಧವಾದ ಅಧಿಕಯಶಸುಳ್ಳವನಾಗಿಯೂ, ನಿರ್ಮಲನಾಗಿಯೂ, ಸದಾಚಾರಾನುಷ್ಠಾನದಲ್ಲಿ ಸಮರ್ಥನಾಗಿಯೂ, ಕಾಮನನ್ನು ಜೈಸಿದವನಾಗಿಯೂ, ಪರಿಶು

ದ್ಧವಾದ ಮನಸ್ಸುಳ್ಳವನಾಗಿಯೂ, ವಿಧಿನಿಷೇಧಗಳನ್ನು ತಿರಸ್ಕರಿಸಿದವನಾಗಿಯೂ, ವಿಕಾರರಹಿತನಾಗಿಯೂ, ಜಂಗಮಸೇವೆಯಲ್ಲಿಯಾವಾಗಲೂವ್ಯಾಪಿಸಿರುವಮನೋ ವ್ಯಾಪಾರವುಳ್ಳವನಾಗಿಯೂ, ಶುಭಕರವಾದ ಒಳ್ಳೇ ನಡತೆಗಳಿಂದ ಸತ್ಪುರುಷರಿಗೆ ಪೂಜ್ಯನಾಗಿಯೂ, ಬಾಯಿಂದ ಹೇಳುವದಕ್ಕಾಗದ ತತ್ವಜ್ಞಾನದಿಂದ ಮನೋ ಹರನಾಗಿಯೂ, ಲಿಂಗನಿಷ್ಠೆಯಲ್ಲಿ ಅಧಿಕನಾಗಿಯೂ, ಸಂಚಿತಾದಿಕರ್ಮತ್ರಯ ವನ್ನು ಹೋಗಲಾಡಿಸುವದರಲ್ಲಿ ಸಮರ್ಥವಾದ ಶಿವಧರ್ಮಗಳುಳ್ಳವನಾಗಿಯೂ, ಲಿಂಗತತ್ವದ ವಿಚಾರದಿಂದುತ್ಪನ್ನವಾದ ಆನಂದವನ್ನನುಭವಿಸುವವನಾಗಿಯೂ, ಸಕಲ ಸಂಸಾರದುಃಖಗಳನ್ನು ತ್ಯಜಿಸಿದವನಾಗಿಯೂ, ಸುಖಸ್ವರೂಪನಾಗಿಯೂ, ವಿದ್ವಾಂಸರಿಂದ ಪೂಜ್ಯನಾಗಿಯೂ ಇರುವ ಮೋಳಿಗೆಮಾರನೆಂಬೊಬ್ಬ ಶಿವಭಕ್ತನಿ ದ್ದನು. ಆತನು ಪ್ರತಿದಿನವೂ ಅರಣ್ಯಕ್ಕೆ ಹೋಗಿ, ಸೌದೆಯನ್ನು ಕಡೆದುತಂದು ಅದನ್ನು ಮಾರಿ, ಅದರಿಂದ ಪ್ರಾಪ್ತವಾದ ನಾಲ್ಕು ಕೊಳಗಧಾನ್ಯದಿಂದ ಸಾಧು ಗಳಿಗೆ ತೃಪ್ತಿಮಾಡುತ್ತಾ ಇದ್ದನು. ಬಸವೇಶನ ಅರಮನೆಯಲ್ಲಿ ಲೆಖ್ಖವಿಲ್ಲದ ಯಾವ ಜಂಗಮಸಮೂಹವು ಭೋಜನವಂ ಮಾಡುತ್ತಿರುವದೋ ಅದೆಲ್ಲವೂ ಮೋಳಿಗೆಮಾರಯ್ಯನ ಮನೆಯಲ್ಲಿ ಪ್ರತಿದಿನವೂ ಒಂದು ವೇಳೆ ಭೋಜನವಂ ಮಾಡುತ್ತಿರುವದು. ಆ ಜಂಗಮರು, ಒಂದುದಿನ ಬಸವೇಶನನ್ನು ಕುರಿತು;- ಅಯ್ಯಾ ನಿನ್ನ ಮನೆಯ ಊಟದ ಕ್ರಮವು ಅತ್ಯುತ್ತಮವಾದದ್ದು, ಆದಾಗ್ಯೂ ಪ್ರತಿದಿನವೂ ಒಂದು ಸಾರಿ ಮೋಳಿಗೆಮಾರಯ್ಯನಿಂದ ಕೊಡಲ್ಪಡುವ ಅಂಬ ಲಿಗೆ ಸಮಾನವಾಗಲಾರದು. ಅಂಥಾ ತೃಪ್ತಿಯು ನಿನ್ನ ಮನೆಯ ಊಟದಿಂದಾ ಗುವದಿಲ್ಲವೆಂದು ಹೇಳಲು; ಬಸವೇಶನು ಆತನಮಹಿಮೆಯನ್ನು ಕೇಳಿ, ಆನಂದ ಬಾಷ್ಪಗಳಿಂದ ತೋಯಿಸಲ್ಪಟ್ಟ ನೇತ್ರಗಳುಳ್ಳವನಾಗಿ, ಆ ಮೋಳಿಗೆಮಾರಯ್ಯನ ಮನೆಗೈದಿ, ಆತನ ಹೆಂಡತಿಯ ಪಾದಕ್ಕೆ ಭಕ್ತಿಯಿಂದ ನಮಸ್ಕರಿಸಿ ಶೀಘ್ರವಾಗಿ ಶಿವಾರ್ಚನೆಯಂಮಾಡಿ, ಲಿಂಗಪ್ರಸಾದವನ್ನು ಸೇವಿಸಿಕೊಂಡು, ಅಭಿಷೇಕಪಾ ತ್ರೆಯ ಕೆಳಗೆ ಎರಡುಸಾವಿರ ವರಹಗಳನ್ನು ತುಂಬಿದ ಒಂದು ಚೀಲವನ್ನಿಟ್ಟು ಬೇಗ ಒಬ್ಬರಿಗೂ ಕಾಣಿಸಿಕೊಳ್ಳದೆ ಹೊರಟು ಹೋದನು. ಆ ಮೋಳಿಗೆ ದೇವನ ಮನೆಯಲ್ಲಿ ಪ್ರಸಾದವನ್ನು ತೆಗೆದುಕೊಂಡಿದ್ದರಿಂದ ಪ್ರಾಪ್ತವಾದ ಹರ್ಷವುಳ್ಳ ಬಸವೇಶನು, ನಿಧಿಯನ್ನು ಪಡೆದ ದರಿದ್ರನು ಹ್ಯಾಗೋ ಹಾಗೆ ಸಂತೋಷಪಟ್ಟವ ನಾಗಿ;—ನಾನು ಈಗ ಮೋಳಿಗೆ ಮಾರಯ್ಯನ ಮನೆಯಲ್ಲಿ ಸಂಸಾರವೆಂಬ

ರೋಗಕ್ಕೆ ಔಷಧವಾಗಿಯೂ, ಭಕ್ತಿಯೆಂಬ ಬಳ್ಳಿಗೆ ಶ್ರೇಷ್ಠಫಲವಾಗಿಯೂ, ದುರ್ಲಭವಾದ ಜ್ಞಾನಕ್ಕೆ ಮಾರ್ಗವಾಗಿಯೂ ಇರುವ ಪ್ರಸಾದ ಸೇವನೆಯ ಸೌಖ್ಯವನ್ನು ಹೊಂದಿದೆನು. ಅದೃಷ್ಟವಿಲ್ಲದಿದ್ದರೆ ಭಕ್ತಿಯಿಂದ ಪ್ರಸಾದಸೇವನೆಯನ್ನು ಮಾಡುವದು ದೊರೆವದೇ ಇಲ್ಲ. ಆದರೆ ಜನ್ಮಾಂತರದ ಪಾಪಗಳ ಪರಿಹಾರಕ್ಕಾಗಿ, ಶಿವಭಕ್ತನಮನೆಯಲ್ಲಿ ಸ್ವಲ್ಪ ನೀರನ್ನಾದರೂ ತೆಗೆದುಕೊಳ್ಳಬೇಕು. ಈ ಮೇಳಿಗೆ ಮಾರಯ್ಯನ ಮನೆಯ ಅಂಗಳವನ್ನು ನೋಡಿದ ಮನುಷ್ಯರಿಗೆ ಪಾಪಗಳಿಂದ ಬಿಡುಗಡೆಯುಂಟಾಗುವದು. ಈ ಅಂಗಳದ ಧೂಳು ಹಣೆಗೆ ಸೋಕಿದರೆ ಬ್ರಹ್ಮಯನು ಬರೆದ ದುರ್ಲಿಪಿಯೆಲ್ಲವೂ ಅಳಿಸಿ ಹೋಗುವದು. ಈ ಪ್ರಕಾರವಾಗಿ ನಿರ್ದುಷ್ಟನಾಗಿಯೂ, ದೇವೇಂದ್ರನಿಂದ ಪ್ರಾರ್ಥಿಸಲ್ಪಡುತ್ತಿರುವ ನಿತ್ಯೈಶ್ವರ್ಯವುಳ್ಳವನಾಗಿಯೂ ಇರುವ ಬಸವೇಶನು ಆಲೋಚಿಸುವವನಾಗಿ ಅಪರಿಮಿತವಾದ ಆನಂದವನ್ನು ಹೊಂದಿ, ಮೆಲ್ಲಗೆ ತನ್ನ ಮನೆಗೈದಿದನು

ಅನಂತರದಲ್ಲಿ ಮಾರಯ್ಯನು ಮಧ್ಯಾನಕ್ಕೆ ಸರಿಯಾಗಿ ಕಟ್ಟಿಗೆಯ ಹೊರೆಯನ್ನುಹೊತ್ತುಕೊಂಡು ಲಿಂಗಾನುಸಂಧಾನದಲ್ಲಿ ನೆಲೆಗೊಂಡಿರುವದರಿಂದುಂಟಾದ ಆನಂದದಿಂದ ವಿಕಸಿತವಾದ ಮುಖಕಮಲವುಳ್ಳವನಾಗಿ, ಬಂದು ಮನೆಯ ಅಂಗಳದಲ್ಲಿ ಕಟ್ಟಗೆಯ ಹೊರೆಯನ್ನಿಳಿಸಿ, ಪತ್ನಿಯಿಂದ ತೊಳೆಯಲ್ಪಟ್ಟ ಪಾದಗಳುಳ್ಳವನಾಗಿ; ಅಷ್ಟರೊಳಗೆಸೇರಿದ ಭಕ್ತಗಣಂಗಳೊಡನೆಕೂಡಿ ಚನ್ನಾಗಿ ಶಿವಾರ್ಚನೆಯಂ ಮಾಡಿದನು. ಆಗ ಅಲ್ಲಿದ್ದಹಣದಚೀಲವನ್ನು ನೋಡಿ, ಇದೇನೆಂದು ತನ್ನ ಹೆಂಡತಿಯನ್ನು ಕೇಳಲು; ಆಕೆಯು ಯಾರೋ ಒಬ್ಬ ಭಕ್ತನು ಬಂದು ಶಿವಾರ್ಚನೆಯಂ ಮಾಡಿಕೊಂಡು ಹೋದನು. ಅಷ್ಟೇ ಹೊರತು ಬೇರೆ ಕಾಣೆನೆಂದು ಹೇಳಿದಳು; ಮಾರಯ್ಯನು ಬೆಳಿಗ್ಗೆ ಬಂದಿದ್ದ ಭಕ್ತನು ಬಸವೇಶನು ಅಲ್ಲದೆ ಮತ್ತೊಬ್ಬನಲ್ಲವೆಂದು ನಿಶ್ಚೈಸಿ;-ಬಹಳವಾಗಿ ಧನಧಾನ್ಯಗಳಲ್ಲಿ ಪ್ರಸಿದ್ಧನಾದ ಭಕ್ತನು ಭೂಮಿಯಲ್ಲಿ ದರಿದ್ರನಾದ ಭಕ್ತನನ್ನು ರಕ್ಷಿಸುವದು ಯುಕ್ತವೇ ಸರಿ. ಬಸವೇಶನು ಬಡವರಾದ ನಮ್ಮನ್ನು ರಕ್ಷಿಸುವದಕ್ಕಾಗಿ ತನ್ನ ಧನವನ್ನು ತಂದು ಕೊಟ್ಟನೆಂದು ಹೇಳಿ, ಎರಡು ಸಾವಿರ ವರಹಗಳನ್ನು ತುಂಬಿರುವ ಆ ಚೀಲವನ್ನು ಎರಡು ಪಾಲು ಮಾಡಿ, ಇಬ್ಬರು ಮಾಹೇಶ್ವರರಿಗೆ ಕೊಟ್ಟು ನಾನು ಬಡವನಾದರೂ ಆಗಲಿ, ಎಲೈ ದೇವಾದಿದೇವನೇ ನೀನು ಬಡವನೇ ಎಂದು ಹೇಳುತ್ತಾ; ಜಂಗಮ ಪಾದಕಮಲವನ್ನು ಪೂಜಿಸಿ, ಆ ತೀರ್ಥೋದಕವನ್ನು ತೆಗೆದುಕೊಂಡು, ಕಟ್ಟಿಗೆ

ಗಳ ಹೊರೆಯ ಮೇಲೆ ಎರಚಲು; ಆ ಕ್ಷಣವೇ ಆ ಹೊರೆಯು ಚಿನ್ನದ ಹೊರೆ ಯಾಯಿತು. ಆದನ್ನು ಸಾವಿರ ವರಹ ತೂಕದ ಪ್ರಕಾರ ಕತ್ತರಿಸಿ ಕತ್ತರಿಸಿ ಮಾಹೇಶ್ವರರಿಗೆಲ್ಲಾ ಕೊಟ್ಟನು. ಆ ಮಾಹೇಶ್ವರರು ಒಬ್ಬೊಬ್ಬರು ಒಂದೊಂದು ಚಿನ್ನದ ಕಟ್ಟಿಗೆಯನ್ನು ಹಿಡಿದುಕೊಂಡು ಬಂದು ಬಸವೇಶನ ಮುಂದೆ, ಮೋಳಿಗೆ ಮಾರಯ್ಯನ ಅತ್ಯಾಶ್ಚರ್ಯಕರವಾದ ಭಕ್ತಿಯನ್ನು ಬಹಳವಾಗಿ ವರ್ಣಿಸಿ ಹೇಳಿದರು. ಬಸವೇಶನು ಅತ್ಯುದಾರವಾದ ಆತನ ವೈಭವವನ್ನು ಕೇಳಿ, ನಾನು ಶುದ್ಧ ಮೂಢ ನೆಂದು ತಿಳಿದುಕೊಂಡು, ಭಯಪಟ್ಟವನಾಗಿ ಬಂದು,— ಎಲೈ ಸ್ವಾಮಿಯೇ ಅಜ್ಞಾನದ ನನನ್ನು ರಕ್ಷಿಸು ರಕ್ಷಿಸು ಎಂದು ಆತನಿಗೆ ನಮಸ್ಕರಿಸಲು; ಮಾರ ಯ್ಯನು;—ಸಮರ್ಥನಾಗಿಯೂ, ಉತ್ತಮಜ್ಞಾನಕ್ಕೆ ಆಶ್ರಯನಾಗಿಯೂ ಇರುವ ಬಸವೇಶನೇ! ಯಾಕಿಂತು ನುಡಿಯುತ್ತಿ ? ಎಲೈ ಅಧಿಕವಾದ ಭಕ್ತಿಯುಳ್ಳವನೇ ನಾನು ಬೇರೆ ವಿಧವಾಗಿ ಹೇಳಲಿಲ್ಲ. ದರಿದ್ರರಾದ ನಮಂಥಾ ಭಕ್ತರನ್ನು ರಕ್ಷಿಸು. ಇದಕಿಂತ ಮುಂಚೆ ಕಥಾಪ್ರಸಂಗದಲ್ಲೆಯೂ ಕೇಳದಿದ್ದ ದ್ರವ್ಯ ಭರಿತವಾದ ಚೀಲ ವನ್ನು ನಿನ್ನ ಅನುಗ್ರಹದಿಂದ ಕಂಡೆನು. ಎಲೈ ಮಹಾಧನಿಕನೇ! ವಿಸ್ತಾರವಾದ ಯಶಸ್ಸುಳ್ಳವನಾಗಿಯೂ, ಪೂಜಿಸಲ್ಪಡುವದಕ್ಕೆ ಯೋಗ್ಯವಾದ ವೃತ್ತಿಯುಳ್ಳವ ನಾಗಿಯೂ, ಇರುವ ನಿನಗೆಸಮಾನನಾದವನು ಯಾರು ? ನನಗೆ ಈಗಹ್ಯಾಗೆ ದ್ರವ್ಯವನ್ನು ಕೊಟ್ಟಿಯೋ ಹಾಗೆ ಪ್ರತಿದಿನವೂ, ಶಿವಯೋಗಿಗಳಿಗೆ ಧನವನ್ನು ಕೊಡುತ್ತಿಯಲ್ಲವೇ ? ವೀರಭದ್ರನ ಎರಡನೇ ಅವತಾರವಾದ ಮಾಚಿದೇವಯ್ಯನ ಮೊಮ್ಮಗನಾದ ನನ್ನನ್ನು ಬಿಡದೆ ರಕ್ಷಿಸು. ಎಂಬುವದು ಮೊದಲಾದ ಹಾಸ್ಯ ವನ್ನು ಬಹಳವಾಗಿ ಮಾಡಿದನು.

ಬಸವೇಸನು ಆತನ ಹಾಸ್ಯೋಕ್ತಿಗಳನ್ನು ಕೇಳಿ, ಮಹಾ ದುಃಖದಿಂದ ಕಣ್ಣಿನಲ್ಲಿ ನೀರು ತುಂಬಿಕೊಂಡು, ಬಣ್ಣಗೆಟ್ಟ ಮುಖವುಳ್ಳವನೂ ನಡುಗುತ್ತಿರುವ ದೇಹವುಳ್ಳವನೂ ಆಗಿ, ಕೈಗಳನ್ನು ಜೋಡಿಸಿಕೊಂಡು;—ಎಲೈ ಮಹಾತ್ಮನೇ ಸಿದ್ಧರಸವುಕಬ್ಬಿಣದ ಗುಣವನ್ನು, ಮೇರುಪರ್ವತವುಕಾಗೆಯಗುಣವನ್ನು ನೋಡಿ, ಸುವರ್ಣವನ್ನು ಮಾಡುತ್ತದೆಯೋ ? ಆದ್ದರಿಂದ ಸತ್ಪುರುಷರು ತಮ್ಮ ಸದ್ಗುಣಕ್ಕೆ ಅನುಸಾರವಾಗಿ ರಕ್ಷಿಸುತ್ತಾರೆ. ಹೊಲೆಯರ ಬೀದಿಯಲ್ಲಿ ವೇದಘೋಷವೂ ಕುಮುಟಿನೆಯಲ್ಲಿ ಬಿಳಿದಾವರೆಯೂ, ಕುಂಬಾರರ ಆವಿಗೆಯಲ್ಲಿ ತಾಂಬ್ರದ ಕೊ ಡವೂ ದೊರೆಯುವ ದುಂಟೇ ? ಗರ್ವ, ಅವಿಧೇಯತ್ವ ಇವುಗಳಿಗೆ ಆಸ್ಪದನಾದ

ಸನ್ನಲ್ಲಿ ಯಾವದಾದರೂ ಒಂದು ಶ್ರೇಷ್ಠವಾದ ಗುಣವಿದ್ದೀತೆ? ಕರುಣಾದೃಷ್ಟಿಯಿಂದ ನೋಡಿ ರಕ್ಷಿಸೆಂದು ಅತನ ಎರಡು ಪಾದಗಳ ಮೇಲೂ ಬಿದ್ದನು. ಮಾರದೇವನು ಪಾದಾಕ್ರಾಂತನಾದ ಬಸವೇಶನನ್ನು ಆಲಿಂಗಿಸಿ, ಸರಳವಾದ ಮಾತುಗಳಿಂದಲೂ, ಮನೋಹರಗಳಾದ ಕರುಣಾದೃಷ್ಟಿಗಳಿಂದಲೂ, ಸಂತೋಷಭರಿತನನ್ನಾಗಿ ಮಾಡಿ, ಕಳುಹಿಸಿದನು.

ಮೋಳಿಗೆ ಮಾರದೇವನ ಚರಿತ್ರೆಯೆಂಬ ಅಮೃತವನ್ನು ಪಾನಮಾಡುವುದರಲ್ಲಿ ನಿರತರಾದವರು ಮುತ್ತಿನಕೊಡೆ, ಕಿರೀಟ, ಎರಡು ಚವರಿಗಳು ಎಂಬ ಲಕ್ಷಣಗಳಿಂದ ಕೂಡಿದ ಭೂಮಂಡಲದಸಾರ್ವಭೌಮತ್ವ, ವಿಜಯ, ಇಷ್ಟಾರ್ಥಸಿದ್ಧಿ, ಇವುಗಳಿಂದ ಕೂಡಿ ಅದ್ವಿತೀಯರಾಗಿ ಮೆರೆಯುತ್ತಿದಾರೆ.

ಬಸವೇಶವಿಜಯದಲ್ಲಿ ಹದಿನೇಳನೇ ಅಧ್ಯಾಯವು

ಸಂಪೂರ್ಣವು.

---

## ಹದಿನೆಂಟನೇ ಅಧ್ಯಾಯವು.

### ಕನ್ನದ ಬ್ರಹ್ಮಯ್ಯನ ಕಥೆ.

ಮತ್ತು ಆ ಕಲ್ಯಾಣನಗರದಲ್ಲಿ ಸಂಸಾರವೆಂಬ ಆನೆಗೆ ಸಿಂಹನಾಗಿಯೂ, ತನು, ಪ್ರಾಣ, ಧನಗಳನ್ನು ಜಂಗಮಕ್ಕೆ ಸಮರ್ಪಿಸಿದವನಾಗಿಯೂ, ಶಿವಚರಣದಲ್ಲಿ ಪ್ರೀತಿಯುಳ್ಳವನಾಗಿಯೂ, ಭಯ, ಭಕ್ತಿಗಳಿಂಕೂಡಿದ ಮನಸ್ಸುಳ್ಳವನಾಗಿಯೂ, ಶಿವಧ್ಯಾನವೇ ಶ್ರೇಷ್ಟವಾದ ಐಶ್ವರ್ಯವಾಗಿ ವುಳ್ಳವನಾಗಿಯೂ, ವೀರವ್ರತವಿಧಾನದಲ್ಲಿ ಗುರುವಾಗಿಯೂ, ವೈರಾಗ್ಯವಂತರಲ್ಲಿ ಶ್ರೇಷ್ಠನಾಗಿಯೂ. ಬಹಿರಂಗಪೂಜೆಯ ಕ್ರಮವನ್ನು ತಿಳಿದವನಾಗಿಯೂ, ಅಂತರಂಗ ಪೂಜೆಯ ರಹಸ್ಯವನ್ನು ತಿಳಿದವರೊಳಗೆ ಪ್ರಮುಖನಾಗಿಯೂ. ಮನೋಹರವಾಗಿಯೂ, ನಿರ್ದುಷ್ಟವಾಗಿಯೂ ನಿರ್ಮಲವಾಗಿಯೂ ಇರುವ ವರ್ತನದಿಂದ ಕೂಡಿದವನಾಗಿಯೂ, ಇರುವ ಕನ್ನದಬ್ರಹ್ಮಯ್ಯನೆಂಬ ಭಕ್ತನು ಪ್ರತಿದಿನವೂ ಬಣ್ಣದಕಲ್ಲು, ಗಾಳಿಯ

ಬಟ್ಟೆ, ಮರಳು, ಕನ್ನಗತ್ತರಿ, ಇಕ್ಕುಳ, ಅಳತೆಯನೂಲು, ಅದೃಶ್ಯದ ಕಪ್ಪು, ಅಂಕುಶ, ಸುಡುಗಾಡಿನ ಬೂದಿ, ಮುಳ್ಳು, ಅಕ್ಷತೆ, ಚಂಡು, ಸೆಳೆಗೋಲು, ನಾಯಿಗಳ ಬಾಯ್ಕಟ್ಟುವ ಔಷಧ, ಯೋಗಚೂರ್ಣ, ಯೋಗಭತ್ತಿ ಮುಂತಾದ ಚೌರ್ಯ ಸಾಮಗ್ರಿಗಳನ್ನು ತೆಗದುಕೊಂಡು ಧೈರ್ಯದಿಂದ, ಒಂದಟ್ಟೆಯ ಕೆರವನ್ನು ಮೆಟ್ಟಿಕೊಂಡು, ಸೊಂಟದಲ್ಲಿ ಒಂದು ಕಠಾರಿಯನ್ನೂ ಕಂಕುಳಲ್ಲಿ ಗಟ್ಟಿಯಾದ ದಂಡವನ್ನೂ ಧರಿಸಿದವನಾಗಿ. ಕತ್ತಲೆಯಲ್ಲಿ ಹೊರಟು, ಧನಿಕರಮನೆಯ ಬಳಿಗೈದಿ ಅಲ್ಲಿ ಒಂದು ಮೂಲೆಯೊಳಗೆ ನಿಂತುಕೊಂಡು, ಒಳಗೆ ಮನೆಯವರ ಸದ್ದನ್ನಾಲಿಸಿ, ಏನೂ ಇಲ್ಲದಿದ್ದರೆ, ಅಗುಳಿಗನ್ನ, ಬಾಗಿಲುಗನ್ನ, ಹಂಜರಗನ್ನ, ಗೋಡೆಗನ್ನ, ನೆಲಗನ್ನಗಳೊಳಗೆ, ಎಲ್ಲೆಲ್ಲಿ ಯಾವ ಯಾವದು ಯೋಗ್ಯವೋ ಅಲ್ಲಲ್ಲಿ ಆಯಾ ಕನ್ನವನ್ನು ಹಾಕಿ, ಒಳಗೆ ನುಗ್ಗಿ ದೀಪವನ್ನು ಹಚ್ಚಿ, ಆ ಮನೆಯವರು ಶಿವಭಕ್ತರಾಗಿದ್ದರೆ, ಅವರಿಗೆ ನಮುಸ್ಕರಿಸಿ, ಅವರ ಪಾದೋದಕಪ್ರಸಾದಗಳಂ ತೆಗೆದುಕೊಂಡು ಸುಖಿತನಾಗಿ ಅಲ್ಲಿಂದ ಬೇರೆ ಮನೆಗೈದಿ, ಅಲ್ಲಿಗೆ ತಕ್ಕ ಕನ್ನವನ್ನು ಪ್ರಯೋಗಿಸಿ, ಒಳಗೆ ಹೋಗಿ, ಬೇಕಾದ ವಸ್ತುಗಳನ್ನು ತನ್ನ ಮನೆಯಲ್ಲಿ ತೆಗೆದುಕೊಳ್ಳುವಂತೆ ತೆಗೆದುಕೊಂಡು, ವಾಯುವಿನಂತೆ ಒಬ್ಬರ ಕಣ್ಣಿಗೂ ಗೋಚರವಾಗದೆ ಹೊರಟು, ಬಂದು, ನಿರರ್ಗಳವಾಗಿ ಜಂಗಮಾರಾಧನೆಯನ್ನು ಮಾಡಿಕೊಂಡಿದ್ದನು.

ಆತನು ಒಂದಾನೊಂದು ದಿವಸದಲ್ಲಿ ತಪಸ್ವಿಗಳಾದ ಅನೇಕ ಮಾಹೇಶ್ವರರು ತನ್ನ ಮನೆಗೆ ಬರಲು, ಪ್ರತ್ಯುತ್ಥಾನ ಮೊದಲಾದ ಉಪಚಾರಕ್ರಮದಿಂದ ಅವರನ್ನುಪಚರಿಸಿ, ಅವರ ಸೇವೆಗೋಸ್ಕರ ಚೌರ್ಯದಿಂದ ದ್ರವ್ಯವನ್ನು ತರಬೇಕೆಂದು ಮಧ್ಯಾಹ್ನದಲ್ಲಿ ಮನೆಯಿಂದ ಹೊರಟು, ಮಧ್ಯಮಾರ್ಗದಲ್ಲಿ ಬಸವಣ್ಣನನ್ನು ಕಂಡು;-ಎಲೈ ಬಸವೇಶನೇ ಬಾ. ದೊರೆಯ ಬೊಕ್ಕಸದಮನೆಯನ್ನು ತೋರಿಸು; ಈಗ ಮತ್ತೊಂದು ಕಡೆ ಕನ್ನಾಹಾಕಿದರೆ, ಜಂಗಮಸೇವೆಗೆ ಸಾಕಾಗುವಷ್ಟು ಧನವು ದೊರೆಯುವದಿಲ್ಲ. ಎನಲು, ಬಸವಣ್ಣನು ಭಕ್ತರಿಗೆ ಪ್ರತ್ಯುತ್ತರವನ್ನು ಕೊಡುವದಿಲ್ಲವೆಂಬ ತನ್ನ ಪ್ರತಿಜ್ಞೆಯನ್ನು ನೆರವೇರಿಸುವದರಲ್ಲಿ ಉದ್ಯುಕ್ತನಾಗಿ ಆತನ ಆಜ್ಞೆಯನ್ನು ನಡಿಸಿದನು. ಭಯವಿಲ್ಲದೆ ಸಹಾಯಪುರುಷನಾದ ಆ ಬಸವಣ್ಣನಿಂದಲೇ ತೋರಿಸಲ್ಪಟ್ಟ ಬೊಕ್ಕಸದ ಮನೆಗೆ ಆ ಶರಣನು ಅಗುಳಿಯ ಸ್ಥಾನದಲ್ಲಿ ಕನ್ನವನ್ನುಹಾಕಿ, ಅದರೊಳಗಿಂದ ನುಗ್ಗಿ ಅಲ್ಲಿಬಹಳ ಧನವನ್ನು ತೆಗೆದು

ಕೊಂಡು, ಹೊರಟುಬಂದನು. ಬೊಕ್ಕಸದ ಅಧಿಕಾರಿಗಳು ಈ ಸಮಾಚಾರವನ್ನು ಬಿಜ್ಜಳರಾಯನಿಗೆ ಚನ್ನಾಗಿ ತಿಳಿಸಿದರು. ರಾಯನುಕೇಳಿ, ಕೋಪಗೊಂಡವನಾಗಿ;-ಬಸವಣ್ಣನು ನಡುವಗಲಲ್ಲಿಯೇ ಕಳ್ಳನಿಂದ ದ್ರವ್ಯವನ್ನು ತರಿಸಿಕೊಂಡು, ಸ್ವೇಚ್ಛೆಯಾಗಿ ಬದುಕುತ್ತಾನೆ. ಸ್ವಾಮಿದ್ರೋಹಿಯಲ್ಲವೇ ? ನನ್ನನ್ನು ಕೇಳಿದ್ದರೆ ನಾನು ಬೇಕಾದಷ್ಟು ದ್ರವ್ಯವನ್ನು ಕೊಡುತ್ತಿದ್ದೆನು. ಈ ದ್ರೋಹಿಯು ನನ್ನ ಬೊಕ್ಕಸದ ಮನೆಗೆ ಕಳ್ಳರಿಂದ ಕನ್ನವನ್ನು ಹಾಕಿಸಿ, ಧನವನ್ನು ತರಿಸಿಕೊಂಡನು. ಎಂದು ಹೇಳಿ, ಬಸವೇಶನನ್ನು ಕರಿಸಿ, ಬೆಂಕಿಯ ಕಿಡಿಯಂತೆ ಭಯಂಕರವಾದ ಕಣ್ಣುಗಳುಳ್ಳವನಾಗಿ, ಅವನನ್ನು ಸಂಗಡ ಕರದುಕೊಂಡು, ಬೊಕ್ಕಸದ ಮನೆಗೈದಿ, ಕನ್ನವಂ ಹಾಕಿರುವ ಕಡೆಯಲ್ಲಿ ಸುರಿದು ರಾಶಿಯಾಗಿರುವ ಸುವರ್ಣಮಯವಾದ ಮಣ್ಣನ್ನೂ ಆ ಮಹಾತ್ಮನ ಪಾದನ್ಯಾಸದಿಂದ ಪವಿತ್ರವಾದ ಆ ಪ್ರದೇಶವನ್ನೂ ನೋಡಿ, ಬಹು ಆಶ್ಚರ್ಯಪಟ್ಟವನಾಗಿ ಕೋಪವನ್ನು ಬಿಟ್ಟು;-ಎಲೈ ಬಸವೇಶನೇ ಇದೇನಾಶ್ಚರ್ಯ ? ನಿನ್ನ ಮಹಿಮೆಯಲ್ಲವೇ ? ಆ ಕಳ್ಳರೊಡೆಯನು ಯಾವ ಸ್ಥಳದಲ್ಲಿ ಹೆಜ್ಜೆಯನ್ನಿಟ್ಟನೋ ಆ ಸ್ಥಲವೆಲ್ಲಾ ಸುವರ್ಣಮಯವಾಗಿ ಹೊಳೆಯುತ್ತದೆ. ಎಂದು ಹೇಳಲು, ಬಸವೇಶನುಕೇಳಿ, ಅಯ್ಯಾ ಭೂಪತಿಯೇ ? ಕನ್ನದ ಬೊಮ್ಮಯ್ಯನ ಮಹಿಮೆಯನ್ನು ಹೇಳುವದಕ್ಕೆ ಭೂಮಂಡಲದಲ್ಲಿ ಯಾವನು ತಾನೇ ಸಮರ್ಥನು ? ಅವನ ಪಾದಾಂಗುಷ್ಠಗಳೆರಡೂ ಕಲ್ಪವೃಕ್ಷಗಳಿಗೆ ಆಶ್ರಯವಾದದ್ದು. ಅಣಿಮಾದಿಸಿದ್ಧಿಗಳು ಕೂಡ ಆತನ ಆಜ್ಞೆಗೆ ಅಧೀನರಾದ ಭೃತ್ಯರು. ಆತನ ಮೈಸೋಂಕಿನಿಂದ ಪವಿತ್ರವಾದ ಭೂಮಿಯು ಋಷಿಗಳಿಂದ ಅಪೇಕ್ಷಿಸಲ್ಪಟ್ಟ ಮೋಕ್ಷಸ್ಥಾನವು. ಆತನ ದೇಹದ ಬೆವರು ಅಮೃತರಸಕ್ಕೆ ಸಮಾನವಾದದ್ದು. ಆತನ ಕಡೆಗಣ್ಣು ಲಕ್ಷ್ಮೀದೇವಿಯ ರತ್ನಖಚಿತವಾದ ಕ್ರೀಡಾಗೃಹವು. ಆತನ ಕಾರುಣ್ಯವು ಕಾಮಧೇನುವು. ಆತನಕೋಪವು ಪ್ರಳಯಾಗ್ನಿಯು. ಆತನು ಇಂಥಾಲಕ್ಷಣಗಳಿಂದ ಸಮರ್ಥನಾದಾಗ್ಯೂ ಕಳ್ಳತನದಿಂದ ಸಂಪಾದಿಸಲ್ಪಟ್ಟ ದ್ರವ್ಯಗಳಿಂದ ಭಕ್ತರಸೇವೆಯನ್ನು ಮಾಡುತ್ತಾನೆ. ಇದೀಗ ಆ ಮಹಾತಪಸ್ವಿಯ ನಿಯಮವು. ಎಲೈ ರಾಯನೇ ಇದು ಸದ್ಭಕ್ತಿಯೇ; ಇದು ನಡತೆಯೇ; ಎಂದು ಆಲೋಚಿಸಬೇಡ. ಶಿವಭಕ್ತನಾದವನು ಯಾವದನ್ನು ಹಿಡಿಯುತ್ತಾನೋ ಅದೇ ಭಕ್ತಿಯು. ಅದೇ ಒಳ್ಳೇನಡತೆ. ಮಾಡಿದ ಪ್ರತಿಜ್ಞೆಯನ್ನು ನೆರವೇರಿಸುವ ಭಕ್ತನಿಗೆ ಆ ನಡತೆಯು ಹ್ಯಾಗೆ ಶ್ರೇಯಸ್ಸುಗಳನ್ನು ಮಾಡುತ್ತದೋ ಹಾಗೆ ಭಕ್ತನಲ್ಲ

ದವನಿಗೆ ಶ್ರೇಯಸ್ಸುಗಳನ್ನು ಮಾಡುವದಿಲ್ಲ. ಹ್ಯಾಗೆಂದರೆ;—ಧರ್ಮರಾಯನು ಜೂಜಿನಿಂದ ರಾಜ್ಯವನ್ನು ಕಳೆದುಕೊಂಡು ಅರಣ್ಯವನ್ನು ಪ್ರವೇಶಿಸಿದನು. ಆ ಜೂಜಿನಿಂದಲೇ ಮೂರ್ಖನಾಥನು ಶಾಶ್ವತವಾದ ಶಿವಲೋಕವನ್ನು ಪ್ರವೇಶಿಸಿದನು. ದ್ರವ್ಯದಲ್ಲಿಯೂ ಸ್ತ್ರೀಯರಲ್ಲಿಯೂ ಮೋಹಿತರಾದ ಅನೇಕ ಲೋಕಾಧೀಶ್ವರರು ನಾಶವನ್ನು ಹೊಂದಿದರು. ಆ ಹೊನ್ನು ಹೆಣ್ಣುಗಳಲ್ಲಿ ಆಸಕ್ತನಾದ ಸುಂದರನು ಶಿವಪದವನ್ನು ಸೇರಿದನು. ದಶರಥರಾಯನು ಬೇಂಟೆಯಿಂದ ಹೆಂಡತಿಯನ್ನು ಕಳಕೊಂಡು ದುಃಖವನ್ನನುಭವಿಸಿದನು. ಕನ್ನಪ್ಪನು ಬೇಂಟೆಯಿಂದ ಶಿವನ ಪಾದದಲ್ಲಿ ಸಾಯುಜ್ಯವನ್ನು ಪಡೆದನು. ಮಾಂಡವ್ಯನೆಂಬ ಋಷೀಶ್ವರನು ಹಿಂಸೆಯನ್ನು ಮಾಡಿ, ಶೂಲವನ್ನು ಹತ್ತಿದನು. ಚಂಡೇಶನು ಹಿಂಸೆಯನ್ನೇ ಮಾಡಿ, ಗಣಾಧೀಶಪದವಿಯಂ ಪಡೆದನು. ಬ್ರಹ್ಮನು ಸುಳ್ಳನ್ನಾಡಿ, ಭೂಮಿಯಲ್ಲಿ ಪೂಜ್ಯತೆಯನ್ನು ಕಳಕೊಂಡನು. ಸಿರಿಯಾಳ್ವನು ಸುಳ್ಳಾಡಿ, ಕೈಲಾಸದಲ್ಲಿ ಪ್ರತಿಷ್ಠೆಯಂ ಸಂಪಾದಿಸಿದನು. ಅಧರ್ಮವು ಧರ್ಮತ್ವವನ್ನು ಹೊಂದುವದೆಂಬ ಶಿವಾಗಮವಚನವಿರುವದರಿಂದ ಭಕ್ತನಿಗೆಮಾತ್ರ ಅಧರ್ಮವೂ ಆಚಾರವಾಗುವದಲ್ಲದೆ ಮತ್ತೊಬ್ಬನಿಗಾಗುವದಿಲ್ಲ. ಯಾವಾಗ ಭಕ್ತರುಮನೆಗೆ ಬುರುತ್ತಾರೋ ಆಗ ಈ ಕಿನ್ನರಬ್ರಹ್ಮಯ್ಯನು ಕಳ್ಳತನಕ್ಕೆ ಹೋಗುತ್ತಾನೆ. ಇದು ರಾತ್ರಿ; ಇದು ಹಗಲು; ಎಂಬ ವಿಚಾರವೇ ಇಲ್ಲ. ಭಕ್ತಜನದ ಮನೆಗಳನ್ನು ಬಿಟ್ಟು ಭವಿಗಳಮನೆಗೆ ನುಗ್ಗಿ ಆ ಕಾಲಕ್ಕೆ ಎಷ್ಟು ಬೇಕೋ ಅಷ್ಟು ಮಾತ್ರ ತೆಗೆದುಕೊಳ್ಳುತ್ತಾನೆ. ಆ ಮನೆಗಳಲ್ಲಿ ವಾಸಿಸುವ್ವವರು ಆತನು ಹಾಕಿದ ಕನ್ನವನ್ನು ನೋಡಿದಾಗ್ಯೂ ಚಿನ್ನವಾಗಿರುವ ಮಣ್ಣಿನರಾಶಿಯ ಲಾಭದಿಂದ ಕೂಗುವದಿಲ್ಲ. ಕನ್ನದಬ್ರಹ್ಮಯ್ಯನು ಬೊಕ್ಕಸದಿಂದ ಬಹು ದ್ರವ್ಯವನ್ನು ತೆಗೆದುಕೊಂಡು ಹೋದನು. ಆದಾಗ್ಯೂ ಅದಕ್ಕಿಂತಲೂ ಎರಡರಷ್ಟು ಹಣವು ಇಲ್ಲಿ ಇದೆ ನೋಡು ಎಂದು ಬಸವೇಶನು ತೋರಿಸಲು; ಬಿಜ್ಜಳನು ದ್ವಿಗುಣವಾಗಿದ್ದ ದ್ರವ್ಯವನ್ನು ನೋಡಿ, ಸಂತೋಷಪಟ್ಟು ಬಸವೇಶನಿಗೆ ಬಹುಮಾನವನ್ನು ಮಾಡಿ ಕಳುಹಿಸಿ ತಾನು ಅಂತಃಪುರಕ್ಕೈದಿದನು. ಬಿಜ್ಜಳನಿಂದ ಪೂಜಿಸಲ್ಪಟ್ಟ ಬಸವೇಶನು ಭಕ್ತರಿಂದ ಬಳಸಲ್ಪಟ್ಟವನಾಗಿ ಕನ್ನದಬ್ರಹ್ಮಯ್ಯನ ಮಹಿಮೆಯನ್ನು ಹೇಳುತ್ತಾ ತನ್ನ ಮನೆಗೆ ಪ್ರವೇಶಿಸಿದನು.

ಯಾವನು ನಿತ್ಯದಲ್ಲಿಯೂ ಸಮಸ್ತ ಮಂಗಳಗಳಿಗೆ ಕಾರಣವಾದ ಕನ್ನದ ಬ್ರಹ್ಮಯ್ಯನ ಚರಿತ್ರೆಯನ್ನು ಪ್ರೇಮದಿಂದ ಕೇಳುತ್ತಾನೋ ಅವನು ಭಯಂಕರ

ಗಳಾದ ಜನನಮರಣಗಳೆಂಬ ಅರಣ್ಯಗಳಿಗೆ ಭಯಪಡದವನಾಗಿ ಪಾರ್ವತೀಪತಿಯಾದ ಪರಶಿವನದಯೆಗೆ ಪಾತ್ರನಾಗುತ್ತಾನೆ.

ಬಸವೇಶವಿಜಯದಲ್ಲಿ ಹದಿನೆಂಟನೇ ಅಧ್ಯಾಯವು
ಸಂಪೂರ್ಣವು.

## ಹತ್ತೊಂಭತ್ತನೇ ಅಧ್ಯಾಯವು

### ಮುಸುಡಿ ಚೌಡಯ್ಯನ ಕಥೆ.

ಶಿವನಿಗೆ ಭೃತ್ಯನಾಗಿಯೂ, ಕ್ರೂರವಾದ ಪರಾಕ್ರಮವುಳ್ಳ ಬಾಹುದಂಡದಿಂದ ದ್ರೋಹಿಗಳನ್ನು ಧ್ವಂಸಮಾಡುವವನಾಗಿಯೂ, ಸಂಕಲ್ಪರಹಿತನಾಗಿಯೂ, ಸಫಲವಾದ ಸದಾಚಾರದಿಂದ ಶಿವನನ್ನು ತೃಪ್ತಿಪಡಿಸುವವನಾಗಿಯೂ, ಶಿವಪ್ರಸಾದರಸವನ್ನು ತಿಳಿದವನಾಗಿಯೂ, ಸದ್ಭಕ್ತರ ಮುಕಕ್ಕೆ ಕನ್ನಡಿಯಾಗಿಯೂ, ಯಥಾರ್ಥವಾದಿಯಾಗಿಯೂ, ಸಂಸಾರವೆಂಬ ನದಿಯನ್ನು ದಾಟಿಸುವದರಲ್ಲಿ ನಾವಿಕನಾಗಿಯೂ, ಜ್ಞಾನಹೀನರಿಗೆ ದೂರವಾದ ಸಂಪತ್ತುಳ್ಳವನಾಗಿಯೂ, ವಿವೇಕಿಗಳಿಗೆ ಬಂಧುವಾಗಿಯೂ, ವೀರಮಾಹೇಶ್ವರಾಚಾರ್ಯಗಳನ್ನು ನಡಿಸುವದರಲ್ಲಿ ಪ್ರೀತಿಯುಳ್ಳವನಾಗಿಯೂ, ವೀರಭದ್ರನಂತೆ ಸಕಲರಿಂದಲೂ ಶ್ಲಾಘಿಸಲ್ಪಡತಕ್ಕ ವೀರರಸಕ್ಕೆ ಆಶ್ರಯನಾಗಿಯೂ, ಸರಶವಾದ ಹೃಧಯವುಳ್ಳವರಿಗ ಅಮೃತದೋಪಾದಿಯಲ್ಲಿರುವ ದೃಷ್ಟಿಯಿಂದ ಹೋಗಲಾಡಿಸಲ್ಪಟ್ಟ ದುರ್ಗುಣಗಳುಳ್ಳವನಾಗಿಯೂ, ಸ್ಥಾವರಜಂಗಮಪ್ರಾಣಿಗಳಿಗೆ ಅಭಯವನ್ನು ಕೊಡುವದರಲ್ಲಿ ಬದ್ಧಕಂಕಣನಾಗಿಯೂ, ಶಾಪಾನುಗ್ರಹ ಸಾಮರ್ಥ್ಯವುಳ್ಳವನಾಗಿಯೂ, ಪ್ರಸಿದ್ಧವಾಗಿಯೂಪ್ರಬಲವಾಗಿಯೂ ಇರುವ ಮಹಿಮೆಯುಳ್ಳವನಾಗಿಯೂ, ಐಹಿಕಾಮುಷ್ಮಿಕಫಲಗಳಿಂದ ಕೂಡಿದವನಾಗಿಯೂ, ವಿಧಿನಿಷೇಧಗಳಿಗೆದೂರನಾಗಿಯೂ, ಪ್ರತಾಪಕ್ಕೂ ಕೀರ್ತಿಗೂ ಆಶ್ರಯನಾಗಿಯೂ, ವೀರಶೈವಾಚಾರಸಂಪತ್ತಿಗೆ ನಿಕ್ಷೇಪನಾಗಿಯೂ, ಸತ್ತ ಬಸವನಿಗೂ, ಜಂಗಮನಿಗೂ, ಭಕ್ತನಿಗೂ ಜೀವನೌಷಧಪ್ರಾ

ಯನಾಗಿಯೂ, ಮಾರ್ಗದಲ್ಲಿ ಬೆಂಕಿ, ನೀರು, ವಾಯುಗಳನ್ನು ಜಯಿಸಿ, ಆಮಾರ್ಗದಿಂದ ಹೋಗುವ ನಿಯಮದಿಂದ ಕೂಡಿದವನಾಗಿಯೂ, ನಿರಂತರದಲ್ಲಿಯೂ ಜಂಗಮಪೂಜೆಯಂ ಮಾಡುವನೆಂಬ ಪ್ರತಿಜ್ಞೆಯನ್ನು ನೆರವೇರಿಸುವವನಾಗಿಯೂ, ಇರುವ ಚೌಡಯ್ಯನೆಂಬ ಶಿವಸರಣನು ಮುಸುಂಡಿಯೆಂದು ಪ್ರಸಿದ್ಧವಾದ ಪಟ್ಟಣದಲ್ಲಿ ವಾಸಿಸುತ್ತಿದ್ದನು. ಹೀಗಿರುವಲ್ಲಿ ಆತನು ಬಸವೇಶನ ಭಕ್ತಿಯೆಂಬ ಪರಿಮಳದಿಂದ ಎಳೆಯಲ್ಪಟ್ಟ ಹೃದಯವೆಂಬಭ್ರಮರವುಳ್ಳವನಾಗಿ ಆತನನ್ನು ನೋಡಬೇಕೆಂಬ ಆಸೆಯಿಂದ ಅನೇಕ ಭಕ್ತರೊಡನೆ ಕಲ್ಯಾನಪಟ್ಟಣವನ್ನು ಕುರಿತು ಹೊರಟನು. ಹೋಗುವಾಗ ದಾರಿಯಲ್ಲಿ ಸಂಗಡ ಇದ್ದ ತಪಸ್ವಿಗಳು ಚಿನ್ನದ ಚಂಡುಗಳಂತಿರುವ ಹಣ್ಣುಗಳಿಂದ ಬಗ್ಗಿರುವ ತೊಟ್ಟಿಯಗಿಡವನ್ನು ನೋಡಿ ಆಸೆಗೊಂಡವರಾಗಿ ನಮ್ಮ ಲಿಂಗಯ್ಯನು ಈ ಫಲಗಳನ್ನಾಸ್ವಾದಿಸಬೇಕೆಂದು ಅಪೇಕ್ಷಿಸುತ್ತಾನೆಂದು ಹೇಳಲು; ಆಮಾತನ್ನು ಕೇಳಿ, ಚೌಡಯ್ಯನು, ಮಂದಹಾಸವನ್ನು ಮಾಡಿ; ತಾನು ಭಕ್ತರಿಂದ ಪ್ರಾರ್ಥಿಸಲ್ಪಟ್ಟ ವಸ್ತುವನ್ನು ಕೊಡುತ್ತೇನೆಂಬ ಪ್ರತಿಜ್ಞೆಯಲ್ಲಿ ಸ್ಥಿರವಾದ ಬುದ್ಧಿಯುಳ್ಳವನಾದ್ದರಿಂದ ಲಿಂಗಪ್ರಸಾದಿತವೆಂಬ ಖಡ್ಗವನ್ನು ಕೈಯಲ್ಲಿ ತೆಗೆದುಕೊಂಡು, ಅದನ್ನು ಆ ಗಿಡಕ್ಕೆ ಮುಟ್ಟಿಸಿ– ಎಲೈ ತಪಸ್ವಿಗಳಿರಾ! ಈ ಪಲಗಳನ್ನು ಲಿಂಗಕ್ಕೆ ಯಥೇಚ್ಛವಾಗಿ ಸಮರ್ಪಿಸಿರಿ. ಎಂದು ಹೇಳಲು; ರೂಪು, ರುಚಿ, ತೃಪ್ತಿಗಳಅರ್ಪಣಕ್ರಮವನ್ನು ಬಲ್ಲಂಥಾ ಆ ತಪಸ್ವಿಗಳು ಆ ತೊಟ್ಟೀಹಣ್ಣುಗಳನ್ನು ತಮ್ಮ ಲಿಂಗಕ್ಕೆ ಬಾಳೆಹಣ್ಣು, ದ್ರಾಕ್ಷೆಹಣ್ಣು, ಹಲಸಿನಹಣ್ಣುಗಳನ್ನುಸಮರ್ಪಿಸುವಂತೆಸಮರ್ಪಿಸಿ, ತೃಪ್ತಿಯನ್ನು ಹೊಂದಿದರು. ಅನಂತರದಲ್ಲಿ ಸಂತುಷ್ಟರಾದ ತಪಸ್ವಿಗಳೊಡನೆ ಬರತಕ್ಕ ಆ ಭಕ್ತಶಿರೋಮಣಿಯ ಪ್ರತಿಬಿಂಬವನ್ನು ಬಸವೇಶನು ತನ್ನ ಇಷ್ಟಲಿಂಗದಲ್ಲಿ ಕಂಡು, ಸಂಭ್ರಮದೊಡನೆ ಎದ್ದು, ಶಿವಗಣಂಗಳೊಡನೆ ಎದುರಾಗಿ ಹೋಗಿ, ಆತನನ್ನು ತನ್ನ ಮನೆಗೆಕರತಂದು, ಚನ್ನಾಗಿ ಪೂಜಿಸಿದನು. ಹೀಗೆ ಚೌಡಯ್ಯನು ತನ್ನನ್ನು ಸಾಕ್ಷಾತ್ಪರಶಿವನಂತೆ ತಿಳಿದ ಬಸವೇಶನಿಂದ ಪ್ರತಿದಿನದಲ್ಲಿಯೂ ಪೂಜಿಸಲ್ಪಡುತ್ತಾ ಕಲ್ಯಾಣಪಟ್ಟಣದಲ್ಲಿ ಸುಖದಿಂದಿದ್ದನು.

ಒಂದುದಿನ ಚೌಡಿದೇವನು ಮತ್ತೊಂದುಗ್ರಾಮದಲ್ಲಿ ನಡೆಯುತಿದ್ದ ವಿವಾಹಮಹೋತ್ಸವಕ್ಕಾಗಿ ಆಪ್ತರಾದ ಭಕ್ತರಿಂದ ಪ್ರಾರ್ಥಿಸಲ್ಪಟ್ಟವನಾಗಿ ಹೊರಟು ಹೋಗುತ್ತಾ ರಾಜಮಾರ್ಗದಲ್ಲಿ ಕುಣಿಯುತ್ತಿರುವ ಭಕ್ತರ ನಡುವೆ ವಿಮಾನದೂ

ಳಗೆ ಕುಳಿತಿರುವ ಪ್ರಾಣವಿಲ್ಲದ ತಪಸ್ವಿಯದೇಹವನ್ನು ಕಂಡು, ಆ ವಿಮಾನವನ್ನು ಹೊತ್ತುಕೊಂಡಿರುವ ಜನಗಳನ್ನುಕುರಿತು;-ಈ ತಪಸ್ವಿಯಿಂದ ಆಶೀರ್ವಾದವನ್ನು ಪಡೆಯಬೇಕಾಗಿರುವುದರಿಂದ ವಿಮಾನವನ್ನು ಇಳಿಸಿರಿ; ಈ ಮಹಾತ್ಮರೊಡನೆವಿವಾಹಮಹೋತ್ಸವಕ್ಕೆ ಹೋಗಬೇಕೆಂದು ಹೇಳಿದನು. ಆ ಕ್ಷಣವೇ ಹೊತ್ತಿದ್ದ ಭಕ್ತರು ವಿಮಾನವನ್ನು ಇಳಿಸಲು; ಚೌಡಿದೇವನು ಕತ್ತಿಯನ್ನು ಕಯ್ಯಲ್ಲಿ ಹಿಡಿದವನಾಗಿ ಮುಂದೆ ನಿಂತು ಶರಣಾರ್ತಿ ಎನಲು, ಆ ತಪಸ್ವಿಯು, ಪ್ರಾಣವನ್ನು ಹೊಂದಿ, ಮಂಗಳವಾಗಲಿ ಎಂದು ಹೇಳಿದನು. ಆಗ ಚೌಡಿದೇವನು;— ನಂದಿವಾಹನನಾದ ನಿನಗೆ ಈಮನುಷ್ಯವಾಹನವು ಯೋಗ್ಯವೇ? ಇದು ಯೋಗ್ಯವಲ್ಲ, ಏಳು, ಎಂದು ಕೈಹಿಡಿಯಲು; ಆ ಕ್ಷಣವೇ ಆ ತಪಸ್ವಿಯು ಎದ್ದನು. ಎದ್ದಂಥ ಆ ತಪಸ್ವಿಯನ್ನು ಮುಂದೆ ಬಿಟ್ಟುಕೊಂಡು, ಆ ಭಕ್ತರಿಂದ ಸುತ್ತಲ್ಪಟ್ಟವನಾಗಿ, ಪಟ್ಟಣದ ಜನಗಳಿಂದ ಹೊಗಳಿಸಿಕೊಳ್ಳುತ್ತಾ ಹೋದನು.

ಉತ್ಸವನಡೆಯುವ ಗ್ರಾಮದ ಸಮೀಪದಲ್ಲಿಆಟವಾಡುತ್ತಿದ್ದ ಹುಡುಗರು, ಓಡಿಹೋಗುವ ನಮಗೆ ಈ ಬಸವನಾಲವೇ ಗುರಿಯೆಂದು ಹೇಳಿದಮಾತನ್ನು ಚೌಡಿದೇವನು ಕೇಳಿ, ಈ ಮರಕ್ಕೆ ಬಸವನಾಲವೆಂಬ ಹೆಸರು ಬರುವದಕ್ಕೆ ಕಾರಣವೇನೆಂದು ಪ್ರಶ್ನೆಯಂ ಮಾಡಲು; ಅವರೊಳಗೊಬ್ಬ ಹುಡುಗನು; ಅಯ್ಯಾ ಪೂರ್ವದಲ್ಲಿ ಎರಡು ವೃಷಭಗಳು ಏಳುದಿವಸ ಹಗಲೂ ರಾತ್ರಿ ಗುದ್ದಾಡಿದವಂತೆ ಅವರೊಳಗೊಂದು ವೃಷಭವು ಬಳಳಿಕೆಯಿಂದ ಕಣ್ಣುಗಳನ್ನು ಮುಚ್ಚಿಕೊಂಡು ಪ್ರಾಣವನ್ನು ಬಿಟ್ಟಿದಂತೆ. ಬಳಿಕ ಭಕ್ತರು ಆದನ್ನು ಇಲ್ಲಿ ಸಮಾಧಿಯನ್ನು ತೋಡಿ, ಹೂಳಿಟ್ಟರಂತೆ. ಆದರ ಸಮಾಧಿಯ ಮೇಲೆ ದೈವಗತಿಯಿಂದ ಈ ಆಲದ ಮರವು ಹುಟ್ಟಿ, ಬಸವನಾಲವೆಂಬ ಹೆಸರನ್ನು ಪಡೆಯಿತಂತೆ. ಈ ಕಥೆಯನ್ನು ನಮ್ಮ ಅಜ್ಜನು ನನಗೆ ತಿಳಿಸಿದನು. ಆತನು ಅವರ ಅಜ್ಜನಿಂದ ಕೇಳಿದನಂತೆ. ಇದಲ್ಲದೆ ಇನ್ನೊಂದಾಶ್ಚರ್ಯವನ್ನು ನೋಡು. ಇದರ ಹಾಲು ರಕ್ತಕ್ಕೆ ಸಮಾನವಾಗಿದೆ. ಇದರ ಹಣ್ಣುಗಳು ಮಾಂಸಗಳಾಗಿವೆ. ಎಂದು ಹೇಳಲು; ಸಂಗಡ ಯಿದ್ದ ಭಕ್ತರು ಕೇಳಿ, ಇದು ಬಹುದಿವಸದಲ್ಲಿ ನಡೆದ ಸಂಗತಿ; ಆದಕಾರಣ ಹೋಗೋಣ ಎಂದು ಹೇಳಿದರು. ಧೀರನಾದ ಚೌಡಿದೇವನು ಆಮಾತಿಗೆ ಮುಗುಳುನಗೆನಕ್ಕು; ಸೃಷ್ಟಿ, ಸ್ಥಿತಿ, ಸಂಹಾರ ಕ್ರಿಯೆಗಳ ಕ್ರಮದಲ್ಲಿ ವಿನೋದಿಸುವ ಜಗದೀಶನಾದ ಶಿವನಿಗೆ ಹೊಸದು ಹಳೇದು ಎಂದರೇನು? ವೃಷಭವು ಸತ್ತಿತೆಂಬ ಸುದ್ದಿಯು

ಕಿವಿಗೆಬಿದ್ದಮೇಲೆ ಮೊರ್ಗಕ್ಕೆ ಅಡ್ಡಿಯಾಯಿತು. ಆ ವೃಷಭನು ನಮ್ಮ ಮುಂದೆ ನಡೆಯಬೇಕು. ಎಂದುನಿರ್ಣಯಿಸಿ, ಸನ್ನಾಹದೊಡನೆ ಕಿಲಕಿಲಧ್ವನಿಯಂ ಮಾಡಿ, ಆಮರವನ್ನು ಕತ್ತಿಯಿಂದ ಮುಟ್ಟಿ;-ಎಲೈ ಬಸವನೇ ಏಳು ಎನಲು; ಬಸವನು ನಿರ್ಮಲವಾದ ಬೀಳಿಲುಗಳಿಂದ ಕೂಡಿದ ಕಪ್ಪಾದ ವಟವೃಕ್ಷವನ್ನು ಕೋಡಿನಲ್ಲಿ ಎತ್ತಿಕೊಂಡು ಮೇಗವನ್ನು ವಹಿಸಿದ ಕೈಲಾಸವೋ ಎಂಬಂತೆ ಎದ್ದಿತು. ಅದರ ದೇಹವು ಸಮಾಧಿಯಲ್ಲಿಡುವಾಗ ಹಾಕಿದ ಹರಸಿನದಿಂದ ಗುರುತು ಮಾಡಲ್ಪಟ್ಟ ಗರಿಕೆಗಳಿಂದಲೂ, ಗಂಧಪುಷ್ಪಗಳಿಂದಲೂ, ಅಲಂಕರಿಸಲ್ಪಟ್ಟಿತ್ತು. ಆಗ ಆಬವನು ಸಕಲರಿಗೂ ಆಶ್ಚರ್ಯವನ್ನುಂಟುಮಾಡಿ, ತನ್ನ ಪಾದಗಳಿಂದ ಭೂಮಿಯನ್ನು ಕರೆಯುತ್ತಾ, ಬಾಲವನ್ನು ಎತ್ತಿಕೊಂಡು, ಕತ್ತನ್ನು ಸ್ವಲ್ಪ ಬಗ್ಗಿಸಿ, ಗುಟುರೆಯನ್ನುಹಾಕುತ್ತಾ, ಕೊಬ್ಬಿದಂಥಾದ್ದಾಗಿ ಹಿಂದೆ ವದೆಯುತ್ತಾ, ಕಾಲುಗಳಿಂದ ಆಕಾಶವನ್ನು ಒರೆಯುತ್ತಾ, ಎಲ್ಲಾ ಕಡೆಯು ಕೆಂಪಾದಕಣ್ಣುಗಳಿಂದ ಎಡಬಲಗಳನ್ನು ನೋಡಿ, ಭಯಂಕಾರವಾಗಿ ಶೂತ್ಕಾರವನ್ನು ಮಾಡುತ್ತಾ, ಕೊರಳನ್ನು ಎತ್ತಿಕೊಂಡು, ಜನಗಳಗುಂಪನ್ನು ಕುರಿತು ಓಡುತ್ತಾ, ಚೌಡಿದೇವನನ್ನುನೋಡುತ್ತಾ, ಮುಂಚಿನಂತೆ ಸಂಚರಿಸಿತು. ಚೌಡಿದೇವನು ಆ ವೃಷಭನನ್ನು ಬಂದ ಬಂಧುವನ್ನು ಆಲಿಂಗಿಸಿಕೊಳ್ಳುವಂತೆ ಆಲಿಂಗಿಸಿ, ಧೂಪ, ದೀಪ, ಅಕ್ಷತ ಮೊದಲಾದವುಗಳಿಂದ ವಿಧಿಪ್ರಕಾರವಾಗಿ ಪೂಜಿಸಿ ಹಾಲು ತುಪ್ಪವನ್ನು ಕುಡಿಸಿ, ನಮಸ್ಕಾರವನ್ನು ಮಾಡಿ, ಎಲೈ ವೃಷಭನೇ ! ನಮ್ಮ ಮುಂದೆ ನಡೆಎಂದು ಹೇಳಲು; ಆವೃಷಭನು ಮುಂದೆ ನಡೆಯಿತು. ಪೂರ್ವದಲ್ಲಿ ಮೃತಿಯನ್ನು ಹೊಂದಿದ್ದು ಚೌಡಿದೇವನಿಂದ ತಿರುಗಿ ಬದುಕಿಸಲ್ಪಟ್ಟ ಆಜಂಗಮನನ್ನು, ವೃಷಭನನ್ನುಮುಂದೆ ಬಿಟ್ಟುಕೊಂಡು ಸರ್ವರೂ ಹೋದರು.

ಬಳಿಕ ಮಾರ್ಗದಲ್ಲಿ ಎರಡು ದಡಗಳನ್ನೂ ಕಟ್ಟಿ, ತೆರೆಗಳ ಸಮೂಹದಿಂದ ಭಯಂಕರವಾದ ಒಂದುಹೊಳೆಯು ಅಡ್ಡಲಾಗಲು; ಸಮರ್ಥನಾದ ಚೌಡಿದೇವನು ಆದರ ದಡವನ್ನತಿಕ್ರಮಿಸಿ, ಕಯ್ಯಲ್ಲಿ ಕತ್ತಿಯನ್ನುಹಿಡಿದಲ್ಲಿ ;—ಎಲೇ ನದಿಯೇ ಸಮುದ್ರವು ಒಬ್ಬ ಶಿವಭಕ್ತನ ಹಸ್ತಕಮಲದಲ್ಲಿ ಮಕರಂದದ ಕಾಂತಿಯನ್ನು ಧರಿಸಿತು. ನೀನು ತಿಳಿದಿಲ್ಲವೋ? ಪೂರ್ವದಲ್ಲಿ ಒಬ್ಬ ಭವಿಯಿಂದ—ಭಕ್ತನಿಗೆ ನಾವೆಯಿಂದ ಪ್ರಯೋಜನವೇನೆಂದು ಹಾಸ್ಯ ಮಾಡಲ್ಪಟ್ಟ ಶಿವದಾಸನು ನದೀವೇಗವನ್ನು ಅಡಗಿಸಿ, ಕಾಲಿನಿಂದ ದಾಂಟಿದನು. ಗಜೇಶಮಸಣಯ್ಯನೆಂಬ ಭಕ್ತನು

ಶಿವನನ್ನು ಪೂಜಿಸುತ್ತಿರುವಲ್ಲಿ ಹೊಳೆ ಬಂದು, ಪ್ರವಾಹವನ್ನು ಎರಡುಭಾಗಮಾಡಿಕೊಂಡು ದೂರವಾಗಿ ಹೋಯಿತು. ಆದಕಾರಣ ನೀನುಕೂಡ ನನಗೆ ಮಾರ್ಗವನ್ನು ಕೊಡು, ಎಂದಾಜ್ಞಾಪಿಸಿದನು. ಆತನಪ್ಪಣೆಯಿಂದ ಆ ಮಹಾನದಿಯು ಪ್ರವಾಹವನ್ನು ಅಡಗಿಸಿಕೊಂಡು. ಆಗ ಹರಿಯದೆ ಆಚೆಯೀಚೆ ನಿಂತ ನೀರು ಚೌಡಿದೇವನ ಮಹಿಮೆಯನ್ನು ಆಕಾಶಗಂಗೆಗೆ ಹೇಳುವದಕ್ಕೋಸ್ಕರವೋ ಎಂಬಂತೆ ಆಕಾಶವನ್ನು ವ್ಯಾಪಿಸಿತು ಆಮೇಲೆ ಆ ಭಕ್ತರು ನೀರನ್ನು ಎರಡು ಭಾಗ ಮಾಡುವದು ಯಾರಿಂದಲೂ ಆಗುವದಿಲ್ಲವೆಂಬ ಮಾತುಸುಳ್ಳಾಯಿತು. ಎಂದು ಹೇಳಿಕೊಳ್ಳುತ್ತಾ ಆ ನದಿಯನ್ನು ದಾಟಿ ಕೆಲವರು ಕುಪ್ಪಳಿಸಿದರು. ಕೆಲವರು ಕುಣಿದರು. ಕೆಲವರು ಹಾಡಿದರು. ಶಿವಾನಂದದಿಂದ ತುಂಬಲ್ಪಟ್ಟ ಕೆಲವರು ಕಿಲಕಿಲಧ್ವನಿಯನ್ನು ಮಾಡಿದರು. ಚೌಡಿದೇವನು ತಾನೂ ಕೂಡ ನದಿಯ ಆಚೇದಡವನ್ನು ಸೇರಿ, ಮುಂಚಿನಂತೆ ಹೋಗ ಹೋಗುಎಂದು ಆ ನದಿಗೆ ಆಜ್ಞಾಪಿಸಿ, ಆ ಗ್ರಾಮಕ್ಕೆ ಹೋಗಿ, ಭಕ್ತನ ವಿವಾಹಕಾರ್ಯವನ್ನು ನೆರವೇರಿಸಿಕೊಂಡು, ತಿರಿಗಿ ಕಲ್ಯಾಣಪಟ್ಟಣಕ್ಕೆ ಬಂದನು. ಜಂಗಮನಿಂದಲೂ, ವೃಷಭದಿಂದಲೂ, ಆಶ್ರೈಸಲ್ಪಟ್ಟವನಾಗಿಯೂ ಇರುವ ಚೌಡಿದೇವನನ್ನು ಕಲ್ಯಾಣಪಟ್ಟಣದ ಜನಗಳು ಆಶ್ಚರ್ಯದಿಂದ ನೋಡಿದರು. ಆ ಕಾಲದಲ್ಲಿ ಒಬ್ಬ ಹುಡುಗಿಯು ಬಂದು ಚೌಡಿದೇವನಿಗೆ ನಮಸ್ಕಾರವನ್ನು ಮಾಡಲು; ಆತನು ಆಕೆಗೆ ಬಹುಕಾಲ ಬದುಕೆಂದು ಆಶಿರ್ವಾದವನ್ನು ಮಾಡಿ ತನ್ನ ಆಶ್ರಮಕ್ಕೈದಿ, ಭಕ್ತರನ್ನೆಲ್ಲಾ ಕಳುಹಿಸಿ ಸುಖಾಸನದಲ್ಲಿ ಕುಳಿತುಕೊಂಡು ಶಿಷ್ಯರಿಂದ ಸೇವೆಯನ್ನು ತೆಗೆದುಕೊಳ್ಳುತ್ತಾ ಮೊದಲಿನಂತೆ ಪ್ರಕಾಶಿಸಿದನು.

ಪೂರ್ವದಿನದಲ್ಲಿ ಆಶೀರ್ವದಿಸಲ್ಪಟ್ಟಿದ್ದ ಕನ್ಯೆಯು ಮಾರಣೇದಿನ ಸಾಯಲು ಅವಳ ಬಂಧುಗಳು ಆಕೆಯನ್ನು ವಿಮಾನದಮೇಲೆ ಹಾಕಿಕೊಂಡು, ಚೌಡಿದೇವನ ಸಮೀಪಕ್ಕೆ ತಂದು,-ಎಲೈ ಮಹಾತ್ಮನೇ ಇವಳು ನೆನ್ನೇದಿನ ನಿಮ್ಮ ಆಶೀರ್ವಾದದಿಂದ ಬೆಳೆದು ಈದಿನ ಮೃತಳಾದಳು. ನಿನ್ನ ವಚನವು ಯಾಕೆ ಸುಳ್ಳಾಯಿತು. ಎಂದು ಹೇಳಿಕೊಂಡು ಅತ್ತರು. ಕರುಣಾಸಮುದ್ರನಾದ ಚೌಡಿದೇವನು ಅಳುತ್ತಿರುವ ಆ ಜನಗಳನ್ನು ಅಳಬೇಡಿರೆಂದು ಸಮಾಧಾನವನ್ನು ಮಾಡಿ ಆ ಹುಡುಗಿಗೆ ಕತ್ತಿಯನ್ನು ಸೋಕಿಸಿ, ಅವಳ ಹೆಸರನ್ನು ಹಿಡಿದು ಕರೆದನು. ಹಾಗೆ ಕರೆದ ಕ್ಷಣವೇ ಆ ಕನ್ಯೆಯು ಮಲಗಿದ್ದು ಎದ್ದವಳಂತೆ ಎದ್ದು ಪುನಃ ಹುಟ್ಟಿಸಿದ ಚೌಡಿದೇವನ ಪಾದಗಳಲ್ಲಿ ಬಿದ್ದಳು. ಅವಳ ತಂದೆತಾಯಿಗಳು ಸಂತೋಷ

ಭರಿತರಾಗಿ, ಚೌಡಿದೇವನಿಗೆ ನಮಸ್ಕರಿಸಿ, ವಾಚಾಮಗೋಚರವಾದ ಆತನ ಮಹಿಮೆಯನ್ನು ಸ್ತುತಿಸುವುದಕ್ಕೆ ಅಶಕ್ತರಾಗಿ,-ಪ್ರಾಣದಾನವನ್ನು ಮಾಡಿದ ವನಿಗೆ ಯಾವನು ಪ್ರತ್ಯುಪಕಾರವನ್ನು ಮಾಡಿಯಾನು? ಆದ್ದರಿಂದ ನಿನ್ನ ಭೃತ್ಯಾನುಭೃತ್ಯರಾದ ನಮ್ಮನ್ನು ದಯದಿಂದ ಚೆನ್ನಾಗಿ ರಕ್ಷಿಸು, ಎಂದು ವಿಜ್ಞಾಪಿಸಿದರು. ಚೌಡಿದೇವನು ಆ ಕನ್ಯೆಗೂ ಅವಳ ತಂದೆತಾಯಿಗಳಿಗೂ ಲಿಂಗಧಾರಣವಂ ಮಾಡಿ, ಆ ಕನ್ಯೆಗೆ ಅದುಮೊದಲ್ಗೊಂಡು ನೂರುವರ್ಷ ಆಯುಷ್ಯವನ್ನು ಕೊಟ್ಟು, ಆಯುರ್ಲಾಭದಿಂದ ಸಂತುಷ್ಟಳಾದ ಆ ಕನ್ಯೆಯನ್ನು ಅವಳ ತಂದೆತಾಯಿಗಳೊಡನೆ ಕಳುಹಿಸಿದವನಾಗಿ, ತಾನು ಲಿಂಗಾನಂದವುಳ್ಳ ಸಕಲರಿಂದಲೂ ಪೂಜಿಸಲ್ಪಡುತ್ತಾ ಇದ್ದನು.

ಮೃತರಾಗಿದ್ದ ಕನ್ಯೆ ವೃಷಭ, ತಪಸ್ವಿ, ಇವರುಗಳನ್ನು ಬದುಕಿಸಿದನು ಎಂಬ ಆಶ್ಚರ್ಯಕರವಾದ ಕೀರ್ತಿಯು ಹತ್ತು ದಿಕ್ಕುಗಳಲ್ಲಿಯೂ ವ್ಯಾಪಿಸಿತು. ದುಃಖಿತರನ್ನು ರಕ್ಷಿಸುವುದರಲ್ಲಿ ಆಸಕ್ತವಾದ ಆತನ ವಿಶೇಷವಾದ ಕೀರ್ತಿಯನ್ನು ಪರಮತಸ್ಥರು ಸೈರಿಸದೆ ಅಸೂಯೆಗೊಂಡವರಾಗಿ, ಆತನ ಮಹಿಮೆಯನ್ನು ವ್ಯರ್ಥ ಮಾಡಬೇಕೆಂದು ಆಲೋಚಿಸಿ, ಗೋಣಿಯಿಂದ ಕಪಟಮನುಷ್ಯನನ್ನು ನಿರ್ಮಿಸಿ ಒಳಗೆ ಹೊಟ್ಟು ತುಂಬಿ, ಅದರಮೇಲೆ ಭಸ್ಮವನ್ನು ಲೇಪಿಸಿ, ಕೃತ್ರಿಮವಾದ ಜಡೆಗಳನ್ನು ಕಲ್ಪಿಸಿ, ರುದ್ರಾಕ್ಷಿಮಾಲಿಕೆಗಳನ್ನು ಕಟ್ಟಿ, ಜೀರ್ಣವಸ್ತ್ರದಿಂದ ಮುಚ್ಚಿ ರುದ್ರವಿಮಾನದಲ್ಲಿ ಕುಳ್ಳಿರಿಸಿ, ಹೊತ್ತುಕೊಂಡು ಅಯ್ಯೋ ಇವನು ನಮ್ಮ ಬೀದಿಯಲ್ಲಿರುವ ಹಾಳುಗುಡಿಯಲ್ಲಿ ಸತ್ತನು. ಒಬ್ಬ ಭಕ್ತನಾಗಲಿ ಜಂಗಮನಾಗಲಿ ಇವನ ಸಮೀಪಕ್ಕೆ ಬರಲಿಲ್ಲ. ‹‹ಅನ್ನ ಬಟ್ಟೆ, ಚಿನ್ನ ಇವುಗಳು ಎಲ್ಲಿ ದೊರೆಯುವವೋ ಅಲ್ಲಿಗೆ ಭಕ್ತರೂ ಜಂಗಮರೂ ಗುಂಪುಗುಂಪಾಗಿ ಬರುತ್ತಾರೆ. ದರಿದ್ರನನ್ನು ಯಾರು ನೋಡುತ್ತಾರೆ? ದುರ್ಗಂಧದ ದೆಸೆಯಿಂದ ನಾವೂ ಹಾಗಿರುವುದು ಯುಕ್ತವಲ್ಲ. ಆದಕಾರಣ ಈ ಜಂಗಮನ ಹೆಣವನ್ನು ಊರ ಹೊರಕ್ಕೆ ಸಾಗಿಸುತ್ತೇವೆ. ಎಂದು ಆ ವಂಚಕರು ಒಬ್ಬರಿಗೊಬ್ಬರು ಹೇಳಿಕೊಳ್ಳುತ್ತಾ ಚೌಡಿದೇವನ ಮನೆಯ ಬೀದಿಯ ಮಾರ್ಗದಲ್ಲಿ ನಡೆದರು. ಆ ಕೊಬ್ಬಿದವರ ದುರ್ಭಾಷೆಗಳನ್ನು ಕೇಳಿದ ಚೌಡಿದೇವನು ಮಂದಹಾಸವನ್ನು ಮಾಡಿ, ಅವರ ಕಪಟವನ್ನು ತಿಳಿದವನಾದಾಗ್ಯೂ ಹೀಗೆ ಆಲೋಚಿಸಿದನು. ಏನಂದರೆ;-ಶವಕ್ಕೂ ಈ ಕಪಟದೇಹಕ್ಕೂ ಏನು ಭೇದವು? ಹೆಣಕ್ಕೆ ಪ್ರಾಣವನ್ನು ಕೊಟ್ಟ ಶಿವನು

ಕಪಟದೇಹಕ್ಕೆ ಪ್ರಾಣವನ್ನು ಕೊಡಲಾರನೇ! ಹೀಗೆ ಆಲೋಚಿಸಿ ದುಷ್ಟರನ್ನು ಶಿಕ್ಷಿಸುವವರಾಗಿಯೂ, ಸತ್ಪುರುಷರನ್ನು ರಕ್ಷಿಸುವವರಾಗಿಯೂ ಇರುವ ಸಮಸ್ತಪ್ರಮಥರ ಪಾದಕಮಲವನ್ನು ಧ್ಯಾನಿಸಿ, ಖಡ್ಗವನ್ನು ತೆಗೆದುಕೊಂಡು ಝಳಿಪಿಸಿ, ಆ ಧೂರ್ತರಿಂದ ಹೊರಲ್ಪಟ್ಟ ಆ ಕಪಟಮನುಷ್ಯನನ್ನು ಕುರಿತು;—ಎಲೈ ತಪಸ್ವಿಯೇ ಏಳು ನಡೆಎಂದು, ಹೇಳಿದನು. ಕೂಡಲೇ ಆ ಕೃತ್ರಿಕಮತರಮನುಷ್ಯನು ವಿಮಾನದಿಂದ ಧುಮುಕಿ, ಕೈಗಳನ್ನುಮುಗಿದುಕೊಂಡುಮುಂದೆನಿಂತು, ಚೌಡಿದೇವನಪಾದಕ್ಕೆ ನಮಸ್ಕರಿಸಿ, ನೀನು ಶ್ರೀಗುರು, ನೀನೇ ಶಿವನು, ನಾನು ನಿನ್ನಕರುಣಾಗರ್ಭದಲ್ಲಿ ಹುಟ್ಟಿದವನು ಇದರಮೇಲೆ ನಾನು ಯಾವುದನ್ನೂ ಕಾಣೆನು. ಎಂದು ಹೇಳಿಕೊಂಡು ಮತ್ತೆಮತ್ತೆ ನಮಸ್ಕರಿಸಿದನು. ಹೀಗೆ ನಮಸ್ಕರಿಸಿದವನನ್ನು ಚೌಡಯ್ಯನು ಎತ್ತಿ ಮಗನನ್ನು ಆಲಂಗಿಸಿಕೊಳ್ಳುವಂತೆ ಆಲಿಂಗಿಸಿ, ಕರುಣಾದೃಷ್ಟಿಯಿಂದ ನೋಡಿ, ಅವನಿಗೆ ಲಿಂಗಧಾರಣವಂ ಮಾಡಿದನು. ಮನಸ್ಸಿಗೂ ಅಗೋಚರವಾದ ಆತನ ಮಹಿಮೆಯನ್ನು ನೋಡಿದ ಪರಮತಸ್ಥರು ಭಯದಿಂದ ನಡುಗುತ್ತಾ ಬಂದು, ಆತನ ಪಾದಗಳಿಗೆ ನಮಸ್ಕಾರವನ್ನು ಮಾಡಿ ಎದ್ದು;— ಎಲೈ ಸ್ವಾಮಿಯೇ ದುಷ್ಟಬುದ್ಧಿಗಳೂ, ದುರಾಚಾರರೂ, ದುರ್ಜನರೂ, ದುರ್ಗುಣಗಳನ್ನು ಅಭ್ಯಾಸಿಸಿದವರೂ, ಆಗಿರುವ ನಮ್ಮನ್ನು ದಯದಿಂದ ಲಿಂಗಧಾರಿಗಳನ್ನು ಮಾಡಿ ರಕ್ಷಿಸು. ಎಂದು ಹೇಳಿಕೊಂಡು ತಿರಿಗಿ ತಿರಿಗಿ ನಮಸ್ಕರಿಸುತ್ತಿರಲು; ಕರುಣಾಸಮುದ್ರನಾದ ಚೌಡಿದೇವನು ಅವರುಗಳಿಗೆ ಪೂರ್ವಸ್ವಭಾವವನ್ನು ಬಿಡಿಸಿ, ಲಿಂಗಾಂಗಸಂಗಿಗಳನ್ನು ಮಾಡಿದನು.

ಈ ಪ್ರಕಾರವಾಗಿ ಕರುಣಾಶಾಲಿಯಾದ ಚೌಡಿದೇವನು ಪರಮತಸ್ಥರೆಲ್ಲರನ್ನೂ ಆಯಾಯಕಾಲದಲ್ಲಿ ಜೈಸಿ, ವೃಷಭ, ಜಂಗಮ, ಕನ್ಯೆ, ಇವರುಗಳ ಪ್ರಾಣವನ್ನ ಕೊಡುವದರಿಂ ಆಶ್ಚರ್ಯಕರವಾದ ಯಶಸ್ಸುಳ್ಳವನಾಗಿ ಭೂಮಿಯಲ್ಲ ವಾಸಿಸುತ್ತಿದ್ದನು.

ಚೌಡಿದೇವನ ಚರಿತ್ರೆಯೆಂಬ ಅಮೃತಪ್ರವಾಹದಿಂದ ಮನೋಹರವಾದ ಪದ್ಯಗಳ ಸಾಲನ್ನು ಪಠಿಸುವದರಲ್ಲಿ ನಿರತರಾದ ಪುರುಷರಿಗೆ ದೀರ್ಘಾಯುವೂ, ಐಶ್ವರ್ಯವೂ, ಆರೋಗ್ಯವೂ, ಸಕಲಸಿದ್ಧಿಗಳೂ ಉಂಟಾಗುವವು.

ಬಸವೇಶವಿಜಯದಲ್ಲಿ ಹತ್ತೊಂಬತ್ತನೇ ಅಧ್ಯಾಯವು
ಸಂಪೂರ್ಣವು.

# ಇಪ್ಪತ್ತನೇ ಅಧ್ಯಾಯವು.

---

## ಸುರಗಿ ಚೌಡಯ್ಯನ ಕಥೆ.

ಶಿವಲಿಂಗದ ರಹಸ್ಯವನ್ನು ತಿಳಿದವನಾಗಿಯೂ, ಯೋಗಾನಂದದಿಂ ಕೂಡಿದ ಮನಸ್ಸುಳ್ಳವನಾಗಿಯೂ, ಬಾಹ್ಯ, ಅಭ್ಯಂತರ ಎಂಬ ಎರಡು ವಿಧವಾದ ಲಿಂಗಪ್ರಸಾದವನ್ನು ಚನ್ನಾಗಿ ಆಸ್ವಾದಿಸುವದೊಂದರಲ್ಲಿ ಸೌಖ್ಯವುಳ್ಳವನಾಗಿಯೂ, ಪರಿಶುದ್ಧನಾಗಿಯೂ, ಸ್ವರ್ಗ, ಮರ್ತ್ಯ, ಪಾತಾಳಗಳಿಂದ ವಂದ್ಯನಾಗಿಯೂ, ಮಂಗಳಕರವಾದ ಯಶಸ್ಸುಳ್ಳವನಾಗಿಯೂ, ಜಿತೇಂದ್ರಿಯನಾಗಿಯೂ, ಪವಿತ್ರವಾದ ದೇಹವುಳ್ಳವನಾಗಿಯೂ, ಕೃಪೆಯಿಂದ ತುಂಬಲ್ಪಟ್ಟವನಾಗಿಯೂ, ಸಂಸಾರಭೀತಿಯನ್ನು ಕೆಡಿಸುವವನಾಗಿಯೂ, ಸದಾಚಾರ ಸದ್ವೃತ್ತಿಗಳನ್ನು ರಕ್ಷಿಸುವ ಉದ್ಯೋಗದಿಂದ ನಿರ್ಮಲನಾಗಿಯೂ, ಪ್ರಿಯವಾದ, ಶ್ರವಣ, ಕೀರ್ತನ, ಸ್ಮರಣ, ಪಾದಸೇವನ ಅರ್ಚನೆ ವಂದನ ದಾಸ್ಯ ಸಖ್ಯ ಆತ್ಮಾರ್ಪಣ ಎಂಬೆಂಟು ವಿಧವಾದ ಭಕ್ತಿಯ ಕ್ರಮವನ್ನು ಆಚರಿಸುವುದರಿಂದ ಬೆಳೆದ ಬದ್ಧಿಯುಳ್ಳವನಾಗಿಯೂ, ನಿರಂತರದಲ್ಲಿ ಅನೇಕ ಶಿವಭಕ್ತರನ್ನು ಪೂಜಿಸುವದರಲ್ಲಿ ನಿರತನಾಗಿಯೂ, ಇರುವ ಮಹಾತ್ಮನಾದ ಸುರಗಿ ಚೌಡಯ್ಯನೆಂಬ ಒಬ್ಬ ಕಾರಣಪುರುಷನಿದ್ದನು.

ಪೂಜ್ಯನಾದ ಆ ಭಕ್ತಶ್ರೇಷ್ಠನು ಪರಶಿವನನ್ನು ಯಾವಾಗಲೂ ತನ್ನ ಇಷ್ಟದೇವತೆಯನಾಗ್ನಿ ತಿಳಿದವನಾಗಿ ಪ್ರತಿದಿನವೂ ನೆಲ್ಲಕ್ಕಿಯ ಅನ್ನ, ಪಾನಕ ಕಜ್ಜಾಯ, ತುಪ್ಪ, ಹಾಲು, ಅನ್ನ ಮೊದಲಾದವುಗಳನ್ನು ಒಂದು ಪಾತ್ರೆಯಲ್ಲಿ ಬಡಿಸಿ ಭಕ್ತನಮುಂದಿಟ್ಟು ಎಲೈ ಶಿವನೇ (ರಸಾನ್ಭಕ್ತಸ್ಯಜಿಹ್ವಾಗ್ರಾದಸ್ನಾಮಿಕಮಲೋದ್ಭವ) ಎಂದರೆ ನಾನು ನನ್ನ ಭಕ್ತನ ನಾಲಗೆಯ ತುದಿಯಿಂದ ಮಧುರಾದಿಷಡ್ರಸಗಳನ್ನು ಸ್ವೀಕರಿಸುತ್ತೇನೆ) ಎಂಬ ನಿನ್ನ ವಚನಕ್ಕೆ ಸರಿಯಾಗಿ ಭಕ್ತರೂಪನಾದ ನೀನು ಇದನ್ನು ಸ್ವೀಕರಿಸು ಎಂದು ಹೇಳಿ ಆ ಭಕ್ತನನ್ನು ತೃಪ್ತಿಪಡಿಸಿದಮೇಲೆ ತಾನು ಒಂದು ಹುಲಿಯ ಚರ್ಮದಿಂದಾವರಿಸಲ್ಪಟ್ಟ ಮನೋಹರವಾದ ಒಂದು ಪೀಠದಮೇಲೆ ಉತ್ತರಾಭಿಮುಖವಾಗಿ ಕುಳಿತು, ಶಿವಪೂಜೆಯನ್ನು ಮಾಡುವದಕ್ಕಾ

ರಂಭಿಸಿ ಲಿಂಗಾಂಗಸಾಮರಸ್ಯವನ್ನು ತಿಳಿದುದರಿಂ ಅಭಿಷೇಕಕ್ಕಿಂತ ಮುಂಚೆ ಕಣ್ಣುಗಳಿಂದ ಅವಿಚ್ಛಿನ್ನವಾಗಿ ಹೊರಟ ಆನಂದ ಬಾಷ್ಪಗಳಿಂದ ಶಿವನನ್ನಭಿಷೇಕಿಸಿ ಧೂಪಕ್ಕಿಂತ ಮುಂಚಿತವಾಗಿ ಗುರುಕಾರುಣ್ಯದಿಂದ ಪಡೆಯಲ್ಪಟ್ಟ ಸಂಸ್ಕಾರದಿಂದ ಶಿವನ ಸನ್ನಿಧಿಯನ್ನು ಧೂಪಪಡಿಸಿ ಪುಷ್ಪಪೂಜೆಯನ್ನು ಅರ್ಪಿಸುವದಕ್ಕಿಂತ ಮುಂಚೆ ಇಂದ್ರಿಯಂಗಳನ್ನು ಸಮರ್ಪಿಸಿ ಆರತಿಯನ್ನು ಬೆಳಗುವದಕ್ಕಿಂತ ಮುಂಚಿತವಾಗಿ ಅಂತರಾತ್ಮರೂಪವಾದ ದೀಪವನ್ನು ತೋರಿಸಿ, ನೈವೇದ್ಯವನ್ನು ಸಮರ್ಪಿಸುವದಕ್ಕಿಂತ ಮುಂಚೆ ಪ್ರಾಣಗಳನ್ನು ಸಮರ್ಪಿಸಿದನು, ತಾಂಬೂಲಸಮರ್ಪಣೆಗಿಂತ ಮುಂಚೆ, ಮನಃಪ್ರೇಮವನ್ನು ಸಮರ್ಪಿಸಿದನು. ಈಪ್ರಕಾರವಾಗಿ ಅಂತರಂಗಾರ್ಚನೆಯನ್ನು ಮಾಡಿ, ಆನಂದದೀದ ತುಂಬಿದ ಹೃದಯವುಳ್ಳವನಾಗಿ, ಅನಂತರದಲ್ಲಿ ಕ್ರಮವಾಗಿ ಬಾಹ್ಯಪೂಜೆಯನ್ನು ನೈವೇದ್ಯಾಂತವಾಗಿ ಮಾಡಿ, ಅನ್ನವನ್ನು ತುತ್ತುಮಾಡಿ, ಕೊಡಲು; ಅದನ್ನು ಲಿಂಗಮೂರ್ತಿಯಾದಪರಮೇಶನು ಕೈನೀಡಿ ತೆಗೆದುಕೊಳ್ಳುವನು. ಅನಂತರದಲ್ಲಿ ಲಿಂಗದಿಂದ ಸ್ವೀಕರಿಸಲ್ಪಟ್ಟ ಪ್ರಸಾದವನ್ನು ಭುಂಜಿಸುವನು. ಅಲ್ಲಿದ್ದ ಮಹಾತ್ಮರು ಅದನ್ನು ನೋಡಿ, ಒಬ್ಬರಿಗೊಬ್ಬರು ಈ ರೀತಿಯಾಗಿ ಮಾತನಾಡಿಕೊಂಡರು. ಏನಂದರೆ.—

## ಕರಿಕಾಲಚೋಳನ ಕಥೆ.

ಪೂರ್ವದಲ್ಲಿ ಶತ್ರುಗಳಿಗೆ ಯಮನೂ ಸೂರ್ಯಕುಲವೆಂಬ ಸಮುದ್ರಕ್ಕೆ ಚಂದ್ರನೂ ಎನಿಸಿಕೊಂಡಂಥ ಕರಿಕಾಲನೆಂಬ ಹೆಸರುಳ್ಳ ಚೋಳರಾಜನಿದ್ದನು. ಆತನು ಪ್ರತಿದಿವಸವೂ, ಇಪ್ಪತ್ತು ಕೊಳಗ ಮೆಣಸಿನ ಹಿಟ್ಟನ್ನು ಹಾಕಿಮಾಡಿದ ಸಾರಿನಿಂದ ಕೂಡಿದ್ದಾಗಿಯೂ, ಬಜ್ಜಿ, ಮೇಲೋಗರ ಮೊದಲಾದ ಶಾಕಪಾಕಗಳಿಗೆ ಯೋಗ್ಯವಾದ ಅನ್ನವನ್ನು ಬೇರೆಬೇರೆ ಬಟ್ಟಲುಗಳಲ್ಲಿ ಬಡಿಸಿ, ತೆರೆಯ ಹೊರಗೆ ಕತ್ತಿಯನ್ನು ಹಿಡಿದುಕೊಂಡವನಾಗಿ. ಶಿವನು ಸೊರಿಯುವ ಶಬ್ದವನ್ನು ಕೇಳುತ್ತಾ, ಶಿವನಿಗೆ ಊಟವನ್ನು ಮಾಡಿಸಿದನು.

## ಚೋಳಕಾದೇವಿಯು ಕಥೆ.

ದ್ರಾಕ್ಷಾರಾಮಪಟ್ಟಣದಲ್ಲಿ ಭಕ್ತಿಯೆಂಬ ಐಶ್ವರ್ಯದಿಂದ ಪರಿಪೂರ್ಣಳಾಗಿಯೂ, ಶಿವನ ಸ್ನೇಹದಿಂದ ತುಂಬಲ್ಪಟ್ಟವಳಾಗಿಯೂ ಇದ್ದ ಚೋಳವ್ವೆಯೆಂಬ ವೇಶ್ಯೆಯಿದ್ದಳು. ಅವಳು ಒಂದಾನೊಂದು ದಿನದಲ್ಲಿ ತುಪ್ಪದಿಂದ ಸೇಚಿಸಲ್ಪಟ್ಟದ್ದಾಗಿಯೂ, ಸಕ್ಕರೆ, ಹೆಸರು ಬೇಳೆಗಳಿಂದ ಕೂಡಿದ್ದಾಗಿಯೂ ಇದ್ದ ಹುಗ್ಗಿಯ

ನ್ನು ತಾನು ಊಟಾ ಮಾಡುವಲ್ಲಿ ಅದು ಬಹು ರುಚಿಕರವಾಗಿದ್ದದರಿಂದ ಅದೇ ಬಟ್ಟಲಿಗೆ ಒಂದು ಮಡಿ ವಸ್ತ್ರವನ್ನು ಹೊದ್ದಿಸಿ, ತನ್ನ ಗೌಡಿಯ ಕೈಯಲ್ಲಿ ಕೊಟ್ಟು, ಇದನ್ನು ತೆಗೆದುಕೊಂಡು ಯೋಗಿ, ಭೀಮೇಶ್ವರನಿಗೆ ಕೊಡು, ಎಂದು ಹೇಳಿ, ಕಳುಹಿಸಿದಳು. ಅವಳು ದೇವಾಲಯಕ್ಕೆ ಹೋಗಿ ನೋಡುವಷ್ಟರೊಳಗೆ, ಅರ್ಚಕನು ಗುಡಿಯ ಬಾಗಿಲನ್ನು ಮುಚ್ಚಿಕೊಂಡು ಹೋಗಿರಲು, ಗವಾಕ್ಷಮಾರ್ಗದಿಂದ, ದ್ರಾಕ್ಷಾರಾಮಕ್ಕೆ ಒಡೆಯನಾದವನೇ ಮಹೇಶನೇ ಭೀಮೇಶ್ವರನೇ ಎಂಬ ಹೆಸರುಗಳಿಂದ ಕೂಗಿದಳು. ಆದಾಗ್ಯೂ ಶಿವನು ಕೇಳದವನ ಹಾಗೆ ಮೌನದಿಂದಿರಲು ; ಅವಳು ತಿರಿಗಿ ಅಯ್ಯಾ ಭಾವ ಎಂದು ಕರೆದಳು. ಆಗ ಶಿವನು ಏನು ಎಂದು ಕೇಳಿದ್ದಕ್ಕೆ ನನ್ನ ಒಡತಿಯು ಈ ಹುಗ್ಗಿಯನ್ನು ನಿನಗೆ ಕೊಟ್ಟು ಬರುವಂತೆ ಕಳುಹಿಸಿದ್ದಾಳೆ. ತೆಗೆದುಕೋ ಎಂದು ಕೊಡಲು, ಜಗದೀಶನಾದ ಶಿವನು ಗವಾಕ್ಷಮಾರ್ಗದಿಂದ ತೆಗೆದುಕೊಂಡು ಎಲ್ಲವನ್ನೂ ಸ್ವೀಕರಿಸಿ, ಆ ಕಂಚಿನ ಬಟ್ಟಲನ್ನು ಕ್ರೇಂಕಾರಧ್ವನಿಯುಂಟಾಗುವಂತೆ ಹೊರಗೆ ಬಿಸಾಟನು.

ಈ ಪ್ರಕಾರವಾಗಿ ಕಥೆಗಳಲ್ಲಿ ಕೇಳಿದ್ದೆವು. ಈಗ ಪ್ರಮಥಶ್ರೇಷ್ಠನಾದ ಸುರಗಿಯ ಚೌಡಯ್ಯನು ಶಿವನಿಗೆ ಊಟವನ್ನು ಮಾಡಿಸಿದುದನ್ನು ಪ್ರತ್ಯಕ್ಷವಾಗಿ ನೋಡಿದೆವು. ಎಂದು, ಸರ್ವರೂಸ್ತುತಿಸುತ್ತಿರಲು; ಬಸವೇಶ್ವರನು ಕೇಳಿ ಬಂದು ಸುರಗಿಚೌಡಯ್ಯನನ್ನು ಪೂಜಿಸಿದನು. ಹೀಗೆಕರುಣಾನಿಧಿಯಾದ ಸುರಗಿ ಚೌಡಯ್ಯನು ಭಕ್ತರಿಂದ ಸಮೇತನಾಗಿ ಕಲ್ಯಾಣಪಟ್ಟಣದಲ್ಲಿದ್ದನು. * *

## ತೆಲುಂಗಜೊಮ್ಮಯ್ಯನಕಥೆ.

ಸಂಸಾರಬಂಧವನ್ನು ಕಿತ್ತವನೂ, ಸದ್ಭಕ್ತಿಯಿಂದ ಕೂಡಿದವನೂ; ಸಕಲ ಪ್ರಾಣಿಗಳಲ್ಲಿಯೂ ದಯೆ ಯುಳ್ಳವನೂ, ಪುಣ್ಯಪಾಪಗಳಿಂದ ಬಿಡಲ್ಪಟ್ಟವನೂ, ಲೋಕವನ್ನು ಮೀರಿದ ವ್ಯಾಪಾರವುಳ್ಳವನೂ, ಅಧಿಕವಾದಶಿವಪ್ರಸಾದಸ್ವೀಕಾರ ವಿದ್ಯೆಯಲ್ಲಿ ನಿಪುಣನೂ, ಶಿವಾಚಾರಕ್ರಮದಲ್ಲಿ ಆಚಾರ್ಯನೂ, ಪ್ರಸಿದ್ಧವಾಗಿಯೂ ಅಪರಿಮಿತವಾಗಿಯೂ ಇರುವ ಯಶಸ್ಸುಳ್ಳವನೂ, ಸಕಲ ಜನಕ್ಕೂ ಸುಖವನ್ನು ಮಾಡುವವನೂ, ಶಾಂತನೂ, ಔದಾರ್ಯಸ್ವಭಾವವುಳ್ಳವನೂ, ಧನುರ್ಧಾರಿಯೂ ಆದ ತೆಲುಂಗ ಜೊಮ್ಮಯ್ಯನೆಂಬೊಬ್ಬ ಭಕ್ತನು ಕಲ್ಯಾಣ ಪಟ್ಟಣದಲ್ಲಿ ಜಂಗಮಾರ್ಜನೆಯನ್ನು ಮಾಡಿಕೊಂಡಿದ್ದನು.

ಆತನು ಒಂದುದಿನ ಶಿವಪೂಜೆಗೆ ಪತ್ರಪುಷ್ಪಗಳನ್ನು ತರುವದಕ್ಕೋಸ್ಕರ ವನಕ್ಕೆಹೋದನು. ಆಗಕೆಲವು ಮೃಗಗಳು ಆತನನ್ನು ಸುತ್ತಿಕೊಂಡು ಮನುಷ್ಯ ವಚನದಿಂದ;—ಎಲೈ ಪೂಜ್ಯನೇ ನಮ್ಮ ವಿಜ್ಞಾಪನೆಯನ್ನು ಆಲಿಸಬೇಕು. ಬಹುಕಾಲದಿಂದ ಅಪೇಕ್ಷಿಸಲ್ಪಡುತ್ತಿದ್ದ ನಿನ್ನದರ್ಶನವು ಈಗ ಲಭಿಸಿತು. ನಾವು ಪೂರ್ವಜನ್ಮದಲ್ಲಿ ಗಂಧರ್ವರು. ಒಂದುದಿನವಿಹಾರಾರ್ಥವಾಗಿ ಪತ್ನಿಯರೊಡನೆ ಶ್ರೀಶೈಲದವನಕ್ಕೆ ಬಂದೆವು. ಅಲ್ಲಿ ಒಂದುಮರದ ಬುಡದಲ್ಲಿ ಕಣ್ಣುಗಳನ್ನು ಮುಚ್ಚಿಕೊಂಡು, ನಿಶ್ಚಲದೇಹನಾಗಿ, ನಿರಂತರವೂ ಶಿವಧ್ಯಾನಪರಾಯಣನಾಗಿದ್ದ ಒಬ್ಬ ತಪಸ್ವಿಯನ್ನುನೋಡಿದೆವು. ಆತನ ಪಾದದ ಉಗುರುಗಳು ದೇಹವನ್ನೆಲ್ಲಾ ಆವರಿಸಿಕೊಂಡಿದ್ದವು. ಜಡೆಗಳು ಸುತ್ತಲೂ ಅವರಿಸಿಕೊಂಡು ಆತನದೇಹವೇ ಕಾಣದ ಹಾಗಾಗಿದ್ದದರಿಂದ ಆತನು ಕರೀಶಿಲೆಯಂತೆ ಕಾಣಿಸುತ್ತಾ; ಹೃದಯದಲ್ಲಿ ಅನೇಕ ಪೂಜಾದ್ರವ್ಯಗಳಿಂದ ಶಿವನನ್ನು ಆರಾಧಿಸುತ್ತಿದ್ದನು. ನಾವು ಆತಪಸ್ವಿಯನ್ನು ನೋಡಿ. ಇವನು ಮುದಿ ಕರಡಿಯ ಹಾಗಿದ್ದಾನೆಂದು ಕೈಗಳನ್ನು ಬಡಿದುಕೊಂಡು, ನಕ್ಕೆವು. ನಮ್ಮದುರ್ಭಾಷೆಯನ್ನು ಆತನ ಶಿಷ್ಯನುಕೇಳಿ, ಬಹುಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ತುಟಿಗಳನ್ನು ಕುಣಿಸುತ್ತಾ, ಯೌವನದಿಂದಕೊಬ್ಬಿದವರೂ ಕಾಮದಿಂದಕುರುಡರೂ ಆದ ನೀವು ಶಿವಧ್ಯಾನಪರನಾದ ಈ ಶಿವಾನಂದಮುನಿಯನ್ನು ನೋಡಲಿಲ್ಲವೋ ? ಯಾವಕಾರಣದಿಂದ ನೀವು ಮದಾಂಧರಾಗಿಮಹಾತ್ಮನಾದ ತಪಸ್ವಿಯನ್ನು ಕರಡಿಯಂತಿದ್ದಾನೆಂದು ಹೇಳಿದಿರೋ ಆ ಕಾರಣದಿಂದ ನೀವು ಶೀಘ್ರದಲ್ಲಿ ಬಿಳೀಕರಡಿಗಳೇ ಆಗಿರಿ. ಎಂದು ಶಾಪವನ್ನು ಕೊಟ್ಟನು. ನಾವು ಆತನ ವಜ್ರದಂತಿರುವ ಮಾತನ್ನು ಕೇಳಿ, ಧೈರ್ಯಗೆಟ್ಟವರಾಗಿ, ಎಲೈಮಹಾತ್ಮನೇ ನಾವು ತಿಳಿಯದೆ ಮಾಡಿದ ದುಶ್ಚೇಷ್ಟೆಯನ್ನು ಕ್ಷಮಿಸು ಎಂದು ಆತನಿಗೆ ಶರಣಾಗತರಾಗಲು; ನಮ್ಮಸಮಾಧಾನದಿಂದ ಶಾಂತನಾದ ಆಶಿಷ್ಯನು ಹೇಳಿದ್ದೇನಂದರೆ;—

ಎಲೈಪುರುಷರೇ ನಮ್ಮ ಮಾತು ಎಂದಿಗೂ ವ್ಯರ್ಥವಾಗುವದಿಲ್ಲ ಆದ್ದಕಾರಣದಿಂದ ಗುರುದೂಷಕರಾದ ನೀವು ನಾನು ಕೊಟ್ಟ ಶಾಪವನ್ನು ಅನುಭವಿಸಲೇಬೇಕು. ಶೀಘ್ರದಲ್ಲಿ ಈ ಶಾಪವು ಬಿಡುಗಡೆ ಯಾಗುವದು. ಇದೇ ಅನುಗ್ರಹವು. ಕರಡಿಯ ಜನ್ಮದಲ್ಲಿ ನಿಮಗೆ ಜ್ಞಾನವೂ ಮಾತೂ, ಉಂಟಾಗಿರುವವು. ನಿಮ್ಮ ಜನ್ಮಕ್ಕೆ ತಕ್ಕ ಆಹಾರವು ನಿಮಗೆ ಸಿಕ್ಕುವದು. ಆದ್ದರಿಂದ ಕಲ್ಯಾಣದೇಶದ ಪ್ರಾಂ

ತ್ಯದಲ್ಲಿರುವ ಅರಣ್ಯದಲ್ಲಿ ಸಂಚರಿಸುವ ಕರಡಿಗಳಲ್ಲಿ ಹುಟ್ಟಿ, ಕೆಲವು ದಿನಗಳು ಸಂಚರಿಸುತ್ತಿರಿ. ಮಹಾತ್ಮರಿಗೆ ಪೂಜ್ಯನಾದ ತೆಲುಗುಜೊಮ್ಮಯ್ಯನೆಂಬ ಮಹಾಪುರುಷನು ಪತ್ರಪುಷ್ಪಗಳಿಗಾಗಿ ಅಲ್ಲಿಗೆ ಬರುತ್ತಿರುವನು. ನಿಮಗೆ ಆತನ ದರ್ಶನವಾದರೆ. ನಿಮ್ಮ ಮನಸ್ಸು ನಿರ್ಮಲವಾಗುವದು. ಈ ವೃತ್ತಾಂತವನ್ನು ನಿಮ್ಮ ಮುಖದಿಂದ ಕೇಳಿ. ಸಂತೋಷಿಸಿದ ಆತನಿಂದ ನಿಮಗೆ ವಧೆಯುಂಟಾದಾಗ ನಿಮಗೆ ಶಾಪವಿಮೋಚನವಾಗುವದು.

ಈ ಪ್ರಕಾರವಾಗಿ ನಮ್ಮೆಲ್ಲರಿಗೂ ಆಜ್ಞಾಪಿಸಿ. ವನಕ್ಕೆ ಹೊರಟು ಹೋದನು. ನಾವು ಶಾಪಗ್ರಸ್ತರಾಗಿ ಈ ವನಾಂತರವನ್ನೈದಿದೆವು. ಮೂಢರಾದ ನಾವು ಈ ಘೋರಾರಣ್ಯದಲ್ಲಿ ಕರಡಿಯ ಜನ್ಮವನ್ನು ಎತ್ತಿ ಬಹುಕಾಲದಿಂದ ನಿನ್ನ ದರ್ಶನವನ್ನೇ ಅಪೇಕ್ಷಿಸುತ್ತಿದ್ದೆವು. ನೀನು ದಯದಿಂದ ನಮ್ಮಗಳನ್ನು ಬೇಟೆಯಲ್ಲಿ ಕೊಂದು ಸಂರಕ್ಷಿಸು. ಕಷ್ಟವನ್ನು ತಪ್ಪಿಸಿ ಉದ್ಧರಿಸುವದಕ್ಕಿಂತಲೂ. ಅಧಿಕವಾದ ಪುಣ್ಯವು ಮೂರುಲೋಕದಲ್ಲಿಯೂ, ಇಲ್ಲ; ಎಂದು ಹೇಳಿದವು.

ಅವುಗಳ ಮಾತುಗಳನ್ನೆಲ್ಲಾ ಕೇಳಿ, ಜೊಮ್ಮಯ್ಯನು ಜ್ಞಾನದೃಷ್ಟಿಯಿಂದ ನೋಡಿ, ಹಾಗೇ ಆಗಲೆಂದು ಒಪ್ಪಿಕೊಂಡವನಾಗಿ ತಿರಿಗಿ ತನ್ನ ಪಟ್ಟಣಕ್ಕೆ ಬಂದು ನೀಲವರ್ಣದ ಬಟ್ಟೆಯ ಪಟ್ಟಿಯಿಂದ ಮಾಡಲ್ಪಟ್ಟ ನಡುಕಟ್ಟನ್ನು ದೃಢವಾಗಿ ಕಟ್ಟಿಕೊಂಡು ನೀಲವಸ್ತ್ರವನ್ನು ತಲೆಗೆ ಸುತ್ತಿಕೊಂಡು, ಅದರಮೇಲೆ ನವಿಲುಗರಿಯನ್ನು ಸಿಕ್ಕಿಸಿಕೊಳ್ಳುವವನಾಗಿ, ಬಿಲ್ಲನ್ನು ಹಿಡಿದುಕೊಂಡು, ಬಾಣಗಳಿಂದ ತುಂಬಲ್ಪಟ್ಟ ಬತ್ತಳಿಕೆಯನ್ನು ಬೆನ್ನಿಗೆ ಕಟ್ಟಿಕೊಂಟು, ಹಂದಿ, ಹುಲಿಗಳ ಹೆಂಡತಿಯರಿಗೆ ಮುಂಡೆತನದ ದೀಕ್ಷೆಯನ್ನು ಕೊಡುವದರಲ್ಲಿ ಗುರುಗಳಾದ ನಾಯಿಗಳಿಂದ ಬಳಸಲ್ಪಟ್ಟ ಕಿರಾತರೊಡನೆ ಅರಣ್ಯಕ್ಕೈದಿದನು.

ಬೇಟೆಯಲ್ಲಿ ನಿರತರಾಗಿರುವ ದುಷ್ಟರಾದ ಬೇಡರೊಡನೆ ವನವನ್ನು ಪ್ರವೇಶಿಸಿ, ಮೃಗಗಳನ್ನು ಕೊಲ್ಲುತ್ತಾ ಬರುತ್ತಿರಲು; ಆ ಕರಡಿಗಳು ಕೂಡ ಹೊದರುಗಳಿಂದ ಹೊರಟವು. ಧನುರ್ಧಾರಿಗಳ ಬಾಣಗಳಿಗೆ ಗುರಿಯಲ್ಲದವುಗಳೂ, ಚುರುಕಾದ ನಾಯಿಗಳಿಂದಲೂ ಅತಿ ಕ್ರಮಿಸಲ್ಪಡುವದಕ್ಕೆ ಅಶಕ್ಯಗಳೂ ಆದ ಆ ಏಳು ಕರಡಿಗಳನ್ನು ತೀಕ್ಷ್ಣ ಬಾಣಗಳಿಂದ ಹೊಡೆದನು. ಹೊಡೆದಕೂಡಲೇ ಆ ಕರಡಿಗಳು ದಿವ್ಯಾಭರಣಗಳನ್ನು ಧರಿಸಿದ ಗಂಧರ್ವರಾಗಿ, ಜೊಮ್ಮಯ್ಯನಿಗೆ ನಮಸ್ಕರಿಸಿ, ವಿಮಾನಗಳನ್ನೇರಿ ತಮ್ಮ ಲೋಕಕ್ಕೈದಿದರು. ಈ ಸಂಗತಿಯನ್ನು ಅಲ್ಲಿದ್ದ ಬೇಡರ

ಮುಖದಿಂದ ರಾಜನು ತಿಳಿದು, ಮಾರಣೇದಿನ ಪಟ್ಟಣದ ಜನಗಳೊಡನೆಬಂದು, ಆಜೇಟೆಯನ್ನು ನೋಡಿ, ಆಶ್ಚರ್ಯಪಟ್ಟನು. ಈ ರೀತಿಯಾಗಿ ಜೊಮ್ಮಯ್ಯನು ಪ್ರತಿದಿನದಲ್ಲಿಯೂ ಏಳೇಳು ಕರಡಿಗಳಿಗೆ ಗಂದರ್ವತ್ವವನ್ನು ಕೊಡುವವನಾಗಿ ಕೆಲವು ದಿವಸಗಳೊಳಗೆ ಆ ಗಂಧರ್ವರನ್ನೆಲ್ಲಾ ಶಾಪದಿಂದ ಬಿಡಿಸಿ, ಅವರವರ ಲೋಕಕ್ಕೆ ಸೇರಿಸಿದನು.

ಈ ಕಾರ್ಯವನ್ನು ತಿಳಿದ ಮಹಾತ್ಮರು ಆಲೋಚಿಸಿದವರಾಗಿಒಬ್ಬರಿಗೊಬ್ಬರು ಹೇಳಿಕೊಂಡದ್ದೇನಂದರೆ;——ವಿಚಾರವೆಂಬ ಭಲ್ಲಾಯುಧದಿಂದ ಮೋಹವೆಂಬ ಸಿಂಹವನ್ನುಕೊಂದು, ಸುಜ್ಞಾನವೆಂಬ ಖಡ್ಗಧಾರೆಯಿಂದ ಅಜ್ಞಾನವೆಂಬಹಂದಿಯನ್ನು ಸೀಳಿಸದ್ಭಾವವೆಂಬತೋಮರದಿಂದ ದುರಾಲೋಚನೆಯೆಂಬ ಆನೆಯನ್ನು ಕಡಿದು, ವ್ರತಗಳೆಂಬ ದೊಣ್ಣೆಗಳಿಂದ ಇಂದ್ರಿಯುಗಳೆಂಬ ಹುಲ್ಲೆಗಳ ಕಾಲುಗಳನ್ನು ಮುರಿದು, ಶಿವಾಚಾರವೆಂಬ ಕಠಾರಿಯಿಂದಲೋಕಾಚಾರವೆಂಬ ಹುಲಿಯನ್ನೂ ದೂಷಕರೆಂಬತೋಳಗಳನ್ನೂ ಅಡಗಿಸಿ, ದುರಾತ್ಮರನ್ನು ಖಂಡಿಸುವ ಸತ್ಯವಚನವೆಂಬದಂಡದಿಂದ ಅರ್ಥೇಷಣ, ಪುತ್ರೇಷಣ, ದಾರೇಷಣ, ಎಂಬ ಕರಡಿಗಳನ್ನು ನಾಶಪಡಿಸಿ, ಪ್ರತಿಜ್ಞೆಯೆಂಬ ಚಕ್ರಾಯುಧದ ತೇಜಸ್ಸಿನಿಂದ ಪ್ರತಿವಾದಿಗಳೆಂಬ ಮಹಾಸರ್ಪಗಳನ್ನು ಓಡಿಸಿ, ಆ ರೀತಿಯಾಗಿ ಬೇಟೆಯಾಡುವ ಈ ಮಹಾತ್ಮನಿಗೆ ಈ ಬಾಹ್ಯ ಮೃಗಗಳನ್ನು ಕೊಲ್ಲುವದೇನಾಶ್ಚರ್ಯವು.

ಈ ಪ್ರಕಾರವಾಗಿ ದೊಡ್ಡವರಿಂದಲೂ, ಚಿಕ್ಕವರಿಂದಲೂ, ಬಸವೇಶನಿಂದಲೂ, ಪೂಜಿಸಲ್ಪಟ್ಟವನಾಗಿ ಆ ಕಲ್ಯಾಣಪಟ್ಟಣದಲ್ಲಿ ವಿಹರಿಸುತ್ತಿದ್ದನು.

ಸುರಗಿ ಚೌಡಯ್ಯನ ಕಥೆಯೆಂಬ ಅಮೃತ ಪ್ರವಾಹದಲ್ಲಿ ವಿಹರಿಸುವವರು ಅಪರಿಮಿತವಾದ ದುಃಖ, ಭೀತಿ, ರೋಗ ಇವುಗಳಿಂದಲೂ, ಜನನಮರಣಗಳಿಂದಲೂ, ಉತ್ಪನ್ನವಾದ ಒಳಲಿಕೆಯಿಂದ ಬಿಡಲ್ಪಡುವರು. ತೆಲುಗುಜೊಮ್ಮಯ್ಯನೆಂಬ ಪ್ರಮಥನ ಪ್ರಸಿದ್ಧವಾದ ಚರಿತ್ರೆಯ ಶಬ್ದಗಳನ್ನು ಯಾವನು ಪ್ರತಿದಿನದಲ್ಲಿಯೂ ಪ್ರೀತಿಯಿಂದ ಪಠಿಸುತ್ತಾನೋ ಅವನ ಇಷ್ಟಾರ್ಥವೆಂಬ ವೃಕ್ಷವು ಫಲಿಸುತ್ತದೆ.

ಬಸವೇಶವಿಜಯದಲ್ಲಿ ಇಪ್ಪತ್ತನೇ ಅಧ್ಯಾಯವು
ಸಂಪೂರ್ಣವು.

## ಇಪ್ಪತ್ತೊಂದನೇ ಅಧ್ಯಾಯವು.

---

### ಜಂಗಮಪ್ರಾಣಿತ್ವಕಥನವು.

ಒಂದಾನೊಂದು ದಿನ ಬಸವೇಶ್ವರನು ಜಂಗಮಾರಾಧನೆಯನ್ನು ನಡಿಸಿದ ಬಳಿಕ, ಲಿಂಗಾರ್ಚನೆಯಂ ಮಾಡಬೇಕೆಂಬ ಆಸಕ್ತಿಯಿಂದ ಶಿವನನ್ನು ನೋಡಿ ನೋಡಿ, ಶ್ರೇಷ್ಠವಾದ ಶಿವಾನಂದವೆಂಬ ಅಮೃತವನ್ನು ಸವಿದು ಸವಿದು, ಪರಶಿವ ನನ್ನು ಮುಟ್ಟಿ ಮುಟ್ಟಿ, ಪರಮೋತ್ಸಾಹದಿಂದ ಹರ್ಷಿಸಿ, ದೇಹಜನ್ಯವಾದ ಗುಣಗಳನ್ನು ಬಿಟ್ಟು, ಬಾರಿಬಾರಿಗೂ ಹಾಡಿ ಹಾಡಿ, ಪರಮಸಂತೋಷದಿಂದ ಎರಗಿ ಎರಗಿ, ಪ್ರಮಥಾಧಿಪತಿಗಳನ್ನು ನೋಡಿ ನೋಡಿ, ಲೀಲಾಸಮುದ್ರದಲ್ಲಿಮುಳುಗಿದವನಾಗಿ, ಲಿಂಗಮದ್ಯದೊಳಗೆಹೊಕ್ಕು ಹೊಕ್ಕು, ಮನಸ್ಸು ರೂಪಮೊದಲಾದ ವಿಷಯುಗಳೊಡನೆ ಲಿಂಗದಲ್ಲಿ ಲಯುವನ್ನು ಹೊಂದುತ್ತಿರಲು; ನಿಶ್ಚಲವಾದಹಸ್ತವುಳ್ಳವನೂ, ನಿರ್ವ್ಯಾಪಾರನೂ ಆಗಿ, ಕಂಠವು ಭಕ್ತಿನಿಮಿತ್ತಕವಾದ ಗದ್ಗದದಿಂದ ಕೂಡಿ ಅಡಗಿದ ಸ್ತುತಿವಚನಗಳುಳ್ಳದ್ದಾಗಿರಲು; ಆನಂದ ಬಾಷ್ಪದಿಂದ ಆವರಿಸಲ್ಪಟ್ಟ ಕಣ್ಣುಗಳುಳ್ಳವನಾಗಿ, ಧಾರವನ್ನು ಎಳೆದರೆ, ಬರೆಯುಹ್ಯಾಗೆ ಮಡಿಸಿಕೊಳ್ಳುವದೋ ಸೂರ್ಯನು ಕಿರಣಗಳಗಣಗಳೊಡನೆ ಹ್ಯಾಗೆ ಅಸ್ತಂಗತನಾಗುತ್ತಾನೋ ಹಾಗೆಯೇ ಮನಸ್ಸು ಶಿವಲಿಂಗದಲ್ಲಿ ಚಕ್ಷುರಾದಿಸಮಸ್ತೇಂದ್ರಿಯಗಳಸಂಗಡ ಲಯಿಸುತ್ತಿರಲು, ಜಗತ್ತನ್ನೂ ತನ್ನನ್ನೂ, ನೋಟವನ್ನೂ ಮನಸ್ಸಂಚಾರವನ್ನೂ ಮರೆತು, ಒಳಹೊರಗಣವ್ಯಾಪಾರಗಳೆಲ್ಲವೂ, ಹೃದಯದ ಅಷ್ಟದಳಕಮಲದಕರ್ಣಿಕೆಯುನಡುವೆ ಪ್ರಕಾಶಿಸುತ್ತಿರುವ ಪ್ರಾಣಲಿಂಗದಲ್ಲಿ ಲೀನವಾಗುತ್ತಿರಲು; ಲಿಂಗಾಂಗಸಾಮರಸ್ಯದಿಂದುಂಟಾದ ಸೌಖ್ಯವು ಮೇಲೆ ಮೇಲೆ ಹೆಚ್ಚುತ್ತಿರಲು; ವಿಶೇಷವಾಗಿ ಜನಿಸಿದ ಶಿವಯೋಗನಿದ್ರೆಯಿಂದ ಕೂಡಿದವನಾದನು.

ಆಗ ಚನ್ನ ಬಸವಣ್ಣನು ಬಸವೇಶನ ಧ್ಯಾನದ ಸ್ಥಿತಿಯನ್ನು ಪ್ರೀತಿಯಿಂದ ನೋಡಿ, ನಮಸ್ಕರಿಸಿ,- ನಿದ್ರಾಜಾಡ್ಯದಿಂದ ಬಿಡಲ್ಪಟ್ಟ ಯೋಗನಿದ್ರೆಯು, ಶಿವಯೋಗಾನಂದಕ್ಕೆ ಸಮುದ್ರನಾದ ನನ್ನ ಗುರುವನ್ನು ಬಿಟ್ಟು, ಪ್ರಪಂಚದಲ್ಲಿ ನಿದ್ರಾಮಾಲಿನ್ಯವನ್ನು ಬಿಡದೆ ಯಿರುವ ಪಶುಗಳಿಗೆ ಹ್ಯಾಗೆಸಂಭವಿಸೀತು ? ಈಗುರುಮೂರ್ತಿಯ ಮಂಗಳಕರವಾದ ಯೋಗನಿದ್ರಾಸ್ಥಿತಿಯು ಉತ್ಕೃಷ್ಟವಾದ

ದ್ದು. ಯೋಗಿಗಳಿಗೂ ದೊರೆಯಲಾರದ ಈ ಸ್ಥಿತಿಯನ್ನು ವರ್ಣಿಸುವದಕ್ಕೆ ಯಾರುತಾನೇ ಶಕ್ತರಾದಾರು ? ಇಂದ್ರಿಯವ್ಯಾಪಾರಗಳನ್ನು ಬಿಟ್ಟು, ಪರಿಪೂರ್ಣವಾದಾನಂದವುಳ್ಳವನಾಗಿ ಯೋಗನಿದ್ರೆಯಲ್ಲಿರುವ ಈ ಮಹಾತ್ಮನು ತೆರೆಯಡಗಿದ ಸಮುದ್ರದಂತೆಯೂ, ಬೀಸದಿರುವ ವಾಯುವಿನಂತೆಯೂ, ಮೋಡವಿಲ್ಲದಆಕಾಶದಂತೆಯೂ ಕಾಣುತ್ತಾನೆ. ಮತ್ತು. ಪ್ರಾಣೇಶ್ವರನಿಗೆ ಕಠಿನವಾದಹಸ್ತಸ್ಪರ್ಶವು ಸಹಿಸುವದಕ್ಕಾಗದೆಂದು ಶಿವನನ್ನು ಹೃದಯಕಮಲದಲ್ಲಿ ಮೂರ್ತಿಗೊಳಿಸಿ, ತಣ್ಣೀರಿಂದಾಗಲಿ, ಬಿಸ್ನೀರಿಂದಾಗಲಿ ಅಭಿಷೇಕವಂಮಾಡಿದರೆ, ಲಿಂಗಮೂರ್ತಿಗೆ ಕ್ಲೇಶವುಂಟಾದೀತೆಂದು, ಜ್ಞಾನಾಕಾಶದಲ್ಲಿ ಥಳಥಳಿಸುವ ಚಂದ್ರನಅಮೃತವೆಂಬ ಪಂಚಾಮೃತಗಳಿಂದ ಅಭಿಷೇಕಿಸಿ, ಭೂಮಿಯಲ್ಲಿ ಹುಟ್ಟಿದಮರದಹೂವುಗಳಿಂದ ಪೂಜಿಸಿದರೆ ನನ್ನಸ್ವಾಮಿಯ ಕೋಮಲವಾದ ಅಂಗವು ಒತ್ತೀತೆಂದು. ಚಿದಾಕಾಶದಲ್ಲಿರುವ ಸಹಸ್ರದಳ ಕಮಲದಿಂದ ಪೂಜಿಸಿ, ಧೂಪದಹೊಗೆಯಿಂದ ಲಿಂಗದದೇಹವು ಕಂದೀತೆಂದು ಜ್ಞಾನಾಗ್ನಿಯಲ್ಲಿ ದಶೇಂದ್ರಿಯಗಳೆಂಬ ಧೂಪವನ್ನು ಸಮರ್ಪಿಸಿ, ಆರತಿಯ ಉರಿಗಳಿಂದ ಬಿಸಿತಟ್ಟೀತೆಂದು, ನಿತ್ಯವಾದ ಆತ್ಮ ಜ್ಯೋತಿಯಿಂದ ಆರತಿಯನ್ನು ಬೆಳಗಿ, ಕಾರ, ಹುಳಿ, ಉಪ್ಪು ಮೊದಲಾದರಸಗಳೆಂಬ ನೈವೇದ್ಯಗಳಿಂದ ಶಿವನಿಗೆ ಅರುಚಿ ಯುಂಟಾದೀತೆಂದು ಭಕ್ತಿಯಿಂದ ಪ್ರಾಣಗಳನ್ನೇ ನೈವೇದ್ಯವಾಗಿ ಸಮರ್ಪಿಸಿ;—ಬಾಹ್ಯೋಪಚಾರಗಳೆಂಬವುಗಳು ಶಿವನಿಗೆ ಸತ್ಯವಾಗಿ ಆರೋಪಗಳೇಎಂಧು, ಅವುಗಳನ್ನು ಬಿಟ್ಟು ನನ್ನಗುರುವು ಅಭ್ಯಂತರ ಪೂಜೆಯಲ್ಲಿ ಆಸಕ್ತನಾಗಿದ್ಧಾನೋ. ಹಾಗಲ್ಲದಿದ್ದರೆ, ನಿಗ್ರಹಿಸಲ್ಪಟ್ಟ ಇಂದ್ರಿಯಗಳಸಂಚಾರವೇ ಯಮಯೋಗವಾಗಲಾಗಿ; ಶಿವೇತರಜ್ಞಾನವಿಲ್ಲದಿರುವಿಕೆಯೆಂಬ ಉತ್ತಮವಾದವ್ರತವೇ ನಿಯಮವಾಗಲಾಗಿ; ಯೋಗನಿದ್ರೆಯಂ ಮಾಡಬೇಕೆಂಬವಿಷಯದಲ್ಲಿ ಉಂಟಾದಇಚ್ಛೆಯಲ್ಲಿ ಕುಳಿತುಕೊಳ್ಳುವದೇ ಸುಖಾಸನವಾಗಲಾಗಿ; ಉಸುರುಗಳನ್ನು ಒಳಗಡೆಗೆ ಎಳೆದು ಕೊಳ್ಳುವದೇ ಪ್ರಾಣಾಯಾಮವಾಗಲಾಗಿ; ಭಕ್ತಿ ಶ್ರದ್ಧೆ, ಮೊದಲಾದ ಒಳಗಣವಿಷಯಗಳ ಸಂಚಾರವೇಪ್ರತ್ಯಾಹಾರವಾಗಲಾಗಿ; ಲಿಂಗವನ್ನೂ ಜಂಗಮವನ್ನೂ ತನ್ನೊಳಗೆ ನೋಡೋಣವೇ ಮೂರ್ತಿಧ್ಯಾನವಾಗಲಾಗಿ; ಅಂಗಲಿಂಗಗಳಪ್ರಸನ್ನತೆಯಿಂದ ಪ್ರಾಪ್ತವಾದ ಸಾರೂಪ್ಯವೇ ಧಾರಣೆಯಾಗಲಾಗಿ; ಶ್ರೇಷ್ಠವಾದ ಶಿವಯೋಗನಿದ್ರಾಸ್ಥಿತಿಯೇ ಸಮಾಧಿಯಾಗಲಾಗಿ; ಬಸವೇಶನು ಅಷ್ಟಾಂಗಯೋಗದಿಂದಕೂಡಿದ ಸದ್ಭಕ್ತಿಯಿಂದ ಪ್ರಪಂಚವನ್ನೇ ನೋಡು

ವದಿಲ್ಲವೋ ? ಅಲ್ಲದಿದ್ದರೆ.-ಆಲೋಚಿಸುವ ಆತ್ಮನೂ ಮನಸ್ಸೂ ಆಲೋಚಿಸುವದಕ್ಕೆ ಯೋಗ್ಯನಾದ ಶಿವನಲ್ಲಿ ಲಯುವನ್ನು ಹೊಂದುತ್ತಿರಲು; ನೋಡುವ ಆತ್ಮನೂ, ನೋಟವೂ, ನೋಡುವದಕ್ಕೆ ಯೋಗ್ಯನಾದ ಶಿವನಲ್ಲಿ ಲಯುವನ್ನು ಹೊಂದುತ್ತಿರಲು; ಮಾತನಾಡುವ ಆತ್ಮನೂ. ಮಾತೂ, ಮಾತಿಗೆವಿಷಯನಾದ ಶಿವನಲ್ಲಿ ಲೀನವಾಗುತ್ತಿರಲು; ಇಚ್ಛೈಸುವ ಆತ್ಮನೂ, ಇಚ್ಛೆಯೂ, ಇಚ್ಛೈಸುವದಕ್ಕೆ ಯೋಗ್ಯನಾದ ಶಂಭುವಿನಲ್ಲಿ ಲಯುವನ್ನು ಹೊಂದುತ್ತಿರಲು, ತಿಳಿಯುವ ಆತ್ಮನೂ, ತಿಳಿವಿಕೆಯೂ, ತಿಳಿಯುವದಕ್ಕೆ ಯೊಗ್ಯನಾದ ಪರಶಿವನಲ್ಲಿ ಲಯವನ್ನು ಹೊಂದುತ್ತಿರಲು; ಬುದ್ಧಿಯನ್ನೂ ಬೋದ್ಧೃವಾದ ಆತ್ಮನನ್ನೂ ಮರೆತಿದ್ದಾನೋ? ಅಲ್ಲದಿದ್ದರೆ ತನ್ನದೃಷ್ಟಿತಗಲಿದ್ದರೆ ಲಿಂಗಮೂರ್ತಿಗೆ ಬಾಧೆಯುಂಟಾದೀತೆಂದು ಭಾವದೃಷ್ಟಿಯಿಂದಲೇ ಆಲಿಂಗಮೂರ್ತಿಯನ್ನು ಒಳಗೆ ನೋಡುತ್ತಾ ಇದ್ದಾನೋ ? ಕೈಯಿಂಮುಟ್ಟಿದರೆ ಶಿವನದೇಹವು ಕಂದೀತೆಂದು ಮನಸ್ಸಿನಿಂದಮುಟ್ಟುತ್ತಾನೋ ಅಲ್ಲದಿದ್ದರೆ. ದೇಹದಿಂದ ಆಲಿಂಗಿಸಿಕೊಂಡರೆ, ರೋಮಾಂಚವು ಶಿವನನ್ನು ಪೀಡಿಸೀತೆಂದು ಆತ್ಮನಿಂದಲೇ ಆಲಿಂಗಿಸುತ್ತಾನೋ ಅಲ್ಲದಿದ್ದರೆ, ಹೊರಗೆ ಸ್ತೋತ್ರವನ್ನು ಮಾಡಿದರೆ ಗದ್ದಲವಾಗುವದೆಂದು ಅದನ್ನು ಬಿಟ್ಟು, ಶಿವನನ್ನು ಸ್ಮರಿಸುತ್ತಾನೋ ? ಒಬ್ಬ ಸ್ತ್ರೀಯು, ತನ್ನ ಪತಿಯನ್ನು ಯಾವಾಗಲೂ ಸ್ಮರಿಸುತ್ತಿದ್ದರೆ ಭ್ರಮರಕೀಟನ್ಯಾಯದಿಂದ ಪುರುಷತ್ವವೇ ಪ್ರಾಪ್ತವಾದರೆ ರತಿಸೌಖ್ಯವು ತಪ್ಪೀತೆಂದು ಪತಿಸ್ಮರಣೆಯಲ್ಲಿ ಭೀತಳಾಗಿ ಪತಿಯನ್ನು ಸ್ಮರಿಸಿಯೂ ಸ್ಮರಿಸದೆ ಯಿರುತ್ತಾಳೆ. ಯಾಕಂದರೆ ಅವಳಿಗೆ ಸೆನೆಯುವದಕ್ಕೂ ಮರೆಯುವದಕ್ಕೂ ಸ್ವಾತಂತ್ರ್ಯವೇ ಇಲ್ಲ. ಭೂತಲದಲ್ಲಿ ಅಂಥಾ ಸ್ತ್ರೀಯರ ಪ್ರೇಮವನ್ನು ವರ್ಣಿಸುವದು ಎಷ್ಟುಮಾತ್ರವು. ಸರ್ವಪ್ರಕಾರವಾಗಿಯೂ, ಈ ಬಸವೇಶನು ಶಿವನ ಸ್ಮರಣೆಯಿಂದ ಶಿವಸ್ವರೂಪವೇ ಪ್ರಾಪ್ತವಾಗಿ, ನಾನು ಭೃತ್ಯನು; ಶಿವನು ಸ್ವಾಮಿಯು; ಎಂಬ ಜ್ಞಾನದಿಂದುಂಟಾಗುವ ಸೌಖ್ಯವು ನಾಶವಾಗುತ್ತದೆಂಬ ಬುದ್ಧಿಯಿಂದ ತನ್ನನ್ನು ಸ್ಮರಣೆಯನ್ನು ಮರೆತು, ಶಿವನಲ್ಲಿಮುಳುಗಿದ್ದಾನೋ ? ಒಬ್ಬಳು ತನ್ನ ನಾಯಕನನ್ನು ಕರತರುವದಕ್ಕಾಗಿ ತನ್ನ ಮನಸ್ಸನ್ನು ಕಳುಹಿಸಿ, ಅದು ಅವನಲ್ಲಿಯೇ ವಿಹರಿಸಿಕೊಂಡಿರುವದೆಂದು ನಿಶ್ಚೈಸಿ, ಸಿಟ್ಟುಗೊಂಡವಳಾಗಿ, ಮನಸ್ಸು ನಪುಂಸಕವೆಂದು ಹೇಳುತ್ತಿರುವ ಪಾಣಿನಿಯನ್ನು ಹಾಸ್ಯಮಾಡುತ್ತಿರುವಲ್ಲಿ ಆ ಮನಸ್ಸು ತಿರಿಗಿಬಂದಿತು. ಲೋಕದಲ್ಲಿ ಸ್ತ್ರೀಯರು ಮುಗ್ಧೆಯರು ಅವರಪ್ರೇಮವೇ

ಅಂಥಾದ್ದಾಗಿರುತ್ತದೆ. ಗುರುಮೂರ್ತಿಗೆ ಪರಶಿವನ ಸಂಯೋಗವುಂಟಾಗುತ್ತಿರ ಲಾಗಿ ಮನಸ್ಸು ನಪುಂಸಕವೆಂದು ವಿದ್ವಾಂಸರು ಹ್ಯಾಗೆ ಹೇಳುವದಕ್ಕಾದೀತು ? ಆ ಮನಸ್ಸು ಪುನ್ನಪುಂಸಕವಾದರೆ ಅತಿಕಾಮಿಯಾಗಿರುವದೋ ಏನು ? ಇದ ಲ್ಲದೆ ಪತಿಗಳಿಗೂ ಪತಿಯಾಗಿರುವ ನನ್ನ ಪತಿಯಾದ ಶಿವನೊಡನೆ ಒಳಗೆ ಕೂಡಬೇ ಕೆಂದು ಪುರುಷರು ಕೂಡ ಸ್ತ್ರೀಯರಂತೆ ಅಪೇಕ್ಷಿಸುತ್ತಾರೆ, ಹೀಗಿರುವಲ್ಲಿ ಮನ ಸ್ಸು ಶಿವನೊಡನೆ ಕೂಡಿದೆ ಯೆಂಬುವದರಲ್ಲಿ ಆಶ್ಚರ್ಯವೇನು ? ಹೀಗೆ ಆಲೋಚಿಸಿ, ತನ್ನ ಮನಸ್ಸಿಗಿಂತಲೂ ಮೊದಲೇ ಹೋಗಿ, ತನ್ನಪತಿಯನ್ನು ರಹಸ್ಯದಲ್ಲಿ ಆಲಿಂಗಿಸಿ ಸಕಲವನ್ನು ಮರೆತು ನಿಶ್ಚಿಂತನಾಗಿದ್ದಾನೋ ? ಇದಲ್ಲದೆ, ಮೊದಲು, ನೋಟವು ಆಮೇಲೆ ಚಿಂತೆ, ನಿಟ್ಟುಸುರು, ಆಮೇಲೆ ತಾಪವು, ಕೃಶತ್ವವು, ಆಹಾರವಿಲ್ಲದಿರು ವಿಕೆಯು, ಬುದ್ಧಿಬ್ರಾಂತಿಯು, ಅಮೇಲೆ ಮೌನವು ಮೂರ್ಛೆಯು, ಮರಣ ವು, ಎಂಬಿವುಗಳು ವಿರಹಿಗಳ ದಶಾವಸ್ಥೆಗಳು. ಪ್ರಾಣಕಾಂತನನ್ನು ಆಲಿಂಗಿಸದೆ, ಮರಣವನ್ನು ಹೊಂದದೆ, ಹೀಗೆ ವ್ಯತಿಯುಂಟಾಗಿದೆ. ಇಂಥಾ ಅವಸ್ಥೆಯು ಇ ತರರಿಗೆ ಸಂಭವಸೀತೇ ? ಜೀವನ್ಮುಕ್ತಿಪದವಿಯನ್ನು ಪಡೆಯುವದಕ್ಕೆ ಕಾರಣವಾ ದ ಭಕ್ತಿಯೆಂಬಸ್ತ್ರೀಗೆ ಅಧೀನನಾಗಿ ನಿರುಪಾಧಿಕವಾದ ಶಿವಾನಂದದಲ್ಲಿ ನಿಶ್ಚಲ ವಾದ ಇಂದ್ರಿಯ ಸಮೂಹವುಳ್ಳವನಾಗಿದ್ದಾನೆ. ಮೊದಲು ದೃಷ್ಟಿ, ಚಿಂತೆ, ವಿಶ್ವಾಸ, ಜ್ವರ, ಕೃಸತ್ವ, ಅನಾಹಾರ, ಉನ್ಮಾದ. ಮೌನ, ಮೂರ್ಛೆ ಇವು ಮೊದಲಾದ ಅವಸ್ಥೆಗಳಿಂದ ಕೂಡಿದವನಾಗಿದ್ದಾಗ್ಯೂ, ಆಮೇಲೆ ಅವುಗಳನ್ನು ಮರೆತು, ಅವಿಚ್ಛಿನ್ನವಾಗಿಯೂ, ಸ್ಥಿರವಾಗಿಯೂ ಇರುವ ಶಿವಯೋ, ಗಾವಸ್ಥೆ ಯಲ್ಲಿ ನೆಲೆಗೊಂಡವನಾಗಿ, ನಾನು ಸತಿಯೆಂಬ ಭೇದವನ್ನು ಬಿಟ್ಟು ಇದ್ದಾನೋ ! ಭಕ್ತನೇದೇಹವಾಗಿಯುಳ್ಳವನಿಗೆ ತನ್ನ ಸಮಸ್ತ ದೇಹವನ್ನು ಭಕ್ತನೇ ಪ್ರಾಣವಾ ಗಿಯುಳ್ಳವನಿಗೆ ತನ್ನ ಪ್ರಾಣಗಳನ್ನು, ಭಕ್ತನೇ ಅಂತಃಕರುಣವಾಗಿಯುಳ್ಳವನಿಗೆ ನಿರ್ಮಲವಾದ ತನ್ನ ಅಂತಃಕರಣವನ್ನು, ಭಕ್ತನೇಬಾಹ್ಯೇಂದ್ರಿಯಾರ್ಥವಾಗಿ ಯುಳ್ಳವನಿಗೆ ತನ್ನ ಬಾಹ್ಯೇಂದ್ರಿಯ ವಿಷಯಗಳಾದರೂಪಾದಿಗಳನ್ನು, ಭಕ್ತನೇ ಬಾಹ್ಯೇಂದ್ರಿಯಗಳಾಗಿಯುಳ್ಳವನಿಗೆ ತನ್ನ ಚಕ್ಷುರಾದೀಂದ್ರಿಯಗಳನ್ನು, ಸಮ ರ್ಪಿಸಿ, ರಥದ ಅಂಗಗಳು ಮತ್ತೊಂದು ಸ್ಥಳದಲ್ಲಿ ಬೇರೆಬೇರೆ ಮಡಗಲ್ಪಟ್ಟರೆ, ಹ್ಯಾಗೆ ರಥವೇಇರುವದಿಲ್ಲವೊ ಹಾಗೆಯೇತನ್ನ ಗುಣಗಳೆನ್ನೆಲ್ಲಾ ಶಿವನಿಗೆ ಕೊಟ್ಟು, ಸಕಲ ರಿಂದಲೂ ಬಿಡಲ್ಪಡುವದಕ್ಕೆ ಅಶಕ್ಯವಾದ ನಾನು ಎಂಬ ಭಾವನ್ನು ಬಿಟ್ಟು, ಬಾಳೇ

ಕಂಬದಲ್ಲಿ ಒಂದೊಂದು ಪಟ್ಟೆಯನ್ನು ಎಳದು ಹಾಕಿದರೆ ಬಾಳೆಯ ಮರದ ರೂಪವು ಹ್ಯಾಗೆಕಾಣದಂತಾಗುವದೋ ಹಾಗೆ ದೇಹ, ಇಂದ್ರಿಯ, ಮನಸ್ಸು; ಪ್ರಾಣ ಎಂಬ ಹೊರಕೆಗಳನ್ನು ಎಳೆದು, ಅತ್ಯಂತ ಭಕ್ತಿಯಿಂದ ಶಿವನಿಗೆಸಮರ್ಪಿಸಿ, ಸ್ಥಿರವಾದ ಶಿವಾನಂದವೆಂಬ ಯೋಗನಿಧ್ರೆಯಿಂಕೂಡಿದ್ದಾನೋ? ಅದಲ್ಲದಿದ್ದರೆ, ಶಿವನಿಗೆ ಮನಸ್ಸನ್ನು, ಪ್ರಸಾದಕ್ಕೆ ಧೇಹವನ್ನು, ಜಂಗಮಕ್ಕೆ ಪ್ರಾಣವನ್ನು ಬೇರೆ ಬೇರೆ ಸಮರ್ಪಿಸಿ. ಮನೋದೇಹಪ್ರಾಣಗಳನ್ನು ಮರೆತು, ಪರಶಿವನಲ್ಲಿ ಮಗ್ನನಾಗಿ ದ್ದಾನೋ?

ಈ ಪ್ರಕಾರವಾಗಿ ಚನ್ನಬಸವೇಶನು ತನ್ನ ಗುರುವನ್ನು ಬಹು ವಿಸ್ತಾರವಾಗಿ ಕೊಂಡಾಡುತ್ತಿರಲು; ಅಪೂರ್ವನಾದ ಒಬ್ಬ ಜಂಗಮನು ಬಸವೇಶನನ್ನು ನೋಡ ಲಿಚ್ಛೆಯಿಂದ ಬಂದು, ಬಸವೇಶನು ಶಿವಯೋಗದಲ್ಲಿದ್ಧಾನೆಂದು ದ್ವಾರಪಾಲಕರ ಮುಖದಿಂದ ಕೇಳಿ, ಹೊರಟು ಹೋದನು. ಬಸವೇಶನು ಜಂಗಮಪ್ರಾಣನಾದುದ ರಿಂದ ಆತನಪ್ರಾಣವು ಆ ಜಂಗಮನ ಸಂಗಡಲೇ ಹೋಯಿತು. ಅನಂತರದಲ್ಲಿ ಸೇವ ಕರು ಆಶ್ಚರ್ಯಪಡುತ್ತಿರಲು, ಸ್ವಭಾವಸಿದ್ಧವಾದ ಲಿಂಗನಿಷ್ಠೆಯಿಂದ ಅಲಂಕರಿಸಲ್ಪಟ್ಟ ವನಾಗಿಯೂ, ಶಿನಭಕ್ತಿಯಿಂದ ಕೂಡಿದವನಾಗಿಯೂ, ಇರುವ ಸಕಲೇಶಮಾದರ ಸನು, ಸದ್ಭಕ್ತಿಸಂಪನ್ನನೂ, ಸಂಸಾರನಾಶಕವಾದ ಲಿಂಗಾನುಭವದ ಸೌಖ್ಯದಿಂ ಕೂಡಿದವನೂ ಆದ ಮಡಿವಳ್ಳಮಾಚಯ್ಯನು, ಲೋಕಪೂಜಿತನಾದ ಕಿನ್ನರಬ್ರಹ್ಮ ಯ್ಯನು ಪರವಾದಿಗಳನ್ನು ಮುರಿಯುವಲ್ಲಿ ಧೀರನಾದ ಸೊಡ್ಡಳಬಾಚರಸನು, ನಿಗ್ರ ಹಾನುಗ್ರಹಶಕ್ತಿಯುಳ್ಳ ಭಕ್ತಿಯಿಂದ ಅಲಂಕರಿಸಲ್ಪಟ್ಟವನಾಗಿಯೂ, ಘನವಾದ ಕೀರ್ತಿಯುಳ್ಳವನಾಗಿಯೂ ಇರುವ ಮೋಳಿಗೆ ಮಾರಯ್ಯನು, ಪಾಪಗಳ ಸಮೂ ಹವನ್ನು ಕೊಡಹಿದ ಕಲಕೇತಬ್ರಹ್ಮಯ್ಯನು, ಅನ್ಯಮತಗಳನ್ನು ತಿರಸ್ಕರಿಸಿದವನಾ ಗಿಯೂ ಭಕ್ತರಲ್ಲಿ ದಿಗ್ದಂತಿಯಾಗಿಯೂ ಇರುವ ಕಕ್ಕಯ್ಯನು, ಅಧಿಕವಾದ ಶೌ ರ್ಯವುಳ್ಳವನಾಗಿಯೂ ಲೋಕೋತ್ತರವಾದ ನಡತೆಯುಳ್ಳವನಾಗಿಯೂ ಇರುವ ಸುರಗಿ ಚೌಡಯ್ಯನು, ವೇಧಬಾಹ್ಯರಾದ ವೈಷ್ಣವಾದಿ ಪಾಷಂಡರನ್ನು ಜೈಸಿದ ವನೂ ಪಾಪನಾಶಕನೂ ಆದ ಮುಸುಡಿಚೌಡಯ್ಯನು, ಅಧಿಕವಾದ ಸದ್ಭಕ್ತಿ ಯಿಂದ ಮನೋಹರನಾದವನೂ ಭಕ್ತಿ, ಕ್ರಿಯಾಂಗ, ಜ್ಞಾನಾಂಗ, ಇವುಗಳ ನ್ನು ಸಾಂಗವಾಗಿ ನಡಸುವವನೂ ಆದ ಏಕಾಂತರಾಮಯ್ಯನು ಶಿವಜ್ಞಾನಕ್ಕೆ ಸಮುದ್ರನಾದ ಉತ್ತಮಾಂಗದ ಕೇಶಿಯಯ್ಯನು, ಭಕ್ತರಿಗೆ ಮನೋರಥಸುಖ

ವನ್ನು ಕೊಡುವ ಕನ್ನದ ಬ್ರಹ್ಮಯ್ಯನು, ಅನೇಕ ವಿಧವಾದ ಸದ್ಭಕ್ತಿಯಿಂದ ಪ್ರಸಿದ್ಧನಾದ ತೆಲುಗಜೊಮ್ಮಯ್ಯನು, ಭಕ್ತಿಗೆ ಆಶ್ರಯವಾದ ಕೊಂಡಗುಡಿಯ ಕೇಶಿರಾಜನು, ಶಿವಭಕ್ತಿಯೆಂಬ ಅಮೃತದಿಂದ ತುಂಬಿದ ದೇಹವುಳ್ಳವನೂ ಕರುಣಾಶಾಲಿಯೂ ಆದ ಶಿವನಾಗಯ್ಯನು, ಗುರುಭಕ್ತಿಯಿಂಕೂಡಿದ ಮುಕ್ತಾಗುಡು ಬಿಕಾಳವ್ವನು, ಅನಂತಮಹಿಮೆಯುಳ್ಳ ಗೊಗ್ಗವ್ವೆ, ಇವರು ಮೊದಲಾದ ಭಕ್ತಿಯನ್ನು ವೃದ್ಧಿಪಡಿಸುವವರಾದ ಲಕ್ಷವೂ ಏಂಭತ್ತುಸಾವಿರಮಂದಿ ಜಂಗಮರು, ಶಿವಭಕ್ತಿನಿರತನಾದ ಶಿವರಾತ್ರಿವ್ರತದಭದ್ರ ದೇವನು, ಘಂಟಾನಾದದ ಸೇವೆಯಲ್ಲಿ ಪ್ರಸಿದ್ಧನಾಗಿರುವ ಕಾಲಕಂಠನು, ಗುಣಶಾಲಿಯಾದ ಚಿನ್ನದಾರತಿಯ ವೀರಭದ್ರನು, ಪಟ್ಟೇವಸ್ತ್ರದ ಅಂಚಿನದೀಪವನ್ನೆತ್ತುವ ತ್ರಿಪುರಾರಿಯು, ಕರ್ಪೂರದಾರತಿಯನ್ನರ್ಪಿಸುವ ಸಂಗಯ್ಯನು, ಕಸ್ತೂರಿಯನ್ನು ಲೇಪಿಸುವ ಮಹಾತ್ಮನಾದ ಉಸದ್ಭಟದೇವಯ್ಯನು, ಮುತ್ತಿನ ರಂಗವಲ್ಲಿಯ ಸೇಮದ ಮಾಯಣ್ಣನು, ಇವರುಮೊದಲಾದ ಒಂಭತ್ತುಸಾವಿರಮಂದಿ ಪ್ರತಿಭಕ್ತರೂ, ತ್ರಿಕಾಲದಲ್ಲಿಯೂ ಶಿವನಿಗೆ ಎರಡು ಕಣ್ಣುಗಳನ್ನು ಕೊಟ್ಟು, ತಿರಿಗಿ ಪಡೆಯುತ್ತಿರುವ ಜಗದ್ವಂದಿತನಾದ ಕಂಗಳವಿರೂಪಾಕ್ಷನು, ಪ್ರತಿದಿನವೂ ಈಶ್ವರನಿಗೆ ನಾಲಿಗೆಯನ್ನು ಕತ್ತರಿಸಿ ಕೊಟ್ಟು, ಹೊಸನಾಲಿಗೆಯಿಂದ ಪರಶಿವನನ್ನು ಸ್ತೋತ್ರ ಮಾಡುತ್ತಿರುವ ಪರಿಶುದ್ಧವಾದ ಬುದ್ಧಿಯುಳ್ಳ. ಹೊಸನಾಲಗೆಯ ಶಿವಯೋಗಿಯು, ತ್ರಿಸಂಧ್ಯೆಯಲ್ಲಿಯೂ ಭಕ್ತಿಯಿಂದ ಶಿವನನ್ನು ವೇದಮಂತ್ರಗಳಿಂದ ಪೂಜಿಸುತ್ತಿರುವ ಶಿವಭಕ್ತನಾದ ಕರುಳ ಪರ್ವತನು, ಮೂರು ದಿನಕ್ಕೊಂದುವೇಳೆ, ಭಕ್ತಿಯಿಂದ ತನ್ನ ತಲೆಯನ್ನು ಕತ್ತರಿಸಿ, ಅದರಿಂದ ಶಿವನನ್ನು ಪೂಜಿಸುತ್ತಿರುವ ಶಿವಸಮಾನನಾದ ಗೋವಿಂದಬಟ್ಟಾರಕನು ಇವರುಮುಂತಾದ ಏಳುಸಾವಿರದೇಳುನೂರು ಗಣಂಗಳು, ಸ್ನೇಹಭಾವದಿಂದ ಕೂಡಿದವನೂ, ಶಿವಜ್ಞಾನವೆಂಬ ಬೆಂಕಿಯಿಂದ ಕೆಟ್ಟವಿಷಯಗಳೆಂಬ ಕಾಷ್ಟಗಳನ್ನುಸುಟ್ಟವನು, ಮಹಾತ್ಮನೂ ಆದ ಮುಗ್ಧ ಸಂಗಯ್ಯನು, ನಿತ್ಯವೂ ಪ್ರತಿಜಾವದಲ್ಲಿಯೂ, ಬೇರೆ ಬೇರೆ ಬಣ್ಣದ ವುಡುವುಗಳನ್ನು ಬೇರೆ ಬೇರೆ ಜಾತಿಯ ಪುಷ್ಪಗಳನ್ನು, ಆವಿಧವಾದಗಂಧವನ್ನು, ಬೇರೆ ಬೇರೆ ಪ್ರಕಾಶಸಂಬಂದವುಳ್ಳ, ಬೇರೆ ಆಭರಣಗಳನ್ನು ಸಮರ್ಪಿಸಿ, ನಿಯಮದಿಂದ ಇರುತ್ತಿರುವ ಅಷ್ಟಪ್ರಹರದ ಸೋಮಯ್ಯನು, ಇವರುಮೊದಲಾಗಿ ಲೋಕಪ್ರಸಿದ್ಧರಾಗಿಯೂ, ಲಿಂಗನಿಷ್ಟೆಯಿಂ ಕೂಡಿದವರಾಗಿಯೂ ತಮ್ಮ ಇಚ್ಛಾನುಸಾರವಾದ ಭೋಗವನ್ನನುಭವಿಸು

ವವರಾಗಿಯೂ ಇರುವ ಹನ್ನೆರಡುಸಾವಿರಮಂದಿ ವಿಟಜಂಗಮರೂ, ಇನ್ನೂ ವೀರ ವ್ರತದಿಂದಲೂ, ಉತ್ತಮಭಕ್ತಿನಿಷ್ಟೆಯಿಂದಲೂ ಕೂಡಿದವರಾದ ಕಲ್ಯಾಣಪಟ್ಟಣ ವಾಸಿಗಳಾದ ಸಕಲರೂಶಿವಾರಾಧನೆಯ ವೇಳೆಯಲ್ಲಿ ಬಂದು ಸುತ್ತಲೂ ಕುಳಿತು ಕೊಂಡು ಬಸವೇಶನ ಸ್ಥಿತಿಯನ್ನು ನೋಡಿ, ಬಹಳ ಆಶ್ಚರ್ಯಗೊಂಡವರಾಗಿ;-ಇದಕ್ಕೆ ಕಾರಣವೇನು? ಏನುಮಾಡತಕ್ಕದ್ದು? ಏನುನಡೆಯಿತು? ಎಂದು ಚನ್ನಾಗಿ ಈಗನಾ ವುಗಳು ಪ್ರಯತ್ನದಿಂದ ಸಂಪೂರ್ಣವಾಗಿ ತಿಳಿದುಕೊಳ್ಳಬೇಕು. ಈಗ ದ್ವಾರಪಾಲ ಕರನ್ನು, ಪರಮಾಪ್ತರಾದ ಕರಣಿಕರನ್ನು ಕರಿಸಿ, ಈದಿನದಲ್ಲಿ ಲಿಂಗಾರಾದನ ಸಮಯದಲ್ಲಿ ನಡೆದ ಸಂಗತಿಯನ್ನೂ, ಗೀತಬಂಡಾರದಲ್ಲಿರುವ ಪುಸ್ತಕಗಳನ್ನೂ, ಅದರಲ್ಲಿರುವಗೀತಗಳನ್ನೂ, ಶೀಘ್ರದಲ್ಲಿವಿಚಾರಿಸಿರಿ. ಈ ದಿವಸದಲ್ಲಿ ಯಾವಪ್ರತಿಜ್ಞೆ ಯನ್ನುಮಾಡಿದನು? ಯಾವವ್ರತವನ್ನು ಹಿಡಿದನು? ಇದಕ್ಕೆ ಮುಂಚೆಯಾವಭಕ್ತರು ಬಂದಿದ್ದರು? ಯಾವಭಕ್ತರುಹೋದರು? ಯಾವಭಕ್ತರಿದ್ದರು? ತಿಳಿದಿದ್ದರೆ ಹೇಳಿರಿ. ಎಂದು ಕೇಳಲು; ಚನ್ನಬಸವಣ್ಣನು ಆಮಾತನ್ನು ಕೇಳಿ, ಬಂದು, ನಮಸ್ಕರಿಸಿ, ಆಭ ಕ್ತರಿಗೆ ವಿಜ್ಞಾಪಿಸಿದ್ದೇನಂದರೆ;- ನನ್ನ ಗುರುವು ಶಿವಪೂಜಾಸಮಯದಲ್ಲಿ ವಿಶೇಷವಾ ಗಿ ಇತರರಿಗೆಸಾಧ್ಯವಲ್ಲದ ಶಿವಯೋಗನಿದ್ರೆಯಲ್ಲಿ ಆಸಕ್ತನಾಗಿರುವಲ್ಲಿ ಅಪೂರ್ವನಾದ ಯಾವನೋ ಒಬ್ಬ ಜಂಗಮನು ಈ ಬಸವೇಶನ ಸಮೀಪವನ್ನು ಕುರಿತು ಬಂದು, ಬಸ ವೇಶನು ಯೋಗನಿದ್ರೆಯಲ್ಲಿದ್ದಾನೆಂದು ದ್ವಾರಪಾಲಕರಮುಖದಿಂದ ತಿಳಿದು, ಹೊರಟುಹೋದನು. ಅದೇ ಬಸವೇಸ್ವರನ ಈಸ್ಥಿತಿಗೆ ನಿಮಿತ್ತವಾಗಬೇಕು. ಹಿಂ ದೆ ಆಶ್ಚರ್ಯಕರವಾದ ಪ್ರತಿಜ್ಞಾಗೀತವನ್ನು ಹೇಳಿದ್ಧಾನೆ. ಅದನ್ನುಸ್ಮರಿಸಿದರೆ ಕೂ ಡಲೇ ಹೃದಯವು ಒಡೆದು ಹೋಗುವದು. ಉಚ್ಚರಿಸಿದರೆ ನಾಲಿಗೆ ಸೀಳಿಹೋಗು ವದು. ಆದ್ದರಿಂದ ಅದು ಇತರರಿಂದ ಹ್ಯಾಗೆ ನಿರ್ವಹಿಸುವದಕ್ಕಾದೀತು ? ಆ ಪ್ರ ತಿಜ್ಞೆಯನ್ನು ನಾನು ತಿಳಿದಮಟ್ಟಿಗೆ ತಮ್ಮ ಸನ್ನಿಧಿಯಲ್ಲಿ ಅರಿಕೆಮಾಡುತ್ತೇನೆ. ಗುರುವು ಕರುಣದಿಂದ ಕೊಟ್ಟ ಲಿಂಗವು ಭಕ್ತರಿಗೆ ಪ್ರಾಣಲಿಂಗವು; ಆ ಪ್ರಾಣ ಲಿಂಗಕ್ಕೆ ಗುರುವು ಪ್ರಾಣಲಿಂಗವೆನಿಸಿಕೊಳ್ಳುತ್ತಾನೆ. ಜಂಗಮನು ಆ ಗುರುವಿಗೆ ಪ್ರತಿಯಾದ ಪ್ರಾಣಲಿಂಗವೆಂಬುವದು ನನ್ನ ಮತವು. ಇದಕ್ಕೆ ಸಂಗಮೇಶ್ವರನೇ ಸಾಕ್ಷಿಯಾಗಿದ್ದಾನೆ. ನಿಶ್ಚಯವಾಗಿ ಇದೇ ನನ್ನವ್ರತವು; ಎಂದು ಬಸವಮಂತ್ರಿ ಯು ಜಂಗಮಭಕ್ತಿಯಿಂದ ಈ ಪ್ರತಿಜ್ಞಾಗೀತವನ್ನು ಹೇಳಿದನು. ಇಂಥಾ ಪ್ರತಿ ಜ್ಞೆಯನ್ನು ಯಾರಲ್ಲಿ ಕಾಣಬಹುದು ? ಅದನ್ನು ಆಲೋಚಿಸುವದು ತಾನೇಹ್ಯಾ

ಗೆ? ಇತರರು ಆಲೋಚಿಸಿದಾಗ್ಯೂ. ಹೇಳುವದಕ್ಕೆಹ್ಯಾಗೆಸಾಧ್ಯವಾದೀತು ? ಹೇಳಿದರೂ ಹೇಳಲಿ ಆಚರಿಸುವದಕ್ಕೆ ಹ್ಯಾಗೆ ಸಾಧ್ಯವಾದೀತು? ಅಂಥಾ ಪ್ರತಿಜ್ಞೆಯನ್ನು ಮಂತ್ರಿಶಿರೋಮಣಿಯಾದ ಬಸವೇಶನು ವಿಚಾರಿಸಬಲ್ಲನು. ವಿಚಾರಿಸಿದ್ದಕ್ಕೆ ತಕ್ಕಹಾಗೆ ಹೇಳುವದಕ್ಕೂ ಅದರಂತೆ ನಡೆಯುವದಕ್ಕೂ ಶಕ್ತನು. ಈತನು ನಿಮ್ಮಭೃತ್ಯನು. ಆದಕಾರಣ ಹೀಗೆ ಯಾವಯಾವದನ್ನು ಆಚರಿಸುತ್ತಾನೋ ಅದನ್ನು ಕೊನೆಮುಟ್ಟುವಂತೆ ಮಾಡುವ ಭಾರವೂ, ಅದನ್ನು ಅಂಗೀಕರಿಸುವ ಭಾರವೂ ನಿಮ್ಮದಲ್ಲವೇ? ಈ ಬಸವೇಶನಿಗೆ ಎಂದಿಗೂ ಇದೊಂದು ಅಶಕ್ಯವಾದದ್ದಲ್ಲ. ನಿಮ್ಮಸನ್ನಿಧಿಯಲ್ಲಿ ನಾನುಜಾಣ್ಮೆಯನ್ನು ತೋರ್ಪಡಿಸಿಕೊಳ್ಳುವದಕ್ಕಾಗಿ ಇದನ್ನು ಹೇಳಲಿಲ್ಲ. ಮನಸ್ಸಿನಲ್ಲಿ ಭೀತಿಯನ್ನು ಬಿಟ್ಟು, ವಾಸ್ತವವಾದದ್ದನ್ನು ತಿಳಿಸಿದ್ದೇನೆ. ಈ ಪ್ರಕಾರವಾಗಿ ಚನ್ನಬಸವಣ್ಣನು ಹೇಳಿ, ಭಕ್ತಸಭೆಗೆ ನಮಸ್ಕರಿಸಿ, ಕೈಗಳನ್ನು ಜೋಡಿಸಿಕೊಂಡು, ಸಮೀಪದಲ್ಲಿ ನಿಂತಿರಲು; ವೀರಮಾಹೇಶ್ವರಾಚರಣೆಯಲ್ಲಿ ದೀಕ್ಷಾಬದ್ಧರಾದ ಆ ಭಕ್ತರೆಲ್ಲರೂ ಸಂತೋಷಪಟ್ಟವರಾಗಿ ಶೀಘ್ರದಲ್ಲಿ ಬಾಗಿಲು ಕಾಯುವವರನ್ನು ಕರಿಸಿ;- ಎಲೈ ದ್ವಾರಪಾಲಕರುಗಳಿರಾ! ನೀವು ಈ ಕಲ್ಯಾಣಪಟ್ಟಣದಲ್ಲಿ ಶಿವಭಕ್ತರ ಮನೆಗಳೊಳಗೆ ತಡೆಯಿಲ್ಲದೆ ಅನ್ನವನ್ನು ಹಾಕುವವರ ಮಠಗಳೊಳಗೆ ಆ ಉತ್ಕೃಷ್ಟನಾದ ಜಂಗಮನನ್ನು ಹುಡುಕಿಕರತರಬೇಕು. ಈ ರೀತಿಯಾಗಿ ಆಜ್ಞಾಪಿಸಲ್ಪಟ್ಟ ದ್ವಾರಪಾಲಕರು ಅಡ್ಡಬಿದ್ದು ಅಪ್ಪಣೆಯಂ ಪಡೆದು ಹೋಗಿ, ಆ ಜಂಗಮನನ್ನು ಕರತರಲು; ಬಸವೇಶನು ಜಂಗಮಪ್ರಾಣಿಯಾದದ್ದರಿಂದ ಆಜಂಗಮನಸಂಗಡಲೇಪೂರ್ವದಲ್ಲಿಕಿನ್ನರಬ್ರಹ್ಮಯ್ಯನಪ್ರಾಣಗಳೊಡನೆಬಂದಂತೆ ಬಸವೇಶನಪ್ರಾಣಗಳು ಬಂದವು.

ಬಸವೇಶವಿಜಯದಲ್ಲಿ ಇಪ್ಪತ್ತೊಂದನೇ ಅಧ್ಯಾಯವು
ಸಂಪೂರ್ಣವು.

## ಇಪ್ಪತ್ತೆರಡನೇ ಅಧ್ಯಾಯವು.

### ಕಿನ್ನರಬ್ರಹ್ಮಯ್ಯನಿಗೆ ಪ್ರಾಣದಾನವಂ ಮಾಡಿದಕಥೆ.

ಬಸವೇಶನು ಕಿನ್ನರಬ್ರಹ್ಮಯ್ಯನನ್ನು ತನ್ನ ಪ್ರಾಣಗಳಂತೆ ತಿಳಿದುಕೊಂಡಿರುತ್ತಿರಲು; ಶಿವನು ಒಂದಾನೊಂದು ದಿನ ಆ ಭಾವವನ್ನು ಲೋಕಕ್ಕೆ ತಿಳಿಯಪಡಿಸಲಿಚ್ಛೈಸಿದವನಾಗಿಕಿನ್ನರಬ್ರಹ್ಮಯ್ಯನ ಪ್ರಾಣಗಳನ್ನು ತನ್ನಲ್ಲಿ ಬಚ್ಚಿಟ್ಟುಕೊಂಡನು. ಆಗ ಬಸವೇಶನು ಕಿನ್ನರಬ್ರಹ್ಮಯ್ಯನನ್ನು ನೋಡಿ, ಪ್ರೇಮದುಃಖದಿಂದ ತುಂಬಲ್ಪಟ್ಟವನಾಗಿ, ಕಣ್ಣೀರನ್ನು ಸುರಿಸುತ್ತಾ ಗದ್ಗದ ಕಂಠದಿಂದ ಅತ್ತನು. ಅಣ್ಣಾ, ತಂದೆಯೇ ನನ್ನ ಪ್ರಿಯಬಂಧುವೇ! ನನ್ನ ಮನೋಹರನೇ! ಆಸ್ಥಾನವೇದಿಕೆಯ ದೀಪವೇ! ನನ್ನ ಮುಖಕ್ಕೆ ಕನ್ನಡಿಯಾದವನೇ! ಗುಣಗಳೆಂಬ ರತ್ನಗಳಿಗೆ ನಿಧಿಯಾದವನೇ! ಎಲ್ಲಿಗೆ ಹೋದೆ? ಜಗತ್ತೆಲ್ಲಾ ಶೂನ್ಯವಾಯಿತು. ಪರತತ್ವವೇ ಹೊರಟುಹೋಯಿತು. ನನ್ನ ಕೋರಿಕೆಯೇ ಮುರಿದುಹೋಯಿತು. ನನ್ನ ಭಕ್ತಿಯೂ ಶಕ್ತಿಯೂ ನಷ್ಟವಾದವು. ಮನಸ್ಸೆಂಬ ಬಳ್ಳಿಯು ನಾಶವನ್ನು ಹೊಂದಿತು. ಅಯ್ಯೋ ಕಿನ್ನರಬ್ರಹ್ಮಯ್ಯನೇ ಅಯ್ಯೋ ನನ್ನ ಮನೆದೈವವೇ! ಅಯ್ಯೋ ನನ್ನ ಕುಲಪತಿಯೇ! ಅಯ್ಯೋ ಕಲ್ಪವೃಕ್ಷವೇ! ಅಯ್ಯೋ ನಿರಹಂಕಾರಿಯೇ! ಸದಾಚಾರಸಂಪನ್ನನೇ! ಪಾಪರಹಿತನೇ! ಶ್ರೇಷ್ಠಗುಣಗಳುಳ್ಳವನೇ ಕರುಣದಿಂದ ತುಂಬಲ್ಪಟ್ಟ ಮನಸ್ಸುಳ್ಳವನೇ! ಶಿವಾನಂದದಿಂದ ಕೂಡಿದವನೇ! ಅಯ್ಯೋ! ಎಂದು ಬಸವೇಶನು ದುಃಖದಿಂದ ಅಳುತ್ತಿರಲು, ಪಡಿಹಾರಿಬಾಚಿದೇವಯ್ಯನು ಶಿವನ ಮದಗಜವೆಂದು ಪ್ರಸಿದ್ಧನಾಗಿರುವ ಮಡಿವಳ್ಳಮಾಚಿದೇವಯ್ಯನ ಮನೆಗೆ ಹೋಗಿ ಕಿನ್ನರಬ್ರಹ್ಮಯ್ಯನ ವೃತ್ತಾಂತವನ್ನು ಆತನಿಗೆ ತಿಳಿಸಿದನು. ಮಾಚಿದೇವಯ್ಯನು ಕೇಳಿ;– ಅಯ್ಯಾ ಪಡಿಹಾರಿಯೇ ಭಕ್ತರೆಲ್ಲರೂ ಅಲ್ಲಿಗೆ ಬಂದಿದ್ದಾರೆಯೇ? ಬಸವಣ್ಣನೇನು ಮಾಡುತ್ತಾನೆ? ಏನು ಸಂಗತಿ? ಎಂದು ಕೇಳಲು; ಆತನು ಕೈ ಮುಗಿದುಕೊಂಡು, ಎಲೈ ಮಹಾತ್ಮನೇ! ಮಾದಿರಾಜ ಮುಂತಾದ ಸದ್ಭಕ್ತರೆಲ್ಲರೂ ಬಂದಿದ್ದಾರೆ. ಬಸವಣ್ಣನು ಕಿನ್ನರಬ್ರಹ್ಮಯ್ಯನನ್ನು ತಬ್ಬಿಕೊಂಡು, ಬಹುದುಃಖಪಡುತ್ತಾ ಇದ್ದಾನೆ. ಎಂದು ತಿಳಿಸಲು; ಮಾಚಯ್ಯನು ಕೇಳಿ ನ

ಕ್ಕು ಹ್ಯಾಗೆಹ್ಯಾಗೆ ಎಂದು ಮತ್ತೆಮತ್ತೆ ಪ್ರಶ್ನೆ ಮಾಡುವವನಾಗಿ, ಏನು ಸದ್ಭಕ್ತ ರೆಲ್ಲರೂಬಂದಿದ್ದಾರೋ? ಬಸವಣ್ಣನು ಅಳುತ್ತಾನೋ? ತನ್ನಪ್ರತಿಜ್ಞೆಯುಕೆಟ್ಟಾ ಗ್ಯೂಆತನು ಹ್ಯಾಗೆಬದುಕಿದವನಾಗಿದ್ದಾನೆ. ಭಕ್ತಿಯು ತಲೆಗೆ ಹತ್ತಿದಾಗ ಅ ಸಾಧ್ಯವಾದ ಪ್ರತಿಜ್ಞೆಯನ್ನು ಮಾಡುತ್ತಾನೆ. ಅದನ್ನು ಹಾಗೆಯೇ ನೆರವೇರಿಸು ತ್ತಾನೆ. ತಾನು ಜಂಗಮವೇ ಪ್ರಾಣವಾಗಿ ಉಳ್ಳವನು ಎಂಬ ಅತಿದುರ್ಘಟವಾ ದ ಪ್ರತಿಜ್ಞೆಯನ್ನು ಈಗ ಮರೆತನೋಏನೋ? ಹೀಗೆದುಃಖಪಡುವದು ಜಂಗ ಮಪ್ರಾಣಿಯ ಧರ್ಮವೇ ಏನು? ಪ್ರತಿಜ್ಞೆಯನ್ನು ಮಣ್ಣಿನಲ್ಲಿ ಹಾಕಿ, ಅಧಮರ ಕೆಲಸಗಳನ್ನುಮಾಡುತ್ತಾನೆಯೇ? ಜಂಗಮ ಪ್ರಾಣಿಗಳು ಮುಂಡೆಯರಂತೆ ಅಳುತ್ತಾರೆಯೇ? ಈ ಭಕ್ತಿಹೀನವಾದ ವಾರ್ತೆಯನ್ನು ಕಲ್ಲಿನಾಥನು ಮೆಚ್ಚು ತ್ತಾನೆಯೇ? ಆ ಕಿನ್ನರಬ್ರಹ್ಮಯ್ಯನು ಭೂಮಿಯಲ್ಲಿ ಭಕ್ತಮಾತ್ರನಾಗಿದ್ದಾನೆಯೇ? ಆಮಹಾತ್ಮನನ್ನು ಶಿವನು ತನ್ನಲ್ಲಿಸೇರಿಸಿಕೊಂಡಿರಲಾಗಿ, ಆತನ ಮಿತ್ರರಾದವರು ಲೌಕಿಕರಂತೆ ಅಳುತ್ತಾರೆಯೇ? ಆಡಿದಮಾತಿಲ್ಲದಿರುವಗುಣವನ್ನು ಭಕ್ತಿಯೆಂದು ಹೊಗಳುವದಕ್ಕೂ ಅಳುವದಕ್ಕೂ ನಾವು ತಿಳಿಯೆವು. ನಮ್ಮಿಂದೇನು? ಸಾಕು ಹೋಗು. ಈಪ್ರಕಾರವಾಗಿಹೇಳಲು; ಬಾಚಯ್ಯನು ಹೊರಟುಬಂದು,ಭಯದೊ ಡನೆ ಭಕ್ತರಿಗೆ ನಮಸ್ಕರಿಸಿ ಮಾಚಯ್ಯನಿಂದ ಹೇಳಲ್ಪಟ್ಟ ಮಾತುಗಳನ್ನೆಲ್ಲಾ ತಿಳಿಸಿ ದನು, ಬಸವೇಶನು ಕೇಳಿ, ಆದುಃಖವನ್ನು ಬಿಟ್ಟು, ಕಿನ್ನರಬ್ರಹ್ಮಯ್ಯನ ಪ್ರಾಣಗ ಳಲ್ಲಿ ತನ್ನ ಪ್ರಾಣಗ್ಗಳನ್ನು ಸೇರಿಸಿದನು. "ಇಂಥಾ ಪ್ರತಿಜ್ಞೆಯನ್ನು ನೆನೆದುಬಸ ವೇಶನು ಹ್ಯಾಗೆ ತಾನೇ ಪ್ರಾಣಗಳನ್ನು ಧರಿಸಿಕೊಂಡಿದ್ದಾನು. ಈಗ ನಾ ನೊಂದಾಲೋಚಿಸುತ್ತಿರುವಲ್ಲಿ ತಾನೊಂದಾಯಿತಲ್ಲಾ! ಸದ್ಭಕ್ತರ ಕೆಲಸಗಳ ರಹಸ್ಯವನ್ನು ಹೇಳುವದಕ್ಕೆ ಮಾಚಯ್ಯನೇ ಬಲ್ಲವನು. ಹಾಗೆ ಆಚರಿಸುವದಕ್ಕೆ ಬಸವೇಶನೇ ಸಮರ್ಥನು. ಅದೆಲ್ಲವನ್ನೂ ಶಿವನೇ ಬಲ್ಲನು. ಇಂಥಾದ್ದನ್ನು ನಾವೆಲ್ಲಿ ಯೂಕಾಣೆವು, ಆಶ್ಚರ್ಯವು" ಎಂದು ಭಕ್ತರು ಹೇಳಿ ಬಾಚಯ್ಯನನ್ನು ಮತ್ತೆ ಕಳುಹಿಸಲು; ಪಡಿ ಹಾರಿಯು ಮಾಚಯ್ಯನಿಗೆ ಆ ವೃತ್ತಾಂತವನ್ನು ವಿಜ್ಞಾಪಿಸಿ ದನು. ಮಾಚ್ಯನು ಆ ವಾರ್ತೆಯನ್ನು ಕೇಳಿ ಸಂತೋಷಭರಿತನಾಗಿ ಎಲೈ ಜಂಗ ಮಪ್ರಾಣದಲ್ಲಿ ಅಡಗಿದ ಪ್ರಾಣವುಳ್ಳ ಬಸವೇಶನೇ ಭಲಾ! ಜಂಗಮಪ್ರಾಣದಲ್ಲಿ ಅನುಸಂಧಾನವುಳ್ಳಬಸವೇಶನೇಭಲಾ! ಜಂಗಮಪ್ರಾಣದೊಡನೆಪ್ರಯಾಣವಂಮಾ ಡಿದ ಬಸವೇಶನೇ ಭಲಾ! ಜಂಗಮಪ್ರಾಣದಿಂದ ರಕ್ಷಿಸಲ್ಪಟ್ಟ ಬಸವೇಶನೇ

ಭಲಾ ! ಜಂಗಮಸೌಖ್ಯವನ್ನು ಅನುಸರಿಸಿದ ಚಿತ್ತವುಳ್ಳಬಸವೇಶನೇ ಭಲಾ ! ಬಸವನು ಜಂಗಮಪ್ರಾಣಿಯೆಂಬ ಮಾತುನಿಜವು. ಭಲಾ ಭಲಾ ಬಹುಆಶ್ಚರ್ಯವು ! ಸರಿ ಸರಿ ಎಂದು ಹೇಳಿದನು. ಅತಿ ದುರ್ಘಟವಾದ ಈ ಮಹಿಮೆಯನ್ನು ಕೇಳಿದ ಪ್ರತಿವಾದಿಗಳು ದಿಕ್ಕು ದಿಕ್ಕಿಗೆ ಓಡಿಹೋಗುತ್ತಿರಲು; ಭಕ್ತರೆಲ್ಲರೂ ಸಂತೋಷಪಡುತ್ತಿರಲು; ಭವಿಗಳು ಸಮೀಪಕ್ಕೆ ಸುಳಿಯದಿರಲು; ಶಿವನು ಸಂದೇಹಪಡುತ್ತಿರಲು; ಜನಗಳೆಲ್ಲರೂ ಅಡ್ಡಬೀಳುತ್ತಿರಲು; ಪಾಪಗಳೆಲ್ಲವೂ ಪುಡಿಯಾಗುತ್ತಿರಲು; ಯಮನ ಅಹಂಕಾರವು ನಷ್ಟವಾಗುತ್ತಿರಲು; ಭಕ್ತಶಿರೋಮಣಿಯಾದ ಮಡಿವಳ್ಳಮಾಚಿದೇವಯ್ಯನು ಭಕ್ತಸಮೂಹವು ಕೂಡಿರುವಸ್ಥಳಕ್ಕೆ ಸಂತೋಷದಿಂದಬಂದನು. ಭಕ್ತರು ಇದಿರೇಳುವದು, ಇದಿರ್ಗೊಳ್ಳುವದು, ನಮಸ್ಕರಿಸುವದು ಮೊದಲಾದ ಉಪಚಾರಗಳನ್ನು ನಡಿಸುತ್ತಿರಲಾಗಿ, ಸಂತೋಷದಿಂದ ಹಾರುತ್ತಿರುವನೇತ್ರಗಳುಳ್ಳವನಾಗಿ, ಮಾಹೇಶ್ವರರಿಂದ ಅನುಜ್ಞೆಮಾಡಲ್ಪಟ್ಟವನಾಗಿ, ಅವರಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿ, ಪುರಾತನರಾದ ಪ್ರಮಥರಪಾದಗಳಲ್ಲಿ ತಗಲಿದಮನಸ್ಸುಳ್ಳವನೇ ! ದೇವತೆಗಳಸಮೂಹದಿಂದ ನಮಸ್ಕರಿಸಲ್ಪಟ್ಟವನೇ ? ಪರಿಶುದ್ಧವಾದ ಕೀರ್ತಿಯುಳ್ಳವನೇ ? ಪ್ರತ್ಯಕ್ಷಶಿವಸ್ವರೂಪನೇ ! ಮಹೋನ್ನತನೇ ! ನೀನು ಪ್ರಾಣಸಖನಾದ ಬಸವೇಶನನ್ನು ಬಿಟ್ಟು, ನೀನೊಬ್ಬನೇ ಕೈಲಾಸಕ್ಕೆ ಹೋಗುವದುಯುಕ್ತವೇ ? ಎಲೈ ಭಕ್ತರಿಗೆ ಸಂತೋಷಪಡಿಸತಕ್ಕವನೇ! ಬಸವೇಶನು ಶಿವನ ಆಜ್ಞೆಯನ್ನು ಪೂರೈಸದೆ, ನಿನ್ನೊಡನೆ ಕೈಲಾಸಕ್ಕೆ ಹೋಗುವದುಯುಕ್ತವೇ ? ಭಕ್ತರಿಗೆ ಗೋಚರವಿಲ್ಲದಂದೆ ಶಿವನು ಹ್ಯಾಗೆ ನಿಮ್ಮಿಬ್ಬರನ್ನು ತನ್ನ ಲೋಕಕ್ಕೆ ಕರದುಕೊಂಡನು. ಜಂಗಮಪ್ರಾಣನಾದ ಬಸವೇಶನು ಹೋದಮೇಲೆ, ಅವನ ಹಿಂದೆ ಭಕ್ತಿಯೂ ಹೋಗುತ್ತದೆ. ಲೋಕದಲ್ಲಿ ಭಕ್ತಿಯೋಯಿಲ್ಲದಂತಾಗುವದು. ಈ ಪ್ರಕಾರವಾಗಿ ಸ್ವೇಚ್ಛೆಯಿಂದ ಹೋಗುವದು ನಿಮಗೆ ಸರಿಯೇ ? ಆದ್ದರಿಂದ ಬಸವೇಶನು ಭೂಮಿಯಲ್ಲಿ ವಾಸಮಾಡುವ ಪರ್ಯಂತರ ನೀನೂ ಇರಬೇಕು; ಏಳು ಏಳು. ಎಂದು ಹೇಳಿದನು. ಬಳಿಕ ಕಿನ್ನರಯ್ಯನು ಮಲಗಿದ್ದು ಎದ್ದವನಹಾಗೆ ಎದ್ದು ಬಂದು, ಮಾಚಯ್ಯನ ಪಾದಗಳಿಗೆ ನಮಸ್ಕರಿಸಿದನು. ಆಮೇಲೆ ಬಸವೇಶನು ಎದ್ದು, ಆತನ ಪಾದಗಳಿಗೆ ಅಡ್ಡಬಿದ್ದು, ವಿನಯದೊಡನೆ ಆತನ ಮುಂದೆ ನಿಂತನು. ಆ ಮೂರು ಜನಗಳೂ, ಸಂತೋಷದಿಂದ ಭಕ್ತಮಾಹೇಶ್ವರರಿಗೆ ನಮಸ್ಕರಿಸಿದರು. ಭಕ್ತರೆಲ್ಲರೂ ಮಾಚಿದೇವಯ್ಯನನ್ನು;—ಅಯ್ಯಾ ಮಾಚಯ್ಯನೇ ಲೋಕದಲ್ಲಿ

ಅಧಿಕವಾದ ಶಿವಭಕ್ತಿಯನ್ನು ಸ್ಥಾಪಿಸುವದಕ್ಕೂ ದುಷ್ಟ ನಿಗ್ರಹ ಶಿಷ್ಟಪರಿಪಾಲನೆಗಳನ್ನು ಮಾಡುವದಕ್ಕೂ ಗೊತ್ತುಗಾರನಾಗಿದ್ಧೀಯೆ. ಕರುಣಾಸಮುದ್ರನೇ! ವಿದ್ವಾಂಸರಿಂದ ನಮಸ್ಕರಿಸಲ್ಪಟ್ಟವನೇ! ಯಶಸ್ಸಿನಿಂದ ಉನ್ನತನಾದವನೇ! ಕಲಿಯುಗದ ರುದ್ರೇಶ್ವರನೇ! ಪ್ರತ್ಯಕ್ಷವೀರಭದ್ರನೇ! ತಡೆಯಿಲ್ಲದವನೇ! ಸಂಸಾರವನ್ನು ಜಯಿಸಿದವನೇ! ಮಂದಹಾಸದಿಂ ಕೂಡಿದ ಮುಖದಿಂದ ಪ್ರಕಾಶಿಸುವವನೇ! ಮನ್ಮಥನನ್ನು ಕೊಡಹಿದವನೇ! ಸ್ವರ್ಗವನ್ನು ತಿರಸ್ಕರಿಸಿದವನೇ! ಶಿವನನ್ನು ಸ್ವಾಧೀನಮಾಡಿಸಿಕೊಂಡಿರುವವನೇ! ವೀರಶೈವಮಾರ್ಗದಿಂದ ಪಾಪಸಮೂಹವನ್ನು ಪರಿಹರಿಸಿದವನೇ! ಸದ್ಭಕ್ತರನ್ನು ವೃದ್ಧಿಪಡಿಸುವವನೇ! ವೇದಮಾರ್ಗದಲ್ಲಿ ಪ್ರವರ್ತಿಸುವವನೇ! ಭಕ್ತರಿಗೆ ರತ್ನದಭರಣಿಯಾದವನೇ! ಗಜವಂಕೊಂದವನೇ! ಸಜ್ಜನಸ್ತುತನೇ! ಕೊಬ್ಬಿದಪರವಾದಿಗಳನ್ನು ಜಯಿಸುವದರಲ್ಲಿ ಸಮರ್ಥನಾದವನೇ! ಸಂಗೀತವಿದ್ಯಾನಿಪುಣನೇ! ಅಧಿಕವಾದ ಬುದ್ಧಿಯುಳ್ಳವನೇ! ಬಿಜ್ಜಳನ ಅಹಂಕಾರವನ್ನು ಮುರಿದವನೇ! ನಮ್ಮ ಕಣ್ಣುಗಳ ಹಬ್ಬವಾದವನೇ! ಸೌಖ್ಯವನ್ನು ಕೊಡುವವನೇ! ಗರ್ವವನ್ನು ಮುರಿಯುವವನೇ ಮಾಯಾವಿಕಾರವನ್ನು ಸೀಳಿದವನೇ! ಮಂಗಳಕರವಾದ ವೃತ್ತಿಯುಳ್ಳವನೇ! ಜಗತ್ತಿನಲ್ಲಿ ಮುಖ್ಯವೀರನಾದವನೇ! ವಿಸ್ತಾರವಾದ ಉತ್ಸಾಹವುಳ್ಳವನೇ! ಶಿವನಲ್ಲಿ ಏಕತ್ವವುಳ್ಳವನೇ! ಪರಿಶುದ್ಧನಾದವನೇ! ನ್ಯಾಯದಿಂದ ಕಠಿನವಾದ ಮಾತುಗಳುಳ್ಳವನೇ! ಇತರ ಮನುಷ್ಯರಿಗೆ ಅಶಕ್ಯವಾದ ಪರಾಕ್ರಮವುಳ್ಳವನೇ! ದುಷ್ಟತನವನ್ನು ಸೈರಿಸಿದ ಸ್ವಭಾವವುಳ್ಳವನೇ! ಪಾಪರಾಶಿಯನ್ನು ನಾಶಮಾಡಿದವನೇ! ಪ್ರಳಯಕಾಲಕ್ಕೆ ದೂರನಾದವನೇ! (ಕಡೆಗಾಲವನ್ನು ಮೀರಿದವನೇ) ಈಶ್ವರನಸಮಾನನೇ ಕೀರ್ತಿಯಿಂದ ಪ್ರಕಾಶಿಸಲ್ಪಟ್ಟವನೇ! ಸಾಹಿತ್ಯವನ್ನು ತಿಳಿದವರಿಗೆ ಸೌಖ್ಯವನ್ನು ಕೊಡವವನೇ! ಸಭ್ಯರಲ್ಲಿ ಮುಖ್ಯನಾದವನೇ? ಧರ್ಮದಲ್ಲಿ ವಿಚಕ್ಷಣನಾದವನೇ! ಅಶುಚಿತ್ವವನ್ನು ಖಂಡಿಸಿದವನೇ! ನೀಚರನ್ನು ಸೀಳಿದವನೇ! ಭಕ್ತಿವಂತರಲ್ಲಿ ಶ್ರೇಷ್ಠನಾದವನೇ! ಅಂತರಂಗಶುದ್ಧಿಯಿಂದ ಅಲಂಕರಿಸಲ್ಪಟ್ಟವನೇ! ಭೂಜನದಿಂದ ಸ್ತುತಿಸಲ್ಪಟ್ಟವನೇ! ಮನಸನ್ನು ಪರಿಕ್ಷಿಸುವದಕ್ಕೂ, ಪ್ರತಿಗ್ನೆಯನ್ನು ವೃದ್ಧಿಹೊಂದಿಸುವದಕ್ಕೂ, ಮೂಢತನವನ್ನು ತಪ್ಪಿಸುವದಕ್ಕೂ, ಲೋಕಗಳಲ್ಲಿ ಭಕ್ತಿಯನ್ನು ಸ್ಥಾಪಿಸುವದಕ್ಕೂ, ಈಶ್ವರನಾಗ್ನೆಯನ್ನು ಕಾಪಾಡುವದಕ್ಕೂ, ಪಾಪಗಳನ್ನು ನಾಶಮಾಡುವದಕ್ಕೂ, ಬಿಜ್ಜಳನನ್ನು ನಾಚಿಸುವದಕ್ಕೂ, ಮದಗಜವನ್ನು ಸಂಹರಿಸುವದಕ್ಕೂ,

ಕೀರ್ತಿಯನ್ನು ಲೋಕದಲ್ಲಿ ನೆಲೆಗೊಳಿಸುವದಕ್ಕೂ, ಜಗತ್ತನ್ನು ನಡುಗಿಸುವದಕ್ಕೂ, ಒಳ್ಳೆಯವರನ್ನು ರಕ್ಷಿಸುವದಕ್ಕೂ, ಭೂಮಿಗೆ ಭಾರಭೂತರೆನಿಸಿದ ಕೆಟ್ಟವರನ್ನು ಶಿಕ್ಷಿಸುವದಕ್ಕೂ, ವ್ರತಸಮೂಹವನ್ನು ನೋಡುವದಕ್ಕೂ, ಭೂಮಿಯಲ್ಲಿ ಅವತರಿಸಿದ್ಧೀಯೆ. ನೀನು ಶಿವನ ಅವತಾರವೂ ಲೋಕದಲ್ಲಿ ವ್ಯಾಪ್ತವಾದ ಕೀರ್ತಿಯುಳ್ಳವನೂಆಗಿದ್ಧೀಯೆ. ಕಿನ್ನರಬ್ರಹ್ಮಯ್ಯನನ್ನೂ, ಬಸವೇಶನನ್ನೂ, ಬದುಕಿಸುವದಕ್ಕಾಗಿ ನೀನು ಸದ್ಭಕ್ತಿಯಿಂದ ಇಲ್ಲಿಗೆ ಬಂದಿದ್ಧೀಯೆ. ಕಯ್ಯಲ್ಲಿರುವ ಕಂಕಣಕ್ಕೆ ಕನ್ನಡಿಯೇಕೆ? ನಿನ್ನಿಂದ ಹೇಳಲ್ಪಟ್ಟ ಒರಟಾದ ನ್ಯಾಯವಚನಗಳು ಕಿವಿಗಳಿಗೆ ಕಠೋರವಾಗಿ ತೋರಿದಾಗ್ಯು ಹಿತಕರಗಳಾಗಿಯೇ ಇರುವವು. ಪದಾರ್ಥಗನ್ನು ಬೇಯಿಸುವುದು ರುಚಿಯನುಂಟುಮಾಡುವದಕ್ಕೆ ಹೊರತು ಆ ಪದಾರ್ಥಗಳನ್ನು ಸಂಪೂರ್ಣವಾಗಿ ಸುಟ್ಟುಬಿಡುವದಕ್ಕೆ ಹ್ಯಾಗಲ್ಲವೋ? ಶಿವಭಕ್ತಿಯುಳ್ಳವರ ಶಿಕ್ಷೆಗಳು ಕೂಡ ಹಾಗೆಯೇ ಇರುವವು. ಬಟ್ಟೆಗಳನ್ನೂ ವಿಶೇಷವಾಗಿ ಕಲ್ಲಿನಲ್ಲಿ ಬಡಿಯುವುದು, ನೀರಿನಲ್ಲಿ ಜಾಲಾಡುವದು, ಗಟ್ಟಣೆಮಾಡುವದು, ಇವೆಲ್ಲವೂ ಬಟ್ಟೆಗಳನ್ನೂ ಬೆಳ್ಳಗೆ ಮಾಡುವದಕ್ಕೋಸ್ಕರವೇ ಹೊರತು, ಕೋಪಕ್ಕೋಸ್ಕರವೇ ಏನು ? ಬಸವೇಶನ ಪ್ರತಿಜ್ಞೆಯೆಂಬುವದು ನಿನ್ನ ಶಿಕ್ಷೆಯಿಂದಲೇ ಆಯಿತು. ಈಗ ದೋಷವನ್ನು ಬಿಟ್ಟು, ನಿನ್ನ ಕೀರ್ತಿಯೊಡನೆ ಪ್ರಕಾಶಿಸುವಂಥಾದ್ದಾಯಿತು. ಮತ್ತು ಪ್ರಮಥರ ಲೆಕ್ಕದ ಪಟ್ಟೆಯಲ್ಲಿ ಸೇರಿತು. ನಿಮ್ಮಿಬ್ಬರ ಮಾತುಗಳೆಂಬ ಅಮೃತದ ಮಥನದಿಂದ ಭೂಮಿಯಲ್ಲಿರುವ ವೀರಮಾಹೇಶ್ವರರ ಮತ್ತು ಭಕ್ತರ ಶಿವಾನಂದವೆಂಬ ಕಲ್ಪಲತೆಯು ಮೊಳೆತು, ಚಿಗುರಿ ಮೊಗ್ಗೆಗಳನ್ನೂ ಹೂವುಗಳನ್ನೂ ಹಣ್ಣುಗಳನ್ನೂ ಬಿಟ್ಟಿತು. ಎಂದು ಹೊಗಳಿದರು.

ಈ ಪ್ರಕಾರವಾಗಿ ಭಕ್ತರು ಮಾಚಯ್ಯನನ್ನು ಸ್ತುತಿಸಿ, ಅನಂತರದಲ್ಲಿ ಬಸವೇಶ್ವರನನ್ನು ತಮ್ಮ ಕೃಪೆಯಿಂದ ಕೂಡಿದ ಕಡೆ ಗಣ್ಣೋಟವೆಂಬ ಅಮೃತಸಮುದ್ರದಲ್ಲಿ ಮುಳುಗಿಸಿದರು. ಪೂರ್ವದಲ್ಲಿ ನಡೆದ ಈ ಸಂಗತಿಯನ್ನು ಹೇಳಿ ಬಸವೇಶನನ್ನು ನೋಡಿ, ಹೇಳಿದ್ದೇನಂದರೆ; ಪರಶಿವನು ಕಿನ್ನರಬ್ರಹ್ಮಯನನ್ನು ತನ್ನಲ್ಲಿ ಸೇರಿಸಿಕೊಳ್ಳುತ್ತಿರಲು; ಆಗ ನೀನು ಆತನೊಡನೆಯೇ ಹೋದೆ. ಮಾಚಿದೇವಯ್ಯನಕರುಣಾದೃಷ್ಟಿಯಿಂದ ತಿರಿಗಿ ದೇಹವನ್ನು ಪಡೆದೆ. ಅದೇನಾಶ್ಚರ್ಯವು? ಈಗ ಒಬ್ಬ ಜಂಗಮಮೂರ್ತಿಯು ಬಂದು ಹೋಗಲು; ಆತನೊಡನೆ ನಿನ್ನ ಪ್ರಾಣಗಳೂ ಹೊರಟುಹೋದವು. ಆತನು ಬರಲಾಗಿ ತಿರಿಗಿ ಬಂದವು. ಆ ನಿನ್ನಮಹಿಮೆಯನ್ನು

ಹ್ಯಾಗೆ ವರ್ಣಿಸಬಹುದು? ಶಿವಶಿವಾ. ಜಂಗಮದಿಂದ ಸ್ವೀಕರಿಸಲ್ಪಟ್ಟ ಪ್ರಾಣಗಳುಳ್ಳವನೇ! ಜಂಗಮದಿಂದ ಆಶ್ರೈಸಲ್ಪಟ್ಟ ಜೀವವುಳ್ಳವನೇ! ಜಂಗಮಕ್ಕೆ ಅಧೀನವಾದ ಪ್ರಾಣಗಳುಳ್ಳವನೇ! ಕರುಣಾನಿಧಿಯೇ! ಬಸವೇಶನೇ! ಹಣವನ್ನು ಕೊಡಬಹುದು? ಭೃತ್ಯಭಾವದಿಂದ ದೇಹವನ್ನು ಕೊಟ್ಟರೂ ಕೊಡಬಹುದು. ಮನಸ್ಸನ್ನು ಕೊಡುವದಕ್ಕೆ ಹ್ಯಾಗಾದೀತು? ಸ್ನೇಹಭಾವದಿಂದ ಮನಸ್ಸನ್ನು ಕೊಟ್ಟರೂ ಕೊಡಬಹುದು. ಪ್ರಾಣಗಳನ್ನು ಕೊಡುವದಕ್ಕೆ ಹ್ಯಾಗಾದೀತು? ವೀರಭಕ್ತಿಯಿಂದ ಒಂದುವೇಳೆ ಪ್ರಾಣಗಳನ್ನು ಕೊಟ್ಟರೂಕೊಡಬಹುದು. ತನ್ನಪ್ರಾಣಗಳನ್ನು ಜಂಗಮಪ್ರಾಣದಲ್ಲಿ ಸೇರಿಸುವದಕ್ಕೆ ಹ್ಯಾಗಾದೀತು? ತಂಗಲೂರಮಾರಯ್ಯ ಮೊದಲಾದ ಮಹಾತ್ಮರ ಮತ್ತು ನುಲಿಗೆಚಂದಯ್ಯನ ಪ್ರತಿಜ್ಞೆಯು ಪ್ರಸಿದ್ಧವಾಯಿತು.

ಬಸವೇಶವಿಜಯದಲ್ಲಿಇಪ್ಪತ್ತೆರಡನೇಅಧ್ಯಾಯವು
ಸಂಪೂರ್ಣವು

---

## ಇಪ್ಪತ್ಮೂರನೇ ಅಧ್ಯಾಯವು.

---

### ದಸರಯ್ಯನ ಕಥೆ

ಇದಲ್ಲದೆ ಕಲ್ಯಾಣಪಟ್ಟಣದಲ್ಲಿ ಮಂಗಳಕರವಾದ ಯಶಸ್ಸುಳ್ಳವನಾಗಿಯೂ, ಜಿತೇಂದ್ರಿಯನಾಗಿಯೂ, ಭಕ್ತಿಕಾರ್ಯಗಳ ಭಾರವಾಹಕನಾಗಿಯೂ, ಒಳ್ಳೇನಡತೆಗೆ ಆಶ್ರಯನಾಗಿಯೂ, ಪಾಪಕ್ಕೆ ದೂರನಾಗಿಯೂ, ಜನನಮರಣರೂಪವಾದ ಸಂಸಾರವನ್ನು ನಾಶಪಡಿಸಿಕೊಂಡವನಾಗಿಯೂ, ಅಹಿಂಸಕನಾಗಿಯೂ, ಪಾಪಕರ್ಮಗಳನ್ನು ತಿರಸ್ಕರಿಸಿದವನಾಗಿಯೂ, ಲೌಕಿಕರಾದ ಜನಗಳನ್ನು ತೃಣೀಕರಿಸಿದವನಾಗಿಯೂ, ಶಿವಶರಣರನ್ನು ಅಂಗೀಕರಿಸಿದವನಾಗಿಯೂ, ಭವರೋಗವನ್ನು ದೂರೀಕರಿಸಿದವನಾಗಿಯೂ, ಇರುವ ದಸರಯ್ಯನು ಅಂತರಿಂದ್ರಿಯನಿಗ್ರಹ, ಬಹಿರಿಂದ್ರಿಯನಿಗ್ರಹ, ದಾನ, ಪ್ರತಿಗ್ರಹ, ಯಮ, ನಿಯಮ, ಮುಂತಾದ, ಶಿವ

ಧರ್ಮಗಳು ನಿರಂತರದಲ್ಲಿಯೂ, ಪ್ರಕಾಶಿಸುತ್ತಿರಲಾಗಿ; ಗುರುಲಿಂಗಜಂಗಮಾರ್ಚನೆಯನ್ನು ಮಾಡಿಕೊಂಡು ಸುಖದಿಂದಿದ್ದನು. ಶಿವಜ್ಞಾನಸಮುದ್ರನಾದ ಆ ಮಹಾತ್ಮನು ಶಿವಪೂಜೆಗೋಸ್ಕರ ಪುಷ್ಪಗಳನ್ನು ತರುವದಕ್ಕಾಗಿ ಹೋಗಲುದ್ಯುಕ್ತನಾಗಿರುವಲ್ಲಿ, ದುಷ್ಪರೆಲ್ಲರೂ ನೋಡಿ;- ಈತನು ನಮ್ಮ ಪಟ್ಟಣದಲ್ಲಿ ಶಿವಭಕ್ತಿ ಮಹಿಮೆಯ ದೆಸೆಯಿಂದ ಪ್ರಸಿದ್ಧವಾದ ಹೆಸರುಳ್ಳವನಾಗಿಧ್ಧಾನೆ. ಇವನು ಕೋಪವನ್ನು ಜೈಸಿ, ಸಕಲಪ್ರಾಣಿಗಳಲ್ಲಿಯೂ ದಯಾಳುವಾದುದರಿಂದ ಭೂಮಿಯಲ್ಲಿ ಇವನೇ ಯೋಗ್ಯನಲ್ಲವೆ. ಸಮಸ್ತ ಮುನಿಗಳಲ್ಲಿಯೂ ಶ್ರೇಷ್ಠನೂ ಆಗಿದ್ದಾನಷ್ಟೆ. ಮತ್ತು ಈತನು ತನ್ನ ಸೌಖ್ಯವನ್ನು ನೋಡದೆ ಪ್ರಾಣಿಗಳ ಹಿತವನ್ನೇ ಬಯಸುತ್ತಾನಷ್ಟೆ. ಇತರರು ತನ್ನನ್ನು ಬಾಧಿಸಿದಾಗ್ಯೂ, ಯಾವಮಾತನ್ನೂ ಆಡದೆ, ಇದು ನ್ಯಾಯವೆಂದು ಬಹಳವಾಗಿ ಸೈರಿಸಿಕೊಳ್ಳತಕ್ಕ ಇವನು ಸಾಧುಗಳಿಂದಲೂ ಪೂಜ್ಯನಷ್ಟೆ; ನಾನು ನೋಡಿದರೆ ಇತರರ ಮನಸ್ಸುಗಳು ದುಃಖವನ್ನು ಹೊಂದುವವೆಂದು ಆಲೋಚಿಸಿದವನಾಗಿ ಇತರ ಜನವನ್ನು ಇವನು ನೋಡುವದಿಲ್ಲವಷ್ಟೆ. ಹೆಜ್ಜೆಗಳನಿಡುವಲ್ಲಿ ಪ್ರಾಣಿಗಳು ಸತ್ತಾವೆಂಬ ಬುದ್ಧಿಯಿಂದ ಪರೀಕ್ಷಿಸಿ, ಹೆಜ್ಜೆಗಳನ್ನಿಡುತ್ತಾನಷ್ಟೆ. ತೋಳುಗಳ ಘಾತದಿಂದ ಪ್ರಾಣಿಗಳು ಬಿದ್ದಾವೆಂಬ ಭಾವನೆಯಿಂದ ಈತನು ನಡೆಯುವ ಕಾಲದಲ್ಲಿ ತೋಳುಗಳನ್ನೇ ಬೀಸುವದಿಲ್ಲವಷ್ಟೆ. ಈ ಬಹಳ ಮಾತುಗಳಿಂದೇನು ? ಈ ದಸರಯ್ಯನು, ಹಿಂದೆ ಒಂದು ಕಾಲದಲ್ಲಿ ಶಿವಾರ್ಚನೆಗಾಗಿ ಹೂವುಗಳನ್ನು ಕೊಯ್ಯುತ್ತಿರುವಲ್ಲಿ ಹೂವಿನ ಗಿಡಗಳು ಈ ಕಾಡಿನಲ್ಲಿ ನಾವು ದುಃಖಪಡುವವರಾಗಿದ್ಧೇವೆ. ಎಂದು ಗಟ್ಟಿಯಾಗಿ ಹೇಳುತ್ತಿರಲು; ಬಳಿಕ ಹೂವುಗಳನ್ನು ಕಿತ್ತುಕಡೆಗಳಲ್ಲಿ ರಕ್ತದಂತಿರುವ ರಸವು ಸುರಿಯುತ್ತಿರಲು, ವೃಕ್ಷಗಳು ಹೀಗೆ ಹೇಳಿದವು ; ಇನ್ನು ಮೇಲೆ ಮರಗಳನ್ನು ಪೀಡಿಸುವದು ಹಿಂಸೆಯೆಂದಾಲೋಚಿಸಿಕೊಂಡು, ಗಾಳಿಯನ್ನು ತಡೆಯುವದಕ್ಕೋಸ್ಕರ ಮರದಸುತ್ತಲೂ ಚಾಪೆಯನ್ನು ಕಟ್ಟಿ, ನೆಲವನ್ನು ಸಾರಿಸಿ, ಒಂದೊಂದಾಗೆ ತನ್ನಷ್ಟಕ್ಕೆ ತಾನೇಜಾರಿ, ಭೂಮಿಯ ಮೇಲೆಬಿದ್ದ ಹೂವುಗಳನ್ನು ತೆಗೆದುಕೊಂಡು, ಶಿವನನ್ನು ಪೂಜಿಸಿದನು. ಆದುದರಿಂದ ವೃಕ್ಷವನ್ನೂ ಹಿಂಸಿಸದವನು ಧರ್ಮಾತ್ಮನಲ್ಲವೇ ? ಚನ್ನಾಗಿ ವಿಚಾರವಾಡಿದರೆ ; ಸಕಲ ಶಿವಭಕ್ತರ ನಡುವೆ ಇವನೇನು ಸಾಧಾರಣನೇ ? ಇವನ ಶಿವಭಕ್ತಿಯೆಂಥಾದ್ದು ? ಇವನ ನಂಬಿಕೆ ಯಾವ ವಿಧವಾದದ್ದು ? ಇವನ ಅಹಿಂಸಾಪರತ್ವವು ಯಾವ ರೀತಿಯಾದದ್ದು ? ಇವನ ಶಾಂತಿ ಪರಾಯಣ

ಮತ್ತೊಂದುಕಡೆಗೆ ಹೋಗದೆ, ಮನಸ್ಸಿನಲ್ಲಿ ಹೆದರದೆ, ಅಯ್ಯೋಶಿವನೇ! ಕಷ್ಟವು ಎಂಬುವದು ಮೊದಲಾದ ಮಾತುಗಳನ್ನು ಹೊರಡಿಸದೆ, ಕೋಪಗೊಳ್ಳದೆ, ನನ್ನ ತಲೆಯುಸೀಳಿಹೊಯಿತು, ಶಕ್ತಿಹೀನನಾಗಿಹೋದೆನು; ಎಂದು ಹೇಳದೆ;—ಶಿವ ಮೂರ್ತಿಯು ನನ್ನಲ್ಲಿರುವ ಅಪರಾಧವನ್ನು ಕಂಡು, ತನ್ನ ಕೈಯಿಂದಶಿಕ್ಷಿಸು ತ್ತಾನೋ? ವಿಲಾಸದಿಂದ ತಿರಿಗಿ ನನ್ನ ತಲೆಯಮೇಲೆ ಹೊಡೆಯುತ್ತಾನೋ? ಈ ಮಹಾಗುರುವು ಹಿಂದೆ ನನ್ನ ತಲೆಯಮೇಲೆ ಕೈಯಿಟ್ಟು, ಮುಂಚಿನ ಶರೀರ ವನ್ನುನಾಶಪಡಿಸಿದನು. ಈಗ ನನ್ನನ್ನು ಭಕ್ತಿಮಯವಾದ ದೇಹವುಳ್ಳವನನ್ನಾಗಿ ಮಾಡುವದಕ್ಕೋಸ್ಕರ ಹಸ್ತವನ್ನಿಟ್ಟನು. ಇದುನಿಶ್ಚಯವು. ಸ್ವಾಮಿ? ನನ್ನತ ಲೆಯುಬಹಳಒರಟು. ನಿಮ್ಮಕೈಗಳು ಬಹುಮೃದುವಾದವುಗಳು. ಹೀಗೆ ಬಡಿಯುವ ದರಿಂದ ಕ್ಲೇಶಪಡುತ್ತವೆ. ಈಗಏನುಮಾಡಲಿ? ಈತಲೆಯು ಉತ್ತಮಾಂಗವಾ ಗಿರುವದು ಸತ್ಯವೇ ಆಗಿದ್ದರೆ; ಈಮಹಾಸ್ವಾಮಿಯ ಕೈಗಳಿಗೆಮೆತ್ತಗೆತೋರ ಲಾರದೇ? ಈತಲೆಯು ಶಿವಭಕ್ತರಿಗೆ ಮಾತ್ರವೇಬಗ್ಗಿದಂಥಾದ್ದಾಗಿದ್ದರೆ ಈಸ್ವಾ ಮಿಯಕೈಗಳಿಗೆಭಾಧೆಯನ್ನು ಮಾಡದೆ ಇರಬೇಕಲ್ಲವೇ? ನನ್ನಶಿರಸ್ಸು ಇಂಥಾ ದ್ದೇಆಗಿದ್ದರೆ ನನ್ನಗುರುವಾದ ಈಮಾಹೇಶ್ವರನಕೈಗೆ ಮೃದುವಾಗಿತೋರುವದೇ ಹೊರತು ಕಠಿನವಾಗಿ ತೋರಲಾರದು. ಈಗ ನಾನು ಮಾತನಾಡಿದರೆ ಹೊಡೆ ಯುವದನ್ನು ಬಿಡುವನು. ಈತನಮನಸ್ಸಿಗೆವ್ಯಥೆ ಯಾಗುತ್ತದೆ. ಸುಮ್ಮಸಿದ್ದರೆ ಈತನ ಕೈಗಳು ಬಹಳವಾಗಿನೋಯುತ್ತವೆ. ಎಂದು ಚಿಂತಿಸುತ್ತಾ, ಖಿನ್ನನಾಗಿ, ವಿನಯದೊಡನೆ ಮರಳಿ ನಮಸ್ಕರಿಸಿ;-ಎಲೈಸ್ವಾಮಿ! ನನ್ನದೇಹದಲ್ಲಿ ಮೃದು ಸ್ಥಾನಗಳಿದ್ದಾಗ್ಯೂ ಅವುಗಳನ್ನು ಬಿಟ್ಟು, ಅತಿ ಕಠಿನವಾದ ತಲೇಬುರುಡೆಯನ್ನು ಬಡಿದು; ಕೋಮಲವಾದಕೈಗಳನ್ನು ಯಾಕೆನೋಯಿಸಿಕೊಳ್ಳುವೆ. ನನ್ನಕಠಿನ ವಾದ ತಲೆಯಸೋಂಕಿನಿಂದ ನಿನ್ನಹಸ್ತಗಳು ಎಷ್ಟು ಬಾಧೆಪಟ್ಟವೋ? ಎಂದು ಅವನ ಕೈಗಳನ್ನು ಮೆಲ್ಲಮೆಲ್ಲಗೆ ಬಹುಹಿತವಾಗುವಂತೆ ತನ್ನಕೈಯಿಂದ ಚನ್ನಾಗಿ ಮುಟ್ಟಿ ಮುಟ್ಟಿ, ಮರಳಿ ಮರಳಿ ಹಿಸಿಕಿ, ಮೆಲ್ಲನೆನೀವಿ ನೀವಿ ಎಳೆಯುತ್ತಿರಲು; ಮೋಟಾಗಿದ್ದ ಅವನುಎರಡುಕೈಗಳುಹುಟ್ಟಿ, ಚಿಗುರುಗಳಂತೆಮೊಳೆತು, ಪ್ರಕಾಶಿ ಸಿದವು. ಭೂಮಿಯಲ್ಲಿ ಶಿವಾಚಾರಕ್ಕೆ ಉತ್ತಮವಾದ ಎರಡು ಕೋಡುಗಳು ಹುಟ್ಟಿದಂತಾಯಿತು. ಶಿವಪೂಜೆಗೋಸ್ಕರ ಭಟ್ಟಬಾಣನಕೈಗಳು ಹುಟ್ಟಿದಹಾಗಾ ಯಿತು. ಮೊರಟದಬಂಕಯ್ಯನ ಮೋಟುಮರವು ಮೊಳೆತಹಾಗಾಯಿತು. ಭೂಮಿ

ಯಲ್ಲಿ ಆ ದಸರಯ್ಯನ ಶಿರಸ್ಸೆಂಬ ಅತ್ಯುತ್ತಮವಾದ ಕಾಮಧೇನುವು ಮೋಟಮಲ್ಲನ ಕೈಗಳೆಂಬ ಕರುಗಳನ್ನುಈದಿತು. ಇದು ಬಹು ಆಶ್ಚರ್ಯ. ಆ ದಸರಯ್ಯನ ಭಕ್ತಿಯೆಂಬ ಕೊಳದಲ್ಲಿ ಕೈಗಳೆಂಬ ಕಮಲಗಳು ಹುಟ್ಟಿದವೋ ಎಂಬ ಹಾಗಾಯಿತು. ಚನ್ನಯ್ಯನ ನಾಲಗೆಗೆ ಕೈಗಳು ಹುಟ್ಟಿದಹಾಗೆ ಆ ದಸರಯ್ಯನ ಮಹಿಮೆಯಿಂದಮೋಟಮಲ್ಲನ ಕೈಗಳು ಶೋಭಿಸಿದವು. ಸದ್ಭಕ್ತಿಯೆಂಬ ಕಲ್ಪವೃಕ್ಷವು ದಸರಯ್ಯನಿಂದ ಬೆಳಸಲ್ಪಡುತ್ತಿರಲಾಗಿ ; ಆದರ ಬೇರುಗಳು ಹರಡಿಕೊಂಡವೋ ಎಂಬಂತೆ ಕೈಬೆರಳುಗಳು ಕಾಣಿಸಿದವು. ಭಕ್ತಿಯೆಂಬ ಸ್ತ್ರೀಯ ಮುಖದರ್ಪಣಗಳೋ ಎಂಬಂತೆ ಉಗುರುಗಳು ತೋರಿದವು. ಮುಂಡಿಯುತನಕದೀರ್ಘವಾಗಿರುವ ಆತನ ಹಸ್ತಗಳು ದಸರಯ್ಯನ ಹಸ್ತಸಂಬಂಧಪ್ರಭಾವದಿಂದ ಪೂಜ್ಯವಾದ ಶಿವಾಗಮದಂತೆ ಯಾವಾಗಲೂ ಸನ್ಮಾರ್ಗವನ್ನು ತೋರಿಸುವವುಗಳೂ, ಶಿವಪೂಜೆಯಫಲದಂತೆ ಅಪರಿಮಿತವಾದ ಪುಣ್ಯದಿಂದ ಕೂಡಿದವುಗಳೂ, ಭಸ್ಮ ತ್ರಿಪುಂಡ್ರದಂತೆ ವಿಧಿಯದುರ್ಲಿಪಿಯನ್ನು (ಕೆಟ್ಟ ಬರವಣಿಗೆಯನ್ನು) ಒರಸುವವುಗಳೂ, ಪರಮೇಶನ ಹಸ್ತಗಳಂತೆ ಅಭಯಪ್ರಾಧಾನಕ್ಕೋಸ್ಕರ ಎತ್ತಲ್ಪಡುವಂಥಾವುಗಳೂ, ಅತ್ಯುತ್ತಮವಾದ ಪಂಚಾಕ್ಷರೀಮಂತ್ರದಂತೆ ಸತ್ಪುರುಷರಿಗೆ ಆಸ್ರಯಗಳೂ, ಪರುಷದಂತೆ ಮುಂಚಿನ ಬಣವನ್ನು (ಜಾತಿಯನ್ನು) ಹೋಗಲಾಡಿಸುವದರಲ್ಲಿ ಸಮರ್ಥಗಳೂಶಿವನಾಗಯ್ಯನ ಕೈಗಳಂತೆಕ್ಷೀರಧಾರೆಯಿಂದ (ಮೋಕ್ಷಪರಂಪರೆಯಿಂದ) ಕೂಡಿದವುಗಳೂ ಕನ್ನಪ್ಪನ ಪಾದುಕೆಗಳಂತೆ ಶಿವನ ಶಿರೋಭೂಷಣಗಳೂ, ಆಗಿ ಮೆರೆದವು. ಹಾಗೆಯೇ ಆತನಕೊರಳಲ್ಲಿಧರಿಸಿದ್ದ ಬರೀಕರಡಿಗೆಯಲ್ಲಿಶಿವಲಿಂಗವು ಪ್ರಾದುರ್ಭವಿಸಿತೋರಿತು. ಆಗ ಆಜಂಗಮ ಭಾವವನ್ನು ಹೊಂದಿದ ಮೋಟಮಲ್ಲಯ್ಯನು ತನಗೆ ಭೀತಿ, ಸಂತೋಷ, ಆಶ್ಚರ್ಯಗಳು ವೃದ್ಧಿ ಹೊಂದುತ್ತಿರಲು ; ತನ್ನ ಕೈಗಳನ್ನು ಸುತ್ತಲೂ ನೋಡಿದವನಾಗಿ, ಲಿಂಗವನ್ನು ಮುಟ್ಟಿ ಮುಟ್ಟಿ ಸೋಡಿಕೊಂಡು ದಸರಯ್ಯನನ್ನೂ ತನ್ನ ಕೈಗಳನ್ನೂ, ಬಾರಿಬಾರಿಗೂ ನೋಡುತ್ತಾ, ಮುಖವನ್ನು ಬಗ್ಗಿಸುವವನಾಗಿ, ಕಾಲಿನಹೆಬ್ಬೆರಳಿನಿಂದ ನೆಲವನ್ನು ಒರೆಯುತ್ತಾ, ತಾನುಮಾಡಿದ ತಪ್ಪುಗಳನ್ನೆಲ್ಲಾ ನೆನೆದು, ದಸರಯ್ಯನ ಭಕ್ತಿಯಮಹಿಮೆಯನ್ನು ಕುರಿತು ಆಲೋಚಿಸುತ್ತಾ, ಪರಮಾನಂದದಿಂದ ತುಂಬಿದವನಾಗಿದ್ದನು. ದಸರಯ್ಯನು ಸಂಭ್ರಮದಿಂದ ಆತನ ಕೈಗಳನ್ನು ಎಳೆಯುವವನಾಗಿ, ಬೆರಳುಗಳಲ್ಲಿ ನೆಟ್ಟಿಗೆಗಳನ್ನುತೆಗೆದು, ಹಿತವಾಗುವಂತೆ ಹಿಸುಕಿದವ

ನಾಗಿ, ಆತನಿಗೆ ಅನೇಕಸಾರಿ ನಮಸ್ಕರಿಸುತ್ತಾ, ಭಕ್ತಿಯೆಂಬ ಐಶ್ವರ್ಯದಲ್ಲಿ ಅಸಮಾನನಾಗಿದ್ದನು ಅದಕ್ಕಿಂತಮುಂಚೆಯೇ ಶಿವಭಕ್ತರು ಆಸಂಗತಿಯನ್ನೆಲ್ಲಾ ಕೇಳಿ, ಕುತೂಹಲದಿಂದ ಬಂದುನಮಸ್ಕಾರವನ್ನುಮಾಡಿದವರಾಗಿ;—ಎಲೈ ಅಸದೃಶವಾದ ಮಹಿಮೆಯುಳ್ಳವನೇ! ನಿರಂತರದಲ್ಲಿಯೂ ಆತ್ಮವಿಚಾರದಲ್ಲಿನಿಷ್ಠೆಯುಳ್ಳವನೇ! ಬಸವನ ಪಾದಕಮಲ ಧ್ಯಾನದಿಂದುಂಟಾದ ಸಂತೋಷದಿಂದ ಪ್ರಕಾಶಿಸುವವನೇ! ದಸರಯ್ಯನೇ! ಈ ಆಶ್ಚರ್ಯವು ಈಗ ನನ್ನತಲೆಯಲ್ಲಿ ಹುಟ್ಟಿತು. ಈ ಭೂಮಂಡಲದಲ್ಲಿ ಇನ್ನೆಲ್ಲಿಯೂ ನಾವು ನೋಡಿಯೂ ಇಲ್ಲ, ಕೇಳಿಯೂ ಇಲ್ಲ. ಪೂರ್ವದಲ್ಲಿ ಬಸವೇಶನ ಭಾವನೆಯಿಂದ ಕದಿಯುವದಕ್ಕೆ ಬಂದ ಕಳ್ಳರು ವಸ್ತ್ರದಲ್ಲಿ ಕಟ್ಟಿಕೊಂಡಿದ್ದ ಬದನೇಕಾಯಿಗಳು ಬಾಣಲಿಂಗಗಳಾದಂತೆ ಭವಿಯಾಗಿಯೂ, ಅಂಗಹೀನನಾಗಿಯೂ, ಧೂರ್ತನಾಗಿಯೂ, ಇದ್ದವನು ನಿನ್ನ ಭಾವನೆಯಿಂದ ಶಿವಸ್ವರೂಪನಾದನು. ಮೋಟನಿಗೆ ನಿನ್ನ ಬಾಹುದಂಡಗಳ ಸಂಬಂಧದಿಂದ ಎರಡು ಕೈಗಳು ಬಂದವು. ಲೋಕದಲ್ಲಿ ಇದಕಿಂತಲೂ ಬೇರೆ ಆಶ್ಚರ್ಯವೇನು? ಪುಣ್ಯಾತ್ಮನಾದ ಲಿಂಗಯುಕ್ತನಾದ ಈತನ ಕಯ್ಯಸಂಬಂಧದಿಂದ ನಿನ್ನ ತಲೆಯು ಶಿವನ ತಲೆಯಾಯಿತು. ಅದರಿಂದ ಶ್ರೇಷ್ಠವಾದದ್ದೂ ಆಯಿತು. ಅದನ್ನು ಈಗಸ್ಪಷ್ಟವಾಗಿ ಹೇಳುತ್ತೇವೆ. ಅಲ್ಲಲ್ಲಿ ಎದ್ದಿರುವ ಬೋರೆಗಳಿಂದಲೂ, ಗಾಯಗಳಿಂದಲೂ, ಕಿತ್ತುಹೋದ ಚರ್ಮಪ್ರದೇಶಗಳಿಂದಲೂ, ಅನೇಕತಗ್ಗುಗಳಿಂದಲೂ, ಅಲಂಕರಿಸಲ್ಪಟ್ಟ ನಿನ್ನ ಮಸ್ತಕವು, ಸಾಂಖ್ಯತೊಂಡಿಯು ಎಸೆದ ಬಿರುಕಲ್ಲುಗಳ ಪೆಟ್ಟುಗಳಿಂದಾದ ಬೋಗೆಗಳುಳ್ಳದ್ದಾಯೂ, ಪಿಟ್ಟವ್ವೆಗೋಸ್ಕರ ಮಾಡತಕ್ಕ ಬಿಟ್ಟಿಯಲ್ಲಿ ಜೋಳನಕಟ್ಟಿಗೆಮಣ್ಣು ಹೊರುವಲ್ಲಿ ಕಠಿಸವಾದ ಬಿದಿರುಮಂಕರಿಯ ಘರ್ಷಣೆಯಿಂದುಂಟಾದ ಗಂಟುಗಳುಳ್ಳದ್ದಾಗಿಯೂ ಕನ್ನಪ್ಪನಪಾದುಕೆಯಸೋಂಕಿನಿಂದ ಸಂಭವಿಸಿದ ಗಾಯಗಳಸಮೂಹವುಳ್ಳದ್ದಾಗಿಯೂ ತಾನೇಸಿಂಧಮನಾಗಿ, ಪೆಟ್ಟುಗಳನ್ನನುಭವಿಸುವಸಮಯದಲ್ಲಿ ಉತ್ಪನ್ನವಾದ ಅನೇಕವ್ರಣಗಳುಳ್ಳದ್ದಾಗಿಯೂ ಕೆಂಬಾವಿಭೋಗಯ್ಯನಹಿಂದೆ ಉರುಳಿಕೊಂಡುಉರುಳಿಕೊಂಡುಹೋಗುವಲ್ಲಿ ನೆಲಕ್ಕೆ ತಗಲಿದ್ದರಿಂದ ಕಿತ್ತುಹೋದ ಚರ್ಮದಲ್ಲಿ ಕಾಣಿಸುವ ಗಾಯಗಳುಳ್ಳದ್ದಾಯೂ ಚಿರುತೊಂಡನಸಹಾಯಕ್ಕಾಗಿ ಕಬ್ಬಿನಹೊರೆಯನ್ನು ಹೊರುವಕಾಲದಲ್ಲಿ ಇಳಿದಿದ್ದ ತಗ್ಗುಗಳುಳ್ಳದ್ದಾಗಿಯೂಶೋಭಿಸಿದ ಶಿವನಮಸ್ತಕದಂತೆ ಶೋಭಿಸುವದು.

ಲೋಕದಲ್ಲಿ ನಿನ್ನ ತಲೆಯೇ ಶಿವನತಲೆಯು. ಎಲೈ ದಸರಯ್ಯನೇ ತನ್ನ ಲೆಯೇ ತಲೆಯಾಗಿ ಯಾವನು ಬದುಕುತ್ತಾನೋ ಆ ಶಿವನ ತಲೆಯೇನಿನ್ನ ಲೆಯು ಬ್ರಹ್ಮ ವಿಷ್ಣುಮೊದಲಾದವರಲ್ಲಿ ಯಾವನು ದೊಡ್ಡತಲೆಯುಳ್ಳವನಾಗಿ ಬದುಕುತ್ತಾನೋ ಆ ಶಂಕರನತಲೆಯೇ ನಿನ್ನತಲೆಯು. ಸಹಸ್ರಶೀರ್ಷಾಃ ಪುರುಷಃ ಎಂದು ವೇದದಿಂದ ಸ್ತುತಿಸಲ್ಪಟ್ಟ ಯಾವನು ಅನೇಕ ಶಿರಸ್ಸುಗಳಿಂದ ಪ್ರಕಾಶಿಸುತ್ತಾನೋ ಆ ಸಾಂಬಮೂರ್ತಿಯ ತಲೆಯೇ ನಿನ್ನ ತಲೆಯು. ಯಾವನು ಸಕಲ ಪ್ರಪಂಚದಲ್ಲಿ ಒಂದೇ ತಲೆಯಿಂದ ಶೋಭಿಸುತ್ತಾನೋ ಆ ಪರಶಿವನ ತಲೆ ಯೇನಿತನ್ನತಲೆಯು. ತಲೆಯಿಲ್ಲದವನತಲೆಗೆ ನಿನ್ನತಲೆಯೇ ತಲೆ. ತಲೆಯುಳ್ಳವನ ತಲೆಯಮೇಲೆ ನಿನ್ನ ತಲೆಯೇ ತಲೆಯಾಗಿರುವದು. ಬ್ರಹ್ಮನಿಗೆನಾಲ್ಕು ತಲೆಗಳೂ, ರಾವಣನಿಗೆ ಹತ್ತುತಲೆಗಳೂ, ಕುಮಾರಸ್ವಾಮಿಗೆ ಆರುತಲೆಗಳೂ, ಆದಿಶೇಷನಿಗೆ ಸಾವಿರತಲೆಗಳೂ ಇವೆ, ಆ ತಲೆಗಳೆಲ್ಲವೂ ನಿನ್ನೊಂದು ತಲೆಗೆ ಸಮವಾಗುವವೇ? ಶಿವನ ತಲೆಯೊಂದೇ ನಿನ್ನತಲೆಗೆ ಸಮವು. ನೀನೇ ನಮಗೆ ಶಿವನೂ, ಗುರುವೂ, ಭಕ್ತನೂ; ಆಗಿದ್ಧಿಯೆ. ಇದಕ್ಕೆ ಸಂಶಯವಿಲ್ಲ. ಕರುಣಾನಿಧಿಯಾದ ಎಲೈ ದಸರೈ ಯ್ಯನೇ! ‹‹ ಯಾವಪುರುಷನು ಕ್ಷಮೆಯೆಂಬ ಕತ್ತಿಯಿಂದ ಕೋಪವೆಂಬ ಶತ್ರು ವನ್ನು ಕತ್ತರಿಸುವದಕ್ಕೆ ಸಮರ್ಥನಾಗುತ್ತಾನೋ ಆ ಪುರುಷನೇ ಶೂರನು, ಆತ ನೇಋಷಿಯು; ಆತನೇಜ್ಞಾನಿಯು; ಆತನೇ ಮಂತ್ರಜ್ಞನು ಎಂದು ಹೇಳುವ ಶೈವಸಿದ್ಧಾಂತದಅರ್ಥವು ನಿನ್ನಲ್ಲಿಇದೆ. ಇತರರಲ್ಲಿ ಇರುತ್ತದೆಯೇ? ಅಹಿಂಸಾಪರ ಮೋಧರ್ಮಃ ಎಂಬವಾಕ್ಯದ ಅರ್ಥವನ್ನು ತಿಳಿದವರಲ್ಲಿ ಶ್ರೇಷ್ಠನಾದವನೇ ಯಾವಪ್ರಾ ಣಿಯನ್ನಾದರೂ ಪ್ರಯತ್ನದಿಂದ ಹಿಂಸೆಪಡಿಸಬಾರದೆಂಬ ವಾಕ್ಯಾರ್ಥವು ನಿನ್ನಲ್ಲಿದೆ ಯೇಹೊರತುಪಾಪಿಗಳಾದ ಇತರರಲ್ಲಿ ಇದ್ದೀತೇ? ,, ಸಕಲಗುಣಗಳಿಂದಲೂ ಕೂಡಿ ದಯೋಗ್ಯನನ್ನು ಪೂಜಿಸುವದಕ್ಕಿಂತಲೂ, ಶಿವನಭಸ್ಮರುದ್ರಾಕ್ಷಾದಿ ಚಿಹ್ನೆಗಳನ್ನು ಪೂಜಿಸುವದೇವುತ್ತಮವು. ಆದ್ದರಿಂದ ಚರ್ಚಿಸದೆ, ಶಿವಾಜ್ಞೆಯಿಂದ ಶಿವಶಾಸನವ ನ್ನೇಪೂಜಿಸಬೇಕು. ಚರವೆಂದು, ಅಚರವೆಂದು ಲಿಂಗವು ಎರಡುವಿಧವು. ಶಿವಯೋ ಗಿಯೇ ಚರಲಿಂಗವು. ಶಿಲಾಮಯಾದಿಲಿಂಗವೇ ಅಚರಲಿಂಗವು,, ಹೀಗೆಂಬ ಆಗ ಮಾರ್ಥದ ನಡವಳಿಯು ನಿನ್ನಲ್ಲಿಯೇಹೊರತು ಇತರರಲ್ಲಿ ಕಾಣುವದಿಲ್ಲ. ಶಿವಭಕ್ತ ರಲ್ಲಿ ಆಶೆಯುಳ್ಳವನೇ ಶೈವಾಗಮಗಳಲ್ಲಿ ಹೇಳಿರುವಧರ್ಮಗಳನ್ನು ರಕ್ಷಿಸುವವನೇ! ಸಂತೋಷಕ್ಕೆ ಅನುಕೂಲವಾದ ಒಳ್ಳೇನಡತೆಯುಳ್ಳವನೇ? ಶಿವಭಕ್ತಿಗೆ ಆಧಾರ

ನಾದವನೇ! ಕಾಲನನ್ನು ಮೀರಿದವನೇ? ಕೆಟ್ಟಸಂಸಾರವ್ಯಾಪಾರಗಳನ್ನು ನಾಶಪ ಡಿಸಿದವನೇ! ಕರುಣಾನಿಧಿಯೇ! ಸದ್ಗುಣಾಶ್ರಯನೇ! ಪ್ರಣ್ಯಗಳಿಂದ ಪೂರ್ಣನಾ ದವನೇ! ಎಂದು ಕೊಂಡಾಡಿದರು. ಆಗ ಪಟ್ಟಣದ ಜನರೆಲ್ಲರೂ, ಭಕ್ತಿಯಿಂದ ಜಯ ಜಯ, ಎಂದು ಹೇಳಿಕೊಂಡು ಸಾಷ್ಟಾಂಗನಮಸ್ಕಾರವನ್ನು ಮಾಡಿದರು. ಪೂರ್ವದಲ್ಲಿ ದಸರಯ್ಯನಿಗೆ ಕೇಡನ್ನು ಮಾಡುವದಕ್ಕಾಗಿ ಅಂಗಹೀನನಿಗೆ ಕಪಟ ಲಾಂಛನಗಳನ್ನು ಧರಿಸಿಕಳುಹಿಸಿದ ಆ ದುರ್ಜನರು ಭಯದಿಂದ ಆಕ್ರಮಿಸಲ್ಪಟ್ಟ ಹೃದಯರಾಗಿ, ಸಾಷ್ಟಾಂಗನಮಸ್ಕಾರವನ್ನು ಮಾಡಿ;—ಎಲೈ ಮಹಾತ್ಮನೇ ನಾವು ಅನೇಕಾಪರಾಧಗಳಿಂದ ಭರಿತರಾಗಿರುವ ಮಲಿನ ಬುದ್ಧಿಗಳೂ ಪಾಪಿಗಳೂ, ಅಹಂಕಾರಿಗಳೂ, ಕಠಿನವಾದಮನಸ್ಸುಳ್ಳವರೂ, ಮೂಢರೂ, ದುಷ್ಕಾರ್ಯನಿರ ತರೂ, ದುರ್ಜನರೂ, ಭವಬದ್ಧರೂ, ಹಿಂಸೆಯಲ್ಲಿತತ್ಪರರೂ, ಸದಾಚಾರಕ್ಕೆದೂರ ರಾದವರೂ, ಪುಣ್ಯಹೀನರೂ, ಆಗಿದ್ದೇವೆ. ಗುಣಗಳಿಗೆ ಜನ್ಮಸ್ಥಾನನಾಗಿಯೂ ನಮ್ಮ ಸ್ವಾಮಿಯೂ, ಆಗಿರುವ ದಸರಯ್ಯನೇ! ನಿನ್ನ ಮಹಿಮೆಯನ್ನು ಶಿವನೊಬ್ಬ ನೇಬಲ್ಲನು. ಅಜ್ಞಾನದಿಂದತುಂಬಲ್ಪಟ್ಟ ಮನಸ್ಸುಳ್ಳವರು, ಅಹಂಕಾರಿಗಳು, ಆಗಿ ರುವನಾವೆತ್ತಬಲ್ಲೆವು. ತಾನು ನೀತಿಯನ್ನಾಲೋಚಿಸದೆ, ನಿನಗೆಇಂಥಾಅಪರಾದ ವನ್ನು ಮಾಡಿದ ಕೊಬ್ಬಿದವನು, ಅಂಗಹೀನನು, ಆದ ಈತನು ಕ್ಷಣಮಾತ್ರದಲ್ಲಿ ಕೈಗಳನ್ನು ಪಡೆದನು. ಬಹಳಮಾತಿನಿಂದೇನು? ನಿನಗೆ ಅಹಿತವನ್ನುಮಾಡುವದಕ್ಕೋ ಸ್ಕರ ಅವನನ್ನು ನಾವೇ ಕಳುಹಿಸಿದೆವು. ಅವನು ಕೃತಾರ್ಥನಾಗಲಿಲ್ಲವೇ? ಎಲೈಸ ರ್ವಜ್ಞನಾದ ದಯಾನಿಧಿಯೇ! ವಿದ್ವಾಂಸರಾದವರು ನೀಚಜನಸ್ನೇಹಕ್ಕಿಂತಲೂ ಸತ್ಪುರುಷನೊಡನೆ ದ್ವೇಷವು ಉತ್ತಮವೆಂದು ಹೇಳುತ್ತಾರೆ. ಆದಕಾರಣದಿಂದ ನಿನ್ನ ಮಹಿಮೆಯಮೇಲೆದೃಷ್ಟಿಯಿಟ್ಟು ನಮ್ಮನ್ನು ರಕ್ಷಿಸು. ಎಂದು ಹೇಳುತ್ತಾ, ಅಲ್ಲಿದ್ದ ಸರ್ವರೂ ಆಶ್ಚರ್ಯಗೊಂಡವರಾಗಿ;— ಶಿವ ಶಿವ ಇದಾಶ್ಚರ್ಯವಲ್ಲವೇ? ನಮ್ಮ ದಸರಿದೇವಯ್ಯನು ತನ್ನ ತಲೆಯನ್ನುಬಡಿದು ಮೋಟಿಮಲ್ಲನಿಗೆ ತಾನು ವ್ಯಥೆ ಗೊಂಡವನಾದರೂ, ಕೈಗಳನ್ನು ಕೊಟ್ಟನು. ನಮಸ್ಕರಿಸಿದ ನಮಗೆ ಏನೇನನ್ನು ಕೊ ಡಲಾರನು? ಎಂದು ಗಟ್ಟಿಯಾಗಿ ಹೊಗಳುತ್ತಿರಲು: ತಿರಿಗಿಸಂತೋಷದಿಂದ ನಮ ಸ್ಕರಿಸಿದರು. ಈಪ್ರಕಾರವಾಗಿ ಪರಮತಸ್ಥರು ಆಶ್ಚರ್ಯಪಟ್ಟವರಾಗಿ ನಮಸ್ಕರಿಸು ತ್ತಿರಲು; ಭಕ್ತರು ಪರಮಾನಂದವನ್ನು ಹೊಂದುತ್ತಿರಲು; ದಸರಿದೇವಯ್ಯನು ಆ ಮೋಟಮಲ್ಲನಿಗೆ ಕೈಗಳನ್ನು ಕೊಟ್ಟುಪ್ರಕಾಶಿಸಿದನು. * * *

ಬಸವೇಶವಿಜಯದಲ್ಲಿ ಇಪ್ಪತ್ತೊಂಭತ್ತನೇ ಅಧ್ಯಾಯವು
ಸಂಪೂರ್ಣವು.

## ಇಪ್ಪತ್ತನಾಲ್ಕನೇ ಅಧ್ಯಾಯವು.

---

### ಗುರುಭಕ್ತನ ಕಥೆ.

ಇದಲ್ಲದೆ ಗುರುವಿನ ಪಾದಕಮಲಕ್ಕೆ ಅಧೀನನೂ, ಗುರುಭಕ್ತಿಯೆಂಬ ಕ್ಷೀರಸಮುದ್ರಕ್ಕೆ ಚಂದ್ರನೂ,, ಗುರುವಿನಲ್ಲಿ ವಾತ್ಸಲ್ಯವುಳ್ಳವನೂ, ಗುರುಭಕ್ತಿಗೆ ಮೇರುಪರ್ವತವೂ, ಗುರುಭಕ್ತಿಗೆ ಕಲ್ಪವೃಕ್ಷವೂ, ಗುರುಭಕ್ತಿಗೆ ಕಾಮಧೇನುವೂ, ಅತ್ಯಂತಪರಿಶುದ್ಧನೂ, ಗುರುಭಕ್ತಯೆಂಬ ರಾಜ್ಯಪದವಿಯಲ್ಲಿ ಪಟ್ಟಾಭಿಷಿಕ್ತನೂ, ನಿರ್ಮಲವಾದ ಬುದ್ಧಿಯುಳ್ಳವನೂ, ಮಹತ್ತರವಾದ ಪ್ರಸಿದ್ಧಿಯುಳ್ಳವನೂ ಆದ ಗುರು ಭಕ್ತನೆಂಬ ಭಕ್ತನಿದ್ದನು.

ಆತನು;-(ಯೋಗುರುಸ್ಸಶಿವಃಪ್ರೋಕ್ತೋಯಶ್ಶಿವಸ್ಸಗುರುಸ್ಸ್ಮೃತಃ) ಅಂದರೆ-ಯಾವನು ಗುರುವೋ ಅವನೇ ಶಿವನು; ಯಾವನು ಶಿವನೊಗೆ ಅವನೇ ಗುರುವು; ಹೀಗೆಂಬವಚನದಿಂದಲೂ, (ನಾಸ್ತಿತತ್ವಂಗುರೋಃಪರಂ) ಅಂದರೆ ಗುರುವಿಗಿಂತಲೂ ಪರವಸ್ತುವಿಲ್ಲವೆಂಬ ಶ್ರುತಿಯಿಂದಲೂ, (ತ್ರಿಸಂಧ್ಯಾಸುಗುರೋಃಪೂಜಾ) ಅಂದರೆ-ತ್ರಿಕಾಲಗಳಲ್ಲಿಯೂ, ಗುರುಪೂಜೆಯಂಮಾಡಬೇಕೆಂಬ ವಚನದಿಂದಲೂ, ಸದ್ಗುರುವಿನಪಾದಧೂಳಿಯನ್ನು ತನ್ನ ತಲೆಗೆ ಅಲಂಕಾರವಂ ಹೂಡಿಕೊಳ್ಳುತ್ತಾ ಸಾಷ್ಟಾಂಗನಮಸ್ಕಾರವಂಮಾಡಿ, ಕೊಂಡಾಡಿ, ಗುರುಪಾದಗಳನ್ನು ತೊಳೆದು, ಆ ಪಾಪದೋಷದಿಂದ ಶಿರಸ್ಸನ್ನೂ ದೇಹವನ್ನೂ ವಿಧಿಪ್ರಕಾರವಾಗಿ ಮಾರ್ಜನ ಮಾಡಿಕೊಂಡು, ಮಡಿಬಟ್ಟೆಯಿಂದ ಪಾದಗಳನ್ನು ಮೆಲ್ಲಮೆಲ್ಲಗೆ ಒರಿಸಿ, ಗಂಧವನ್ನು ಹಚ್ಚಿ, ಪತ್ರಪುಷ್ಪಗಳಿಂದ ಅರ್ಚಿಸಿ, ಧೂಪ, ದೀಪಮೊದಲಾದ ಉಪಚಾರಗಳನ್ನು ಮಾಡಿ; ಕೈಗಳನ್ನು ಮುಗಿದು, ಭಕ್ತಿಯಿಂದ ನಮಸ್ಕರಿಸಿ, ಪುಷ್ಪಾಂಜಲಿಯನ್ನು ಕೊಟ್ಟು, ತಲೆಯಮೇಲೆ ಕೈಗಳನಿಟ್ಟುಕೊಂಡು, ಗುರುವನ್ನು ಅನೇಕಪ್ರಕಾರವಾಗಿ ಸ್ತುತಿಸುವವನಾಗಿ, ಅಡ್ಡಬಿದ್ದು; ಪ್ರದಕ್ಷಿಣವನ್ನು ಮಾಡಿ, ತಿರಿಗಿ ನಮಸ್ಕರಿಸಿ, ಹೀಗೆ ಆತನ ಸೇವೆಯನ್ನು ಮಾಡುತ್ತಾ ಜಾಗರೂಕನಾಗಿ ಗುರುಪಾದಭಕ್ತಿಯಿಂದಲೂ, ಗುರುಕಾರ್ಯದಲ್ಲಿ ಭಕ್ತಿಯಿಂದಲೂ, ಗುರುವಿನ ಕೈಂಕರ್ಯದಲ್ಲಿ ಆಸಕ್ತಿಯಿಂದಲೂ, ಅನ್ನಾಹಾರಮೊದಲಾದ ದೇಹಧರ್ಮಗಳನ್ನೂ ಮರೆತಿ

ರುವನು. ಇದು ಯುಕ್ತವೇಸರಿ. ಶಿವತತ್ವವು ಊಹಿಸುವದಕ್ಕೂ ಭೇಧಿಸುವದಕ್ಕೂ ಅಳೆಯುವದಕ್ಕೂ ಆಗದಂಥಾದ್ದೆಂತಲೂ, ರೋಗರಹಿತವಾದದ್ದು, ಪ್ರಮಾಣವನ್ನತಿಕ್ರಮಿಸಿರುವಂಥಾದ್ದು, ನಿರ್ಮಲವಾದ್ದು, ಸಂಚಾರವಿಲ್ಲದ್ದು, ಚಿಂತಿಸುವದಕ್ಕೆ ಶಕ್ಯವಲ್ಲದ್ದು, ಸಾಧಿಸುವದಕ್ಕೆ ಅಶಕ್ಯವಾದದ್ದು, ನಿರಾಧಾರವಾದದ್ದು, ನಾಶರಹಿತವಾದದ್ದು. ಎಂತಲೂ ತಿಳಿಯಬೇಕು. ಪರಮೇಶ್ವರನೂ, ಗೌರೀಪತಿಯೂ, ಹೋಲಿಕೆಯಿಲ್ಲದಮಹಿಮೆಯುಳ್ಳವನೂ, ಆದ ಆ ಶಿವನೇ ಭಕ್ತರನ್ನು ಅನುಗ್ರಹಿಸುವದಕ್ಕೋಸ್ಕರ ಗುರುರೂಪವನ್ನು ಧರಿಸಿ, ಜನನಮರಣಾತ್ಮಕವಾದ ಸಂಸಾರವೆಂಬ ಪಾಶಗಳನ್ನು ಸುಡುವದಕ್ಕೂ, ಭೂಮಿಯಲ್ಲಿರುವ ಮೋಕ್ಷಾಪೇಕ್ಷಿಗಳನ್ನು ಬೋಧಿಸುವದಕ್ಕೂ, ತಾನೇ ತನ್ನ ಸ್ವರೂಪವನ್ನು ಪ್ರಕಾಶಪಡಿಸವದಕ್ಕೂ, ಉದ್ಯುಕ್ತನಾದನು. ಆ ಶ್ರೀಗುರುವು ವಾಕ್ಕಿಗೂ, ಮನಸ್ಸಿಗೂ, ಅಗೋಚರನಾಗಿಯೂ, ವ್ಯಾಪಕನಾಗಿಯೂ, ಇರುವ ಶಿವನನ್ನು ಮನಸ್ಸಿಗೆತಂದು, ಸರ್ವಗತತ್ವ, ಮುಂತಾದಗುಣಗಳಿಂದಲೂ, ಕರಚರಣಾದ್ಯವಯವಗಳಿಂದಲೂ, ರಹಿತನನ್ನಾಗಿ ಮಾಡಿ, ಅನಂತರದಲ್ಲಿ ದಯೆಯಿಂದ ಶಿಷ್ಯನನ್ನು ಅಹಂಕಾರದಿಂದ ಬಿಡಲ್ಪಟ್ಟವನಾಗಿಮಾಡಿ, ಆ ಇಬ್ಬರನ್ನೂ ಸಂಸ್ಕರಿಸಿ, ತನ್ನ ಶಕ್ತಿಯಿಂದ ಮೂರ್ತಿಇಲ್ಲದ ಪರತತ್ವವನ್ನು ಲಿಂಗಮೂರ್ತಿಯಾಗಿರುವಂತೆ ತನ್ನ ಸಾಮರ್ಥ್ಯದಿಂದ ನಿಯಮಿಸಿ, ಆ ಶಿಷ್ಯನ ಹಸ್ತದಲ್ಲಿಸ್ಥಾಪಿಸಿ ಆ ಲಿಂಗವನ್ನೇ ಶಿಷ್ಯನಪ್ರಾಣದಲ್ಲಿಯೂ, ಆತ್ಮದಲ್ಲಿಯೂ, ನೆಲೆಗೊಳಿಸುತ್ತಾನೆ. ಈ ರೀತಿಯಾಗಿ ಪರಶಿವನು ಶಿಷ್ಯರೂಪದಿಂ ಪರಿಣಮಿಸುತ್ತಿರಲು; (ಯದರ್ಹದಕ್ಷಿಣಾನಾಸ್ತಿ ವಿನಾತ್ಮಾನಂಗುರೋಸ್ತತಃ|| ಶರೀರಮರ್ಥಂ ಪ್ರಾಣಾಂಶ್ಚಸದ್ಗುರುಭ್ಯೋನಿವೇದಯೇತ್) ಅಂದರೆ-‘‘ ಯಾವ ಕಾರಣದಿಂದ ಗುರುವಿಗೆ ದೇಹವು ಹೊರತು ಯೋಗ್ಯವಾದ ಬೇರೆ ದಕ್ಷಿಣೆಯೇ ಇಲ್ಲವೋ ಅದಕಾರಣದಿಂದ ಸದ್ಗುರುವಿಗೆ ದೇಹವನ್ನೂ ಧನವನ್ನೂ ಪ್ರಾಣವನ್ನೂ ಸಮರ್ಪಿಸಬೇಕು’’ ಹೀಗೆ ಪ್ರಮಾಣವಿರುವದರಿಂದ ಸಚ್ಛಿಷ್ಯನಾದವನು ತನ್ನ ತನುಮನೋಧನಗಳನ್ನು ಗುರುವಿಗೆ ಸಮರ್ಪಿಸಿ,ಲಿಂಗದಲ್ಲಿ ಸಾಮರಸ್ಯವನ್ನು, ಭಕ್ತಿಯನ್ನೂ, ಜಂಗಮಪ್ರಸಾದವನ್ನೂ ಸಂಪಾದಿಸಬೇಕು. ಈವೃತ್ತಿಯೇ ಲೋಕದಲ್ಲಿ ಗುರುಭಕ್ತಿಯೆಂಬ ಪ್ರಸಿದ್ಧವಾಗಿರುವದು. ಈಪ್ರಕಾರವಾಗಿ ಹೇಳಲ್ಪಟ್ಟ ನಡತೆಯುಳ್ಳವನು, ಶಿವಧರ್ಮಸಂಪಾದನಾರ್ಥವಾಗಿ ಪ್ರತಿಜ್ಞೆಯನ್ನು ಮಾಡಿ, ಗುರುವಿಗೂ, ಗುರುವಿನ ಪ್ರತಿಬಿಂಬಗಳೆನಿಸಿದ ಶಿವಯೋಗಿಗಳಿಗೂ, ಆ ಲಿಂಗಕ್ಕೂ, ಕ್ರಮವಾಗಿ

ತನುವನ್ನೂ, ಧನವನ್ನೂ, ಪ್ರಾಣಗಳನ್ನೂ, ಸಮರ್ಪಿಸದೆ ವಂಚಿಸಿದವನಾದರೆ; ಅವನಿಗೆ ಮೂಲಧನವು ಹೋಗುವಂತೆ ಲಿಂಗದಾರಣವ್ರತವು ನಷ್ಟವಾಗುವುದು. ಶರೀರವನ್ನು ವಂಚಿಸಿದವನಿಗೆ ಗುರುಪ್ರಸಾದವು ಯಾವರೀತಿಯಿಂದಲೂ ದೊರೆಯುವದಿಲ್ಲ. ಬ್ರಹ್ಮವಿಷ್ಣುರುದ್ರ ಸ್ವರೂಪನಾಗಿಯೂ, ಭಕ್ತಿಜ್ಞಾನ ವೈರಾಗ್ಯಗಳನ್ನು ತೋರಿಸುವವನಾಗಿಯೂ, ಆದಿಮೂರ್ತಿಯೂ ಆಗಿರುವ ಗುರುವಿಗೆ ತನುಮನೋಧನಗಳನ್ನು ಕೊಡದೆವಂಚಿಸಿದವನಿಗೆ ಶುದ್ಧ, ಸಿದ್ಧ, ಪ್ರಸಿದ್ಧವೆಂಬ ತ್ರಿವಿಧಪ್ರಸಾದವೆಲ್ಲಿಂದಬಂದೀತು? ಗುರುಭಕ್ತಿಯಮಹಿಮೆಯನ್ನು ಆಗುರುವೇಬಲ್ಲನು. ಮತ್ತೊಬ್ಬನರಿಯನು. ಉನ್ನತವಾದ ಗುರುವಿನಮಹಿಮೆಯು ಶಿವನಿಗೂಹೇಳುವದಕ್ಕೆ ಅಸದಳವು. ಗುರುಭಕ್ತಿಯು ಅನೇಕ ಪಾಪಗಳೆಂಬ ಮೇಘಗಳಿಗೆ ಜಂಝಾಮಾರುತವಾಗಿಯೂ, ಅಜ್ಞಾನವೆಂಬ ವೃಕ್ಷಕ್ಕೆ ಹರಿತವಾದ ಬಾಯುಳ್ಳಕೊಡಲಿಯಾಗಿಯೂ, ಸಂಸಾರವೆಂಬ ಆನೆಗೆ ಸಿಂಹವಾಗಿಯೂ, ಪ್ರಾರಬ್ಧಮೊದಲಾದ ಕರ್ಮಗಳೆಂಬ ಸಮುದ್ರಕ್ಕೆ ಬಡಬಾಗ್ನಿಯಾಗಿಯೂ, ದುಷ್ಟವಾದ ದುಃಖಸಮೂಹಕ್ಕೆ ಧೂಮಕೇತುವಾಗಿಯೂ, ಮೋಕ್ಷಕ್ಕೆಮುಖ್ಯಕಾರಣವಾಗಿಯೂ ಇದೆ. ಬಹಳಮಾತುಗಳಿಂದೇನು ? ಗುರು ಭಕ್ತಿಯುತಾನೇ ತಾಯಿಯೂ, ಸಹೋದರನೂ, ಆಗಿ ಚನ್ನಾಗಿ ಪೋಷಿಸುತ್ತದೆ. ಮತ್ತು ತಾನೇದಾನಿಯೂ, ಒಡೆಯನೂ, ಆಗಿ, ಯಾವಾಗಲೂರಕ್ಷಿಸುತ್ತದೆ. ವೈದ್ಯನಾಗಿ ರೋಗವನ್ನು ಪರಿಹರಿಸುತ್ತದೆ. ಪೂಜ್ಯನಾಗಿ ತಾನೇಉಪದೇಶಿಸುತ್ತದೆ. ಗುರುಭಕ್ತಿಯನ್ನುಬಿಟ್ಟಿರುವ ಶಿವ ಭಕ್ತಿಯು ನಿಷ್ಪ್ರಯೋಜನವು. ಗುರು ಭಕ್ತಿಯು ಶಿವಭಕ್ತಿಗೆಮೂಲವು ಮನೋರಥವು ಶಿವಭಕ್ತಿಯುಸಕಲಶಕ್ತಿಗಳಿಗೂ, ಎಲ್ಲಾ ಐಶ್ವರ್ಯಗಳಿಗೂ. ಸಾಲೋಕ್ಯಮೊದಲಾದ ಮುಕ್ತಿಗಳಿಗೂ, ಅಣಿಮಾದಿಸಿದ್ಧಿಗಳಿಗೂ, ಶಿವಭಕ್ತಿಗೂ, ಕಾರಣವು. ಇದು ಸತ್ಯವು. ಆದದ್ದರಿಂದಗುರುಭಕ್ತನು ಪ್ರಾಣ, ದೇಹ, ಧನ, ಇವುಗಳನ್ನು ಗುರುಪಾದಕ್ಕೆ ಸಮರ್ಪಿಸಿ, ಗುರುಸೇವೆಯಲ್ಲಿ ತತ್ಪರನಾಗಿ, ಗುರುಭಕ್ತರೆಲ್ಲರೂತನ್ನನ್ನು ಸ್ತುತಿಸುತ್ತಿರಲು , ಸಾತ್ವಿಕಭಕ್ತಿಯಿಂದ ಹಗಲಿರುಳೂ, ಗುರುವಿಗೆ ಬೇಕಾದಕೆಲಸವೇ ತನಗೆ ನಿತ್ಯ ಕರ್ಮವಾಗಿಯೂ, ಗುರುಮೂರ್ತಿಯ ಸ್ತೋತ್ರವೇ ಮಂತ್ರವಾಗಿಯೂ, ಗುರುಧ್ಯಾನವೇ ಅಧಿಕತಪಸ್ಸಾಗಿಯೂ, ಗುರುಪಾದಸ್ಮರಣೆಯೇ ಜಪವಾಗಿಯೂ, ಗುರುವಿಗೆವಶನಾಗಿರುವದೇವ್ರತವಾಗಿಯೂ, ಗುರುಮಾರ್ಗವನ್ನವಲಂಬಿಸುವದೇ ಮತವಾಗಿಯೂ, ಗುರುವಿನಪ್ಪಣೆಯೇ ನಿಯಮವಾಗಿ

ಯೂ, ಗುರುಪಾದ ಪೂಜೆಯೇ ಹೋಮವಾಗಿಯೂ, ಗುರುವಿಗೆ ದೇಹಸಮರ್ಪಣೆಯಂಮಾಡುವದೇ ದಾನವಾಗಿಯೂ; ಗುರುತತ್ವವಿಚಾರವೇ ಧ್ಯಾನವಾಗಿಯೂ, ಇರಲು; ಬಹುಸಂತೋಷಗೊಂಡವನಾಗಿದ್ದನು. ಒಂದಾನೊಂದುದಿನ ರಾತ್ರಿಯ ನಾಲ್ಕನೆಯ ಜಾವದಲ್ಲಿ ಎದ್ದು ಗುರುಪೂಜೆಗೆ ಹೂವುಗಳನ್ನು ತರುವದಕ್ಕಾಗಿ ಹೊರಟುಬರುವಲ್ಲಿ ತನ್ನಕಾಲಿಗೆ ಗುರುವಿನ ಪಾದುಕೆಗಳು ಸೋಕಲು; ಶಿವಶಿವಾ ಮಹಾಪಾಪವು ಸಂಭವಿಸಿತಲ್ಲಾ! "ಗುರುವಿಗೆ ಸಂಬಂದಪಟ್ಟ, ಪಾದುಕೆ, ಪೀಠಿ, ಹಾಸಿಕೆ ಮೊದಲಾದದ್ದನ್ನು ನಮಸ್ಕರಿಸಬೇಕು. ಯಾವಾಗಲೂ ಕಾಲಿನಿಂದಸೋಕಕೂಡದು,, ಎಂದು ಪ್ರಮಾಣವಚನವಿರುವದರಿಂದ ಗುರುದ್ರೋಹಕ್ಕಿಂತಲೂ ಬೇರೆಮಹಾಪಾಪವಾವುದಿರುವದು? ಬಹಳವಾಗಿ ಸಹಿಸಲಶಕ್ಯವಾದ ಈ ನನ್ನತಪ್ಪನ್ನು ನಾನು ಹ್ಯಾಗೆಸಹಿಸಲಿ? ಮುಂದೆಯಮನಿಂದಾಗುವ ಭಯಂಕರವಾದ ಶಿಕ್ಷೆಯನ್ನು ಸೈರಿಸಲಾರೆನು. ಆದ್ದರಿಂದ ನನ್ನ ಕಾಲುಗಳನ್ನು ತುಂಡುತುಂಡಾಗಿಕತ್ತರಿಸಿ, ರಕ್ತವನ್ನು ತುಪ್ಪವನ್ನಾಗಿಯೂ, ಮೂಳೆಗಳನ್ನು ಸಮಿತ್ತುಗಳನ್ನಾಗಿಯೂ ಮಾಡಿ, ಶಿವಾಗ್ನಿಯಲ್ಲಿ ಹೋಮಮಾಡುತ್ತೇನೆ. ಇದಕ್ಕೆ ಇದೇಕಾರ್ಯವೆಂದುನಿಶ್ಚೈಸಿ, ತನ್ನ ಎರಡುಕಾಲುಗಳನ್ನೂ ಕತ್ತರಿಸಿದನು. ಸಂಪೂರ್ಣಯಶಸ್ಸುಳ್ಳವನೂ, ಸದ್ಭಕ್ತಿಯುಕ್ತನೂ, ಆದಆಗಮರಗುಂಡದಮಲ್ಲಿಕಾರ್ಜುನನೆಂಬ ಆತನ ಗುರುವು, ತನ್ನಶಿಷ್ಯನವೃತ್ತಾಂತವನ್ನು ತಿಳಿದು ಶೀಘ್ರದಲ್ಲಿಬಂದನು. ಗುರುಭಕ್ತನು ಆತನನ್ನುನೋಡಿ, ತ್ವರೆಯಿಂದ ತನ್ನನ್ನುತಾನೇ ಮರೆತು, ಭೀತಿಯಿಂದ ಎದ್ದು, ನಮಸ್ಕರಿಸುವದಕ್ಕೆಉದ್ಯುಕ್ತನಾಗಲು; „ಆಕ್ಷಣವೇಪಾದಗಳೆರಡೂಬಂದವು. ಆಪಾದಗಳು ಗುರುವಿನಕರುಣಾಮೃತದ ಕೊಳದನಡುವಣಿಂದ ಹುಟ್ಟಿ ಅರಳಿದ ಕೆಂದಾವರೆಗಳೋ ಎಂಬಂತೆಯೂ, ಗುರುಭಕ್ತಿಗೆ ಪಾದಗಳುಮೂಡಿದವೋ ಎಂಬಂತೆಯೂ, ಕಾಣಿಸಿದವು. ಈರೀತಿಯಾಗಿ ಕಾಲುಗಳು ಹುಟ್ಟಲು, ಗುರುವಿಗೆ ಪ್ರೀತಿಯಿಂದನಮಸ್ಕರಿಸಿ, ಕೈಗಳನ್ನು ತಲೆಯಲ್ಲಿಟ್ಟುಕೊಂಡವನಾಗಿ ಗುರುವನ್ನು ಸ್ತುತಿಸುತ್ತಿರಲು ಗುಣಶಾಲಿಗಳೆಲ್ಲರೂ ನೋಡಿ;--- ಎಲೈಗುರುಭಕ್ತನೇ! ನಿನ್ನಗುರುಭಕ್ತಿಯಮಹಿಮೆಗೆ ಇದೇನಾಶ್ಚರ್ಯ? ಏನೂ ಆಶ್ಚರ್ಯವಲ್ಲ. ನೆನ್ನೆತಾನೇ ಈ ಕಥೆನಡೆಯಿತು. ಪುರಾತನವಲ್ಲ. ಗುರುಪಾದಕಮಲದಲ್ಲಿ ಅಧೀನವಾದ ಬುದ್ಧಿ ಯುಳ್ಳವನಾಗಿಯೂ, ಗುರುಸೇವೆಯೊಂದರಲ್ಲಿಯೇ ಆಸಕ್ತನಾಗಿಯೂಇರುವ ಈ ಗುರುಭಕ್ತನವಿಷಯದಲ್ಲಿ ನೆಲೆಗೊಂಡಿರುವ ಗುರು

ಕೃಪೆಯನ್ನು ನೋಡಿ, ಇತರಶಿಷ್ಯರೆಲ್ಲರೂ ಅಸೂಯೆಗೊಂಡಿರಲು; ಇವನ ಗುರುಭಕ್ತಿವ್ರತವನ್ನು ಗುರುವು ಅವರುಗಳಿಗೆತೋರಿಸ ಬೇಕೆಂದು ಉದ್ಯುಕ್ತನಾಗಿ ತನ್ನ ಮುಂದೆ ಹಾಸಿಗೆಯಿಂದಕೂಡಿದ ಒಂದುಮಂಚವನ್ನು ಹಾಕಿಸಿ, ಉಳಿದ ಶಿಷ್ಯರನ್ನು ಒಬ್ಬೊಬ್ಬನನ್ನಾಗಿ ಕರೆದು:—ನೀವು ಈ ಮಂಚದಮೇಲೆ ಕುಳಿತುಕೊಳ್ಳಿರೆಂದು ಹೇಳಿದನು, ಅದನ್ನು ಕೇಳಿ ಶಿಷ್ಯರು, ಒಬ್ಬರಿಗೊಬ್ಬರು:—ಇದೇನು ವಿಪರೀತವಾದಮಾತು? ಈ ಮಾತು ಭ್ರಾಂತಿಯಿಂದ ಹೇಳಲ್ಪಟ್ಟದ್ದಲ್ಲವೇ! ಗುರುವಿನ ಮುಂದೆ ಉನ್ನತವಾದ ಪೀಠಗಳಲ್ಲಿಯೂ, ಹಾಸಿಗೆಗಳಲ್ಲಿಯೂ, ಹ್ಯಾಗೆತಾನೆ ಕುಳಿತುಕೊಳ್ಳುವದಕ್ಕಾದೀತು? ಎಂದು ಅಪಹಾಸವನ್ನು ಮಾಡುತ್ತಿರಲು; ಗುರುವು ತನ್ನ ಪಾದವನ್ನು ಒತ್ತುತ್ತಿರುವ ಗುರುಭಕ್ತನನ್ನು ನೋಡಿ;—ನೀನು ಈ ಮಂಚವನ್ನು ಹತ್ತೆಂದು ಹೇಳಿದನು. ಆಗ ಗುರುಭಕ್ತನು, ಗುರುವಿನಾಜ್ಞೆಯನ್ನು ಮೀರಕೂಡದು, ಎಂಬ ವಚನವನ್ನೂ ‹‹ಗುರುವಿನಾಗ್ನೆಯನ್ನು ನಡಸುವದೇ ಒಳ್ಳೇನಡತೆ'' ಯೆಂಬ ವಾಕ್ಯವನ್ನೂ, ಪ್ರಾಣಾಧಾರವೆಂತಲೇ ನಿಶ್ಚಯಿಸಿ, ಗುರುಪಾದಗಳಿಗೆ ವಂದಿಸಿ, ಆ ಮಂಚವನ್ನೇರಿದನು. ಅನಂತರದಲ್ಲಿ ಶಿಷ್ಯರೆಲ್ಲರೂ ಕೋಪದಿಂದ ಕೆರಳಿದವರಾಗಿ ನೋಡಿರಿ, ಇವನು ಭಯವಿಲ್ಲದೆ ಗುರುವಿನ ಮುಂದೆ ಮಂಚದಮೇಲೆ ಹ್ಯಾಗೆ ಕುಳಿತಿದ್ದಾನೆ? ಮನಸ್ಸನ್ನು ತಿಳಿಯುವದಕ್ಕಾಗಿ ಗುರುಗಳು ಹೀಗೆ ಹೇಳಿದರೆ ಅದನ್ನು ಹ್ಯಾಗೆ ಮಾಡಬಹುದು? ಗುರುಗಳು ನಮಗೂ ಹೇಳಿದರು. ನಾವು ಕುಳಿತುಕೊಂಡೆವೇ? ನಮ್ಮಂಥಾ ಹಿರಿಯರುಕೂಡ ಹಿಂದೆ ಮುಂದು ನೋಡುತ್ತಿರುವಲ್ಲಿ ಈ ನೀಚನು ಮಂಚವನ್ನು ಹತ್ತಬಹುದೇ? ಆದಕಾರಣದಿಂದ ಸರ್ವಪ್ರಕಾರವಾಗಿಯೂ ಈ ಗುರುದ್ರೋಹಿಯನ್ನು ಕೊಲ್ಲಬೇಕು, ಎಂದು ಸಂಭ್ರಮದಿಂದ ಆತನನ್ನು ಹೊಡೆಯುವದಕ್ಕೆ ಉದ್ಯುಕ್ತರಾದ ಶಿಷ್ಯರನ್ನು ಗುರುವು ಕರೆದು:—ವಿಶಾಲವಾದ ಭಕ್ತಿಯಲ್ಲಿ ಜಾಗರೂಕನಾದ ಆ ಗುರುಭಕ್ತನನ್ನು ಇಳಿಯೆಂದು ಆಜ್ಞಾಪಿಸಿ,—ಮುಂದುಗಡೆಯಲ್ಲಿ ಒಂದು ಶೂಲವನ್ನು ನೆಡಿಸಿ, ಆ ಶಿಷ್ಯರನ್ನು ಕುರಿತು:—ಇವನು ಗುರುದ್ರೋಹಿಯು, ನೀಚನು ಇರಲಿ. ಶ್ರೇಷ್ಠರೂ ಒಳ್ಳೆಯವರೂ ಗುರಭಕ್ತರೂ ಆದ ನೀವು ಭಯವನ್ನುಬಿಟ್ಟು ಈ ತೀಕ್ಷ್ಣವಾದ ಶೂಲವನ್ನೇರಿರಿ. ನಿಮ್ಮ ಭಕ್ತಿಯನ್ನು ನೋಡುವೆನು. ಎನಲು ಶಿಷ್ಯರು ಮಂಚವನ್ನು ಹತ್ತಿರಿ, ಇಲ್ಲದಿದ್ದರೆ ಶೂಲವನ್ನೇರಿರಿ, ಎಂಬ ನಿಮ್ಮ ಮಾತನ್ನು ನಾವು ಹ್ಯಾಗೆ ನಡೆಸುವದಕ್ಕಾದೀತು? ಇಂಥಾ ಭಕ್ತಿಗೆ ನಾವು ಬಹಳವಾಗಿ

ಭಯಪಡುತ್ತೇವೆ. ಶೂಲಾರೋಹಣವಂ ಮಾಡುವದಕ್ಕೆ ಅವನಿಗೆ ಅಪ್ಪಣೆಮಾಡಿರಿ. ಮಂಚವನ್ನು ಹತ್ತುವಂತೆ ಶೂಲವನ್ನೂ ಹತ್ತುತ್ತಾನೆ ಎಂಬದಾಗಿ ಹೇಳಿದರು. ಗುರುವು ಸಂತೋಷದಿಂದ ಆ ಗುರುಭಕ್ತನನ್ನು ತನ್ನ ಕರುಣಾಕಟಾಕ್ಷವೆಂಬ ಅಮೃತ ಪ್ರವಾಹದಲ್ಲಿ ಮುಳುಗಿಸಿ, ತಾವು ಅಗಿಯುತ್ತಿರುವ ತಾಂಬೂಲ ಪ್ರಸಾದವನ್ನು ಕೊಡಲು, ಆತನು ಭಕ್ತಿಯಿಂದ ತೆಗೆದುಕೊಂಡು, ಆಸ್ವಾದಿಸಿ, ಮೈಗೆಲ್ಲಾ ಸವರಿಕೊಂಡನು. ಆನಂತರದಲ್ಲಿ ಗುರುವು ಬುದ್ಧಿಶಾಲಿಯಾದ ಗುರುಭಕ್ತನಿಗೆ ಆ ಶೂಲವನ್ನು ತೋರಿಸಲು; ಆತನು ಗುರುಪಾದಕ್ಕೆ ನಮಸ್ಕರಿಸಿ, ಹಿಂದೆ ಮಂಚವನ್ನು ಹತ್ತಿದಂತೆ ಸಂತೋಷದಿಂದ ಶೂಲವನ್ನೇರಿದನು. ತತ್‌ಕ್ಷಣವೇ ಆ ಶೂಲವು ಗುದದ್ವಾರದಲ್ಲಿಹೊಕ್ಕು ನೆತ್ತಿಯಲ್ಲಿ ಹೊರಟತು. ಆಗ ಅವನು ಸದ್ಗುರುಗುರುಗಳಿಗೆ ನಮಸ್ಕಾರವೆಂದು ಉಚ್ಚರಿಸುತ್ತಾ ಗುರಪಾದಕಮಲವನ್ನು ಧ್ಯಾನಿಸುತ್ತಾ, ಚಿಕ್ಕಮನೆಯಲ್ಲಿ ಕುಳಿತಹಾಗೆ ಕುಳಿತಿರಲು; ಗುರುವಿನಲ್ಲಿ ಆಸಕ್ತನಾಗಿಯೂ, ಗುರುವಿನ ಕರುಣಾರಸದಿಂದ ಸ್ನಾನಮಾಡಿಸಲ್ಪಟ್ಟು ಶೋಭಿಸುವನಾಗಿಯೂ, ಗುರುವಿನಾಜ್ಞೆಯಲ್ಲಿ ಜೀವವನ್ನಿಟ್ಟಿರುವವನಾಗಿಯೂ, ಗುರುವಾಕ್ಯವನ್ನು ನಂಬುವವನಾಗಿಯೂ, ಗುರುವಿನ ಅಭಿಪ್ರಾಯವನ್ನು ನಡಸುವವನಾಗಿಯೂ, ಪಾಪರಹಿತನಾಗಿಯೂ, ಗುಣಗಳನ್ನು ಮರತವನಾಗಿಯೂ, ಶಿರಸ್ಸಿನ ಮೇಲೆ ಎರಡು ಕೈಗಳನ್ನು ಜೋಡಿಸಿ ಮಡಗಿಕೊಂಡವನಾಗಿಯೂ, ಶ್ರೇಷ್ಠನಾಗಿಯೂ, ಲೌಕಿಕಜನಕ್ಕೆ ಭಯಂಕರನಾಗಿಯೂ, ಗುಣಾಶ್ರಯನಾಗಿಯೂ, ಜ್ಞಾನಾನಂದಪ್ರಕಾಶಕ್ಕೆ ಆಸ್ಪದನಾಗಿಯೂ, ಅಲ್ಲಾಡದವನಾಗಿಯೂ, ಭೀಕರವಾದ ಸಂಸಾರವನ್ನು ಜಯಿಸಿದವನಾಗಿಯೂ, ಶ್ರೀಕರನಾಗಿಯೂ, ಸದಾಚಾರಸಂಪನ್ನನಾಗಿಯೂ. ಶೂಲಾಗ್ರದಲ್ಲಿ ಅನಾಯಾಸದಿಂದ ಕುಳಿತಿರುವವನಾಗಿಯೂ, ಹೃದಯದಲ್ಲಿ ಶಿವಮೂರ್ತಿಯನ್ನು ಧರಿಸಿರುವವನಾಗಿಯೂ, ದುಃಖರಹಿತನಾಗಿಯೂದುಷ್ಟರಿಗೆ ಶಿರಶ್ಶೂಲನಾಗಿಯೂ ಇರುವ ಗುರುಭಕ್ತನನ್ನು ಅಮರಗುಂಡದಪಂಡಿತರು ನೋಡಿ, ಅವನ ಭಕ್ತಿಯನ್ನು ಕೊಂಡಾಡಿ, ಶಿಷ್ಯರ ಸಂಘವನ್ನು ಕುರಿತು:—ಈ ಗುರುಭಕ್ತನ ಸದ್ಭಕ್ತಿಗೂ, ಇವನ ದೃಢಭಾವಕ್ಕೂ, ಇವನ ನಡತೆಗೂ ನೀವು ಹ್ಯಾಗೆ ಅಸೂಯೆಪಟ್ಟಿರಿ? ಭಾರತ, ರಾಮಾಯಣಾದಿ ಇತಿಹಾಸಗಳಲ್ಲಿ ಹೊಸಬರಾದ ಹಳಬರಾದ ಭಕ್ತರೊಳಗೆ ಈ ವಿದವಾದ ಭಕ್ತಿಯನ್ನು ಕಂಡಿದ್ದೀರಾ! ನಾವೇ ಭಕ್ತರೆಂದು ಯಾವಾಗಲೂ ಹಿಗ್ಗುತ್ತೀರಿ. ನೀವು ನನ್ನ

ಕ್ಷಮೆಗೆ ಪಾತ್ರರು. ಈತನು ನನ್ನ ಕೃಪೆಗೆ ಗಾತ್ರನು, ಯಾವಾಗಲೂ ನನ್ನ ಆಜ್ಞೆಯೇ ಇವನ ಪ್ರಾಣಮಾರ್ಗವು. ನಿಮಗಾದರೋ ಆ ನನ್ನ ಆಜ್ಞೆಯು ಅಪ ಹಾಸ್ಯಕ್ಕೆ ಗುರಿಯಾದದ್ದು. ನೀವು ನಿಮ್ಮ ಇಚ್ಛೆಯಲ್ಲಿ ನಡೆಯುವವರು. ಇವನು ನನ್ನ ಇಚ್ಛೆಯಲ್ಲಿ ನಡೆಯುತಕ್ಕವನು. ಇವನಿಗೂ ನಿಮಗೂ ಮೇರುಪರ್ವತಕ್ಕೂ, ಪರಮಾಣುವಿಗೂ ಇರುವಷ್ಟು ಭೇದವಿದೆ? ನನ್ನವಾಕ್ಯದಲ್ಲಿ ನಂಬುಗೆಯುಳ್ಳ ಈ ನನ್ನ ಶಿಷ್ಯನು ಮುಂಚೆತವಾಗಿ ಅದು ಉನ್ನತವಾದ ಮಂಚವೆಂತಲೂ, ಈಗ ಇದು ತೀಕ್ಷ್ಣವಾದ ಶೂಲವೆಂತಲೂ, ಆಲೋಚಿಸಲಿಲ್ಲ. ಸರ್ವರೂ ಚೆನ್ನಾಗಿ ನೋಡಿರಿ, ಎಂದು ಆ ಗುರುಭಕ್ತನ ವಿಷಯದಲ್ಲಿ ಕರುಣಾಶಾಲಿಯಾಗಿ ಎಲೈ ಗುರುಭಕ್ತನೇ ನಿನ್ನ ಉನ್ನತವಾದ ಭಕ್ತಿಯು ನಿರರ್ಗಳವಾದದ್ದು, ಮತ್ತು ಪುರಾ ತನಂಗಳಪ್ರಮಥರ ಮತ್ತು ಪರಶಿವನಮಾರ್ಗವನ್ನು ಸೇರಿತು. ಎಲೈ ಮಗನೇ ಶೀಘ್ರದಲ್ಲಿ ಇಳಿದುಬಾ, ಎಂದು ಗುರುವು ಸಂತೋಷದಿಂದ ಹೇಳಲು ಗುರುಭಕ್ತನು ಶೂಲದ ಹಲಿಗೆಯನ್ನು ಬಡಿದು, ಅದರಮೇಲೆ ತನ್ನ ಎರಡು ಕೈಗಳನ್ನೂರಿ, ವೇಗದಿಂದಹಾರಿ, ಭೂಮಿಗೆ ಧುಮುಕಿ, ಗುರುವಿನ ಪಾದಗ ಳಿಗೆ ನಮಸ್ಕರಿಸಿದನು. ಆಗ ಗುರುವು ಗುರುಭಕ್ತನ ಕೈಗಳನ್ನು ಹಿಡಿದು, ಎಳಿಸಿ, ಆಲಿಂಗಿಸಿಕೊಂಡು, ತನ್ನ ಕರುಣಾಮೃತ ಸಮುದ್ರದಲ್ಲಿ ಗುಣಾಢ್ಯನಾದ ಗುರು ಭಕ್ತನನ್ನು ಮುಳುಗಿಸಿದನು. ಶೂಲದಲ್ಲಿ ನಾಟಿದಾಗ್ಯೂ ಗಾಯವಿಲ್ಲದೆ ಗಂಟು ಗಳಿಲ್ಲದೆ ರಂಧ್ರವಿಲ್ಲದೆ ಬೇರೆಬಣ್ಣವಾಗದೆ, ರಕ್ತಮಾಂಸಗಳು ಕಾಣದೆ, ಊದಿ ಕೊಳ್ಳದೆ, ಮುಂಚಿನಂತಿರುವದರಿಂದ ಪ್ರತ್ಯಕ್ಷವಾದ ನಂಬಿಕೆಯನ್ನುಂಟುಮಾ ಡುವ ಆ ಗುರುಭಕ್ತನ ದೇಹವನ್ನು ಉಳಿದ ಶಿಷ್ಯರೆಲ್ಲರೂ ನೋಡಿ, ಅತ್ಯಂತಾ ಶ್ಚರ್ಯಗೊಂಡವರಾಗಿ, ತಮ್ಮ ತಮ್ಮ ಗರ್ವವನ್ನು ಬಿಟ್ಟು ಪ್ರೀತಿಯಿಂದ ಆತನನ್ನು ಕೊಂಡಾಡಿದರು. ಎಲೈ ಸಂಸಾರಪಾಶದಿಂದ ಬಿಡಲ್ಪಟ್ಟವನೇ! ಉತ್ತಮವಾದ ಯಶಸ್ಸಿನಿಂದ ಅಲಂಕರಿಸಲ್ಪಟ್ಟವನೇ; ಗುರುವಿನ ಪಾದಕಮಲದಲ್ಲಿ ಭಕ್ತಿಯು ಳ್ಳವನೇ! ಸದ್ಗುಣಗಳಿಂದ ಪ್ರಸಿದ್ಧನಾದವನೇ; ಗುರುಕಾರ್ಯವನ್ನು ನಿರ್ವ ಹಿಸುವ ವಿದ್ಯದಲ್ಲಿ ಧುರೀಣನಾದವನೇ! ಸಕಲ ಭೂಮಂಡಲದಿಂದಲೂ ಸ್ತುತಿಸಲ್ಪಟ್ಟವನೇ! ಗುರುವಿಗೆ ಬೇಡವಾದ ಸಕಲ ಪಥಾರ್ಥಗಳನ್ನು ಪರಿತ್ಯಜಿಸಿದವನೇ! ಗುರುಸೇವೆಯಲ್ಲಿ ತತ್ಪರನಾದವನೆ! ಗುರುವಿನ ಮನಸ್ಸಿಗೆ ರುಚಿಸುವ ನಡತೆಯುಳ್ಳವನೇ! ನಿನ್ನ ಮಹಿಮೆಯನ್ನು ವರ್ಣಿಸುವದಕ್ಕೆ ಯಾ

ರಿಂದಲೂ ಆಗುವದಿಲ್ಲ. ನಿನ್ನ ಉತ್ತಮವಾದ ಗುರುಭಕ್ತಿಯು ಪ್ರತ್ಯಕ್ಷವಾದ ನಂಬಿಕೆಯನ್ನುಂಟುಮಾಡುವಂಥಾದ್ದು; ಈಶ್ವರನಿಂದಲೂ ಸ್ತುತಿಸುವದಕ್ಕೆ ಅಶಕ್ಯವಾದದ್ದು; ಅಜ್ಞಾನಿಗಳಾದ ನಮ್ಮಂಥಾವರಿಂದ ಸಾಧ್ಯವಾದೀತೇ? ಎಂಬದಾಗಿ ಎಲ್ಲರೂ ಕೊಂಡಾಡುತ್ತಿರಲು; ಗುರುಭಕ್ತನು ಪ್ರಕಾಶಿಸಿದನು.

ಬಸವೇಶವಿಜಯದಲ್ಲಿ ಇಪ್ಪತ್ನಾಲ್ಕನೇ ಅಧ್ಯಾಯವು
ಸಂಪೂರ್ಣವು

## ಇಪ್ಪತ್ತೈದನೇ ಅಧ್ಯಾಯವು.

### ಗುರುಭಕ್ತಾಂಡಾರಿಯ ಕಥೆಯು.

ಗುರುಭಕ್ತನಕಥೆಗೆ ಉದಾಹರಣೆಯಾಗಿಯೂ, ಬಹುಪ್ರಸಿದ್ಧವಾಗಿಯೂ, ಮನೋಹರವಾಗಿಯೂ, ಇರುವ ಮತ್ತೊಂದು ಕಥೆಯುಂಟು. ಅದರ ಕ್ರಮವು ಸಹ ಗುರುಭಕ್ತನ ಕಥೆಯಕ್ರಮವನ್ನೇ ಅನುಸರಿಸಿದೆ. ಹ್ಯಾಗಂದರೆ;--ಗುರುಭಕ್ತಿಯಿಂದಪ್ರಾಪ್ತವಾಗಿ ಪ್ರಕಾಶಿಸುತ್ತಿರುವ ಪುಣ್ಯದಿಂದ ಅತಿಶ್ರೇಷ್ಟನಾದಂಥ, ಗುರುಭಕ್ತಿಗೆ ಉತ್ತಮಾಶ್ರಯನಾದಂಥ, ಶ್ರೇಷ್ಟವಾದ ಗುರುಭಕ್ತಿಯ ಲಕ್ಷಣದಿಂದ ಕೂಡಿದಂಥ, ಗುರುಭಕ್ತಿಪೂರ್ವಕವಾಗಿ ಮಾಡಲ್ಪಡುವ ಕಾರ್ಯಸಂಪತ್ತುಳ್ಳಂಥ, ಗುರುಭಕ್ತಿಸಂರಕ್ಷಣೆಯಲ್ಲಿ ಆಸಕ್ತನಾದಂಥ, ಔದಾರ್ಯಾದಿ ಗುಣಗಳಿಂದಲಂಕೃತನಾದಂಥ, ಗುರುಭಕ್ತಿ, ಶಾಸ್ತ್ರಜ್ಞಾನಇವುಗಳಿಂದ ಕೂಡಿದಂಥ, ಬಹುಧರ್ಮಿಷ್ಠನಾದಂಥ, ಗುರುಭಕ್ತಿಎಂಬ ಪಾಶದಿಂದ ಕಟ್ಟಲ್ಪಟ್ಟಂಥ, ವ್ರತಗಳಿಂದಕೂಡಿದಂಥ, ಗುರುಭಕ್ತಿಎಂಬ ಜಲಧಾರೆಯಿಂದ ಅಭಿಷೇಕ್ತಿಸಲ್ಪಟ್ಟಂಥ, ಗುರುವಿನಲ್ಲಿ ವಾತ್ಸಲ್ಯಉಳ್ಳಂಥ ಗುರುಭಕ್ತಿಗೆ ಅಧೀನವಾದದೇಹವುಳ್ಳಂಥ, ಸತ್ಪುರುಷರನ್ನು ಪ್ರೀತಿಸುವಂಥ, ಯಾವಾಗಲೂ ಗುರುಭಕ್ತಿಯಲ್ಲಿ ಆಸಕ್ತವಾದ ನಡತೆಯುಳ್ಳವನೆಂದು ಪ್ರಸಿದ್ಧನಾದಂಥ, ಗುರುಭಕ್ತಾಂಡಾರಿಯೆಂಬ ನಾಮಧೇಯವುಳ್ಳ ಒಬ್ಬ ಭಕ್ತನಿದ್ದನು. ಆತನು ಒಂದಾನೊಂದು ದಿವಸ ತನ್ನ ಪಟ್ಟಣದ ಬೀದಿಯಲ್ಲಿ ಹೋ

ಗುತ್ತಾ, ದೇಹಕಾಂತಿಯಿಂದಕೂಡಿದವಳಾಗಿಯೂ, ಹೊಸದಾಗಿ ಅಲಂಕಾರಮಾ ಡಿಕೊಂಡಿರುವಳಾಗಿಯೂ, ತನ್ನ ಮನೆಯ ಅಂಗಳದಲ್ಲಿ ನಿಂತುಕೊಂಡವಳಾ ಗಿಯೂ ಇರುವ ಪ್ರೌಢಮತಿಯೆಂಬ ಒಬ್ಬಾಳೊಬ್ಬ ವೇಶ್ಯಾಸ್ತ್ರೀಯನ್ನು ನೋಡಿ ವಿಟರ ಮನಸ್ಸುಗಳನ್ನು ಭೇದಿಸುವದರಲ್ಲಿ ಸಮರ್ಥಗಳಾದ ಆಕೆಯ ನೇತ್ರಗಳ ಕಾಂತಿಗಳನ್ನು ಕಂಡು, ಇವೇನು ? ಈಕೆಯಕಡೆಗಣ್ಣಕಾಂತಿಗಳೋ ? ಕ್ರೂರ ವಾದ ಅಂಕುಶಗಳೋ ? ಬಿಗಿಯುವ ಹಗ್ಗಗಳೋ ? ಮಿಂಚುಗಳಸಮೂಹಗಳೋ? ಮನ್ಮಥನದೀಪಗಳೋ ಮೋಹಪಾಶಗಳೋ? ಕಾಮಬಾಣಗಳೋ? ವಿಟರೆಂಬಆನೆ ಗಳನ್ನು ಕಟ್ಟುವಕಂಭಗಳೋ ? ಅಥವಾ ವಿಟರೆಂಬ ಮೃಗಗಳನ್ನು ಹಿಡಿಯುವ ಬಲೆಗಳೋ? ಎಂದು ವರ್ಣಿಸುವವನಾಗಿ ಆಹಾ ! ಆಕೆಯಕಡೆಗಣ್ಣನೋಟವು ಬಿದ್ದಮಾತ್ರದಿಂದ ಸ್ತಬ್ಧವಾದ ಗಮನವುಳ್ಳವನಾಗಿ ಆಹಾ ! ನಾನು ಈ ಸ್ತ್ರೀಯ ಕಡೆಗಣ್ಣನೋಟವೆಂಬ ಮನ್ಮಥನಬಾಣಗಳಿಗೆ ಗುರಿಯಾದನಲ್ಲಾ ! ಇವುಗಳನ್ನು ಬಿಟ್ಟು ಹೋಗುವದಕ್ಕೆ ಸಮರ್ಥನಾಗಲಾರೆನಲ್ಲಾ! ಏನುಮಾಡಲಿ! ಧೈರ್ಯವನ್ನು ಬಿಡಕೂಡದು; ಹೆಂಗಸಿಗೆ ಅವಕಾಶವನ್ನೂ ಕೊಡಕೂಡದು; ಎಂದು ತನ್ನಮನ ಸ್ಸಿನಲ್ಲಿ ತಾನೇ ವ್ಯಾಕುಲತೆಯಿಂದಾಲೋಚಿಸಿ, ದೋಷವೇನು ? ಈ ಹೆಂಗಸೂ ಕೂಡ, ಶಿವಭಕ್ತಿಯಲ್ಲಿ ಆಸಕ್ತಳು “ ನಡೆಯುವಲ್ಲಿ, ನಿಲ್ಲುವಲ್ಲಿ, ಮಲಗಿರುವಲ್ಲಿ, ಎಚ್ಚರವಾಗಿರುವಲ್ಲಿ, ಕೂಟದಲ್ಲಿ, ಕ್ರೀಡೆಯಲ್ಲಿ, ಯಾವನು ಶಿವನಿಗೆಮನಸ್ಸನ್ನು ಸಮರ್ಪಿಸಿರುತ್ತಾನೋ, ಅವನೇಭಕ್ತನು; ಬೇರೆವಿಧವಾಗಿರುವವನು, ಭಕ್ತನಲ್ಲವು ” ಎಂದು ಶಿವಪುರಾಣದಲ್ಲಿ ಸ್ಪಷ್ಟವಾಗಿಹೇಳಿ ಇದೆ. ಇದಲ್ಲದೆ ಇಂದ್ರಿಯಗಳ ಮುಖದಿಂದ ಬಂದಯಾವ ವಿಷಯಸುಖವುಂಟೋ ಅದನ್ನು ಶಿವನಿಗೆ ಸಮರ್ಪಿಸಿ, ಆಯಾಯಿಂದ್ರಿಯಮುಖದಿಂದ ಆಯಾಯಪ್ರಸಾದಗಳನ್ನು ಸ್ವೀಕರಿಸಬೇಕು ಎಂದು ಸೂತಸಂಹಿತೆಯಲ್ಲಿ ಸ್ಪಷ್ಟವಾಗಿಹೇಳಿದೆ. ಆಯಾಯಕಾಲದಲ್ಲಿ ಬಂದ ಸುಖಗಳನ್ನು ಇಂದ್ರಿಯಗಳಿಂದಮುಟ್ಟಲ್ಪಡದೇ ಇರತಕ್ಕದ್ದನ್ನಾಗಿಮಾಡಿ, ಯಾವನು ಈಶ್ವರನಿಗೆ ಸಮರ್ಪಿಸುತ್ತಾನೋ ಅವನು ಎಂದಿಗೂ ದುರ್ವಿಟನಾಗು ವದಿಲ್ಲ, ಆತನು ಚಿತ್ತೈಕಾಗ್ರ್ಯವೆಂಬ ಸಮಾಧಿಯೋಗದಿಂ ಕೂಡಿದ ಮುಮು ಕ್ಷುಗಳಿಗಿಂತಲೂ ಶ್ರೇಷ್ಠವೆನಿಸುವನು. ಭಕ್ತಿಮಾರ್ಗದಲ್ಲಿ ಇದೊಂದುಪಕ್ಷವೂ ಇದೆ. ನನಗೇನುಭಯವು; ಎಂದಾಲೋಚಿಸಿ, ಬಹಳಉತ್ಸಾಹದೊಡನೆ ತನ್ನ ಭೋಗಸಖನಕೈಯಲ್ಲಿ ತಕ್ಕಷ್ಟುದ್ರವ್ಯವನ್ನು ಕೊಟ್ಟು, ಆಕೆಯಮನೆಗೆಕಳುಹಿಸಿ

ದನು;-ಆ ವೇಶ್ಯಾಸ್ತ್ರೀಯು, ಆ ಭಕ್ತನನ್ನು ನೋಡಿ, ಇದು ಯೋಗ್ಯವಲ್ಲವೆಂದು ಹೇಳಿದ್ದನ್ನು ಕೇಳಿ, ಆತನು ಹಿಂದಿರುಗಿಬರಲು, ಗುರು ಭಕ್ತಾಂಡಾರಿಯು ತಿರಿಗಿ ಆತನನ್ನು ಬಲಾತ್ಕಾರದಿಂದ ಕಳುಹಿಸಿದನು. ಆಕೆಯು ನಮಗೆ ಇದು ಸರಿಬೀಳು ವದಿಲ್ಲವೆಂದು ಹೇಳಿ, ಆತನನ್ನು ತಿರಸ್ಕರಿಸಿ, ತಿರಿಗಿ ಗುರುಭಕ್ತಾಂಡಾರಿಯಿಂದ ಕಳುಹಿಸಲ್ಪಟ್ಟವರಾಗಿಬರಲು; ಆಕೆಯು ಆತನಿಗೆ ಹೇಳಿದ ಉತ್ತರವೇನೆಂದರೆ;— ನೀನು ಯಾತಕ್ಕೋಸ್ಕರ ಈಪ್ರಕಾರ ಎಡೆಯಾಡುತ್ತೀಯೆ; ಇದು ಚನ್ನಾಗಿಕಾ ಣುವದಿಲ್ಲ; ಹೊರಟುಹೋಗು ಎಂದು ಹೇಳಿ, ಆ ರಾಜನನ್ನು ಅಂಗೀಕರಿಸದೇ ಹೋದಳು. ಅನಂತರದಲ್ಲಿ ಆ ಗುರುಭಕ್ತಾಂಡಾರಿಯು ತಾನೇಬಂದು, ಆ ವಾರ ಸ್ತ್ರೀಯನ್ನು ನೋಡಿ, ಅನುರಾಗಪೂರ್ವಕವಾಗಿ ಒಳ್ಳೇಇಂಪಾದ ಮಾತಿನಿಂದಹೇಳಿ ದ್ದೇನಂದರೆ;-ಎಲೇ ಪಣಾಂಗನೆಯೇ? ನಾನು ಕಳುಹಿಸಿಕೊಟ್ಟ ದ್ರವ್ಯವನ್ನು ನೀನುತೆಗೆದುಕೊಳ್ಳುವದಿಲ್ಲವೆಂದು ಹೇಳಿದೆಯಷ್ಟೆ; ಭೂಲೋಕದಲ್ಲಿ ನನಗೆ ಸಮಾ ನರಾದ ವಿಟರು ಇದ್ದಾರೆಯೇ? ಈ ದ್ರವ್ಯವು ನನಗೆ ಸಾಲದೆಂದು ಹೇಳಿದ್ದರೆ ನಿನ್ನ ಶಿರಸ್ಸು ಮುಳುಗುವಷ್ಟು ದ್ರವ್ಯವನ್ನು ಕೊಡುತ್ತಿರಲಿಲ್ಲವೇನು? ನನ್ನನ್ನು ಭವಿ ಎಂದು ತಿಳಿದ್ದು ಕೊಂಡಿದ್ದೀಯೋ? ನಾನು ಪರಮಶಿವಭಕ್ತನು. ಅವಿವೇಕಿಯೆಂದು ಆಲೋಚಿಸಿದ್ದರೆ; ಸುರತಗಳಲ್ಲಿ ನನ್ನನ್ನು ಪರೀಕ್ಷಿಸು. ಇವನು ಸುಂದರನಲ್ಲವೆಂದು ತಿರಸ್ಕರಿಸಿದ್ದರೆ; ಪ್ರತ್ಯಕ್ಷವಾಗಿ ನನ್ನ ಸೌಂದರ್ಯವನ್ನು ನೋಡು. ಅನಾಥನೆಂದು ತಿಳಿದಿದ್ಧೀಯೋ! ಶಿವಭಕ್ತರುಗಳಿಗೆ ಭೃತ್ಯನಾಗಿದ್ಧೇನೆ. ನಾನು ಮಹಾತ್ಮರಮ ಗನು. ನನ್ನನ್ನು ನಾನು ಮಹಾತ್ಮನೆಂದು ತಿಳಿದುಕೊಂಡಿಲ್ಲ, ಇನು ಇವನ್ನು ಉಪಕಾರಿಯಲ್ಲವೆಂದು. ತಿಳಿದ್ದೀಯೋ! ನಾನು ಪರೋಪಕಾರನಿರತನಾಗಿದ್ಧೇನೆ. ವಯಸ್ಸು ಹೆಚ್ಚುಕಡಮೆಯೆಂದು ಹೀಗೆ ಮಾಡಿದಿಯಾ! ನಾವಿಬ್ಬರೂ ಒಂದೇ ಓರಗೆಯವರು. ಪ್ರೌಢನಲ್ಲವೆಂದು ಹೇಳುತ್ತೀಯೋ! ನನ್ನ ಮಾತುಗಳರೀತಿಯನ್ನು ಕೇಳು. ಮತ್ತೊಬ್ಬಪುರುಷನಲ್ಲಿ ಅನುರಾಗವುಳ್ಳವಳಾಗಿ ನನ್ನನಂಗೀಕರಿಸದೆಹೋಗಿ ದ್ದರೆ; ಎಲೌಚಂದ್ರಮುಖಿಯೇ! ಆತನು ಬರುವಷ್ಟರಲ್ಲಿಯೇ ನನ್ನಲ್ಲಿ ಒಂದುಸಾರಿ ಕೂಡಿನೋಡು. ಸ್ತ್ರೀಯರಗುಣ, ಜಾತಿ, ಅಪೇಕ್ಷೆ, ಭಾವ, ಮುಖಚೇಷ್ಟೆ, ಮನೋವ್ಯಾಪಾರ ಇವುಗಳನ್ನೂ, ಬಾಲೆ, ತರುಣಿ, ಪ್ರೌಢೆ, ಲೋಲೆ ಎಂಬ ಸ್ತ್ರಿಯು ರ ಲಕ್ಷಣಗಳಿಂದ ಕೂಡಿದಂಥ, ಹರೆಯದರೀತಿಯನ್ನೂ, ಸಾಧನಜನಗಳ ಹೆಚ್ಚುಕಡಿಮೆಯಿಂದ ವಿಷಮಸುರತವುಂಟಾಗುತ್ತಿರಲಾಗಿ ಸೌಮ್ಯಗಳಾದ ಅನೇ

ಕಬಂಧನಕ್ರಮಗಳನ್ನೂ, ಸುರತಸಾಮಗ್ರೀಯಗಳನ್ನೂ, ವಿಶೇಷವಾಗಿ ಕಾಲಕ್ರಮಗಳನ್ನೂ, ಕಾಲಿನಹೆಬ್ಬೆಟ್ಟು, ಕಾಲುಹರಡೆ, ಮಂಡಿ ಗುಹ್ಯ, ಹೊಕ್ಕಳು, ಎದೆ, ಸ್ತನ, ಕಂಕುಳು, ಕತ್ತು, ಕೆನ್ನೆ, ಹಲ್ಲು, ಕಣ್ಣು, ಹಣೆ, ತಲೆ, ಈ ಅಂಗಗಳಲ್ಲಿ ಶುಕ್ಲಪಕ್ಷದಲ್ಲಿ ಬಲಗಡೆಯಲ್ಲಿ ಹತ್ತುವಂಥಾವುಗಳಾಗಿಯೂ, ಕೃಷ್ಣಪಕ್ಷದಲ್ಲಿ ಎಡಗಡೆಯಲ್ಲಿ ಇಳಿಯುವಂಥಾವುಗಳಾಗಿಯೂ, ಇರುವ ಕಾಮಕಲೆಗಳನ್ನೂ, ಚನ್ನಾಗಿತಿಳಿದು, ಕೇಶಗಳನ್ನು ಹಿಡಿದು, ನೇತ್ರಗಳನ್ನೂ ಹಣೆಯನ್ನೂ ಚುಂಬಿಸಿ, ಆಮೇಲೆ, ದಂತಗಳಿಂದಲೂ, ಓಷ್ಠಗಳಿಂದಲೂ, ತುಟಿಯನ್ನು ಚೆನ್ನಾಗಿಒತ್ತಿ, ನಾಭಿಪ್ರದೇಶದಲ್ಲಿ ಮೆಲ್ಲನೆ, ವ್ಯಕ್ತವಾಗಿ ಕರತಲಪ್ರಹಾರವಂಮಾಡಿ, ನಖಗಳಿಂದ ಕುಚಗಳನೊತ್ತಿ ಕರಿಕರಕ್ರೀಡೆಯನ್ನು ಮಾಡಿ, ಅಧೋಭಾಗದ ಅಂಗಗಳನ್ನೆಲ್ಲಾ ಆಯಾಯ ತನ್ನ ಅಂಗಗಳಿಂದ, ಮೃದುವಾಗಿ ಆಲಿಂಗಿಸಿ, ಅತ್ಯಂತ ಪ್ರೌಢಿಮೆಯಿಂದ ಮನ್ಮಥ ಸುಖಸಮುದ್ರದಲ್ಲಿ ನಿನ್ನನ್ನು ಮುಳುಗಿಸುವದುನನಗೆ ಅಶಕ್ಯವೇ? ಆ ನಿನ್ನ ಪ್ರಿಯವಿಟನು ಬರುವಷ್ಟರೊಳಗೆ ಪ್ರೇಮದಿಂದ, ನನ್ನ ಕಡೆಗೆ ತಿರುಗು;- ಆಲಿಂಗನೆಯಿಂದಲೂ, ಯೋಗ್ಯವಾದ ಸಂಭಾಷಣೆಗಳಿಂದಲೂ, ನಿನ್ನ ಪ್ರೇಮದಕೀಲನ್ನು ಬಿಚ್ಚಿ, ನೀನು ಅತ್ಯಾನಂದದಿಂದ ಕಣ್ಣುಗಳನ್ನು ಮುಚ್ಚಿ, ಬಾಹ್ಯವಿಷಯವೊಂದನ್ನೂ ತಿಳಿಯದವಳ ಹಾಗೆ ಮಾಡದಿದ್ದರೆ, ನಾನು ನಿನ್ನಿಂದ ಪರಾಜಿತನ್ನೇ ಸರಿ. ಈವಿಧವಾದ ಮಾತುಗಳಿಂದ ಆಗುರುಭಕ್ತಾಂಡಾರಿಯು ತನ್ನ ಚಾತುರ್ಯವನ್ನೆಲ್ಲಾ ತೋರ್ಪಡಿಸುತ್ತಿರಲಾಗಿ, ಆಪ್ರೌಢವತಿಯು ಮುಗುಳುನಗೆಯೊಡನೆ ಹೇಳಿದಳು. ಏನಂದರೆ; ——ಭಕ್ತಿಮತವನ್ನು ಚನ್ನಾಗಿ ವಿಚಾರಮಾಡಿದರೆ ನಿನಗೂ, ನನಗೂ, ಸಂಬಂಧವು ಯೋಗ್ಯವಲ್ಲವೆಂದು ಹೇಳಿದಮೇಲೂ ನನ್ನಲ್ಲಿ ನಿನ್ನ ಜಾಣತನವನ್ನು ತೋರ್ಪಡಿಸುವದೇನು? ನೀನುವಿವೇಕಿಯಾಗಿದ್ದರೆ, ಅಷ್ಟು ಮಾತ್ರದಿಂದಲೇಪರರ ಅಭಿಪ್ರಾಯವನ್ನು ತಿಳಿಯುವದಕ್ಕಾಗದೋ? ರಸಜ್ಞನಾದರೆ; ಸ್ತ್ರೀಚಿತ್ತವು ಮುರಿದುಹೋಗಿರುವಾಗ, ತಿರಿಗಿ ಮಾತನಾಡುವದಕ್ಕೆ ಅವಕಾಶವುಂಟೇ? ನೀನುಭಾವಜ್ಞನಾದರೆ; ನನ್ನನಿರಾಶೆಯನ್ನುನೋಡಿ, ಹಿಂತಿರುಗಬೇಕಲ್ಲವೇ? ನೀನುಕಲಾಶಾಸ್ತ್ರದಲ್ಲನಿಪುಣನಾಗಿದ್ದರೆ; ಸ್ತ್ರೀಯರರಹಸ್ಯವಾದ ಸುರತಸಂಗತಿಯನ್ನು ಆಡಿತೋರಿಸಕೂಡದೆಂದುತಿಳಿದಿರಬೇಕಲ್ಲವೇ? ಲಿಂಗಾವಧಾನಿಯಾಗಿದ್ದರೆ; ಅಸಂಗತವಾದ ಆವಿಷಯವನ್ನು ಕುರಿತು ಮಾತನಾಡುವದು ಯೋಗ್ಯವೇ? ಆದಕಾರಣಬಹಳಮಾತಿನಿಂದೇನು? ಈಮೂರ್ಖತನದಿಂದಫಲವಿಲ್ಲ; ನ

ಡೆ; ಅಂದಳು. ಆಗುರುಭಕ್ತ ಭಂಡಾರಿಯು ಆಮಾತನ್ನು ಕೇಳಿ, ಮತ್ತೆ ಮತ್ತೆ ಹೆಚ್ಚುವಳಿಸುರಾಗವುಳ್ಳವನಾಗಿ;—ಎಲೌ ಕಮಲಾಕ್ಷಿಯೇ! ಇಷ್ಟುಮಾತ್ರಕ್ಕೆ ನಾನು ಸುಮ್ಮನೆಹೋಗುವೆನೇ? ನೀನು ನನ್ನನ್ನು ತಿರಸ್ಕರಿಸುವದಕ್ಕೆ ಕಾರಣವೇನು? ಅದನ್ನೆಲ್ಲಾ ಹೇಳು. ನೀನು ವೇಶ್ಯಾವೃತ್ತಿಯನ್ನೇ ಬಿಟ್ಟವಳಾಗಿದ್ದರೆ; ನನ್ನನ್ನು ತಿರಸ್ಕರಿಸು. ಹಾಗಲ್ಲದಿದ್ದರೆ, ಪುರುಷರಸಂಗವನ್ನುಬಿಟ್ಟೆನೆಂದು ಹೇಳುತ್ತಿಯೋ? ಈಗಲೆನನ್ನ ಮುಂದೆಕಠಿನವಾದ ಶಪಥವನ್ನುಮಾಡು. ಅಥವಾ ಉಡುತಡಿಯಮಹಾದೇವಿಯಹಾಗೆ ವಿಷಯಸುಖಾಶೆಯನ್ನುಬಿಡು. ಹಾಗಲ್ಲದಿದ್ದರೆ ಈಗತಿಲಕಾಂಬೆಯಹಾಗೆಆಶ್ಚರ್ಯಕರವಾದ ಪುರುಷತ್ವವನ್ನು ಹೊಂದು. ಬಹಳಮಾತಿನಿಂದೇನು? ಸ್ತ್ರೀಯರೊಳಗೆ ಅಂಥಾದೃಢಭಕ್ತೆಯಾಗಿದ್ದರೆ; ವೀರಜೋಳಾಂಬೆಯಹಾಗೆ ಶಿವನನ್ನೇಪತಿಯನ್ನಾಗಿಮಾಡಿಕೊಳ್ಳಬೇಕೆಂಬ ತಾತ್ಪರ್ಯದಿಂದ ದ್ರಾಕ್ಷಾರಾಮಕ್ಷೇತ್ರವನ್ನೈದು. ಯಾವದೂಇಲ್ಲದೆನಿಷ್ಕಾರಣವಾಗಿಹೋಗೆಂದು ಹೇಳಿದರೆ; ಇದುಯುಕ್ತವೆಂದುನಾನು ಎಂದಿಗೂ ಒಪ್ಪಿಕೊಳ್ಳುವದಿಲ್ಲ. ಎಲೌಸ್ತ್ರೀಯೇ! ಕಾರಣವಿದ್ದರೂ ನಾನುಹೋಗುವದಿಲ್ಲ. ನನ್ನನಿನ್ನ ದೇಹಾವಧಿಬಿಟ್ಟದ್ದಲ್ಲ. ಪ್ರಯೋಜನವಿಲ್ಲದಮಾತುಗಳನ್ನಾಡಿದ್ದರಿಂದೇನು? ಆಹಾ ಆಶ್ಚರ್ಯ! ನನಗೆನಿನ್ನೊಡನೆ ಸಂಗಮವು ಸತ್ಪುರುಷರಿಂದಶ್ಲಾಘಿಸಲ್ಪಡುವದಕ್ಕೆ ಯೋಗ್ಯವಾದದ್ದು; ಎಸಲು ಅಪ್ರೌಢವತಿಯು ಎಲ್ಲೈ ಸದ್ಭಕ್ತನಾದವಿಟನೇ ಭಲಾ! ಸ್ತ್ರೀಯರಮನಸ್ಸನ್ನು ಅಪಹರಿಸುವನೇ ಭಲಾ! ವಿಷಯಾಭಿಲಾಷೆಯಿಲ್ಲದಸ್ತ್ರೀಯಲ್ಲಿ ರಮಿಸುವದಕ್ಕೆ ದನವಕಾಯುವವನಾದರೂ ಅಪೇಕ್ಷಿಸುತ್ತಾನೋ ಏನು? ಆಶೆಇಲ್ಲದವೇಶ್ಯಾಸ್ತ್ರೀಯಲ್ಲಿಯೂ, ಪ್ರೀತಿಯಿಲ್ಲದರಾಜನಲ್ಲಿಯೂ ಯಾವನುಅನುರಾಗವುಳ್ಳವನಾಗಿರುತ್ತಾನೋ ಅವನು ದನಾಕಾಯುವವನೇಸರಿ. ಈವಿಷಯದಲ್ಲಿಸಂಶಯವಿಲ್ಲ. ಗೋಪಾಲಜಾತಿಯವನಾದರೂ, ಸ್ತ್ರೀಯರಚಿತ್ತವನ್ನು ಯಾವನುತಿಳಿಯುತ್ತಾನೋ ಅವನೇಮನ್ಮಥನಿಗೆಸಮಾನನು. ಅವನೇವಿಟರಲ್ಲಿಮುಖ್ಯನು. ಅವನೇಜಾಣನು. ಲೋಕದಲ್ಲಿರುವಅವಿವೇಕಿಗಳಾದ ವಿಟರತಲೆಯಮೇಲೆಹುಲ್ಲನ್ನುಹೊರಿಸಿದೆ. ನಿನ್ನಮಾತನ್ನುಸುಡಬೇಕು. ಜಾಣನಾದವಿಟರೆಲ್ಲರೂ ನಿನ್ನನ್ನುಮೆಚ್ಚುವರೇ? ಪುರುಷನು ಧೈರ್ಯವನ್ನುಬಿಟ್ಟು, ಕಳವಳವನ್ನುಹೊಂದಿದರೆ; ಸ್ತ್ರೀಯರುಅವನನ್ನು ಪ್ರೀತಿಸುವರೇ? ಲೋಕದಲ್ಲಿ ನಿನ್ನ ಭಕ್ತಿಮಾರ್ಗವೂ, ವಿಟನ್ಯಾಯವೂ, ಭಂಡತನವಾಗಿದೆ. ನೀನು ನನ್ನನ್ನು ಇಷ್ಟು ತೊಂದರೆಪಡಿಸುವದಕ್ಕೂ ಬೆದರಿಸುವದಕ್ಕೂ, ಪೂರ್ವದಲ್ಲಿ ಪರಿಚಿ

ತನಾದವಿಟನೋ? ಅಥವಾ ಕೈಹಿಡಿದ ಗಂಡನಾದ್ದರಿಂದ ತೊಂದರೆಪಡಿಸುತ್ತಿಯೋ? ಆಹಾ! ನಾವು ಹಬ್ಬಗಳಲ್ಲಾಗಲಿ, ಮಹೋತ್ಸವದಿವಸಗಳಲ್ಲಾಗಲಿ, ನಿನ್ನಲ್ಲಿ ವಿಶೇಷವಾಗಿ ದ್ರವ್ಯವನ್ನು ತೆಗದುಕೊಂಡು ಅದನ್ನು ಅನುಭವಿಸಿದ್ದೇವೋ ಹೇಳು ಅಥವಾ ಬೇಕಾದಷ್ಟು ದ್ರವ್ಯವನ್ನೂ, ಸೀರೆ ಕುಪ್ಪುಸಗಳನ್ನೂ, ಕೊಟ್ಟುಕೊಟ್ಟು ಸಾಕಾಗಿ, ಕೋಪಿಸಿಕೊಳ್ಳುತ್ತೀಯೋ? ನಿನ್ನನ್ನು ವಿಚಾರವಮಾಡಿಕೊಂಡು ಮಾತನಾಡುವದಾದರೆ, ನಿನ್ನನ್ನು ನೀನೇನೋಡಿಕೋ! ಶಿವಭಕ್ತನಾದ ನೀನು ಈಗಾಗ್ರಮದಲ್ಲಿ ವೈಭವದಿಂದ ಕೂಡಿದವನಾಗಿದ್ದೀಯೆ. ಮತ್ತು ಉಪಾಯಗಳನ್ನು ಬಲ್ಲವನು. ಇಂಥಾ ಅಯುಕ್ತವಾದಮಾತುಗಳನ್ನು ಯಾತಕ್ಕೆ ಹರಟುತ್ತೀಯೆ. ನೀನು ನನ್ನ ಯೋಗ್ಯತೆಯನ್ನು ವಿಚಾರಮಾಡಿ, ಮಾತನಾಡುವವನಾದರೆ, ಹೇಳುತ್ತೇನೆ. ಕೇಳು. ನಾನುದ್ರವ್ಯದಲ್ಲಿ ಅಪೇಕ್ಷೆಯುಳ್ಳವಳಲ್ಲ. ಇದುನನ್ನ ಒಡೆಯನಾದ ಪರಶಿವನು ತೋರಿಸಿದವೃತ್ತಿ. ಹಾಗಾದರೂ ಶಿವಭಕ್ತರನ್ನು ಹೊರತು ಇತರರನ್ನು ಸ್ವಪ್ನದಲ್ಲಿಯೂ ಕಾಣೆನು. ಹಣವನ್ನು ಸಂಪಾದಿಸಿಹೂಳಿಡುವದಕ್ಕೆ ನಾನು ಅಂಥಾಚಾಪಲ್ಯವುಳ್ಳವಳಲ್ಲ; ನಾನು ಅಂಥಾಜಾಣೆಯೂಅಲ್ಲ. ಅದನ್ನೆಲ್ಲಾ ಭಕ್ತರು ಇತರರಮುಖದಿಂದಕೇಳಿ ತಿಳಿದುಕೊಳ್ಳುತ್ತಾರೇನು? ನಾನು ಪೂರ್ವದಲ್ಲಿ ನಿನ್ನನ್ನು ಯಾವಾಗಲೂಕೇಳಿಯೂಇಲ್ಲ, ನೋಡಿಯೂಇಲ್ಲ; ನೀನೇನು ನನ್ನ ಯೌವನವನ್ನು ಅಪಹರಿಸಿದವನೋ? ಅಥವಾ ಪರಿಚಿತನಾದವಿಟನೊ? ಇಲ್ಲವೇ ನನ್ನನ್ನು ಬಾಲ್ಯಾರಭ್ಯ ಪೋಷಿಸಿ, ಪೂರ್ಣಯೌವನಾವಸ್ಥೆಯನ್ನು ಉಂಟುಮಾಡಿದವನೋ? ಪೂರ್ವದಲ್ಲಿ ಒಂದುವೇಳೆ ಬಂದು, ಬೇಕಾದಷ್ಟು ಧನವನ್ನು ಕೊಟ್ಟು, ನನ್ನವೇಶ್ಯಾವೃತ್ತಿಯನ್ನು ತಪ್ಪಿಸಿದವನೋ? ಅಥವಾಹಿಂದೆಬಂದು ವೇಳೆಬಂದಿದ್ದು, ನನಗೆತಗಲಿದ್ದ ಕಷ್ಟವನ್ನು ನಿವಾರಣೆ ಮಾಡಿದವನಾಗಿದ್ದೀಯೋ? ನನಗೆ ಇಷ್ಟನಾದವನೋ? ನನ್ನ ವಂಶೀಯರಿಗೆ ಬೇಕಾದವನೋ? ಸಮೀಪದಲ್ಲಿ ಯಾವಾಗಲೂ ಇರುವದರಿಂದ ಪ್ರೇಮಪಾತ್ರನೋ? ನನ್ನ ಚಿತ್ತವನ್ನು ತಿಳಿದು ನನ್ನಲ್ಲಿ ಆಸಕ್ತನಾದವನೋ? ಜೀವನಕ್ಕೆ ಕೊಟ್ಟು ಕೊಟ್ಟು ಸಾಕಾದವನೋ? ಶಿವಭಕ್ತಿಯನ್ನು ತೋರಿಸಿಕೊಟ್ಟವನೋ? ಬಾರಿ ಬಾರಿಗೂ ನನ್ನ ಯೋಗಕ್ಷೇಮವನ್ನು ವಿಚಾರಿಸುವವನೋ? ಮದುವೆ ಮೊದಲಾದ ಕಾರ್ಯಗಳಲ್ಲಿ ಬಹಳ ಸಾಹಾಯವನ್ನು ಮಾಡಿದವನೋ? ಸಾಲಮೊದಲಾದದ್ದನ್ನು ಮಾಡಿಕೊಂಡುರುವಕಾಲದಲ್ಲಿ ಕೊಟ್ಟು ತೀರಿಸಿದವನೋ? ದುರ್ಭಿಕ್ಷಕಾಲದಲ್ಲಿ ರಕ್ಷಿಸಿದವನೋ?

ನನ್ನಸಂಸಾರಬಂಧವನ್ನು ಬಿಡುಗಡೆ ಮಾಡಿದವನೋ? ನಾನುಮಾಡಿದತಪ್ಪನ್ನು ಕ್ಷಮಿಸಿದವನೋ? ನನ್ನ ಪ್ರಾಣವಲ್ಲಭನೋ? ನನ್ನಿಂದಕರೆಯಲ್ಪಟ್ಟವನೋ? ನಿನ್ನಸಂಬಂಧವುನನಗೇಕೆ? ಇದು ನಿಷ್ಪ್ರಯೋಜನ; ನಿನಗೆ ನಾನು ಹೆಂಡತಿಯಾಗಬೇಕೇನು? ಅಥವಾ ನಿನ್ನಿಂದ ಸಂರಕ್ಷಣೆಮಾಡಿಸಿಕೊಳ್ಳಲ್ಪಟ್ಟ ವೇಶ್ಯಾಸ್ತ್ರೀಯೋ? ಅಥವಾ ನಿನ್ನಮನೆಯಲ್ಲಿ ಇಟ್ಟುಕೊಂಡು ಪೋಷಿಸಲ್ಪಟ್ಟ ನಿನ್ನಸೋದರಮಾವನ ಮಗಳೋ? ನೀನು ಸುಮ್ಮ ಸುಮ್ಮನೆ ಇಷ್ಟುನಿರ್ಬಂಧವನ್ನು ಮಾಡುವದುಸರಿಯೆ? ಆದ್ದರಿಂದ ಹೊರಟುಹೋಗು. ಕಾಮದಿಂದ ಕುರುಡನಾದವನಿಗೆ ದೋಷವು ತಿಳಿಯುವದಿಲ್ಲ ಎಂಬಗಾದೆಯು ನಿನ್ನಲ್ಲಿಕಂಡುಬಂತು. ರತಿಮೋಹವು ಮುಕ್ತಿಗೆ ಹಾನಿಕರವೆಂದು ನೀನು ತಿಳಿದಿಲ್ಲವೋ ಹೇಳು " ಮಾನವೆಂಬುವದು ಚಂದ್ರ ನಕ್ಷತ್ರಗಳಿರುವತನಕವಿದೆ" ಎಂಬನೀತಿಯು ಎಲ್ಲಾಕಡೆಯಲ್ಲಿಯೂ ಪ್ರಸಿದ್ಧವಾಗಿರುವದರಿಂದ, ಮಾನಿಷ್ಠರಾಗಿರುವವರು ತಮ್ಮ ಮಾನವನ್ನು ಬಿಡುತ್ತಾರೆಯೋ? ಲೋಕದಲ್ಲಿ ಸ್ತ್ರೀಯರು ಅಪೂರ್ವವೇ? ನನ್ನನ್ನು ಬಿಟ್ಟರೆ ಈ ಪಟ್ಟಣದಲ್ಲಿ ಇನ್ಯಾವಹೆಂಗಸರೂ ಸಿಕ್ಕುವದಿಲ್ಲವೇ? ಎಲೈ ಬುದ್ಧಿಶಾಲಿಯೇ? ಶಿವಭಕ್ತರಾದವರುಗಳು ಪರರಅಭಿಪ್ರಾಯವನ್ನು ತಿಳಿಯದೆಇರುವರೇ? ನೀನಂತುನಾಚಿಕೆಪಡುವದಿಲ್ಲ. ಈ ಕೆಲಸದಿಂದ ಅಗೌರವವುಂಟಾಗುತ್ತದೆಂದು ತಿಳಿಯುವದಿಲ್ಲ. ಹಿಡಿದದ್ದನ್ನು ಬಿಡುವದಿಲ್ಲ; ಇದು ಯೋಗ್ಯವಲ್ಲವೆಂದು ಹೇಳಿ ಕಳುಹಿಸಿದರೆ. ಜುಗುಪ್ಸೆಗೊಂಡು ಹೋಗುವದಿಲ್ಲ. ಎಂದು, ಪ್ರೌಢವತಿಯು ಭಕ್ತಮಾರ್ಗವನ್ನೂ ವಿಟನ್ಯಾಯವನ್ನೂ, ತೋರಿಸಿ, ಅನೇಕಪ್ರಕಾರವಾಗಿ ಹೇಳಿದಾಗ್ಯೂ, ಗುರುಭಕ್ತಾಂಡಾರಿಯು ಅದನ್ನು ಅಂಗೀಕರಿಸಲಿಲ್ಲ. ಅನಂತರದಲ್ಲಿ ಪ್ರೌಢವತಿಯು ವಿಷಯಾಭಿಲಾಷೆಯಿಂದ ತುಂಬಲ್ಪಟ್ಟ ಆತನ ಹೃದಯವನ್ನು ನೋಡಿ, ಸ್ತ್ರೀಸಂಗದಲ್ಲಿ ಜುಗುಪ್ಸೆಯನ್ನುಂಟುಮಾಡಬೇಕೆಂದಿಚ್ಛೈಸಿದವಳಾಗಿ, ಗುರುಭಕ್ತಾಂಡಾರಿಯನ್ನು ಕುರಿತು ಹೇಳುತ್ತಾಳೆ. ಎಲೈ ವಿವೇಕಿಯೆ! ನೀನುವೇಶ್ಯೆಯರಲ್ಲಿರುವ ದುರ್ಗುಣವನ್ನು ತಿಳಿದಿಲ್ಲವೋ? ನಿನ್ನಲ್ಲಿ ನೀನೇವಿಚಾರಮಾಡಿಕೊಂಡು, ನೋಡು. ಈ ಸ್ತ್ರೀಯರು ನಿಜವಾಗಿ ಕಾಮುಕಿಯರೂ ಚಪಲೆಯರೂ ದುಷ್ಟೆಯರೂ ಚಾಡಿಯಿಂದ ತುಂಬಲ್ಪಟ್ಟವರೂ ಹಾಸ್ಯಾಸ್ಪದೆಯರೂ ಕಪಟದಲ್ಲಿನಿರತೆಯರೂ ವಿಶೇಷಸಾಹಸವುಳ್ಳವರೂ ಜುಗುಪ್ಸೆಗೆ ಆಶ್ರಯಸ್ಥಾನರೂ ದುಡುಕುವರೂ ಧನವನ್ನೆಲ್ಲಾ ಅಪಹರಿಸಲಿಚ್ಛೆಯುಳ್ಳವರೂ ಸುಳ್ಳುಮಾತುಗಳನ್ನು ಆಡು

ವವರೂ ಭಯವಿಲ್ಲದಿವರೂ ಕಠಿನಚಿತ್ತೆಯುಸೂ ಬಹು ಪುರುಷರಲ್ಲಿ ಆಸಕ್ತೆಯರೂ ಪ್ರಯತ್ನಕ್ಕೆ ಸಾಧ್ಯವಲ್ಲದಕಾರ್ಯಗಳನ್ನು ಮಾಡತಕ್ಕವರೂ ಸಹಿಸಲಶಕ್ಯರಾದ ವರೂ ತಾಪದಿಂದ ತುಂಬಲ್ಪಟ್ಟವರೂ ಅಮಂಗಲೆಯರೂ ಅಸ್ಥಿರಬುದ್ಧಿಗಳೂ ಚಿನ್ನದಲ್ಲಿ ಅತ್ಯಾಶೆಯುಳ್ಳವರೂ ಯಾವಾಗಲೂ ವಂಚಿಸತಕ್ಕವರೂ ಭಯಂಕರಿ ಯರೂ ಕಳ್ಳರಿಗೆ ಆಸ್ಪದೆಯರಾದವರೂ ಮಾಟದಬೊಂಬೆಗೆ ಸಮಾನರಾದವರೂ, ಮೃತ್ಯುದೇವತೆಯರೂ ವರಟರೂ ಬರೀ ವಡವೆಗಳನ್ನು ಧರಿಸಿಕೊಳ್ಳುವವರೂ ಆಗಿದ್ದಾರೆ. ವಾರಸ್ತ್ರೀಯರ ದೃಷ್ಟಿಗಳಾದರೋ? ಅಸ್ಥಿರಗಳೂ ಜನವನ್ನು ಕಟ್ಟು ವಹಗ್ಗಗಳೂ ಕಠಿನವಾದವುಗಳೂ ಮನಸ್ಸನ್ನು ಅಪಹರಿಸತಕ್ಕವುಗಳೂ, ತೀಕ್ಷ್ಣ ವಾದವುಗಳೂ ಕೋಪವನ್ನುಂಟುಮಾಡುವವೂ ಕೊನೆಯಿಲ್ಲದ ಆಶೆಯಲ್ಲಿ ಆಸಕ್ತ ವಾದವುಗಳೂ ಅಜ್ಞಾನದಿಂದಕೂಡಿದವುಗಳೂ ದುಃಖಗಳಸಮೂಹಕ್ಕೆ ವಾಸಸ್ಥಾ ನಗಳೂ ಯಾರಾರಲ್ಲಿ ಯಾವ ಯಾವ ರೀತಿಯಿರಬೇಕೋ ಅದನ್ನು ಬಿಟ್ಟಿರತಕ್ಕವು ಗಳೂ ಬಹುಗರ್ವಕ್ಕೆ ಕಾರಣವಾದವುಗಳೂ ಕುಲವೊದಲಾದವುಗಳನ್ನು ವಿಚಾರ ಮಾಡದೆ ಎಲ್ಲರಲ್ಲಿಯೂ ಒಂದೇ ವಿಧವಾಗಿ ಪ್ರವರ್ತಿಸತಕ್ಕವುಗಳೂ ಪಾಪಗಳಿಂದ ಬೆರೆತವುಗಳೂ ದುಃಖಕ್ಕೆ ಜನ್ಮಭೂಮಿಗಳೂ ಆಗಿರುವವು. ಇದಲ್ಲದೆ ವೇಶ್ಯಾಸ್ತ್ರೀ ಯರ ಕಪಟಗಳಾದ ನಡತೆಗಳಾದರೋ ಯಾವಕಡೆನೋಡಿದರೂ ಶಬ್ದಾದಿವಿಷ ಯಗಳಲ್ಲಿ ವ್ಯಾಪಿಸಿದವುಗಳಾಗಿಯೂ ಭಯಂಕರಗಳಾಗಿಯೂ ಬಹಳ ಡೊಂಕಾ ದವುಗಳಾಗಿಯೂ ಸುಳ್ಳುನಿಂದ ಕೂಡಿದವುಗಳಾಗಿಯೂ ನಿಷ್ಪ್ರಯೋಜನವಾದ ವುಗಳಾಗಿಯೂ, ಪ್ರೋತ್ಸಾಹ ಪಡಿಸುವದರಲ್ಲಿ ಬಲವುಳ್ಳವುಗಳಾಗಿಯೂ ಮದ ದಿಂದ ಕೂಡಿದವುಗಳಾಗಿಯೂ ಹಾಸ್ಯಕ್ಕೆ ಮುಖ್ಯಪಾತ್ರಗಳಾಗಿಯೂ ವಿಷಯ ಗಳ ಹುಟ್ಟಿಗೆ ಕಾರಣವಾದವುಗಳಾಗಿಯೂ, ಇವೆ. ಮತ್ತು ಈ ವೇಶ್ಯಾಸ್ತ್ರೀಯ ರಮುಖಗಳಾದರೋ! ಆಶಾಪರೂಪವಾದ ಯಂತ್ರಗಳಾಗಿಯೂ, ಅಪೇಕ್ಷೆಗೆ ಆಶ್ರಯಸ್ಥಾನವಾಗಿಯೂ, ತಿಳಿಯುವದಕ್ಕೆ ಅಶಕ್ಯವಾದ ಒಡಲುಳ್ಳವುಗಳಾ ಗಿಯೂ, ದೊಡ್ಡಬಿಲಗಳಾಗಿಯೂ, ಮೇಘಪಟಲಕ್ಕೆ ಸಮಾನಗಳಾಗಿಯೂ, ಮನಸ್ಸಿಗೆ ಸಂಗಟಗಳಾಗಿಯೂ, ವಾಗ್ವಾದದಲ್ಲಿ ಆಸಕ್ತಗಳಾಗಿಯೂ, ಇರುವವು. ಇದಲ್ಲದೆ ಚನ್ನಾಗಿ ವಿಚಾರಮಾಡಿ ನೋಡಿದರೆ; ಆ ವಾರಸ್ತ್ರೀಯರ ಹೃದಯಗಳಾ ದರೋ ಕ್ಷಣಿಗಳೂ ಬಹಳಮೌಢ್ಯವುಳ್ಳವುಗಳೂ ವಡಕಾದವುಗಳೂ ಅಜ್ಞಾನವ ನುಂಟುಮಾಡುವವುಗಳೂ ಕಠಿನವಾದವುಗಳೂ ಪಾಪಭರಿತಗಳೂ ನೀಚವಾದವು

ಗಳೂ ಬಹಳ ಅಶುದ್ಧಗಳೂ ಕಲಕಲ್ಪಟ್ಟವುಗಳೂ ತಿರಸ್ಕರಿಸಲ್ಪಟ್ಟವುಗಳೂ ಹಿಡಿದ ಪಟ್ಟನ್ನು ಬಿಡದಿರತಕ್ಕವುಗಳೂ ಶಾಸ್ತ್ರಜ್ಞಾನವಿಲ್ಲದವುಗಳೂ ವಿಷಯಪರಂಪರೆಗೆ ಕಾರಣವಾದವುಗಳೂ ಪಕ್ಷಪಾತಗಳಿಂದ ಕೂಡಿದವುಗಳೂ ಪಂಚಮಹಾಪಾತಕ ಗಳಿಗೆ ಆಶ್ರಯಸ್ಥಾನಗಳೂ ನಾನಾಪ್ರಕಾರವಾದವುಗಳೂ ಅಸತ್ಯಗಳೂ ಅನುರಾಗವಿಲ್ಲದವುಗಳೂ ಸಂದೇಹಾಸ್ಪದಗಳೂ ನಿಂದಿತಗಳೂ ಲೋಭವುಳ್ಳವುಗಳೂ ಮಾಯಾಪಾಶಸ್ವರೂಪಗಳೂ ದುಃಖವುಳ್ಳವುಗಳೂ ವಾಗ್ವಾದವನ್ನು ಮಾಡಬೇಕೆಂದು ಇಚ್ಛೆಯುಳ್ಳವುಗಳೂ ಆಗಿವೆ. ಬಹಳ ಮಾತುಗಳಿಂದೇನು ? ಈ ವೇಶ್ಯಾಸ್ತ್ರೀಯರ ದೇಹಕಾಂತಿಯೂ ಕೂಡ ಹೀಗೆಯೇ ನಿಂದೆಗೆ ಆಸ್ಪದವಾದದ್ದು. ಮತ್ತು ಅವಯವಗಳನ್ನು ಒಂದೊಂದಾಗಿ ವಿಚಾರಮಾಡಿನೋಡಿದರೆ ಬಾಯಿಗಳು ಜೊಲ್ಲಿನಮನೆಗಳು. ಮೂಗು ಗೊಣ್ಣೆಗೆ ತೌರುಮನೆ. ಹೊಟ್ಟೆಯು ಅಮೇಧ್ಯದಗೃಹವು. ನೇತ್ರಗಳುಪಿಸುರಿನಿಂದ ಮಲಿನವಾದವುಗಳು. ಅಂಡುಗಳು ಪಾಪಕ್ಕೆ ವಾಸಸ್ಥಾನಗಳು. ಇದಲ್ಲದೆ ಈ ಸ್ತ್ರೀಯರ ಯೋನಿಗಳಾದರೋ, ಕಾಮರಸವು ಬೀಳುವ ಬಿಲಗಳೂ, ದುರ್ವಾಸನೆಯಿಂದ ವ್ಯಾಪಿಸಲ್ಪಟ್ಟವುಗಳೂ, ಮೂತ್ರದಿಂದ ತುಂಬಲ್ಪಟ್ಟ ಗಡಿಗೆಗಳೂ, ಅಶುಚಿಯ ಗುಡಾಣಗಳೂ, ಕಾಮಾದಿಷಡ್ವರ್ಗಗಳ ಉತ್ಪತ್ತಿಗೆ ಕಾರಣಗಳೂ, ಜನಗಳ ಸಕಲಧನವನ್ನು ಅಪಹರಿಸವದಕ್ಕೆ ಆಸ್ಪವಾದ ಗುಡ್ಡಗಳೂ, ನಿಜವಾಗಿ ಕಣ್ಣಿಗೆ ಕಾಣುವನರಕದ ಭಾವಿಗಳೂ, ರಕ್ತವು ಸುರಿವಕುಳಿಗಳೂ, ವಿಷ್ಣುಬ್ರಹ್ಮಾದಿದೇವತೆಗಳನ್ನು ಕೂಡ ಒಳಕೊಂಡ ದೊಡ್ಡಗುಹೆಗಳೂ, ಜಾತಿಹೀನರೂ ನೀಚರೂ ಪೂಜ್ಯರೂ ಕುಲವಂತರೂ ಇವರುಗಳ ಸಮೂಹದಿಂದ ಇಕ್ಕಟ್ಟಾದ ಮಾರ್ಗಗಳೂ ಆಗಿವೆ. ಅಂಥಾ ಯೋನಿಗಳಿಂದ ಉಂಟಾಗತಕ್ಕ ಸೌಖ್ಯವು ಬಹಳಸ್ವಲ್ಪವಾದದ್ದಾಗಿಯೂ ಕ್ಷಣದಲ್ಲಿನಾಶವಾಗತಕ್ಕದ್ದಾಗಿಯೂ ಗಾಳಿಯಿಂದ ಅಳ್ಳಾಡಿಸಲ್ಪಟ್ಟ ಅರಳೀಎಲೆಯತುದಿಯಲ್ಲಿ ಹತ್ತಿದ ನೀರಿಗೆ ಸಮಾನವಾಗಿಯೂ ಇದೆ. ಅಷ್ಟುಮಾತ್ರಕ್ಕಾಗಿ ಅನೇಕವ್ಯಾಪಾರಗಳನ್ನು ಅನುಸರಿಸಿ ಕಾಮಾಂಧರಾಗಿ ವೇಶ್ಯಾಸ್ತ್ರೀಯರಲ್ಲಿ ಆಸಕ್ತರಾದ ದುರಾತ್ಮರಿಗೆ ಮಾನಹಾನಿಯೂ, ಅಜ್ಞಾನವು, ಲಜ್ಜಾಹಾನಿಯೂ, ಹಾಸ್ಯಾಸ್ಪದತ್ವವು, ಮನೋದುಃಖವು, ವಿಶೇಷವಾಗಿದ್ರವ್ಯನಾಶವು, ಮೋಕ್ಷಹಾನಿಯೂ, ಎಂಬ ಏಳು ವಿಪತ್ತುಗಳುಎಡೆಗೊಳ್ಳುವವು. ಸ್ತ್ರೀಯರುನಮ್ಮನ್ನು ಹೊಂದಿಕೊಂಡರು ಎಂಬ ಆಲೋಚನೆಯನ್ನು ಬುದ್ಧಿವಂತರುಮಾಡತಕ್ಕದ್ದಲ್ಲ. ಸಕಲಸ್ತ್ರೀಯರಸಮ್ಮೇಳನವು ಎಣ್ಣೆ ಗಂಜಿಗಳಸಂ

ಯೋಗಕ್ಕೆ ಸಮಾನವಾದದ್ದು. ಸ್ತ್ರೀಯರು ಯಾವಾಗಲು ನಮ್ಮನ್ನು ಹಿಡಿದರೆಂದು ಆಲೋಚಿಸಕೂಡದು. ಸ್ತ್ರೀಯರು ಪುರುಷರನ್ನು ಬಿಗುಣಿಗಳ ಹಾಗೆಹಿಡಿದು ಸಾರವನ್ನೆಲ್ಲಾ ಎಳಕೊಂಡು ಬಿಡುತ್ತಾರೆ. ಹೆಂಗಸರು ಯಾವಾಗಲೂ ಒಂದೇ ವಿಧವಾದ ಸ್ವಭಾವವುಳ್ಳವರೆಂದು ನೆನಸಕೂಡದು, ಆಸ್ತ್ರೀಯರು ನೀರಿನಲ್ಲಿ ಪ್ರತಿಫಲಿಸಿ ದಸೂರ್ಯಮಂಡಲದಹಾಗೆ ಕ್ಷಣೆಕ್ಷಣೆ ವಿಕಾರವನ್ನು ಹೊಂದುತ್ತಾರೆ. ಇದುನಿಜ. ಈಸ್ತ್ರೀಯರ ಸ್ಥಿತಿಯನ್ನು ನಾವುತಿಳಿದಿದ್ದೇವೆಂಬ ಬುದ್ಧಿಯನ್ನು ಬಿಡಬೇಕು. ಯಾಕಂದರೆ! ಆಸ್ತ್ರೀಯರು ನೀರಿನೊಳಗೆ ಸಂಚರಿಸುವ ಮೀನುಗಳಹಾಗೆ ಇದ್ದಾರೆಂದು ತಿಳಿ. ನನ್ನಮಾತನ್ನು ನಡಿಸುತ್ತಾರೆಂದು ಎಂದುಗೂ ಆಲೋಚಿಸಕೂಡದು. ಯಾಕಂದರೆ; ಅವರು ಜೂಜಗಾರರಂತೆ ಒಳಹೊಕ್ಕು ಕಟ್ಟಿಹಾಕುತ್ತಾರೆ. ಉತ್ಸವಾದಿಗಳನ್ನು ನೋಡುವದಕ್ಕಾದರೂ ಹೊರಗೆ ಸಂಚಾರ ಮಾಡುವದನ್ನು ಬಿಟ್ಟಿದ್ದಾರೆಂದು ಭಾವಿಸಕೂಡದು. ಆಸ್ತ್ರೀಯರನ್ನು ಬಿಟ್ಟು ಬಿಟ್ಟರೆ, ಗಿಡಗಗಳಹಾಗೆ ಓಡಿಹೋಗುತ್ತಾರೆ. ವೇಶ್ಯಯರು ದೃಢವಾಗಿ ಒಬ್ಬನಲ್ಲಿಯೇ ಆಸಕ್ತರಾಗಿದ್ದಾರೆಂಬ ಮಾತನ್ನು ಬಿಡಬೇಕು. ಅವರು ಸ್ವೇಚ್ಛೆಯಿಂದ ಹೊರಟವರಹಾಗೆ ಮತ್ತೊಬ್ಬಪುರುಷನ್ನು ಅಪೇಕ್ಷಿಸುತ್ತಲೇ ಇದ್ದಾರೆ. ಬೇಕಾದಷ್ಟು ದ್ರವ್ಯವನ್ನು ಕೊಟ್ಟನೆಂದು ಹೇಳುವದು ಅಯುಕ್ತ. ತ್ರಾಸುಗಳ ಹಾಗೆ ಒಂದು ಭತ್ತ ಕಡಮೆಯಾದರೂ ವ್ಯತ್ಯಾಸವನ್ನು ಹೊಂದುತ್ತಾರೆ. ನನ್ನಮೇಲೆ ಬಹಳಪ್ರೇಮವುಳ್ಳವರೆಂದು ವೇಶ್ಯಯರ ವಿಷಯದಲ್ಲಿ ಯೋಚಿಸಕೂಡದು. ಅವರ ಪ್ರೇಮಗಳು ಏನೋ ಒಂದು ಕಾರ್ಯನಿಮಿತ್ತವೇ ಹೊರತು ಸ್ವಾಭಾವಿಕವಲ್ಲ, ಆದ್ದರಿಂದ ವಿಚಾರಮಾಡಿದರೆ; ವೇಶ್ಯಾಸ್ತ್ರೀಯರದೃಷ್ಟಿಗಳು ಡಂಭಗಳೇ ಸರಿ. ಅವರ ಮನೋಭಾವಗಳನ್ನು ನೋಡುವದೂ ನಿಷ್ಪ್ರಯೋಜನವು., ವೇಶ್ಯಯರಲ್ಲಿ ಸ್ವಲ್ಪವಾದರೂ ಸೌಖ್ಯವಿದ್ದೀತೆ? ವಿಚಾರಮಾಡು. ಕಾಮಕ್ರೋಧಾದಿಗಳನ್ನು ಬಿಟ್ಟ ಶಿವಭಕ್ತರು ಸ್ತ್ರೀಯರ ಸುರತಸುಖವನ್ನು ಅಪೇಕ್ಷಿಸುತ್ತಾಗೆಯೇ ಶಿವಭಕ್ತರಾದವರು ವೇಶ್ಯಾಸ್ತ್ರೀಯರ ಸೌಖ್ಯವನ್ನು ಹುಲ್ಲಿಗೆ ಸಮಾನವಾಗಿಯಾದರೂ ಎಣಿಸಿದ್ದಾರೆಯೇ ? ಭಕ್ತರಾದವರಿಗೆ ಆವೇಶ್ಯೆಯರ ನೋಟಗಳು ಯೆಂದಿಗಾದರೂ ಶ್ಲಾಘನೀಯಗಳಾದಾವೇ ? ಪರಿಶುದ್ಧವಾದ ಮನಸ್ಸುಳ್ಳ ಶಿವಭಕ್ತರು ಹೇಸಿಕೆಯಾದ ವೇಶ್ಯಾಸ್ತ್ರೀಯರ ಸುತವನ್ನು ಎಂದಿಗೇಅಪೇಕ್ಷಿಸುವರು? ಇಂಥಾ ನಿಂದ್ಯಗಳಾದವೇಶ್ಯಾಸ್ತ್ರೀಯರ ಡಂಭಾಚಾರಗಳು ಶಿವಭಕ್ತಿಯಿಂದ ಪ್ರಕಾಶಿಸುವ ಮನಸ್ಸುಳ್ಳ ಭಕ್ತರಿಗೆ ಬೇಕಾದವುಗಳೇನು?

ಆದಕಾರಣದಿಂದ ನೀನು ಭಕ್ತಿಯಿಂದ ಕೂಡಿದವನೂ ಭಕ್ತಿಯಲ್ಲಿ ನಿಪುಣನೂ ಭಕ್ತಿಗೆ ಆಶ್ರಯನೂ ಭಕ್ತಿಯಲ್ಲಿ ಆಸಕ್ತನೂ ಭಕ್ತಿರಕ್ಷಕನೂ ಆಗಿದ್ದೀಯೆ. ನಿನ್ನನ್ನು ನೀನು ತಿಳಿಯುವದಕ್ಕೆ ನೀನು ಹೀಗಾಗಬಹುದೇ? ಬಹಳಮಾತುಗಳಿಂದೇನು? ನಿನಗೆ ತಿಳಿಯದೆ ಇರತಕ್ಕಮಾರ್ಗಗಳ್ಯಾವೂಇಲ್ಲ. ಆದರೆ ಎಲೈ ಭಕ್ತಶ್ರೇಷ್ಠನೇ! ಈಗ ನೀನು ಅಂಥಾ ಮಾರ್ಗವನ್ನು ತಿಳಿಯುವದಕ್ಕೆ ಅಪೇಕ್ಷಿಸಲಿಲ್ಲ. ಸ್ತ್ರೀಯರಾದ ನಾವುಗಳು, ತಮೋಗುಣದಿಂದಕೂಡಿದವರೂ. ಸಾಧಾರಣಶಕ್ತಿಯುಳ್ಳವರೂ, ವ್ಯಭಿಚಾರಿಣಿಯರು, ಆಗಿದ್ದೆವೆ. ನಮ್ಮವಿವೇಕಕ್ಕಿಂತಲೂ ನಿನ್ನ ವಿವೇಕಕಡಮೆಯಾಯಿಂತೇ ಈಪ್ರಕಾರವಾಗಿ ಆಪ್ರೌಢವತಿಯು. ಆವೇಶ್ಯಾಸ್ತ್ರೀಯರತಿರಸ್ಕಾರಪೂರ್ವಕವಾಗಿ, ಭಕ್ತಿಸ್ಥಿತಿಯನ್ನು ಚನ್ನಾಗಿ ಕೀರ್ತಿಸುತ್ತಿರಲು; ಅತಿಸಾಹಸಿಯಾದ ಈ ಗುರುಭಕ್ತಾಂಡರಿಯು ಪೂರ್ವದಂತೆ ಆ ಮಾತುಗಳಿಗೆ ಕಿವಿಗೊಡದೆ, ಹೃದಯದಲ್ಲಿ ವಿಶೇಷವಾದ ಜುಗುಪ್ಸೆಯನ್ನೂ ತಾಳದೆ ಆತುರವನ್ನೂ ಸಂತೋಷವನ್ನೂ ವಿಶೇಷವಾದ ಕೋಪವನ್ನು ಹೊಂದಿದನು. ಆದರ ರೀತಿಯನ್ನು ಪ್ರೌಢವತಿಯು ತಿಳಿದು, ಆತನನ್ನು ನೋಡಿ, ವಿಟನ್ಯಾಯವನ್ನು ಹೇಳಿದ್ದರಿಂದಲೊ ಭಕ್ತಿಮಾರ್ಗವನ್ನೂ ಉಪದೇಶಿಸಿದ್ದರಿಂದಲೂ ಈತನಿಗೆ ಸ್ವಲ್ಪವೂ ವಿವೇಕ ಉಂಟಾಗಲಿಲ್ಲ. ಮತ್ತು ಪುರಾತನ ಭಕ್ತರಮಹಿಮೆಯನ್ನು ಹೇಳಿದರೆ ಸ್ವಲ್ಪ ಬುದ್ಧಿಯುಂಟಾದೀತು? ಎಂದು ನಿಶ್ಚೈಸಿ, ಆಪ್ತರಾದವರು ಹೇಳಿದ ಬುದ್ಧಿಯನ್ನು ಕೇಳಿದ್ದರಿಂದ ಮಹಾತ್ಮರಾದ ಶ್ವೇತ ಮೊದಲಾದವರಿಗೆ ಭಕ್ತಿವುಂಟಾದ ರೀತಿಯನ್ನೂ ಮುಕ್ತಿಯನ್ನೂ ಪಡೆದು ಶಿವನೊಡನೆ ಸೇರಿದರೀತಿಯನ್ನೂ ಇವನಿಗೆ ಹೇಳಬೇಕೆಂದು ವಿಚಾರಮಾಡಿ, ಆತನನ್ನು ಕುರಿತು ಹೇಳಿದ್ದೇನೆಂದರೆ, ಎಲೈ ಸದ್ಭಕ್ತಿಯಲ್ಲಿ ಪ್ರೀತಿಯುಳ್ಳವನೇ! ಕೆಲವರು ಪುರಾತನ ಭಕ್ತರು ಆಪ್ತರು ಹೇಳಿದ ಬುದ್ಧಿಯನ್ನು ಅಂಗೀಕರಿಸಿ ಜಯವನ್ನು ಹೊಂದಿದರು. ಉತ್ತಮರಾದವರು ಸಕಲಕಾರಣಗಳನ್ನು ತಾವೇತಿಳಿದು ಕೊಳ್ಳುತ್ತಾರೆ. ಮಧ್ಯಮರು ಹೇಳಿದ ಮೇಲೆ ತಿಳಿದುಕೊಳ್ಳುತ್ತಾರೆ, ನೀಚರು ಹೇಳಿದರೂ ತಿಳಿದುಕೊಳ್ಳುವುದಿಲ್ಲ. ಆಪ್ತರು ಹೇಳಿದ ಬುದ್ಧಿಯದೆಸೆಯಿಂದ ಕರ್ತವ್ಯವನ್ನು ತಿಳಿದರೆ, ಹಾನಿಯುಂಟಾಗುವುದೇ ಏನು? ಪೂರ್ವದಲ್ಲಿ ರಂಭೆಯು ಸುಖವನ್ನುಂಟುಮಾಡಬೇಕೆಂಬ ಆಲೋಚನೆಯಿಂದ ಬೋಧಿಸುತ್ತಿರಲು; ಶ್ವೇತನು ಸಾವಧಾನಮನಸ್ಕನಾಗಿ ಆಲಿಸಲಿಲ್ಲವೇನು? ಆದರ ಕ್ರಮವನ್ನು ಹೇಳುತ್ತೇನೆ ಕೇಳು. * * *

ಬಸವೇಶವಿಜಯದಲ್ಲಿ ಇಪ್ಪತ್ತೈದನೇ ಅಧ್ಯಾಯ
ಸಂಪೂರ್ಣವು

# ಇಪ್ಪತ್ತಾರನೇ ಅಧ್ಯಾಯವು.

---

## ಶ್ವೇತನ ಕಥೆ

ಸೌಂದರ್ಯವತಿಯಾಗಿಯೂ ಅಪ್ಸರಸ್ತ್ರೀಯರಿಂದ ಪೂಜಿಸಲ್ಪಟ್ಟವಳಾಗಿಯೂ ಇರುವ ರಂಭೆಯೆಂಬ ಹೆಸರುಳ್ಳ ಒಬ್ಬ ದೇವತಾಸ್ತ್ರೀಯು ಅನೇಕ ಪಾಪಗಳಂಮಾಡಿದವನಾಗಿಯೂ, ಮನೋವಿಕಾರಗಳಿಂದ ಕೂಡಿದವನಾಗಿಯೂ, ತನ್ನ ಸಾನ್ನಿಧ್ಯವನ್ನು ಸೇರಿದವನಾಗಿಯೂ ಇದ್ದ ಶ್ವೇತನನ್ನು ನೋಡಿ, ಮನಸ್ಸಿನಲ್ಲಿ ಆಲೋಚಿಸಿದವಳಾಗಿ ದುಃಖದಿಂದ ಮುಗುಳುನಗೆಯಿಂಕೂಡಿದ ಮುಖವುಳ್ಳವಳಾದಳು. ಶ್ವೇತನು ಆಕೆಯನ್ನುನೋಡಿ;—ಎಲೌಭದ್ರಮುಖಿಯೇ! ನೀನು ನನ್ನನ್ನುನೋಡಿ, ನಿಷ್ಕಾರಣವಾಗಿ ಯಾತಕ್ಕೆ ನಕ್ಕೆ, ಹೇಳು ಎನಲು. ರಂಭೆಯು ಕರುಣದಿಂದ ಇವನಿಗೆ ಬೋಧಿಸಬೇಕೆಂಬ ಇಚ್ಛೆಯುಳ್ಳವಳಾಗಿ ಉತ್ತರವನ್ನು ಹೇಳಿದ್ದೇನಂದರೆ;—ನಿನ್ನ ನಡತೆಯು ಬಹುಪಾಪದಿಂದ ತುಂಬಲ್ಪಟ್ಟದ್ದು; ಅದನ್ನು ಕೇಳು. ನೀನು ಹುಟ್ಟಿದಂದಿನಿಂದ ಯಾವಾಗಲೂ ಆನೆಯಂತೆ ಮದಿಸಿ, ಹೆಚ್ಚಿದವನಾಗಿ, ನಿನ್ನನ್ನು ನೀನುತಿಳಿಯದೆ ನಡೆಯುತ್ತಾ, ಕೊಬ್ಬಿನಿಂದ ರಾತ್ರಿ ಹಗಲೂ ಸ್ತ್ರೀಯರೊಡನೆಸೇರಿ, ವಿಷಯಲಂಪಟನಾಗಿ ಶಿವಾಲಯವನ್ನು ಕಂಡಾಗ್ಯೂ ಶಿವನಿಗೆ ನಮಸ್ಕರಿಸಿದವನಾಗಲಿಲ್ಲ. ಸದ್ಗುರುಗಳನ್ನು ಯಾವಾಗಲಾದರೂ ಕಡೆಗಣ್ಣಿಂದಾದರೂ ನೋಡಲಿಲ್ಲ. ಶಿವಭಕ್ತರಿಗೆ ನೀನು ಒಂದುಸಾರಿಯಾದರೂ ನಮಸ್ಕರಿಸಿದವನಾಗಲಿಲ್ಲ. ಸ್ವಲ್ಪವಾಗಿಯಾದರೂ ನಿನ್ನ ದುರ್ಮಾರ್ಗವನ್ನು ಬಿಡಲಿಲ್ಲ. ನೀನು ಅಜ್ಞಾನದಿಂದ ಮುಚ್ಚಲ್ಪಟ್ಟವನಾಗಿ, ರುದ್ರಾಕ್ಷಮಣಿಯನ್ನು ಕೈಯಿಂದಮುಟ್ಟಿಯಾದರೂ ತಿಳಿದವನಲ್ಲ. ಯಾವಾಗಲೂ ಹಣೆಯಲ್ಲಿ ಭಸ್ಮವನ್ನು ಕಿಂಚಿತ್ತಾದರೂ ಧರಿಸಿದವನಲ್ಲ. ಮದದಿಂದ ಕೊಬ್ಬಿದ ನೀನು ಕನಸಿನಲ್ಲಾದರೂ ಧರ್ಮದ ಸುದ್ದಿಯನ್ನು ಕಂಡವನಲ್ಲ. ನಿನಗೆ ದುಷ್ಕಾರ್ಯಗಳೇ ಧರ್ಮವು. ಕಾಮಭೋಗವೇ ವ್ರತವು. ಸುಖಾನುಭವವೇ ಮಹಾಯೋಗವು. ಎಂಬಂತೆ ಯಾವಾಗಲೂ ನಡೆದೆ. ಒಂದಾನೊಂದುದಿವಸದಲ್ಲಿ ವೇಶ್ಯಾಸ್ತ್ರೀಗೆ ಪುಷ್ಪಗಳನ್ನು ತರುತ್ತಿರುವಲ್ಲಿ ಒಂದಾನೊಂದು ಪುಷ್ಪವು ಕಯಿಂಜಾರಿ ಎಂಜಲಿನ

ಸ್ಥಳದಲ್ಲಿ ಬೀಳಲು; ಅದನ್ನು ತೆಗೆದುಕೊಳ್ಳುವದಕ್ಕೆ ನಾಚಿ, ಅದು ಶಿವಾರ್ಪಿತ ವಾಗಲೆಂದು ಹೇಳಿದೆ. ಆಮಾತು ನಿನಗೆ ಜನ್ಮಾಂತರಕೃತಪುಣ್ಯದಿಂದ ಪ್ರಾಪ್ತ ವಾಯಿತು. ಆ ಪುಣ್ಯವಶದಿಂದ ಈಗ ಶ್ರೇಷ್ಠವಾದ ಇಂದ್ರಪದವಿಯನ್ನು ಪಡೆದಿ ದ್ದೀಯೇ. ಆ ಫಲವನ್ನನುಭವಿಸುವದಕ್ಕೆ ಇದೊಂದೇದಿನವು ನಿನಗೆ ಗೊತ್ತಾಗಿದೆ. ನಾಳೆದಿನ ನರಕಾಗ್ನಿಯಲ್ಲಿ ಬೀಳುವೆನೆಂದರಿಯದೆ ಕೇವಲ ಮದಿಸಿರುವದಕ್ಕಾಗಿ ಈಗ ನನಗೆ ವಿಶೇಷವಾಗಿ ದುಃಖದಮುಗುಳ್ನಗೆಯುಂಟಾಯಿತು. ಎಂದು ಹೇಳಲು; ಶ್ವೇತನುಕೇಳಿ, ಎಲೌ ಕಮಲಮುಖಿಯೆ ನೀನು ನನ್ನನ್ನು ಕುರಿತು ದುಃಖಿಸುವುದಕ್ಕೂ ನಗುವದಕ್ಕೂ ನಿಮಿತ್ತವೇನು? ಸ್ತ್ರೀಯು ನನ್ನನ್ನು ಕಲಿ ಯುಗದ ಮನ್ಮಥನೆಂದೂ, ವಿಟರು ದಕ್ಷಿಣಾಯಕರಲ್ಲಿ ಶಿರೋಮಣಿಯೆಂದೂ, ಹೇಳುವಂತೆ ಭೂಲೋಕದಲ್ಲಿ ಬದುಕಿದೆನು. ಈಗ ಉತ್ತಮವಾದ ಇಂದ್ರನ ಪದ ವಿಯನ್ನು ಪಡೆದಿದ್ದೇನೆ. ಇದಲ್ಲದೆ ದೇವತಾಸ್ತ್ರೀಯರ ಶ್ಲಾಘ್ಯವಾದ ಇಷ್ಟಾ ನುಗುಣವಾದ ಸೌಖ್ಯಗಳಿಂದ ಕೂಡಿದವಳಾಗಿಯೂ ಅಪ್ಸರಸ್ತ್ರೀಯರೊಳಗೆ ಬಹು ಯಶಸ್ವಿಯಾಗಿಯೂ ಇರುವ ರಂಭೆಯಾದ ನಿನ್ನೊಡನೆ ಕಾಮಸೌಖ್ಯವ ನ್ನು ಅನುಭವಿಸುವದಕ್ಕಾಗಿ ನಿನ್ನ ಸಮೀಪವನ್ನೈದಿದ್ದೇನೆ. ನಾನು ಉಭಯ ಲೋಕಗಳಲ್ಲಿಯೂ ಜಯಶಾಲಿಯು ನನಗಿಂತಲೂ ಭೂಲೋಕದಲ್ಲಿ ಯಾವನಿ ದ್ದಾನೆ? ಎಲೌ ಸುಂದರಿಯೇ ನಾನು ನಾಳೆ ಉಂಟಾಗುವ ನರಕವನ್ನು ಗಣನೆಗೆ ತರುವದಿಲ್ಲ. ಆ ಪುಷ್ಪದದೆಸೆಯಿಂದ ಈ ಇಂದ್ರತ್ವವು ನನಗೆ ಪ್ರಾಪ್ತವಾಗಿದ್ದರೆ ಅದು ಹ್ಯಾಗೆತಾನೆ ತಪ್ಪಿಹೋದೀತು? ಶಿವನಿಂದ ಕೊಡಲ್ಪಟ್ಟದ್ದು ಅಸ್ಥಿರವಾ ದೀತೆ? ಹೀಗಿರುವಲ್ಲಿ ದುಃಖದಿಂದ ಪ್ರಯೋಜನವೇನು? ಬಾ ಎಂದುಕರೆಯಲು ತವಕಗೊಳ್ಳುವವನಾಗಿಯೂ, ಕಾಮುಕನಾಗಿಯೂ ಇರುವ ಶ್ವೇತನನ್ನು ಕುರಿ ತು;— ಎಲೈ ಪುರುಷನೇ ನೀನು ಹೀಗೆ ತ್ವರೆಪಡುವದರಿಂದ ಪ್ರಯೋಜನವೇನು? ನಾನು ಇನ್ನೆಲ್ಲಿಯಾದರೂ ಹೋಗುವೆನೇ ಆದರೆ ನೀನು ನನ್ನೊಡನೆ ಈ ದಿವಸವಿ ದ್ದು ನಾಳೇದಿವಸ ನರಕವನ್ನು ಹೊಂದಿದರೆ ನಾನು ನೋಡಲಾರೆನು. ಈಗ ಭ್ರಾಂತಿಯನ್ನುಬಿಟ್ಟು ವಿವೇಕದಿಂದ ನನ್ನಮಾತನ್ನು ಕೇಳು ನೂತನವಾದ ಸೌಂ ದರ್ಯದಿಂದ ಶೋಭಿಸುವವರಾಗಿಯೂ, ಕಾಮಸೌಕ್ಯವೆಂಬ ಕ್ಷೀರಸಮುದ್ರದಲ್ಲಿ ಮುಳುಗಿದವರಾಗಿಯೂ ಇರುವ ಅನೇಕ ದೇವತಾಸ್ತ್ರೀಯರು ಸುರರನ್ನೂ, ಇಂ ದ್ರ, ನಳಕೂಬರ ಮುಂತಾದ ವಿಟರನ್ನೂ, ಧಿಕ್ಕರಿಸಿ, ಬಂದು ಯಾವಾಗಲೂ

ನಿನ್ನಲ್ಲಿಯೇ ವಾಸಿಸುವ ಕ್ರಮವನ್ನು ಹೇಳುತ್ತೇನೆ. ಈಗ ಅರ್ಧರಾತ್ರಿಯಾಯಿತು. ಇನ್ನುಮೇಲೆ ನನ್ನೊಡನೆ ಸೌಖ್ಯವನ್ನಪೇಕ್ಷಿಸಿದರೆ ಒಂದು ಜಾವಮಾತ್ರ ಸಿಕ್ಕುತ್ತದೆ. ಆದಕಾರಣದಿಂದ ನಿರಂತರಸೌಖ್ಯವನ್ನುಂಟುಮಾಡುತ್ತೇನೆ ಬಾ ಎಂದು ಹೇಳಿದಳು. ಶ್ವೇತನು ಆ ಮಾತಿಗೆ ಒಪ್ಪಲು; ರಂಭೆಯು ಆತನಿಗೆ ಭಸ್ಮರುದ್ರಾಕ್ಷಿಗಳನ್ನು ಧರಿಸಿ, ಅವನಿಗೆ ಶಿವಾಲಯವನ್ನು ತೋರಿಸಿದಳು. ಅವನು ಶಿವಾಲಯದಲ್ಲಿ ಆಕೆ ಹೇಳಿದರೀತಿಯಾಗಿ ಗುಡಿಸಿ, ಸಾರಿಸಿ ರಂಗವಲ್ಲಿಯನ್ನುಬಿಟ್ಟು ಮಂದಾಕಿನೀಜಲ, ಹೂವು, ಪತ್ರೆ, ಹಣ್ಣುಮೊದಲಾದವುಗಳನ್ನು ತಂದು, ವಿದ್ಯುಕ್ತಪ್ರಕಾರವಾಗಿ ಶಿವಲಿಂಗಕ್ಕೆ ಅಭಿಷೇಕವನ್ನುಮಾಡಿ, ಧೂಪ ದೀಪಮುಂತಾದವುಗಳಿಂದ ಪೂಜಿಸಿ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ, ಸ್ತುತಿಸಿ, ಸಂತೋಷದೊಡನೆ ಪಾರ್ವತೀ ಪತಿಯಾದ ಶಿವನಮುಂದೆ ನರ್ತನವನ್ನು ಮಾಡಿದನು. ಹೀಗೆ ಶಿವರಾತ್ರಿವ್ರತದ ವಿಧಾನದಂತೆ ಷೋಡಶೋಪಚಾರಗಳಿಂದ ತ್ರಿಪುರಧ್ವಂಸಿಯಾದ ಶಿವನಪೂಜೆಯನ್ನು ಚನ್ನಾಗಿಮಾಡಿದನು. ಅಷ್ಟರೊಳಗೆ ಅವನ ಪಾಪಸಮೂಹವು ಹೋದಂತೆ ರಾತ್ರಿಯು ಕಳೆದುಹೋಯಿತು. ಬೆಳಗಾಗಲು; ನೋಡುವದಕ್ಕೆ ಭಯಂಕರರಾದ ಯಮದೂತರು ಬಂದು; ಎಲೌ ರಂಭೆಯೇ! ನೆನ್ನೇದಿನರಾತ್ರಿಯಲ್ಲಿ ಇಂದ್ರನಾಗಿದ್ದವನನ್ನು ತೋರಿಸು. ಎಂದು ಕೇಳಲು; ಮದದಿಂದಕೊಬ್ಬಿದ ಆ ಯಮಭಟರಿಗೆ ರಂಭೆಯು ಗೌಡಿಯರಮುಖದಿಂದ ದೇವಾಲಯದಲ್ಲಿ ಶಿವಪೂಜೆಯಲ್ಲಿ ಆಸಕ್ತನಾಗಿರುವ ಶ್ವೇತನನ್ನು ತೋರಿಸಿದಳು. ಆ ದೂತರು ಶಿವಭಕ್ತಿಯೆಂಬ ಐಶ್ವರ್ಯದಿಂದ ಪೂಜ್ಯನಾಗಿಯೂ, ತಪೋನಿಷ್ಠೆಯರೀತಿಯಿಂದ ಶಿವನನ್ನು ಪೂಜಿಸುವವನಾಗಿಯೂ, ಇರುವ ಅವನನ್ನುನೋಡಿ, ಹಿಡಿಯುವದಕ್ಕೆ ಸಂಕೋಚಪಟ್ಟವರಾಗಿ, ನಡುಗುತ್ತಾಬಂದು ಯಮನಿಗೆ ತಿಳಿಸಿದರು. ಯಮನು ಕೋಪಗೊಂಡವನಾಗಿ ಕಯ್ಯಿಂದ ತೊಡೆಯನ್ನು ಬಡಿದುಕೊಂಡು;—ಹ್ಯಾಗೆ ಹ್ಯಾಗೆ? ಏನು? ಶ್ವೇತನು ಶಿವನನ್ನು ಆರಾಧಿಸುತ್ತಾನೆಯೇ? ರಂಭೆಯು ಅವನನ್ನು ಈ ಕಾರ್ಯಕ್ಕೆ ಪ್ರೇರಿಸಿದಳೋ? ಶಿವನು ಅವನನ್ನು ರಕ್ಷಿಸಿಕೊಳ್ಳುತ್ತಾನೆಯೋ? ಶಿವನಿಗೆ ಕೋಪವುಂಟಾದರೆ; ನನಗೆ ಈ ಅಧಿಕಾರವು ಸಾಕು. ಆ ಪಾಪಿಯನ್ನು ಹಿಡಿಯದೆ ಬಿಡುವದಿಲ್ಲ. ಎಂಬದಾಗಿ ಹೇಳಿ ಶೀಘ್ರದಲ್ಲಿ ಮಹಿಷಾರೂಢನಾಗಿ ಬರಲು; ಆಕ್ಷಣದಲ್ಲೇ ಶರಣಾಗತರ ದುಃಖವನ್ನು ಪರಿಹರಿಸುವ ಶಿವನು, ದೇವತೆಗಳು ಸ್ತುತಿಸುತ್ತಿರಲು; ಅತಿ ಭಯಂಕರವಾದ ತ್ರಿಶೂಲದಿಂದ ಆ ಯಮನಎದೆ

ಯನ್ನು ವೇಗದಿಂದ ತಿವಿದು, ಶ್ವೇತನಿಗೆ ಗಣಾಧಿಪತ್ಯವನ್ನು ಕೊಟ್ಟನು. ಆದಕಾರಣದಿಂದ ಸ್ತ್ರೀಯರ ಹಿತಕರವಾದ ಬೋಧನೆಗಳು ಶ್ರೇಯಸ್ಸಿಗೆ ಕಾರಣಗಳಲ್ಲವೇ?

ಬಸವೇಶವಿಜಯದಲ್ಲಿ ಇಪ್ಪತ್ತಾರನೇ ಅಧ್ಯಾಯವು
ಸಂಪೂರ್ಣವು.

## ಇಪ್ಪತ್ತೇಳನೇ ಅಧ್ಯಾಯವು

### ಮಲ್ಹಣನ ಕಥೆ

ಇದಲ್ಲದೆ ಪೂರ್ವದಲ್ಲಿ ಕವೀಶ್ವರರಿಂದ ಸ್ತುತಿಸಲ್ಪಟ್ಟವನಾಗಿಯೂ, ಶಿವನಲ್ಲಿ ಭಕ್ತಿಯುಳ್ಳವನಾಗಿಯೂ, ವಿಟಶಿರೋಮಣಿಯಾಗಿಯೂ ಇರುವ ಮಹಾತ್ಮನಾದ ಮಲ್ಹಣನೆಂಬವನು ಈ ಭೂಮಿಯಲ್ಲಿ ವೇಶ್ಯಾಸ್ತ್ರೀಯೊಡನೆ ಸಂತೋಷದಿಂದ ಮನ್ಮಥ ಸುಖವನ್ನನುಭವಿಸಿಕೊಂಡಿದ್ದನು. ಆ ವೇಶ್ಯಾಸ್ತ್ರೀಗೆ ಒಬ್ಬತಾಯಿ ಇದ್ದಳು. ಅವಳು ಎಂಥಾವಳೆಂದರೆ;—ನೂಲಿನಿಂದ ಭೂಮ್ಯಂತರಿಕ್ಷಗಳೆರಡನ್ನು ಪೋಣಿಸುವದಕ್ಕೂ, ಕೂದಲುಹುಟ್ಟದತಲೆಗಳನ್ನೂ ಮುಂಡಿಗಳನ್ನೂ ಕಟ್ಟುವದಕ್ಕೂ, ತನ್ನ ನೆರಳನ್ನು ಅತಿಕ್ರಮಿಸಿ ನಡೆಯುವದಕ್ಕೂ, ಬಿಸಿಲ್ಗುದುರೆಯನ್ನು ಹಿಡಿದು ತರುವದಕ್ಕೂ, ಹರಿಯುವ ನೀರನ್ನು ಎರಡುಭಾಗವಾಗಿ ಸೀಳುವದಕ್ಕೂ, ಶಿವಂಗಿಯ ಹಾಲನ್ನು ಮಾರುವದಕ್ಕೂ, ಕಲ್ಲಿನಿಂದ ನಾರನ್ನು ಎತ್ತುವದಕ್ಕೂ, ಕಲ್ಲಿನಲ್ಲಿ ಮುಳುಗುವದಕ್ಕೂ, ಮದ್ದಾನೆಯನ್ನು ಹಿಡಿಯುವದಕ್ಕೂ ಒನಕೆಯ ತುದಿಯಲ್ಲಿ ಪ್ರತಿಕ್ಷದಲ್ಲಿಯೂ, ಚಿಗುರನ್ನು ಬಿಡಿಸುವದಕ್ಕೂ, ಗಂಜಿಯಲ್ಲಿ ಬೆಣ್ಣೆಯನ್ನು ತೆಗೆಯುವದಕ್ಕೂ, ಬೆಟ್ಟದ ಮೇಲೆ ಮತ್ತೊಂದು ಬೆಟ್ಟವನ್ನು ಇಡುವದಕ್ಕೂ, ಮಂಜನ್ನು ಕೊಳಗದಿಂದ ಅಳೆಯುವದಕ್ಕೂ, ರಾತ್ರಿಯನ್ನು ಹಗಲನ್ನಾಗಿ ಮಾಡುವದಕ್ಕೂ, ಆಕಾಶದಲ್ಲಿ ಚಿತ್ರಪಟಗಳನ್ನು ನಿರ್ಮಿಸುವದಕ್ಕೂ, ಗಾಳಿಯನ್ನು ಹಿಡಿಯುವದಕ್ಕೂ, ಆಲಿಕಲ್ಲುಗಳಿಂದ ಶಿವಾಲಯವನ್ನು ಕಟ್ಟುವದಕ್ಕೂ, ಮರಳಿನಿಂದ ಹಗ್ಗವನ್ನು ಹೊಸೆಯುವದಕ್ಕೂ, ದಿಗಂತಗಳನ್ನು ತಾಳಗ

ಳನ್ನಾಗಿ ಮಾಡಿಕೊಂಡು, ಚನ್ನಾಗಿ ಬಡಿಯುವದಕ್ಕೂ, ಬೆಳುದಿಂಗಳಿಂದ ಬಟ್ಟೆಯನ್ನು ನೆಯ್ಯುವದಕ್ಕೂ, ಸತ್ತುಹುಟ್ಟುವದಕ್ಕೂ, ಸಮರ್ಥಳಾಗಿರುವಳು. ಒಂದಾನೊಂದು ದಿನ ತನ್ನ ಅಳಿಯನಾದ ಮುಲ್ಹಣನ ಬಳಿಗೆ ಬಂದು, ಹೇಳಿದ್ದೇನಂದರೆ; ಚಿಕ್ಕತನದಿಂದಲೂ ನನ್ನ ಮಗಳು ನಿನ್ನನ್ನು ಹೊರತು ಮತ್ತೊಬ್ಬನನ್ನು ಕಾಣಳು. ನನ್ನ ಮಗಳು ಹುಡುಗಿಯಾಗಿರುವಾಗಲೇ ನಿನ್ನಲ್ಲಿ ಅನುರಾಗವನ್ನಿಟ್ಟದ್ದು ಪಾಪವೋ? ಯಾವಾಗಲೂ ನಿಷ್ಪ್ರಯೋಜನವಾದ ಸಡಗರವನ್ನು ತೋರಿಸುವದು ನಿನಗೆನ್ಯಾಯವೇ . ನಿನಗೆ ಸಮಾನರಾದವಿಟರು ನಿನ್ನನ್ನು ನೋಡಿ ವಿಶೇಷವಾಗಿ ನಗುವದಿಲ್ಲವೇ? ನಿನ್ನ ಸಾಮರ್ಥ್ಯವು ನನ್ನ ಕಣಜಗಳಲ್ಲಿ ಭತ್ತವಾಗುವದೇ? ನಿನ್ನಕವಿತ್ವವು ನನ್ನಮಗಳಿಗೆ ಒಡವೆಯಾಗುವದುಂಟೇ? ನಿನ್ನ ಸೀಯಾದ ಮಾತು ನನ್ನಮಗಳಿಗೆ ಪವನಿನಸರವಾದೀತೇ? ನಿನ್ನ ಶಿವಭಕ್ತಿಯು ನಮಗೆ ಪರಗತಿಯಾದೀತೇ? ಹಾಗಾದಾಗ್ಯೂ ಹಬ್ಬಗಳಲ್ಲಿ ವಿಶೇಷವಾಗಿ ದ್ರವ್ಯವನ್ನು ಕೊಟ್ಟಿದ್ದೀಯಾ? ನನ್ನ ಮಗಳು ತನ್ನ ಹಾರವನ್ನು ಅಡವಿಟ್ಟು ವೀರಭದ್ರನಜಾತ್ರೆಗೆ ಹೋದಳು. ಶಿವರಾತ್ರಿಯಲ್ಲಿ ತನ್ನ ಉಂಗುರವನ್ನು ಮಡಗಿ, ಜಂಗಮಾರಾಧನೆಯನ್ನು ಮಾಡಿದಳು. ಕೈಕಡಗವನ್ನು ಮಾರಿ ವಸಂತೋತ್ಸವವನ್ನು ಮಾಡಿದಳು. ನನ್ನಮಗಳು ದವನಹುಣ್ಣಿಮೆಯಲ್ಲಿ ಚಿನ್ನದಸರವನ್ನು ಮಾರಿ ಗುರುಗಳಿಗೆ ಬಾಗಿನವನ್ನು ಕೊಟ್ಟಳು. ನೂಲು ಹುಣ್ಣಿಮೆಯಲ್ಲಿ ಕಾಲುಸರವನ್ನು ಮಾರಿ, ಭಕ್ತರಿಗೆ ಉತ್ಸವವನ್ನು ಮಾಡಿದಳು. ದೀಪಾಳಿಯಬಹ್ಬದಲ್ಲಿ ಪದಕವನ್ನು ಒತ್ತೆಯಿಟ್ಟು, ಶಿವನಿಗೆ ದೀಪಾರಾಧನೆಯನ್ನು ಮಾಡಿದಳು. ಈವರ್ಷದ ಶಿವರಾತ್ರಿಯು ಹುಲಿಯಹಾಗೆ ಬಂತು. ಇದಕ್ಕಾಗಿ ತನ್ನ ಮುತ್ತಿನಮಲಕವನ್ನು ಅಡುವಿಡುವದಕ್ಕಾಗಿ ಕಳುಹಿಸಿದಳು. ಎಲೈ ವಿಟಶ್ರೇಷ್ಠನೇ! ನೀನುಯಾವಾಗ ಕೊಡುವದಕ್ಕೆ ಸಮರ್ಥನಾಗುತ್ತೀಯೆ? ನಿನಗೆತಿಳಿಯದೋ! ತಿಳಿದಾಗ್ಯೂ ತಿಳಿದವನಹಾಗಿದ್ದೀಯೆ. ನನ್ನ ಮಗಳನ್ನು ವಿಶೇಷವಾಗಿ ಭ್ರಾಂತಿಪಡಿಸುವದಕ್ಕೆ ಬರುತ್ತೀಯಲ್ಲದೆ ಇನ್ನೇನೂ ಇಲ್ಲ. ಜಗಳವನ್ನು ತೆಗೆದು, ನೀನೇಸೋತು ಅವಳಿಗೆಜಯವನ್ನು ಕೊಟ್ಟು, ಅವಳನ್ನು ಹಂಗಿಸಿ, ಅವಳು ಕೋಪಿಸಿಕೊಂಡರೆ ನೀನು ಕೈಂಕರ್ಯವನ್ನು ತೋರಿಸುತ್ತಾ, ಆಕೆಯ ಮನಸ್ಸನ್ನು ಚೆನ್ನಾಗಿಎಳದು ಹೊಂದಿಕೊಳ್ಳುತ್ತೀಯೆ. ಒಂದೊಂದು ದಿವಸ ಅವಳನ್ನು ಬಿಟ್ಟುಹೋಗಿ ಅವಳುಬಂದು ಹಿಡಿದುಕೊಳ್ಳುವಲ್ಲಿ ದೇಹವನ್ನು ತಗ್ಗಿಸಿ ಅವಳ ಹೊಡತಗಳಿಗೆ ಮೈಯನ್ನು ತೆತ್ತು, ಅವಳು ಪ್ರಸನ್ನಳಾದರೆ ಸೇರಿ

ಕೊಳ್ಳುತ್ತೀಯೆ. ಅನುರಾಗದಿಂದ ರತಿಯನ್ನು ಮಾಡಿ, ಸಂತೋಷಗೊಂಡಿರು ವಾಗ ಸಂತೋಷಪಡುವವನಾಗುತ್ತೀಯೆ. ಅಭಿಮುಖಿಳಾದರೆ ಸಂತೋಷದಿಂದ ಅಂಗೀಕರಿಸುತ್ತೀಯೆ. ಮೊದಲು ಅವಳೇ ಉಪಕ್ರಮಿಸಿದರೆ ಪ್ರೀತಿಯುಕ್ತನಾಗಿ ಮಾತುಗಳಿಂದ ಸ್ವಾಧೀನಮಾಡಿಕೊಂಡು ಪ್ರೇಮದಲ್ಲಿ ನೆಲೆಗೊಳಿಸುತ್ತೀಯೆ. ಸಂಭೋಗದಲ್ಲಿ ಮನಸ್ಸನ್ನು ಕೊಟ್ಟು ಕಲಾರೀತಿಯಲ್ಲಿ ತಿಳಿದು ಅವಳನ್ನು ಪ್ರೇಮ ದಿಂದ ಸಮುದ್ರದಲ್ಲಿ ಮುಳಿಗಿಸಿ ಅನೇಕವಿಧವಾದ ರತಿಕ್ರೀಡೆಗಳನ್ನು ಮಾಡಿ, ರತಿ ಶ್ರಮವನ್ನು ತಕ್ಕ ಉಪಚಾರಗಳಿಂದ ಶಾಂತಿಪಡಿಸಿ, ಪರವಶತೆಯಿಂದಿರುವವಳನ್ನು ಎಚ್ಚರಗೊಳಿಸಿ, ಪ್ರತಿಕ್ಷಣದಲ್ಲಿಯೂ ಶೃಂಗಾರಚೇಷ್ಟೆಗಳನ್ನು ತೋರಿಸುತ್ತಾ ಪು ರುಷರೂಪದವೇಶ್ಯೆಯಂತೆ ಚನ್ನಾಗಿ ಮೋಹಗೊಳಿಸಿ, ವಿಪರೀತಸ್ಥಿತಿಯಲ್ಲಿ ಇದ್ದೀಯೆ. ಚಮತ್ಕಾರದ ಮಾತುಗಳನ್ನೂ, ಕಾಮಶಾಸ್ತ್ರರಹಸ್ಯವನ್ನೂ, ನಿನ್ನ ವಂಚನೆಗಳನ್ನೂ, ಜಾಣ್ಮೆಗಳನ್ನೂ, ಡಂಭಗಳನ್ನೂ ಅನೇಕವಾಗಿ ಹರಡಿ ನನ್ನ ಮಗ ಳನ್ನು ಮರುಳುಮಾಡಿಕೊಂಡಿರುವದು ಯುಕ್ತವೇ ? ನೀನು ಕೊಟ್ಟದೆಲ್ಲ ಬಂತು. ಅದೇ ನನಗೆ ಸಾವಿರವು. ಆದ್ದರಿಂದ ನೀನು ಶೀಘ್ರದಲ್ಲಿ ನನ್ನ ಮಗಳನ್ನು ಬಿಟ್ಟು ಹೋಗು. ಎಲ್ಲೇ ಹುಡುಗೀ ! ಸಾಕು. ನೀನು ಇವನನ್ನು ಬಿಟ್ಟುಬಿಡು. ಎಂದು ಅತಿ ಕಠಿನೆಯಾಗಿಯೂ, ದುಷ್ಟೆಯಾಗಿಯೂ ಇರುವ ಆ ಮುದುಕಿಯು ತನ್ನ ಮಗಳನ್ನು ನಿರ್ಬಂಧದಿಂದ ಬಿಡಿಸಿ, ಮತ್ತೊಬ್ಬ ಆಪಸನವಶದಲ್ಲಿ ಇರಿಸಿದಳು. ಬಳಿಕ ಮಲ್ಲಣನು ತೀವ್ರವಾದ ವಿಯೋಗಾಗ್ನಿಯ ಜ್ವಾಲೆಗಳಿಂದ ಪ್ರಾಣಕಾಂತೆಯ ಅಗಲಿಕೆಯಿಂದುಂಟಾದ ದುಃಖವು ಇಮ್ಮಡಿಯಾಗುತ್ತಿರಲಾಗಿ; ಬುದ್ಧಿಗೆಟ್ಟವ ನಾಗಿ, ದೇಹಗುಣಗಳಿಂದ ಬಿಡಲ್ಪಟ್ಟವನಾಗಿ, ಆ ಸ್ತ್ರೀಯಲ್ಲೇ ಮನಸ್ಸನಿಟ್ಟು, ಪೂರ್ವದಲ್ಲಿ ತನ್ನ ವಲ್ಲಭೆಯು ತನ್ನನ್ನು ಪ್ರೌಢವಾಗಿ ಪ್ರೇಮದೊಡನೆ ನೋಡಿದ ಕ್ರಮವನ್ನು ಪದೇ ಪದೇ ಸ್ಮರಿಸಿದನು. ಅವಳ ತೊಂಡೇಹಣ್ಣಿನಂತಿರುವ ತುಟಿ ಯನ್ನು ಹೃದಯದಲ್ಲಿ ಧ್ಯಾನಿಸುವನು ಆದಿಯಲ್ಲಿ ಆಕೆಗೆ ತಾನು ದೊರಕಿದ್ದ ರಿಂದುಂಟಾದ ಸುಖವನ್ನು ಚಿಂತಿಸಿದನು. ತಾನು ನಡಿಸಿದ ಶೃಂಗಾರಚೇಷ್ಟೆಗ ಳನ್ನು ಮನಸ್ಸಿನಲ್ಲಿ ಪರಿಭಾವಿಸಿದನು.

ಆಕೆಯ ಮಂದಹಾಸದ ಕಾಂತಿಯನ್ನೂ ಆನಂದದಿಂದುಂಟಾದ ರೋಮಾಂ ಚನಗಳನ್ನೂ ಅಪೇಕ್ಷಿಸಿದನು. ಆಕೆಯ ನುಡಿಯನ್ನು ಬಹು ಪ್ರೇಮದಿಂದ ನೆನೆದನು. ಉತ್ತಮವಾದ ಮನ್ಮಥಸೌಖ್ಯಗಳನ್ನು ಆಲೋಚಿಸಿ, ಅವಯವಗಳಲ್ಲಿ ವಿರಹದುಃ

ಬಾಗ್ನಿಯು ಉರಿಯುತ್ತಿರಲು ನಿಲ್ಲುವದಕ್ಕೆ ಅಸಕ್ತನಾಗಿ, ಧೈರ್ಯವನ್ನು ಬಿಟ್ಟು:— ಆಕೆಯ ಮೃದುವಚನಗಳನ್ನಾದರೂ ಕೇಳದಿದ್ದರೆ ನನ್ನ ಪ್ರಾಣಗಳು ನಿಲ್ಲವದಿಲ್ಲ ಎಂದು ನಿಶ್ಚೈಸಿ ಆಕೆಯ ಮಾತುಗಳನ್ನು ಕೇಳುವದಕ್ಕಾಗಿ ಆಕೆಯ ಮಲಗುವ ಮನೆಯ ಬಾಗಿಲ ಸಮೀಪದಲ್ಲಿ ಸ್ಥಿರಚಿತ್ತನಾಗಿ ನಿಂತುಕೊಂಡನು. ಅಷ್ಟರೊಳಗೆ ಆ ವೇಶ್ಯೆಯು ತಾಯಿಗೊತ್ತುಮಾಡಿಕೊಟ್ಟ ಹೊಸಬನಾದ ವಿಟನೊಡನೆ ರಾತ್ರಿ ಸ್ವಲ್ಪಹೊತ್ತು ಮನೆಯಲ್ಲಿದ್ದು ಕದವನ್ನು ತೆಗೆದು, ಬಾಯಿಮುಕ್ಕಳಿಸಿ, ಉಗುಳಿ ದಳು. ಆ ನೀರು ಮಲ್ಲಣನಮೇಲೆಬಿತ್ತು. ಆಗಲೇ ಮಿಂಚು ಮಿಂಚಲು; ಆತ ನನ್ನು ನೋಡಿ;—ಆಹಾ ಇವನ್ಯಾರು? ಮಲ್ಲಣನೇ! ಈ ಹೊತ್ತಿನಲ್ಲಿ ನೀನು ತಿರಿಗಿ ಬರುವದುನ್ಯಾಯವೋ! ಈ ಕತ್ತಲೆಯಲ್ಲಿ ಮಿಂಚದಿದ್ದರೆ ಯಾವದೊಂದು ಕಾಣುವದಿಲ್ಲ. ನಾನುಬಾಯಿಮುಕ್ಕಳಿಸಿದ ನೀರು ನಿನ್ನಮೇಲೆ ಬಿದ್ದದ್ದನ್ನು ಕಾ ಣೆನು. ಈ ರೀತಿಯಾಗಿ ಮಾತನಾಡುತ್ತಾ, ಆತನಿಗೆ ಕೈಲಾಸವನ್ನು ಕೊಟ್ಟು ಬಹು ಸಡಗರದಿಂದ ಮೆಲ್ಲಮೆಲ್ಲಗೆ ಮತ್ತೊಂದುಮನೆಗೆ ಕರದುಕೊಂಡುಹೋಗಿ, ಬಹಳದುಃಖದಿಂದ ತುಂಬಿದವಳಾಗಿ ಆ ಮಲ್ಲಣನ ಮೇಲೆ ಬಿದ್ದು, ರತಿಕ್ರೀಡೆಗೆ ಉದ್ಯುಕ್ತಳಾಗಲು; ಮಲ್ಲಣನು ಆಕೆಯನ್ನುಕುರಿತು;—ಎಲೈ ಪ್ರಿಯಳೇ ನಾ ನುನಿನ್ನನ್ನು ಕಾಣದೆ ಪ್ರಾಣಧಾರಣೆಯನ್ನು ಮಾಡುವದಕ್ಕೆ ಅಸಕ್ತನಾಗಿಬಂದು ನಿನ್ನನ್ನು ನೋಡಿದೆ. ನನಗೆ ಇದೇ ಸಾಕು. ಮತ್ತೊಬ್ಬವಿಟನು ಒಳಗಿರುವಾಗ ನಾನು ನಿನ್ನೊಡನೆ ಕ್ರೀಡಿಸುವದು ಯೋಗ್ಯವೇ? ಯಾವದಿವಸದಲ್ಲಿ ಯಾವನು ನಿನಗೆ ಒತ್ತೆಯನ್ನು ಕೊಡುತ್ತಾನೋ ಆದಿವಸ ಅವನೇ ಪತಿಯಲ್ಲವೇ ಎಂದು ಹೇ ಳಿಹೋಗಲುದ್ಯುಕ್ತನಾದ ಮಲ್ಲಣನನ್ನು ಕುರಿತು; ಆ ವೇಶ್ಯೆಯು ಹೇಳಿದ್ದೇನಂ ದರೆ;—ಎಲೈ ಕಾಂತನೇ! ನಿನ್ನಲ್ಲಿನಾನು ಅನುರಾಗವುಳ್ಳವಳಾಗಿದ್ದೇನೆ. ನೀನು ನನ್ನಲ್ಲಿ ಅನುರಾಗವುಳ್ಳವನಾಗಿದ್ದೀಯೆ. ಬಹುದ್ರವ್ಯವನ್ನಪೇಕ್ಷಿಸಿ, ಅತಿನಿರ್ದಯೆ ಯಾದ ನನ್ನ ತಾಯಿಯು ನಮ್ಮಿಬ್ಬರನ್ನು ಅಗಲಿಸುತ್ತಾಳೆ. ನಮಗೆ ಪರಸ್ಪರವಿ ರುವ ಅನುರಾಗವನ್ನು ಆಲೋಚಿಸುವದಿಲ್ಲ. ಆದಕಾರಣದಿಂದ ನಾನು ಹೇಳುವ ದನ್ನು ಕೇಳು. ನೀನು ಶಿವಭಕ್ತನೂ, ಶ್ರೇಷ್ಠವಾದ ಕವಿತ್ವದಲ್ಲಿ ನಿಪುಣನೂ ಆಗಿ ದ್ದೀಯೆ. ಕನ್ನಡಿಯಮೇಲೆ ಉದ್ದುರುಳುವಷ್ಟು ಕಾಲವಾದರೂ ನೀನುಸ್ಥಿರಚಿ ತ್ತನಾಗಿ ನಿನ್ನ ಕವಿತಾಧೋರಣೆಯಿಂದ ಪರಮೇಶ್ವರನನ್ನು ಸ್ತುತಿಸು. ಆತನು ತತ್‍ಕ್ಷಣದಲ್ಲೇ ನಿನಗೆ ವರವನ್ನು ಕೊಡುವನು. ನಮ್ಮಿಬರಿಗೂ ಯಾವ ಅಡ್ಡಿಯೂ

ಇಲ್ಲದೆ ಭೋಗಮೋಕ್ಷಗಳುಂಟಾಗುವವು. ಈ ಪ್ರಕಾರವಾಗಿ ಹೇಳಿದಮಾತನ್ನು ಮಲ್ಹಣನು ಕೇಳಿ;—ಎಲೇಕೋಮಲಾಂಗಿಯೇ! ನೀನು ಪ್ರೀತಿಯಿಂದ ನಿನ್ನ ಎರಡುಸ್ತನಗಳ ತುದಿಯಿಂದ ನನ್ನ ಬೆನ್ನನ್ನು ಆಲಿಂಗಿಸಿ ನಿಂತುಕೊಳ್ಳುವಿಯಾದರೆ ಬಹುಮಾತುಗಳಿಂದೇನು? ಒಂದು ನಿಮಿಷಮಾತ್ರದಲ್ಲಿ ಪರಮಶಿವನನ್ನು ಒಂದು ಪದ್ಯದಿಂದಮೆಚ್ಚಿಸಿ, ಭಕ್ತಿಯುಸಾಮರ್ಥ್ಯದಿಂದ ಆತನೊಡನೆ ಸಂಭಾಷಣೆಯನ್ನು ಮಾಡುತ್ತೇನೆ ಎಂದುಹೇಳಿ, ಭಕ್ತಿವಂತನಾದ ಆ ಮಲ್ಹಣನು ಮಾರನೇ ದಿನ ಶಿವಾಲಯಕ್ಕೆಹೋಗಿ, ಆವೇಶ್ಯೆಯು ಒರಗಿಕೊಂಡು ನಿಂತಿರಲು; ಶಿವನ ಎದುರಿಗೆ ನಿಂತು, ತನ್ನ ದೃಷ್ಟಿಯನ್ನು ಲಿಂಗದಲ್ಲಿಟ್ಟು, ಉಪಮಾದ್ಯಲಂಕಾರಗಳಿಂದ ಮಧುರವಾಗಿಯೂ ಶೃಂಗಾರರಸದಿಂದ ತುಂಬಲ್ಪಟ್ಟವುಗಳಾಗಿಯೂ ಇರುವ ಕಾಂತಾಕವಚಪ್ರಜಯಮೊದಲಾದ ಮೂವತ್ತಾರು ಶ್ಲೋಕಗಳಿಂದ ಸ್ತುತಿಸಿದನು. ಅನಂತರದಲ್ಲಿ ಪಾರ್ವತೀಪತಿಯು ಮೆಚ್ಚಿ ಪ್ರತ್ಯಕ್ಷನಾಗಿ, ಮಲ್ಹಣನನ್ನೂ ಆತನ ವೇಶ್ಯೆಯನ್ನೂ ಆಕೆಯಕೈಯ್ಯಲ್ಲಿದ್ದ ಗಿಳಿಯನ್ನೂ ಆಕೆಯ ತಾಯಿಯನ್ನೂ ಕರುಣದಿಂದ ಆ ದೇಹದೊಡನೆಯೇ ಶ್ರೇಷ್ಠವಾದ ವಿಮಾನವನ್ನು ಹತ್ತಿಸಿ, ಇಂದ್ರಾದಿ ಸಕಲ ದೇವತೆಗಳೂ ಸುತ್ತಲೂ ಸ್ತುತಿಸುತ್ತಿರಲಾಗಿ, ಕೈಲಾಸಕ್ಕೆ ಕರದೊಯ್ದನು.

ಆದಕಾರಣದಿಂದ ಸ್ತ್ರೀಜನವು ಹೇಳಿದ ಬುದ್ಧಿಮಾರ್ಗವನ್ನನುಸರಿಸುವವರಿಗೆ ಒಳ್ಳೇಹಿತವೇ ಆಗುವದು. ಈ ವಿಷಯದಲ್ಲಿ ಸಂದೇಹವಿಲ್ಲ. * * *

ಬಸವೇಶವಿಜಯದಲ್ಲಿ ಇಪ್ಪತ್ತೇಳನೇ ಅಧ್ಯಾಯವು
ಸಂಪೂರ್ಣವು

---

## ಇಪ್ಪತ್ತೆಂಟನೇ ಅಧ್ಯಾಯವು.

### ಕುಮಾರಪಾಲಗುರ್ಜರನ ಕಥೆ

ಇದಲ್ಲದೆ ಶ್ರೇಷ್ಠರಾದ ಶಿವಭಕ್ತರು ಪರಿಹಾಸಪ್ರಸ್ತಾಪಗಳಲ್ಲಿ ಆಡಿದಮಾತೆಲ್ಲವೂಕೂಡಿ ಅತಿಹಿತಕರವಾಗುವದು. ಈ ವಿಷಯದಲ್ಲಿ ಉದಾಹರಣೆಯಾಗಿ

ಒಂದು ಕಥೆಯನ್ನು ಹೇಳುತ್ತೇನೆ. ಪಾಪನಾಶಕನೂ, ಪ್ರೌಢನೂ ಮಹಾತ್ಮನೂ ಶಿವಭಕ್ತಿಯಲ್ಲಿ ಆಸಕ್ತನೂ; ಶತ್ರುಗಳಿಗೆ ಭಯಂಕರವಾದ ಪರಾಕ್ರಮವುಳ್ಳವನೂ ವೀರಶೈವ ಮತಸ್ಥನೂ ಆದ ಕುಮಾರಪಾಲಗುರ್ಜರನೆಂಬ ಒಬ್ಬ ರಾಜನಿದ್ದನು. ಆತನು ಒಂದಾನೊಂದು ದಿವಸದಲ್ಲಿ ತನ್ನ ಪತ್ನಿಯೊಡನೆ ಪಗಡೆಯನ್ನು ಆಡಿದನು ಹ್ಯಾಗಂದರೆ;-ಕರ್ಮೇಂದ್ರಿಯಗಳೈದು, ಜ್ಞಾನೇಂದ್ರಿಯಗಳೈದು, ಅಂತಃಕರಣಗಳುನಾಲ್ಕು, ಮೋಹಒಂದು, ಎಲ್ಲವೂಕೂಡಿ ಹದಿನೈದಾದವು. ತನ್ನ ಪತ್ನಿಯಸಂಬಧಿಗಳಾದುವ ಹದಿನೈದೂ; ತನ್ನ ಸಂಬಂಧಿಗಳಾದವುಗಳು ಹದಿನೈದು ಪಗಡೇಕಾಯಿಗಳಾಗುತ್ತಿರಲಾಗಿ; ಭಕ್ತಶಿರೋಮಣಿಯಾದ ಆ ರಾಜನು, ಇಹಪರಮಾರ್ಗಗಳ ವಿಷಯದಲ್ಲಿರುವ ವಿಚಕ್ಷಣತೆಯನ್ನು ಹಾಸಂಗಿಯನ್ನು ಮಾಡಿಕೊಂಡು ಪುಣ್ಯಪಾಪಗಳೆಂಬ ಎರಡು ದಾಳಗಳು ಪದೇಪದೇ ಪ್ರೇರಿಸಲ್ಪಡುತ್ತಿರಲಾಗಿ, ಇಪ್ಪತ್ತೈದು ಸಂಖ್ಯೆಯನ್ನು ಹೊಂದಿದ ದಾಯವೇ ಫಲವಾಗುತ್ತಿರಲಾಗಿ ಎರಡೈದೆಂಬ ದಾಯವು ದಾಳದಲ್ಲಿ ಯಾವಾಗ ಬೀಳುತ್ತದೋ ಆಗ ದಶವಿಧಭಕ್ತಿಯು ಪ್ರಾಪ್ತವಾಯಿತೆಂದು ಮನಸ್ಸಿನಲ್ಲಿ ತಿಳಿಯುವನು. ಯಾವಾಗ ಎರಡು ದುಗಗಳೆಂಬ ದಾಯಗಳು ಬೀಳುವುದೋ ಆಗ ನನಿಗೆ ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ, ಸದ್ಭಕ್ತಿಯು ಫಲಿಸುವದೆಂದು ಹೇಳುವನು. ಇತ್ತಿಗವೆಂಬದಾಯವು ಬೀಳುತ್ತಿರಲು, ತ್ರಿವಿಧಲಿಂಗಗಳಿಗೂ ತ್ರಿವಿದಾರ್ಪಣವಾಯಿತೆಂದು ಸಂತೋಷದಿಂದ ಕ್ರೀಡಿಸುತ್ತಿರುವನು. ಎಂಟೆಂಬದಾಯವು ಬೀಳುತ್ತಿರಲು, ಶಿವಭಕ್ತಿಪರರಾದವರು ಯಾವಾಗಲೂ ಅಷ್ಟಮದಗಳನ್ನು ಬಿಡಬೇಕೆಂದು ಬಿಡಬೇಕೆಂದು ಹೃದಯದಲ್ಲಿ ತಿಳಿಯುವನು. ಯಾವಾಗ ಐದೆಂಬದಾಯವು ಬೀಳುವುದೋ ಆಗ ಪಂಚೇಂದ್ರಿಯಗಳಿಗೂ ಪ್ರಸಾದವನ್ನು ಕೊಡುವವನಹಾಗೆ ಕ್ರೀಡಿಸುವನು. ಆರೆಂಬ ದಾಯವು ಬೀಳಲು, ಸದ್ಭಕ್ತರಾದವರು ಷಟ್ಸ್ಥಲಾಚಾರಗಳನ್ನು ನಡಿಸಬೇಕೆಂದು ಮನಸ್ಸಿನಲ್ಲಿ ಗ್ರಹಿಸುವನು. ಭದ್ರನಾಮಕವಾದ ದಾಯವು ಬೀಳುತ್ತಿರಲಾಗಿ, ವೀರಭದ್ರನನ್ನು ಸ್ಮರಿಸುವನು.ಮೂರು ಐದು ಮಲತ್ರಯವನ್ನೂ, ಅವಿದ್ಯಾದಿ ಪಂಚ ಕ್ಲೇಶಗಳನ್ನೂಶಿವಭಕ್ತರು ಬಿಟ್ಟಿರಬೇಕೆಂದು ತಿಳಿದು ಆಡುವನು. ನಾಲ್ಕುಐದು ದಾಯವುಬೀಳುತ್ತಿರಲು ; ಶಿವಪಂಚಾಕ್ಷರೀ ಮಂತ್ರದಿಂದ ಸಾಲೋಕ್ಯ ಮೊದಲಾದ ನಾಲ್ಕು ವಿಧವಾದ ಮೋಕ್ಷವು ಸಿದ್ಧಿಸುವದೆಂದು ಹೇಳುವನು. ಮೂರುನಾಲ್ಕು ದಾಯ ಬೀಳುತ್ತಿರಲಾಗಿ ತಾಪತ್ರಯವನ್ನು ಬಿಡ

ಬೇಕು, ಧರ್ಮಾದಿಪುರುಷಾರ್ಥಗಳನ್ನು ಸಂಪಾಧಿಸಬೇಕು ಎಂದು ಹೇಳುವನು. ಇದನ್ನು ನೋಡುತ್ತಿರುವ ಶಿವಭಕ್ತರು ಭೂಲೋಕದಲ್ಲಿ ಹೀಗೆ ಪಗಡೆಯಾಟವನ್ನು ಆಡುವದಕ್ಕೆ ಯಾರುತಾನೇ ಶಕ್ತರು ? ಎಂದು ಸುತ್ತಲೂ ಸ್ತೋತ್ರಮಾಡುತ್ತಿದ್ದರು. ಯಾಪದ್ಯೂತವು ಶಿವಭಕ್ತಿವಿರುದ್ಧವೋ ಅದನ್ನೇ ಆ ರಾಜನು ಶಿವಭಕ್ತಿವಿನೋದವನ್ನಾಗಿ ಕಲ್ಪಿಸಿಕೊಂಡು, ಆಡುತ್ತಾ ಆಡುತ್ತಾ ತನ್ನ ಪತ್ನಿಯ ಮುಖವನ್ನುನೋಡಿ, ಮುಗುಳುನಗೆಯಿಂದ ಕೂಡಿದ ಮುಖಕಮಲವುಳ್ಳವನಾದನು. ಅನಂತರದಲ್ಲಿ ಆ ರಾಜಪತ್ನಿಯು ಸುತ್ತಲೂನೋಡಿ, ಇಲ್ಲಿ ನಾವಿಬ್ಬರುಹೊರತು ಮತ್ತಾರೂ ಇಲ್ಲ. ನನ್ನನ್ನುನೋಡಿ ನಗುವುದಕ್ಕೆ ಕಾರಣವೇನು ? ಎಂದು ನಾಚಿಕೊಂಡು ಮುಖವನ್ನು ಸಂಕೋಚಪಡಿಸಿಕೊಂಡವಳಾಗಿ ಕೈಲಿದ್ದ ಎರಡುದಾಳಗನ್ನೂ ಹಾಸಂಗಿಯಮೇಲಿಟ್ಟು, ಪಗಡೇಆಟವನ್ನು ನಿಲ್ಲಿಸಿ, ರಾಯನನ್ನು ಕುರಿತು ಎಲೈ ರಾಜನೇ! ನಿಷ್ಕಾರಣವಾಗಿ ಉಂಟಾದ ನಗೆಯು ಈಗ ನನ್ನ ಮನಸ್ಸಿನಲ್ಲಿ ಸಂಶಯವನುಂಟುಮಾಡುತ್ತದೆ. ಕಾಯಾರ್ಪಣ, ಕರಣಾರ್ಪಣಗಳಲ್ಲಿ ಜಾಗರೂಕನಾಗಿರುವದ್ದರಿಂದುಂಟಾದ ಶಿವಾನಂದ ಸೌಖ್ಯಾಧಿಕ್ಯದಿಂದೇನಾದರೂ ನಗೆಯುಂಟಾಯಿತೋ ? ಇಂಥಾ ಅಪದಾನದಿಂದ ಬಿಡಲ್ಪಟ್ಟೆನಲ್ಲಾ ಎಂಬುವದರಿಂದುಂಟಾಯಿತೋ ? ನನ್ನಲ್ಲಿ ವ್ಯತ್ಯಾಸವನ್ನೇನಾದರೂ ನೋಡಿದೆಯೋ ? ಶಿವಭಕ್ತರಿಗೆ ಭೋಜನದಲ್ಲಿ ಆಸಕ್ತಿಯು ಉಚಿತವಲ್ಲವೆಂಬ ಆಲೋಚನೆಯಿಂದುಂಟಾಯಿತೋ ? ನಾನು ತ್ವರೆಯಿಂದ ಪಗಡೆಯನ್ನು ತಪ್ಪಾಗಿಹಿಡಿದಿದ್ದರಿಂದುಂಟಾಯಿತೋ? ದಾಳಗಳನ್ನು ಬೇರೆ ಮಾಡಿ ದೂರವಾಗಿಟ್ಟದ್ದರಿಂದಲೋ ? ಈ ಆಟದಲ್ಲಿ ನಾನು ಸೋಲುವೆನೆಂದು ತಿಳಿದದ್ದರಿಂದುಟಾಯಿತೋ ? ಸ್ತನಗಳಮೇಲನ ಸೆರಗು ಜಾರಿದ್ದರಿಂದದುಂಟಾಯಿತೋ ? ನೆನ್ನೆದಿನ ಅನುಭವಿಸಿದ ರತಿಯನ್ನು ಮನಸ್ಸಿನಲ್ಲಿ ಸ್ಮರಿಸಿಕೊಂಡದ್ದರಿಂದ ಸಂಭವಿಸಿತೋ ? ಬಂದಪಗಡೆಯೇ ತಿರಿಗಿಬಂದದರಿಂದಲೋ ? ಇಮ್ಮಡಿಯಾಗಿ ನಡಿಸಿದ ಸಂತೋಷದಿಂದಲೋ ? ಎರಡನೇ ಮನೆಯಲ್ಲಿ ಕಾಯನ್ನು ಹೊಡೆದದ್ದರಿಂದಲೋ? ಆಕಸ್ಮಿಕವಾಗಿ ಉಂಟಾದ ನಿನ್ನನಗೆಗೆ ಕಾರಣವನ್ನು ಸತ್ಯವಾಗಿ ಹೇಳು. ಹೇಳದೆ ಮರೆಮಾಡಿದರೆ ನಿನ್ನ ಪಾದದಾಣೆ; ಎಂದು ಕೇಳಲು; ರಾಯನು ಆಟವನ್ನು ಮುಗಿಸಿ, ತಿರಿಗಿನಗುತ್ತಾ, ಸಂತೋಷದಿಂದ ತನ್ನ ಪ್ರಾಣಕಾಂತೆಯನ್ನು ಕುರಿತು ಹೇಳಿದ್ದೇನಂದರೆ;—ಎಲೇ ರಮಣೀಯೇ ಕೇಳು. ಸನ್ಮಾರ್ಗದಲ್ಲಿ ನಡೆಯುವವನೂ, ಶಿವಭಕ್ತರಿಗೆ ಕಿಂಕರನೂ,

ಭಕ್ತಿವಂತನೂ ಆಗಿರುವ ಓಹಿಲನೆಂಬವನು ಸೌರಾಷ್ಟ್ರದ ಸೋಮೇಶ್ವರನನ್ನೂ ನಿರಂತರದಲ್ಲಿಯೂ ಸೇವಿಸುವದರಲ್ಲಿ ಆಸಕ್ತನಾಗಿರುವನು. ಆತನ ಚರಿತ್ರೆಯನ್ನು ಹೇಳುವದಕ್ಕೆ ಶಿವನಿಗೂ ಅಶಕ್ಯವು. ಸೋಮೇಶ್ವರನಾಜ್ಞೆಯಿಂದ ತಾನು ಸೌರಾಷ್ಟ್ರಕ್ಕೆ ಬಂದು, ತ್ರಿಭುವನಗಳಿಂದಲೂ ಸೇವಿಸಲ್ಪಡುವನಾಗಿಯೂ, ಭಕ್ತಜನಕ್ಕೆ ಪ್ರೀತಿಕರನಾಗಿಯೂ, ಇರುವ ಸೋಮೇಶ್ವರನನ್ನು ನೋಡಿ, ಆತನ ಪಾದಕಮಲಗಳಿಗೆ ನಮಸ್ಕರಿಸಿ, ಆನಂದ ಬಾಷ್ಪಗಳಿಂದ ತುಂಬಲ್ಪಟ್ಟ ನೇತ್ರಗಳುಳ್ಳವನಾಗಿ, ರೋಮಾಂಚಗಳಿಂದ ಕೂಡಿದವನಾಗಿ, ನಿರ್ಮಲವಾದ ಬುದ್ಧಿಯಿಂದ ಗದ್ಗದ ವಚನಗಳಿಂದ ಸ್ತುತಿಸಿ, ತನ್ನ ನಿರಂಕುಶವಾದ ಭಕ್ತಿಯಿಂದ ರುದ್ರಾಕ್ಷಮಾಲಿಕೆಗಳನ್ನು ಧರಿಸಿದವನಾಗಿ, ಸರ್ವಾಂಗವಲ್ಲಿಯೂ ಭಸ್ಮವನ್ನು ಲೇಪಿಸಿಕೊಂಡು, ನಿಯಮವಾಗಿ ಸೋಮೇಶ್ವರನಿಗೆ ಸಮುದ್ರಜಲದಿಂದ ಸಹಸ್ರ ಕುಂಬಾಭಿಷೇಕವನ್ನು ಮಾಡಿ, ಅಖಂಡವಾದ ಬಿಲ್ವಪತ್ರಗಳಿಂದ ಚನ್ನಾಗಿ ಪೂಜಿಸಿ, ತನ್ನತೂಕದ ಮಹಿಷಾಕ್ಷಿಗುಗ್ಗುಲದ ಧೂಪವನ್ನು ಸಮರ್ಪಿಸಿ, ಭಕ್ತಿಯಿಂದ ನೀರಾಜನವನ್ನೆತ್ತಿ ಪಂಚಭಕ್ಷ್ಯಮುಂತಾದ ದಿವ್ಯಾನ್ನವನ್ನು ಸಮರ್ಪಿಸಿ, ಸಾವಿರಸಾರಿ ಪ್ರದಕ್ಷಿಣೆಗಳನ್ನುಮಾಡಿ, ನಾನಾವಿಧವಾಗಿ ಸ್ತುತಿಸಿ ಅದುಮೊದಲ್ಗೊಂಡು ಪ್ರತಿದಿನವೂ ತನ್ನ ದೇಹತೂಕದ ಗುಗ್ಗುಲದಿಂದ ಧೂಪವನ್ನು ಸಮರ್ಪಿಸುತ್ತೇನೆಂದು ಪ್ರತಿಜ್ಞೆಯನ್ನುಮಾಡಿ; ಶಿವನನ್ನು ಸೇವಿಸುತ್ತಾ ಅಲ್ಲಿ ವಾಸಿಸುತ್ತಿದ್ದನು. ಆ ಗುಗ್ಗಳವನ್ನು ಕೊಂಡುಕೊಳ್ಳುವದಕ್ಕಾಗಿ ತಾನು ಮೊದಲು ಸಂಪಾದಿಸಿದ ಧನವೆಲ್ಲವೂ ವ್ರಯವಾಗಲು; ತನ್ನ ವ್ರತಕ್ಕೆ ಲೋಪವು ಬರಕೂಡದೆಂದಾಲೋಚಿಸಿ, ಇದು ಹಗಲು ಇದು ರಾತ್ರಿ; ಈಗ ಅರಣ್ಯವನ್ನು ಕುರಿತು ಹೋಗುವದಕ್ಕೆ ಸಾಧ್ಯವೋ ಅಲ್ಲವೋ ಎಂದು ವಿಚಾರಿಸದೆ, ಪಶ್ಚಿಮಸಮುದ್ರತೀರದಲ್ಲಿರುವ ಅರಣ್ಯಾದ ದುರ್ಗಪ್ರಾಂತಗಳಲ್ಲಿ ಪ್ರಯಾಸದಿಂದ ಗುಗ್ಗುಳದ ಮರಗಳನ್ನು ಹುಡುಕಿ, ಮಹಿಷಾಕ್ಷಿಯನ್ನು ಮಾಡಿ, ಚನ್ನಾಗಿ ಶೋಧಿಸಿ, ಕಂಬಿಯ ಎರಡು ಕಡೆಗಳಲ್ಲಿಯೂ ಇಟ್ಟು, ನಾಲ್ಕು ಜಾವಗಳಲ್ಲಿಯೂ ಅಧಿಕವಾಗಿ ಪರಿಮಳಿಸುವವುಗಳಾಗಿಯೂ, ಮನೋಹರಗಳಾಗಿಯೂ, ಇರುವ ಅನೇಕ ಶ್ರೀಗಂಧದಮರಗಳನ್ನು ಇರಿಸಿಕೊಂಡು, ಮನೋಹರಗಳಾಗಿಯೂ, ಕೋಮಲಗಳಾಗಿಯೂ, ಸುವಾಸನೆಯುಳ್ಳವುಗಳಾಗಿಯೂ, ಅಸದೃಶಗಳಾಗಿಯೂ, ಬಹಳ ಬಲಿಯದೆ ಇರುವವುಗಳಾಗಿಯೂ, ಹುಳಕೊಡೆಯದೆ ಇರುವವುಗಳಾಗಿಯೂ, ಒಳ್ಳೇಬಣ್ಣವುಳ್ಳವುಗಳಾ

ಗಿಯೂ, ಆರ್ದ್ರಗಳಾಗಿಯೂ, ಕೊಳೆಯಿಲ್ಲದವುಗಳಾಗಿಯೂ, ನಡುವೆ ರಂಧ್ರವುಳ್ಳವುಗಳಾಗಿಯೂ, ಒಳ್ಳೇಕಾಂತಿಯುಳ್ಳವುಗಳಾಗಿಯೂ, ಕಣ್ಣಿಗೆ ಹತ್ತಿದವುಗಳಾಗಿಯೂ, ಶಿವನಿಗೆ ಯೋಗ್ಯಗಳಾಗಿಯೂ, ನೆಲದಮೇಲೆ ಬೀಳದವುಗಳಾಗಿಯೂ, ವಿಕಸಿತಗಳಾಗಿಯೂ, ಮಧುರಗಳಾಗಿಯೂ, ಮಂಗಳಕರಗಳಾಗಿಯೂ, ಜನಗಳಿಗೆ ಯಾವಾಗಲೂ, ಮೋಕ್ಷಪ್ರಾಪ್ತಿಗೆ ಕಾರಣಗಳಾಗಿಯೂ, ನಿರ್ದುಷ್ಟಗಳಾಗಿಯೂ, ಅಖಂಡಗಳಾಗಿಯೂ, ಇರುವ ಬಿಲ್ವಪತ್ರೆಗಳನ್ನು ಶೋಧಿಸಿ ಹೂವಿನ ಬುಟ್ಟಿಯನಡುವೆ ತುಂಬಿ ಕಂಕುಳಲ್ಲಿಟ್ಟುಕೊಂಡು, ಜನಗಳು ಸ್ತುತಿಸುತ್ತಿರಲಾಗಿ; ಬಹು ಸಂತೋಷದಿಂದ ತುಂಬಲ್ಪಟ್ಟವನಾಗಿ, ವೇಗದಿಂದ ಸೋಮೇಶ್ವರಾಲಯಕ್ಕೆ ಬಂದನು. ಪೂರ್ವದಲ್ಲಿಯೇ ಅಲ್ಲಿದ್ದ ಗೌಳತಪಸ್ವಿಗಳು ಕಾಂತಿ ಪೂಜೆಯನ್ನೂ ಪುಷ್ಪಪೂಜೆಯನ್ನೂ, ವಿದ್ಯುಕ್ತಪ್ರಕಾರವಾಗಿಮಾಡಿ ಸೋಮೇಶನ ಸನ್ನಿಧಿಯಲ್ಲಿ ಎಪ್ಪತ್ತೆರಡು ಊಳಿಗಗಳೊಡನೆ ನಿಂತಿರಲಾಗಿ;—ಓಹಿಲಯ್ಯನು ಇದು ಸಮಯವೋ ಅಲ್ಲವೋ ಎಂದು ವಿಚಾರಿಸದೆ ಬಹುಸಡಗರದಿಂದ ಶಿವಪೂಜೆಯನ್ನು ಮಾಡುವ ಕೆಲಸದಲ್ಲಿ ತತ್ಪರನಾಗಿ ಶಿವಾಲಯವನ್ನು ಪ್ರವೇಶಿಸಿ, ಕಂಬಿಯನ್ನು ಕೆಳಗ್ಗಿಳಿಸಿ ಸಮುದ್ರ ಜಲವನ್ನು ತಂದು, ಪೂರ್ವದಲ್ಲಿ ಮಾಡಿದ್ದ ಪೂಜೆಯನ್ನು ತೆಗೆದು, ಶಿವನಿಗೆ ವಿಧಿಪ್ರಕಾರದಿಂದ ಅಭಿಷೇಕಿಸಿ, ವಸ್ತ್ರದಿಂದ ಒದ್ದೆಯನ್ನು ಒರಸಿ, ಶ್ರೀಗಂಧವನ್ನು ತೇದು, ಭಕ್ತಿಯಿಂದ ಲೇಪಿಸಿ, ಅಖಂಡವಾದ ಬಿಲ್ವಪತ್ರಗಳಿಂದ ಪರಮೇಶ್ವರನನ್ನು ಅರ್ಚಿಸಿ ರಾಶಿಹಾಕಿದ್ದ ತನ್ನ ತೂಕದಗುಗ್ಗುಳವನ್ನು ಬೆಂಕಿಯಲ್ಲಿಹಾಕಿ;—ಎಲೈ ಭವವನ್ನು ನಾಶಮಾಡತಕ್ಕವನೇ ಕರುಣಾಮೃತದಿಂದ ತುಂಬಲ್ಪಟ್ಟವನೇ! ಅರ್ಧಚಂದ್ರನನ್ನು ಶಿರೋಭೂಷಣವಾಗಿ ಧರಿಸಿರುವವನೆ! ಪಾರ್ವತೀವಲ್ಲಭನೇ ? ಸೌರಾಷ್ಟ್ರಾಧಿಪತಿಯಾದವನೇ ! ಸೂರ್ಯ ಚಂದ್ರಾಗ್ನಿಗಳೇ ಕಣ್ಣುಗಳಾಗಿವುಳ್ಳ ಸೋಮೇಶನೇ! ಈ ಧೂಪವನ್ನು ಸಮರ್ಪಿಸಿಕೋ ಎಂದು ಸಾಷ್ಟಾಂಗನಮಸ್ಕಾರವನ್ನು ಮಾಡಿ, ತಲೆಯಮೇಲೆ ಅಂಜಲಿಯನ್ನಿಟ್ಟು, ಕುಣಿಯಿತ್ತಾ, ನೆಗೆಯುತ್ತಾ, ಸಿಂಹನಾದವನ್ನು ಮಾಡುತ್ತಾ ಆನಂದದಿಂದ ತುಂಬಲ್ಪಟ್ಟವನಾಗಿ, ಜಯ ಜಯ ಜಯ ಎಂದು ಹೇಳಿಕೊಂಡು ಘಂಟೆಯನ್ನು ಬಾರಿಸುತ್ತಾ, ಪ್ರಮಥಗಣವನ್ನು ಸ್ಮರಿಸುತ್ತಾ, ಶಿವನನ್ನು ಸ್ತುತಿಸುತ್ತಾ, ಹರ ಹರ ಎಂದು ಉಚ್ಚರಿಸುತ್ತಾ, ಗಾನವನ್ನು ಮಾಡುತ್ತಾ, ಎಲೈ ನನ್ನ ಪ್ರಭುವಾದ ಸೋಮೇಶ್ವರನೇ! ನನ್ನ ಪಾಪಸಮೂಹ

ವನ್ನೆಲ್ಲಾ ಧೂಪಾಗ್ನಿಯಿಂದ ಬೂದಿಯನ್ನಾಗಿಮಾಡು ಶರಣಾಗತರ ದುಃಖಪರಿಹಾರದಲ್ಲಿ ಆಸಕ್ತನಾದವನೇ ಎಂದು ಹೇಳುತ್ತಾ, ವಿಶೇಷಭಕ್ತಿಯಿಂದ ಧೂಪವಂ ಸಮರ್ಪಿಸಿ, ಉಳಿದ ಪೂಜೆಯನ್ನು ವಿದ್ಯುಕ್ತಪ್ರಕಾರವಾಗಿ ಬಹು ಪ್ರೀತಿಯಿಂದ ಕೂಡಿ;—ಪ್ರತಿದಿನವೂ ಹೀಗೆ ಶಿವನನ್ನು ಸೇವಿಸಿಕೊಂಡಿದ್ದನು. ಬಳಿಕ ಅಲ್ಲಿದ್ದ ಗೌಳತಪಸ್ವಿಗಳು ಒಂದುದಿನ ಸೇರಿ, ಬಹಳ ಕೋಪದಿಂದ ಮಾತನಾಡಿಕೊಂಡದ್ದೇನಂದರೆ;—ಆಹಾ ನಮ್ಮ ಪಟ್ಟಣದಲ್ಲಿ ಹಿಂದೆ ಇಂಥಾ ವಿಪರೀತಗಳನ್ನು ನಾವು ಕಂಡೂ ಇಲ್ಲ ಕೇಳಿಯೂ ಇಲ್ಲ. ಇಂಥಾ ವ್ರತವನ್ನು ನಾವೆಲ್ಲಿಯೂ ತಿಳಿದಿಲ್ಲ. ಒಣಮರಗಳನ್ನು ತರುತ್ತಾನೆ. ಶಿವಾಲಯಕ್ಕೆ ನುಗ್ಗುತ್ತಾನೆ. ಮುಂಚಿನ ಪೂಜೆಯನ್ನು ಅಳಿಸುತ್ತಾನೆ. ತನ್ನ ಪೂಜೆಯನ್ನು ಮಾಡುತ್ತಾನೆ. ಮುಂಚಿನ ಪೂಜೆಯನ್ನು ತೆಗೆದು ತನ್ನ ಪೂಜೆಯನ್ನು ಮಾಡಬೇಕೋ? ವಿಷ್ಣು, ಬ್ರಹ್ಮ ಮುಂತಾದವರಿಂದ ಮಾಡಲ್ಪಟ್ಟ ಪೂಜೆಯನ್ನು ಅಳಿಸಿ ತಾನೇ ಹೊಸದಾಗಿ ಪೂಜೆಯನ್ನು ಭೃಂಗೀಶ್ವರನೋ? ಪೂರ್ವದಲ್ಲಿ ಜೇಡರ ಹುಳುವು ಮಾಡಿದ ಪೂಜೆಯನ್ನು ಅಳಿಸಿ, ತನ್ನ ಪೂಜೆಯನ್ನು ಮಾಡಿದ ಆನೆಯೋ? ಭಕ್ತನಾದ ಅರ್ಚಕನಿಂದ ಮಾಡಲ್ಪಟ್ಟ ಪೂಜೆಯನ್ನು ಒತ್ತಿ ತನ್ನ ಪೂಜೆಯನ್ನು ಮಾಡಿದ ಕನ್ನಪ್ಪನೋ? ಮುದನೂರಲ್ಲಿ ಬ್ರಾಹ್ಮಣರುಮಾಡಿದ ಪೂಜೆಯನ್ನು ಒರಸಿದ ದಾಸಯ್ಯನೋ? ಅಥವಾ ಹಿರಿಯರು ಮಾಡಿದ ಪೂಜೆಯನ್ನು ಕೆಡಿಸಿ ಪೂಕಲ್ಲುಗಳಿಂದ ಪೂಜೆಯನ್ನುಮಾಡಿದ ಸಾಂಖ್ಯತೊಂಡನೋ? ತನಗೆ ಕಾಲವಲ್ಲದಕಾಲದಲ್ಲಿ ಶಿವಾಲಯವನ್ನು ಪ್ರವೇಶಿಸುವದಕ್ಕೆ ಕೃತಾರ್ಥನಾಗಿಯೂ, ಪೂಜ್ಯನಾಗಿಯೂ ಇರುವ ಭೃಂಗೀಶ್ವರನೋ? ನಂದೀಶ್ವರನೋ! ದೂರ್ವಾಸನೋ? ಉಪಮನ್ಯುವೋ? ಪ್ರಮಥಗಣಂಗಳಲ್ಲಿ ಒಬ್ಬನೋ? ಇವನು ಪ್ರವೇಶಿಸುವದಕ್ಕೆ ಹ್ಯಾಗೆ ಯೋಗ್ಯನು? ನಾರಾಯಣನು ಸೋಮೇಶನನ್ನು ಆರಾಧಿಸುವದಕ್ಕೆ, ಬಂದು ನೆಟ್ಟಗೆಪ್ರವೇಶಿಸುವ ವಿಷಯದಲ್ಲಿ ಸಂಕೋಚ ಪಟ್ಟುಕೊಂಡು ತನಗೆ ಸಮಯವು ದೊರೆಯುವಪರ್ಯಂತರವೂ ಹೊರಬಾಗಲಲ್ಲಿಯೇ ನಿಂತಿದ್ದಾನೆ. ಇಂದ್ರನು ತನಗೆ ಸಮಯಸಿಕ್ಕುವ ತನಕ ರೆಪ್ಪೆಯನ್ನು ಹುಯ್ಯದೆ ನಿಂತಿರುತ್ತಾನೆ. ಸೂರ್ಯನು ಸಮಯವು ಸಿಕ್ಕುವತನಕ ಕಮಲಗಳನ್ನು ಹಿಡಿದುಕೊಂಡು ತಿರುಗುತ್ತಾ ಇದ್ದಾನೆ. ಕಿರೀಟದಲ್ಲಿರುವ ಚಂದ್ರನು ತನ್ನ ಸೇವೆಗೆ ಸಮಯವುದೊರೆಯುವತನಕ ಸ್ಥಿರಚಿತ್ತನಾಗಿ ನಿಂತಿರುತ್ತಾನೆ. ಇಂಥಿಂಥಾವರಿಗೂ ಸ್ವಾಮಿಯ ಸಮಯವು ದೊರೆಯುವದು ಕಷ್ಟವಾಗಿರುವಲ್ಲಿ ಇವನಾರು ? ಬಹುಮಾತುಗ

ಕಿಂದೇನು ? ನಿಂತುಕೊಂಡಿರಲಿ ಎಂದರೆ ಇವನು ಶಿವಾಲಯುವನ್ನು ಪ್ರವೇಶಿಸುವ ದಕ್ಕೆಹ್ಯಾಗಾದೀತು ? ಮೊದಲು ಒಳಗಿರುವ ತಪಸ್ವಿಗಳು ಸೊಮೇಶನನ್ನು ಪೂಜಿಸಲಿ. ಪರಿಚಾರಕರೂ, ಪರಸ್ಥಳದವರೂ ಒಂದು ಕಾಲದಲ್ಲಾದರೂ ಸೋಮೇಶನಾಲಯುವನ್ನು ಪ್ರವೇಶಿಸಲಾಗದು. ಹಾಗೇನಾದರೂ ಪ್ರವೇಶಿಸಿದರೆ ಅವರು ಅಪರಾಧಿಗಳೇ ಸರಿ. ಅಥವಾ ಸೇವೆಮಾಡಬೇಕೆಂಬ ಆಸಕ್ತಿಯಿದ್ದರೆ, ಹೊರಗೇ ಇದ್ದುಕೊಂಡು ಶಿವನನ್ನು ಸೇವಿಸಲಿ, ಎಂದು ಆಜ್ಞೆಯನ್ನುಮಾಡಿ, ಕೊಬ್ಬಿದ ಆ ಗೌಳತಪಸ್ವಿಗಳು;-ಓಹಿಲಯ್ಯನು ಹಗಲುಬಂದರೆ, ಒಳಗೆಬಿಡದಂತೆ ದ್ವಾರಪಾಲಕರನ್ನು ನೇಮಿಸಿ, ರಾತ್ರಿಕಾಲದಲ್ಲಿ ಶಿವಾಲಯುಕ್ಕೆ ಬಲವಾದ ಅಗುಳಿಯನ್ನು ಹಾಕಿಕೊಂಡು ಮನೆಗೆಹೋಗುವದಕ್ಕೆ ಪ್ರಾರಂಭಿಸಿದರು. ಹೀಗಿರುವಲ್ಲಿ ಓಹಿಲಯ್ಯನು ಎಂದಿನಂತೆ ಅರ್ಧರಾತ್ರಿ ಸಮಯುಕ್ಕೆ ಬಂದನು ಆಗ ಸೋಮೇಶ್ವರನೇ ದೇವಾಲಯುದ ಕದಗಳನ್ನೆಲ್ಲಾ ತೆರೆಯುಲು; ಓಹಿಲಯ್ಯನು ಪೂರ್ವದಂತೆ ಸಾಂಗವಾಗಿ ಶಿವನನ್ನು ಪೂಜಿಸಿದನು. ಮಾರಣೇದಿನ ಪ್ರಾತಃಕಾಲದಲ್ಲಿ ಆಗೌಳ ತಪಸ್ವಿಗಳು ಆ ವೃತ್ತಾಂತವನ್ನು ತಿಳಿದು, ಬಹಳವಾಗಿ ಕೋಪಿಸಿಕೊಂಡು, ಸಂಶಯುದಿಂದ ತುಂಬಲ್ಪಟ್ಟವರಾಗಿ ಒಬ್ಬರಿಗೊಬ್ಬರು ಮಾತನಾಡಿಕೊಂಡಿದ್ದೇನಂದರೆ;-ಮುದನೂರೆಂಬ ಗ್ರಾಮುದಲ್ಲಿ ರಾಮೇಶ್ವರನು ಪ್ರೀತಿಯಿಂದ ದಾಸಯ್ಯನೆಂಬ ಭಕ್ತನಿಗೆ ಕದವನ್ನು ತೆರೆದನು. ಕಲ್ಯಾಣಪಟ್ಟಣದಲ್ಲಿ ತ್ರಿಪುರಾಂತಕೇಶ್ವರನು ಕಿನ್ನರಬ್ರಹ್ಮಯ್ಯನಿಗೂ, ತಿರುಪುಡವೆಂಬಗ್ರಾಮುದಲ್ಲಿ ಬ್ರಹ್ಮೇಶನು ಪಿಳ್ಳೈನೈನಾರೆಂಬ ಭಕ್ತನಿಗೂ, ಕದನವನ್ನು ತೆರೆದನು. ಶಿವನು ನಿಂಬವ್ವೆಗೆ ಏಳುದಿವಸಗಳ ತನಕ ತನ್ನಪಟ್ಟಣದ ಬಾಗಿಲಕದವನ್ನು ತೆರೆದನು. ಕಾಟಕೋಟನೆಂಬಭಕ್ತನಿಗೆ ಕೈಲಾಸದ ಬಾಗಿಲನ್ನು ತೆರೆದನು. ಆರೀತಿಯಾಗಿ ಇವನಿಗೂ ಕದವನ್ನು ತೆರೆದದ್ದು! ಇದೇನು ನಿಶ್ಚಯುವೋ ಕಪಟವೋ ? ಹ್ಯಾಗೆತಿಳಿಯುವದಕ್ಕಾದೀತು ಇವನಂತೂ ವಕ್ರಮಾರ್ಗದವನಷ್ಟೆ ಯಾವದೊಂದು ಭಯುವೂ ಇಲ್ಲದೆ ನಮ್ಮ ಆಜ್ಞೆಯನ್ನು ಮಿಾರಿ, ಶಿವಾಲಯುವನ್ನು ಹೊಕ್ಕು, ಮೊದಲಿನಂತೆ ತನ್ನ ಮಾಯುಗಳನ್ನೆಲ್ಲಾ ಮನಬಂದಂತೆ ನಡಿಸಿ, ಹೊರಟು ಹೋದನು. ಇಂಥಾಮನುಷ್ಯನು ನಮ್ಮ ಗ್ರಾಮುದಲ್ಲಿ ಇದ್ದಗೆ ಇನ್ನೇನು ಒಳ್ಳೇದಾದೀತು! ಇವನನ್ನು ಊರಿಂದಹೊರಡಿಸದೆ ಇರುವದು ನಮ್ಮ ಬುದ್ಧಿಗೆಸರಿಯುಲ್ಲ. ಯಾವ ಉಪಾಯುದಿಂದಾದರು ಇವನನ್ನು ಹೊರಡಿಸಿ ಬಿಡುವದೇ ಒಳ್ಳೇದು ಈ ಗ್ರಾಮುದಲ್ಲಿ ಯಾರೂ ಭಿಕ್ಷವನ್ನು ಕೊಡದಿದ್ದರೆ ತಾನೇ ಓಡಿಹೋ

ಗುತ್ತಾನೆ. ಈರೀತಿಯಾಗಿ ಆಲೋಚಿಸಿ ಒಹಿಲಯ್ಯನಿಗೆ, ಭಿಕ್ಷವನ್ನು ಕೊಡುವದಕ್ಕೆ ಅಡ್ಡಿಮಾಡಿದರು, ಆಗ ಅದನ್ನು ತಿಳಿದು ಓಹಿಲಯ್ಯನು ಆಲೋಚಿಸಿದ್ದೇನಂದರೆ; ಪೂರ್ವದಲ್ಲಿ ಅನೇಕಭಕ್ತರು ಕಲ್ಲು, ಮರಳು, ಎಲೆ, ಗಡ್ಡೆ ಗೆಣಸು, ಹಣ್ಣು, ಗಾಳಿ, ಇವುಗಳನ್ನು ಆಹಾರಮಾಡಿಕೊಂಡು ಅಧಿಕವಾದ ತಪಸ್ಸನ್ನು ಮಾಡಲಿಲ್ಲವೇ? ಲೋಕದ ಆಶೆಯೇ ಇಲ್ಲದವರು ಸಂತೋಷಭರಿತರಾಗಿ ಶಿವನನ್ನು ಆರಾಧಿಸುವದಿಲ್ಲವೇ? ಶಿವಾರ್ಚನನೇಮದಲ್ಲಿ ಆಸಕ್ತನಾಗಿಯೂ, ಸದ್ಭಕ್ತಿಯನ್ನು ಕಾಪಾಡುವವನಾಗಿಯೂ ಇರುವವನು ತನ್ನ ತಲೆಯನ್ನು ಇನ್ನೊಬ್ಬರು ಕತ್ತರಿಸುತ್ತಿದ್ದಾಗ್ಯೂ, ತನ್ನಪ್ರಾಣಗಳು ಹೋಗುತ್ತಿದ್ದಾಗ್ಯೂ, ಮರಣಕ್ಕೆ, ಭಯಪಡುವನೊ ಅದೆಲ್ಲಾ ಅನಿತ್ಯವೆಂತಲೂ ಮಾಯೆಯುಂತಲೂ, ಹೇಳುತ್ತಾನೆ. ಹೀಗಿರುವಲ್ಲಿ ಆಹಾರಕ್ಕಾಗಿ ಬಹಳ ಕಷ್ಟಪಡುವ ಮನುಷ್ಯನನ್ನು ನೋಡಿ ಪಾರ್ವತಿಪತಿಯಾದ ಪರಶಿವನು ನಗುವದಿಲ್ಲವೇ ಈ ನನ್ನ ದೇಹವು ಪೂರ್ವದಲ್ಲಿ ತಾಯಿಯ ಮೊಲೆವಾಲಿನಿಂದಮಾತ್ರ ಬೆಳೆಯಲಿಲ್ಲವೇ? ಸ್ವಲ್ಪಬೆಣ್ಣೆಯಿಂದ ಪೋಷಿಸಲ್ಪಡಲಿಲ್ಲವೇ? ಪ್ರತಿದಿನವೂ ಮಿತಾಹಾರದಿಂದ ಬೆಳೆಯದೆ ಇದ್ದೀತೇ? ಇದರಮೇಲೆ ಮನಸ್ಸು ಆಶೆಯುಳ್ಳತಗಲಿದರೆ, ಮೇಲೆ ಮೇಲೆ ಆಹಾರದಲ್ಲಿ ಅಪೇಕ್ಷೆಯೂ ಹೆಚ್ಚುತ್ತಾಬರುದದು. ಅಂಥಾ ಮನಸ್ಸಿನ ಅಪೇಕ್ಷೆಯು ಇಲ್ಲದಿದ್ದಲ್ಲಿ ಹಸಿವುಕೂಡ ಅಡಗಿ ಹೋಗುತ್ತದೆ. ಆದ್ದರಿಂದ ಮನಸ್ಸನ್ನು ನಿಗ್ರಹಿಸಿಕೊಂಡು ಸದಾಸಂತೋಷವುಳ್ಳ ಜನವುಯಾವದನ್ನು ತಾನೇ ಅಪೇಕ್ಷಿಸೀತು? ಬಯಕೆಯೆಲ್ಲವೂ ನಷ್ಟವಾದ್ದಲ್ಲಿ ದೇಹವು ಚನ್ನಾಗಿ ಪ್ರಕಾಶಿಸುತ್ತದೆ. ಯಾಚನೆ ಮಾಡುವದನ್ನು ಬಿಡಬೇಕೆಂದು ನಾನಾಗಿ ಆಲೋಚಿಸುತ್ತಿರುವಲ್ಲಿ ಸೋಮೆಶ್ವರನ ಕರುಣದಿಂದ ತನ್ನಷ್ಟಕ್ಕೆ ತಾನೇ ಯಾಚನೆಯು ತಪ್ಪಿತು. ಮೇಲಾಯಿತು. ಹಸೀಕಲ್ಲು ಮರೆಯಾದರೆ ಮದುನೆ ಉಳಿದೀತೆ? ಯಾಚನೆಯನ್ನು ಮಾಡುವದು ನಿಂತುಹೋದರೆ ಭಕ್ತಿಯು ನಷ್ಟವಾಗುವದೇ? ಹೊಟ್ಟೆಗೋಸ್ಕರ ಮಾಡಿದಯಾಚನೆಯು ಶಿವಧ್ಯಾನವಾಗುವದೇ? ಮನೆಮನೆಗೂ ತಿರುಗುವದು ಶಿವನಪ್ರದಕ್ಷಿಣವಾದೀತೇ? ತನಗೋಸ್ಕರ ಬೇಡುವದು ಸದ್ಭಕ್ತಿಯನ್ನು ಕುರಿತು ಶಿವನನ್ನು ಪ್ರಾರ್ಥಿಸಿದಂತಾಗುವದೇ? ತನ್ನ ಹೊಟ್ಟೆಗಾಗಿ ಅನೇಕ ಜಾತಿಯರ ಮನೆಯ ಅನ್ನವನ್ನು ತರುವದು ಶಿವಪೂಜೆಗಾಗಿ ಪತ್ರಪುಷ್ಪಗಳನ್ನು ತಂದಹಾಗಾಗುವದೇ? ಅಂಥಾ ಅನ್ನವನ್ನು ತಿನ್ನುವದು ಶಿವನಪಾದಕಮಲಗಳ ಧ್ಯಾನವೆಂಬ ಅಮೃತರಸದಿಂದ

ಶ್ರೇಷ್ಠವಾದ ಭಕ್ತಿಯಾದೀತೆ? ಚನ್ನಾಗಿ ಆಲೋಚಿಸಿದರೆ: ಹೊರಗೂ ಒಳಗೂ ಸಮರ್ಪಿಸಲ್ಪಟ್ಟದ್ದಾಗಿಯೂ, ಸಾವಧಾನದಿಂದುಂಟಾದ ಸೌಖ್ಯವನ್ನು ಕೊಡುವಂಥಾದ್ದಾಗಿಯೂ, ಇರುವ ಶಿವಪ್ರಸಾದ ಸೇವೆಯ ಲಾಭವಿಲ್ಲದೆ ಯಾವ ಯಾಜಕನಿದ್ದಾನೋ ಅವನು ಕೆಟ್ಟ ವೇಷಧಾರಿಯಾದ ಯಾಜಕನೇ ಹೊರತು ಭಕ್ತಿವಂತನಲ್ಲ. ಈಪ್ರಕಾರವಾಗಿ ಆಲೋಚಿಸಿ ಮಂದಹಾಸದಿಂದ ಪ್ರಕಾಶಿಸುವ ಮುಖಕಮಲವುಳ್ಳವನಾಗಿ;--ದೇಹರಕ್ಷಣಾರ್ಥವಾಗಿ ತಿನ್ನುವದಕ್ಕೆ ಭೂಮಿಯಲ್ಲಿ ಇದಕ್ಕಿಂತಲೂ ಮತ್ತ್ಯಾವದಿದೆ. ಯಾವದನ್ನು ಸೇವಿಸಿದರೆ ದೇಹವು ಪ್ರಸಾದದಿಂದುಂಟಾದ ಸುಖವನ್ನು ಹೊಂದುವದೋ; ಪ್ರಾಣಗಳು ಸಾಮ್ಯದಂತಾಗುವವೋ; ಬುದ್ಧಿಯು ನಿರ್ಮಲವಾಗುವದೋ? ಪರಶಿವನು ಯಾವಪ್ರಸಾದವನ್ನೇ ಹಾಸಿಗೆಯನ್ನಾಗಿ ಮಾಡಿಕೊಂಡು ಮಲಗಿದ್ದಾನೋ? ಯಾವಪ್ರಸಾದವನ್ನು ಸವಿಯುವವನ ಚರಿತ್ರೆಯು ಬಹಳವಾಗಿ ಪ್ರಸಿದ್ಧಿಯನ್ನು ಹೊಂದುವದೋ ಮತ್ತು ಮನಸ್ಸು ಯಾವಕಡೆಗೂ ಚಲಿಸದೆ, ಶಿವನಲ್ಲಿ ನೆಲೆಗೊಳ್ಳುವದೋ; ಯಾವಶಿವಪ್ರಸಾದವನ್ನು ಸೇವಿಸುವವನಕಾವ್ಯಗಳು ಕಿವಿಗೆ ಸುಖವನ್ನುಂಟುಮಾಡುವವೋ ಮತ್ತು ಅವನ ಮಹಿಮೆಯು ಸಕಲಲೋಕಗಳಲ್ಲಿಯೂ ಪರಿಪೂರ್ಣವಾಗುವದೋ; ಅಸದೃಶವಾಗಿಯೂ, ಪರಿಶುದ್ಧವಾಗಿಯೂ, ಮಂಗಲಕರವಾಗಿಯೂ, ಶ್ರೇಷ್ಠವಾಗಿಯೂ, ಅನರ್ಘವಾಗಿಯೂ, ಜ್ಞಾನವೆಂಬ ಅಮೃತಕ್ಕೆ ಕಾಲುವೆಯಾಗಿಯೂ, ಪಾಪಿಷ್ಠರಹೃದಯಕ್ಕೆ ಶೂಲವಾಗಿಯೂ, ಭಕ್ತಿಯಲ್ಲಿ ಆಶೆಯನ್ನುಂಟುಮಾಡುವದಾಗಿಯೂ, ಮೋಕ್ಷವನ್ನು ಕೊಡುವದಾಗಿಯೂ, ವೃದ್ಧಿಕರವಾಗಿಯೂ, ಮೋಕ್ಷವನ್ನು ಕೊಂಡುಕೊಳ್ಳುವ ಕ್ರಯದ್ರವ್ಯವಾಗಿಯೂ ಶಿವಭಕ್ತರಿಂದ ಆದರಿಸಲ್ಪಡುವದಕ್ಕೆ ಯೋಗ್ಯವಾದದ್ದಾಗಿಯೂ, ಬಹುಪ್ರಕಾಶಮಾನವಾಗಿಯೂ, ತತ್ವಗಳಲ್ಲಿ ಸಾರಭೂತವಾಗಿಯೂ ಪವಿತ್ರವಾಗಿಯೂ ಇರುವ ಆ ಶಿವನಿರ್ಮಾಲ್ಯವನ್ನು ನಾನು ಆಹಾರವನ್ನು ಮಾಡಿಕೊಳ್ಳುತ್ತೇನೆಂದು ಮನದಲ್ಲಿ ನಿಶ್ಚೈಸಿ ಮರುದಿವಸಸಾಯಂಕಾಲದಲ್ಲಿ ಶಿವನನ್ನು ಆರಾಧಿಸಿದ ಬಳಿಕ ದೇವಾಲಯದಹೊರಗಡೆ ಬಿಸಾಟಿರುವ ನಿರ್ಮಾಲ್ಯದ ಬಿಲ್ವಪತ್ರೆಯನ್ನು ತೆಗೆದುಕೊಂಡು ಪ್ರಸಾದಭಾವನೆಯಿಂದ ಕೂಡಿದವನಾಗಿ ಭಕ್ತಿಯಿಂದ ಭಕ್ಷಿಸಿದನು. ಅನಂತರದಲ್ಲಿ ಪಾಪಿಗಳಾದ ಗೌಳತಮ್ಮಡಿಗಳು ಅವನನ್ನು ನೋಡಿ;—ನಾವು ಅನ್ನವನ್ನು ಹಾಕದಿದ್ದಾಗ್ಯೂ ಇವನು ಈ ಸ್ಥಲವನ್ನು ಬಿಟ್ಟು ಹೋಗಲೂ ಇಲ್ಲ. ಸಾಯಲೂ

ಇಲ್ಲ. ದೇವರಿಗೆ ಧರಿಸಿ ಬಿಸುಟಿದ್ದ ನಿರ್ಮಾಲ್ಯಪತ್ರೆಯನ್ನು ತಿಂದುಕೊಂಡು ಜೀವಿಸುತ್ತಾನೆ. ನಾವು ನಿರ್ಮಾಲ್ಯಪತ್ರಗಳನ್ನೆಲ್ಲಾ ಚನ್ನಾಗಿ ಸುಟ್ಟುಬಿಡೋಣ. ಈ ಪತ್ರೆಯೇಹೊರತು ಇವನಿಗೆ ತಿನ್ನುವದಕ್ಕೆ ನಮ್ಮಗ್ರಾಮದಲ್ಲಿ ಬೇರೆಯಾವದೂ ಇಲ್ಲ. ಆದ್ದರಿಂದ ಇನ್ನೆಲ್ಲಿಗಾದರೂ ಹೋಗುತ್ತಾನೆ. ಇಲ್ಲವೆ ಸಾಯುತ್ತಾನೆ. ಎಂದು ಆಲೋಚಿಸಿದವರಾಗಿ ಎಲ್ಲಾ ನಿರ್ಮಾಲ್ಯ ಪತ್ರೆಗಳನ್ನು ಸಡಗರದಿಂದಸುಟ್ಟು ಬೂದಿಯನ್ನು ಮಾಡಿಬಿಟ್ಟರು. ಆ ಓಹಿಲಯ್ಯನು ಆ ಪತ್ರೆಗಳನ್ನು ಸುಟ್ಟಬೂದಿ ರಾಶಿಯನ್ನು ನೋಡಿ;—ಆಹಾ ! ಮೊದಲು ನಿರ್ಮಾಲ್ಯವಾಗಿದ್ದದ್ದು ಈಗ ವಿಭೂತಿಯಾಯಿತು. ಬಹುದುರ್ಲಭವಾದ ಭಾಗ್ಯವು ದೊರೆಯಿತು. ಎಲೈ ದಯಾನಿಧಿಯಾದ ಸೋಮೇಶನೇ ! ಈ ನಿರ್ಮಾಲ್ಯಪತ್ರೆಯು ಭಸಿತವಾದದ್ದು ನನಗೆ ಹ್ಯಾಗಾಯಿತೆಂದರೆ;—ಕೋಪದಿಂದ ಕಾಲಿನಲ್ಲಿ ಒದೆಯಲ್ಪಟ್ಟದ್ದು ಹಾಸಿಗೆಯಮೇಲೆಯೇ ಬಿದ್ದಂತೆಯೂ ನೆಲದಮೇಲೆಸುರಿದ ಉಪ್ಪು ಮೊದಲಿಗಿಂತ ಎರಡಷ್ಟಾದಂತೆಯೂ, ಅಜಾಗರೂಕತೆಯಿಂದ ಜಾರಿದ ತುಪ್ಪವು ಪರಮಾನ್ನದ ನಡುವೆ ಬಿದ್ದಂತೆಯೂ, ಪ್ರತಿದಿನವೂ ಎಣ್ಣೆಯನ್ನು ಮಾರಿ ಜೀವಿಸುವವನಿಗೆ ಕಾಲುವೆಯೇ ಎಣ್ಣೆಯಾದಂತೆಯೂ, ಗೋವುಗಳಿರುವ ಸ್ಥಲದಲ್ಲಿಯೇ ಹುಲ್ಲುಹುಟ್ಟಿದಂತೆಯೂ, ಎಲ್ಲಾ ಬಯಕೆಗಳೂ ಶೀಘ್ರದಲ್ಲಿ ಫಲಿಸಿದಂತೆಯೂ ಆಯಿತು. ಯಾಕಂದರೆ; ಉದಾರನಾಗಿಯೂ, ಪ್ರಸನ್ನನಾಗಿಯೂ ಇರುವ ಎಲೈ ಸೋಮೇಶನೇ ! ನನ್ನ ವೃತ್ತಿಗೆ ತಕ್ಕ ಆಹಾರವು ದೊರೆಯಿತು. ಶಾತಾತಪಸ್ಮೃತಿಯಲ್ಲಿ ಹೇಳಲ್ಪಟ್ಟಿರುವ ಭಸ್ಮ ಭಕ್ಷಣವು ದೊರೆಯಿತು. ಅಲ್ಲಿ ಹೇಳಿರುವ ಭಸ್ಮದ ಹಾಸಿಗೆಯೂ ಲಭಿಸಿತು. ವೃದ್ಧಶಾತಾತಪಸ್ಮೃತಿಯಲ್ಲಿ ಹೇಳಲ್ಪಟ್ಟಿರುವ ಭಸ್ಮಾ ಛಾದನೆಯೂ ನನಗೆ ಸಂಭವಿಸಿತು, ತ್ರಿಯಾಯುಷಂಜಮದಗ್ನೇಃ ‹‹ ಎಂದು ಪ್ರಸಿದ್ಧವಾದ ಯಜುರ್ವೇದವಚನದರ್ಥವೂ, ಕಾಲಾಗ್ನಿರುದ್ರೋಪನಿಷತ್ತಿನಲ್ಲಿ ಹೇಳಿದ ಭಸ್ಮ ಪ್ರಶಂಸೆಯೂ, ಕೈವಲ್ಯಶಾಖೆಮೊದಲಾದವುಗಳಲ್ಲಿ ಹೇಳಿರುವ ಭಸ್ಮಪ್ರಾಶಸ್ತ್ಯವೂ '' ಸರ್ವಂಹವಾಇದಂ ಭಸ್ಮ ‹‹ ಎಂದು ಹೇಳಿರುವ ಅರ್ಥವಚನವೂ ನನಗೆಫಲಿಸಿತು. ಶೈವ, ಸ್ಕಾಂದ, ವಾಯವೀಯ, ಆದಿತ್ಯ, ಬ್ರಹ್ಮಕೈವರ್ತ, ಬ್ರಾಹ್ಮ, ಬ್ರಹ್ಮಾಂಡ, ಮಾತ್ಸ್ಯ, ಕೌರ್ಮ, ವೈಷ್ಣವ, ಆಗ್ನೇಯ, ಭವಿಷ್ಯತ್, ಲೈಂಗ್ಯ, ಗಾರುಡ, ಮಾರ್ಕಂಡೇಯ, ವಾರಾಹ, ನಾರಸಿಂಹ, ಭಾಗವತ, ಮೊದಲಾದ ಹದಿನೆಂಟು ಪುರಾಣಗಳಲ್ಲಿಯೂ, ಉಪಪುರಾಣಗಳಲ್ಲಿಯೂ ಹೇಳಲ್ಪಟ್ಟಿರುವ ವಿಭೂತಿಸೇವನೆಯು ನನಗೆ ಕೈಗೂಡಿ

ತು. ನಾನುಭೂಲೋಕದಲ್ಲಿ ಕೃತಾರ್ಥನಾದೆನು. ನನ್ನ ಜನ್ಮವು ಸಾರ್ಥಕವಾಯಿತು. ಎಂದು ಸಂತೋಷ ಸಮುದ್ರದಲ್ಲಿ ಮುಳುಗಿದವನಾಗಿ, ಆ ಭಸ್ಮವನ್ನು ಸರ್ವಾಂಗಕ್ಕೂಲೇಪಿಸಿಕೊಂಡು, ಬಹುಭಕ್ತಿಯಿಂದ ಯಥೋಚಿತವಾಗಿ ಸೇವಿಸಿ, ಮಿಕ್ಕದ್ದನ್ನು ಹಾಸಿಗೆಮಾಡಿಕೊಂಡು ದೃಢವ್ರತನಾಗಿ ಹೀಗಿರುವಲ್ಲಿ ಆಗೌಳತಮ್ಮಡಿಗಳು ನೋಡಿ, ಒಬ್ಬರಿಗೊಬ್ಬರು ಮಾತನಾಡಿಕೊಂಡದ್ದೇನಂದರೆ;—ನಮ್ಮ ಗ್ರಾಮದಲ್ಲಿ ಇಂಥಾ ಆಶ್ಚರ್ಯಗಳನ್ನು ನಾವು ಎಂದೂನೋಡಲಿಲ್ಲ. ಈಗ ಈವಿಪರೀತಗಳು ಕಾಣುತ್ತವೆ. ನಿರ್ಮಾಲ್ಯ ಪತ್ರೆಯನ್ನು ಸುಟ್ಟು ಬೂದಿಯನ್ನು ತಿಂದುಕೊಂಡಿರುವದಕ್ಕೆ ಯಾರಿಂದಾದೀತು ? ಈ ಭಸ್ಮವನ್ನು ತಿಂದಾಗ್ಯೂ ಇವನು ಭಸ್ಮವಾಗಲಿಲ್ಲ. ಇದೇನು ಔಷಧದಸಾಮರ್ಥ್ಯವೋ ಮಂತ್ರತಂತ್ರವೊದಲಾದದ್ದೋ? ಇಲ್ಲವೆಯೋಗಾಭ್ಯಾಸವೋ ? ಅಥವಾ ಯಾವನಾದರೂ ಕಾಣದಂತೆ ಅನ್ನವನ್ನು ಕೊಡುತ್ತಾನೋ ? ತಿಳಿಯುವದು ಅಸಾಧ್ಯವಾಗಿದೆ. ಶಿವಪೂಜೆಯಲ್ಲಿ ಆಸಕ್ತನಾಗಿರುವ ದೆಸೆಯಿಂದ, ಆಹಾರ, ನಿದ್ರೆ, ಭಯ ಮೊದಲಾದವುಗಳು ಭಕ್ತರನ್ನು ಹೊದ್ದುವದಿಲ್ಲವೆಂದು ವಿದ್ವಾಂಸರು ಹೇಳುತ್ತಾರೆ. ಎಂದು ಮಾತನಾಡಿಕೊಂಡಿರಲು; ಒಂದಾನೊಂದು ದಿವಸದಲ್ಲಿ ಓಹಿಲಯ್ಯನು ಅರಣ್ಯಕ್ಕೈದಿ, ಎಂದಿನಂತೆ ಶ್ರೀಗಂಧದ ಕಟ್ಟಿಗೆಗಳನ್ನೂ, ಬಿಲ್ವಪತ್ರೆಗಳನ್ನೂ, ಗುಗ್ಗುಳವನ್ನೂ ಸಂಪಾದಿಸಿಕೊಂಡು, ವೇಗದಿಂದಬರುತ್ತಿರುವಾಗ ಮಾರ್ಗದಲ್ಲಿ ಒಂದಾನೊಂದು ತೀಕ್ಷ್ಣವಾದದಸಿಯು ಅವನಕಾಲಿಗೆ ನಾಟಿಕೊಳ್ಳಲು; ಕಾಲಿನ ನರಗಳೆಲ್ಲವೂ ಎಳದು ಹೋದವು. ಆದದರಿಂದ ಓಹಿಲಯ್ಯನು ಕಾಲನ್ನಿಡುವದಕ್ಕೂ, ಮಡಿಸಿಕೊಳ್ಳುವದಕ್ಕೂ, ನಡೆಯುವದಕ್ಕೂ, ನೀಡುವದಕ್ಕೂ, ಅಸಮರ್ಥನಾದನು. ಹಾಗಾದರೂ ಮನಸ್ಸಿನಲ್ಲಿ ಧೈರ್ಯವನ್ನು ತಂದುಕೊಂಡು, ಸಾಹಸವನ್ನು ಹಿಡಿದು, ಒಂದೇಕಾಲಿನಿಂದ ಸ್ವಲ್ಪದೂರನಡೆದು, ಕೆಲವುದೂರ ಹಿಮ್ಮಡಿಯಿಂದಲೇ ನಡೆಯುತ್ತಾ, ಕೆಲವುದೂರ ತುದಿಗಾಲಿಂದಲೇ ಸಂಚರಿಸುತ್ತಾ ಕೆಲವು ದೂರಮುಗ್ಗಲಾಗಿಯೇ ಹೋಗುತ್ತಾ, ಹೀಗೆಕಾಲಿಗೆ ದಸಿಯುತಗಲಿಕೊಂಡಿದ್ದಾಗ್ಯೂ ಎಲ್ಲಿಯೂ ನಿಲ್ಲದೆ ಮೆಲ್ಲಮೆಲ್ಲಗೆ ಕೊಂಚ ಕೊಂಚದೂರ ನಡೆದನು. ಬಳಿಕ ಅಂಗಾಲಲ್ಲಿ ನಾಟಿದ ದಸಿಯುಮೇಗಾಲಲ್ಲಿ ಹೊರಟಿತು. ಈ ಪ್ರಕಾರವಾಗಿ ಓಹಿಲಯ್ಯನು ದುರವಸ್ಥೆಯನ್ನು ಹೊಂದುತ್ತಿರಲು; ನಾಶರಹಿತನಾಗಿಯೂ, ಭಕ್ತರಿಗೆ ಬೇಕಾದದ್ದನ್ನು ಕೊಟ್ಟು, ಇರುವದನ್ನು ಕಾಪಾಡುವವನಾಗಿಯೂ, ಭಕ್ತಪ್ರಾಣನಾಗಿಯೂ,

ಭಕ್ತರಲ್ಲಿ ಪ್ರೀತಿಯುಳ್ಳವನಾಗಿಯೂ, ಮಂಗಳಸ್ವರೂಪನಾಗಿಯೂ ಇರುವ ಸೋಮೇಶ್ವರನು ಕರುಣಾಸಮುದ್ರನಾದುದರಿಂದ ಕಿರಾತವೇಷವನ್ನು ಧರಿಸಿದವನಾಗಿ ಶಿವಭಕ್ತನ ಲಕ್ಷಣಗಳನ್ನು ಸ್ವಲ್ಪಸ್ವಲ್ಪ ತೋರಿಸುತ್ತಾ ಮಸಿಯ ಬಟ್ಟೆಯಿಂದ ಸುತ್ತಲ್ಪಟ್ಟಾಗ್ಯೂ ಪ್ರಕಾಶಿಸುತ್ತಿರುವ ರತ್ನದಂತೆಯೂ, ಬೂದಿಯಿಂದ ಮುಚ್ಚಲ್ಪಟ್ಟಾಗ್ಯೂ ಮೇಲುಮುಖವಾಗಿ ಉರಿಯುತ್ತಿರುವ ಅಗ್ನಿಯಂತೆಯೂ, ಚಿಪ್ಪಿನಿಂದ ಆಚ್ಛಾದಿಸಲ್ಪಟ್ಟರೂ ನಿರ್ಮಲವಾಗಿರುವ ಮುತ್ತುಗಳ ಸಮೂಹದಂತೆಯೂ, ಪಾಸೆಯಿಂದ ಕವಿಯಲ್ಪಟ್ಟಿದ್ದಾಗ್ಯೂ ಹೊಳೆಯುತ್ತಿರುವ ಗಂಗೋದಕದಂತೆಯೂ, ಅಖಂಡವಾದ ಮೇಘದಿಂದಾವರಿಸಲ್ಪಟ್ಟಾಗ್ಯೂ ಪ್ರಕಾಶಿಸುವ ಆಕಾಶಮಂಡಲದಂತೆಯೂ, ಕಿರಾತ ದೇಹವನ್ನು ಧರಿಸಿಕೊಂಡಿದ್ದಾಗ್ಯೂ ಅಪರಿಮಿತವಾದ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದನು. ವೇದಮಯವಾದ ನಾಯಿಗಳು ಕಿರಾತರೂಪನಾದ ಶಿವನಿಂದಿರಿಸಲ್ಪಟ್ಟ ಹೆಜ್ಜೆಗಳನ್ನು ಮೂಸಿ ಮೂಸಿಕೊಂಡು, ಹಿಂಬಾಗದಲ್ಲಿ ಬರುತಿರಲು; ಧನುರ್ಧಾರಿಯಾಗಿರುವ ಶಿವನು ಪೂರ್ವದಲ್ಲಿ ಮೃಗರೂಪವನ್ನು ಧರಿಸಿದ ಕೊಬ್ಬಿದ ಬ್ರಹ್ಮನತಲೆಯನ್ನು ತೆಗೆಯುವದಕ್ಕಾಗಿ ಒಂದ ಕಿರಾತರೂಪಿಯಾದ ಶಿವನೋ ಹಿಂದೆ ವಿನೋದದಿಂದ ಇಂದ್ರಕೀಲಪರ್ವತವನ್ನೈದಿದ ಶಬರವೇಷದ ಶಿವನೋ ಪೂರ್ವದಲ್ಲಿ ಪೊನ್ನಯ್ಯನೆಂಬ ಭಕ್ತನು ಹೆಚ್ಚಿದ ಭಕ್ತಿಯಿಂದ ಸಂತೋಷಭರಿತನಾಗಿ, ತುಂಗಭದ್ರಾನದಿಯ ಜಲವನ್ನು ತಂದು ತಂಪಾಗಿಯೂ ಸುಗಂಧವುಳ್ಳದ್ದಾಗಿಯೂ ಮಾಡಿ, ಹುಲಿಗೆರೆಯ ಸೋಮೇಶ್ವರನಿಗೆ ಸಮರ್ಪಿಸುತ್ತಿರುವ ವ್ರತದಿಂದ ತೊಂಭತ್ತು ಸಂವತ್ಸರಗಳು ಕಳೆಯುತ್ತಿರಲು; ನಾನು ಮುದುಕನಾದೆನೆಂದು ವಿಚಾರವನ್ನೂ ಬಿಟ್ಟು ನಿಶ್ಚಲಬುದ್ಧಿಯಿಂದ ಒಂದಾನೊಂದು ದಿನ ಜಲಪೂರಿತವಾದ ಕಂಬಿಯನ್ನು ಹೊತ್ತುಕೊಂಡು ವೇಗದಿಂದ ಬರುತ್ತಾ ಮಧ್ಯಮಾರ್ಗದಲ್ಲಿ ಸಿಕ್ಕಿದ ಹೊಳೆಯನ್ನು ದಾಟುವ ಸಂಭ್ರಮದಲ್ಲಿ ಬೆನ್ನು ಮೂಳೆಯುಮುರಿದು ಹೋದಾಗ್ಯೂ ಕಂಬಿಯನ್ನು ಬಿಡದೆ;—ಎಲೈಮಾಯಿಕನಾದ ಸೋಮೇಶನೆ! ಈ ಪ್ರಾಣವಿರುವತನಕ ನನ್ನವ್ರತವನ್ನು ಹ್ಯಾಗೆತಾನೆ ಬಿಟ್ಟೇನು? ಎಂದುಮತ್ತೂ ನಡಿಯುವದಕ್ಕೆ ಉದ್ಯುಕ್ತನಾಗಲು; ಕರುಣದಿಂದ ಆತನ ಬಳಿಗೆ ಬಂದುತನ್ನ ಮಹಿಮೆಯಿಂದ ಹೆಗಲಮೇಲಣಕಂಬಿಯು ಒಂದುಗೇಣಿನ ಪ್ರಮಾಣವನ್ನು ಬಿಟ್ಟುನಡೆಯುವಂತೆ ಆಜ್ಞೆಮಾಡಿದ ಶಿವನು ಕಿರಾತವೇಷದಿಂದಗುಪ್ತವಾಗಿ ಬಂದಿದ್ದಾನೋ? ಮಲ್ಲಿಕಾರ್ಜುನಸ್ವಾಮಿಯೇ ಕಿರಾತರೊಡನೆ ಆ

ಡುವದಕ್ಕೆ ಬಿಜಯಂಗೈದಿರುವನೋ ? ಪ್ರತಿದಿನವೂ ಮೃಗಗಳನ್ನು ಹೊಡೆದು ಶಿವಲೋಕಕ್ಕೆ ಕಳುಹಿಸುತ್ತಿದ್ದ ಕಿರಾತವೇಷಧಾರಿಯಾದ ತೆಲುಗೆ ಬೊಮ್ಮಯ್ಯನೋ ? ಕಾಳಹಸ್ತಿಪರ್ವತದಲ್ಲಿ ಸಂಚರಿಸುತ್ತಿದ್ದ ಬೇಡರಕನ್ನೈಯನೋ ? ಶಿವರಾತ್ರಿಯ ಫಲವನ್ನೆಲ್ಲಾ ತೆಗೆದುಗೊಂಡು ಕೈಲಾಸಕ್ಕೈದಿದ ಸುಕಣ್ಣನೋ ? ಎಂಬ ಸಂಶಯವನ್ನುಂಟು ಮಾಡುವವನಾಗಿಬಂದು, ಆ ಓಹಿಲಯ್ಯನಿಗೆ ಹೇಳಿದ್ದೇನಂದರೆ;—ಅಯ್ಯೋ ಶಿವನೇ ? ನೋಡುವದಕ್ಕಾಗದು. ಅಯ್ಯಾನಿನ್ನಕಾಲಿನಲ್ಲಿ ದಸಿಯುನಾಟಿಕೊಂಡಿದೆ. ನೀನುಹ್ಯಾಗೆತಾನೇ ದಾರಿಯನ್ನುನಡದೀಯೆ ? ಇಂಥಾ ಕಾಠಿನ್ಯವುಂಟೇ ? ಆತ್ಮಘಾತಕತ್ವವು ನಿನಗೆಯೋಗ್ಯವೇ ? ಇನ್ನುನೀನುನಡೆಯಲಾರೆ. ಈ ವಿಧವಾದಕಷ್ಟವನ್ನು ತೋರಿಸದಿದ್ದರೆ ಶಿವನು ನಿನ್ನ ಇಷ್ಟಾರ್ಥವನ್ನು ಕೊಡುವದಿಲ್ಲವೇ ? ಈ ವ್ಯಥೆಯನ್ನು ನೋಡುವದುಕೂಡ ದೋಷವಾಗಿದೆ. ನಿಲ್ಲು ನಿಲ್ಲು. ಇಲ್ಲಿಕಂಬಿಯನ್ನಿಳಿಸು. ಈ ಹಠದಿಂದ ನಿನಗೇನು ? ಕಾಲಿಗೆತಗಲಿಕೊಂಡಿರುವದಸಿಯನ್ನು ನೀನೇಕಿತ್ತುಕೋ ? ಕೀಳುವದಕ್ಕೆ ಭಯಪಟ್ಟವನಾದರೆ ನಾನೇ ಹಿರಿದುಹಾಕುತ್ತೇನೆ. ಕಾಲನ್ನು ಈಕಡೆಗೆನೀಡು ಈಪ್ರಕಾರವಾಗಿ ಹೇಳಿಕೊಂಡು ಸಮೀಪಕ್ಕೆಬರಲು; ಓಹಿಲಯ್ಯನುನೋಡಿ—ಈಗಬರಬೇಡ. ನನ್ನಕಾಲನ್ನು ಮುಟ್ಟಬೇಡ. ಕಾಲನ್ನು ಮುಟ್ಟಬಹುದು. ಮುಟ್ಟಬಾರದು ಎಂದು ವಿಚಾರವನ್ನು ಮಾಡಬೇಕಲ್ಲವೇ ? ನಾನುಕಿರಾತನು ಕಾಲನ್ನುಮುಟ್ಟಿದರೆ ನನಗೇನುಕೊರತೆಯೆಂದುನೆನಸಬೇಡ. ಶಿವಭಕ್ತನಾದ ನಿನ್ನಕೈಲಿ ನನ್ನಕಾಲನ್ನು ಮುಟ್ಟಿಸಿಕೊಳ್ಳಬಹುದೇ ? ಇದರಿಂದ ಮಹಾದೋಷವು ಸಂಭವಿಸದೇ ಇದ್ದೀತೇ ? ಪರಶುದ್ಧವಾದಕಂಬಿಯನ್ನು ಸೋಕಿರುವ ನನ್ನಕೈಗಳಿಂದ ನೀಚವಾದನನ್ನಕಾಲನ್ನು ಮುಟ್ಟಿಕೊಳ್ಳುವದುಹ್ಯಾಗೆ ? ಇದಲ್ಲದೆ ಮಧ್ಯಮಾರ್ಗದಲ್ಲಿ ಕಂಬಿಯನ್ನು ಇಡುವದುತಪ್ಪು. ಆದಕಾರಣ ಎಲೈಕಿರಾತಶ್ರೇಷ್ಠನೇ ? ನೀನುಹೋಗು. ನಾನು ಪ್ರಯಾಸದಿಂದಾದರೂ ನಡೆದುಹೋಗುವೆನು. ಎಂದುಹೇಳಿದನು, ಆಮಾತನ್ನು ಕೇಳಿದ ಕಿರಾತನು;—ಅಯ್ಯಾ ಈ ಅವಸೆಯಲ್ಲಿ ಶಿವಾಲಯದ ಪರ್ಯಂತರ ಹ್ಯಾಗೆಹೋದೀಯೆ ? ಹೋಗಲಾರೆ. ಇಲ್ಲಿಕಂಬಿಯನ್ನು ಮಡಗುವದೂ ಯುಕ್ತವಲ್ಲ. ಮಧ್ಯದಲ್ಲಿ ಕುಳಿತುಕೊಳ್ಳುವದೂ ಯುಕ್ತವಲ್ಲ ಈ ಪ್ರಕಾರವಾಗಿ ಯಾಕೆಕಷ್ಟಪಡುತ್ತೀಯೆ ? ನಿನ್ನಇಷ್ಟಪ್ರಕಾರವಾಗಿ ಮಾಡುತ್ತೇನೆ. ಚಿಮುಟದಿಂದ ಮೆಲ್ಲಗೆ ಈದಸಿಯನ್ನು ಹಿಡಿದು ಕಿತ್ತುಹಾಕುತ್ತೇನೆ. ನೀನು ದಸಿಯನ್ನು ಕೈಯಿಂದಮುಟ್ಟದೆ

ಈ ಮಡವನ್ನು ಒರಗಿಕೊಳ್ಳು. ಎಂದುಹೇಳಿ, ಆ ದಸಿಯನ್ನು ಹಾಗೆಯೇ ಕಿತ್ತು ಹಾಕಲು; ಪೂರ್ವದಲ್ಲಿ ತಿಂದಿದ್ದ ನಿರ್ಮಾಲ್ಯಬಿಃದಿಯು ಚೀಲದಲ್ಲಿತುಂಬಿದ್ದು ಈ ಚಿಗೆಸುರಿದಹಾಗೆ ಸುರಿಯಿತು. ಆಗ ಕಿರಾತವೇಷಧಾರಿಯಾದ ಪರಮೇಶ್ವರನು;- ಎಲೈಓಹಿಲಯ್ಯನೇ ? ಹೆದರಬೇಡವೆಂದುಹೇಳಿ, ಆ ರಂಧ್ರಕ್ಕೆ ಒಂದು ಎಲೆಯನ್ನು ಹಾಕಿಕಟ್ಟಿ, ಸಂತೋಷದಿಂದ;—ಅಯ್ಯಾಹೋಗು. ಸೌರಾಷ್ಟ್ರನಾಥನಾದ ಸೋಮೇಶ್ವರನ ಕೃಪೆಯೆಂಬ ನಿಧಿಯನ್ನುಪಡೆ. ಎಂದುಹೇಳಿ, ಹೊರಟುಹೋದನು. ಅನಂತರದಲ್ಲಿ ಓಹಿಲಯ್ಯನು ಮನಸ್ಸಿನಲ್ಲಿ;,—-ಆಹಾ ? ಶಿವನೇ ನನ್ನಮೇಲಣದ ಯದಿಂದ ಈ ರೂಪಿನಿಂದ ಬಂದುಮಾತನಾಡಿದನು. ಇಲ್ಲದಿದ್ದರೆ ಕಿರಾತರಿಗೆ ಇಂ ಥಾಮಹಿಮೆಯೂ. ದಯೆಯೂ ಎಲ್ಲಿಂದಬಂದೀತು ? ಎಂದು ಸ್ತುತಿಸುತ್ತಾಬಂ ದು ಸೋಮೇಶನಿಂದ ತೆರೆಯಲ್ಪಟ್ಟ ಕದಗಳುಳ್ಳವನಾಗಿ, ವಿಧಾನದಿಂದ ಪೂಜೆ ಯನ್ನುಮಾಡಿ, ದೊಡ್ಡಪಾತ್ರೆಯಲ್ಲಿ ಧೂಪಕ್ಕಾಗಿ ಬೆಂಕಿಯನ್ನು ಪುಟಮಾಡಿ, ಘಂಟೆಯನ್ನು ತರುವದಕ್ಕಾಗಿ ಹೋಗಿರಲು, ಪಾಪಿಗಳಾದ ಗೌಳತಮ್ಮಡಿಗಳು ಧೂಪವರ್ತಿಯಲ್ಲಿದ್ದ ಗುಗ್ಗಳವನ್ನು ನೋಡಿ, ಎಲ್ಲವನ್ನೂ ತೆಗೆದುಮರೆಮಾಡಿದ ರು. ಬಳಿಕ ಓಹಿಲಯ್ಯನು ಬಂದು ಗುಗ್ಗುಳವನ್ನು ಕಾಣದೆ, ಸೋಮೇಶನ ಧೂಪ ವರ್ತಿಯನಡುವೆ ನನ್ನ ದೇಹವೇಧೂಪಾರ್ಥವಾದ ಗುಗ್ಗುಳವಾಗಲಿ ಎಂದು ಹೇಳು ತ್ತಾ; ದಗ ಧಗ ಎಂದು ಉರಿಯುತ್ತಿರುವದಾಗಿಯೂ, ನೋಡುವದಕ್ಕಶಕ್ಯವಾ ಗಿಯೂ, ಮೇಲೆಪೆಚ್ಚಿದ್ದಾಗಿಯೂ, ಕಿಡಿಗಳ ಸಮೂಹದಿಂದ ವ್ಯಾಪಿಸಲ್ಪಟ್ಟದ್ದಾ ಗಿಯೂ ಭುಗಭುಗ ಎಂಬಶಬ್ದವುಳ್ಳದ್ದಾಗಿಯೂ, ಉರಿಗಳ ಪಜ್ತಿಗಳಿಂದ ಆವರಿ ಸಲ್ಪಟ್ಟದ್ದಾಗಿಯೂ, ವೇಗದಿಂದ ಕೂಡಿದ್ದಾಗಿಯೂ ಇರುವಯಜ್ಞೇಶ್ವರನು ರು ದ್ರನ ಹಣೆಗಣ್ಣಿನ ಬೆಂಕಿಯೋ ಎಂಬಂತೆ ತೋರುತ್ತಿತ್ತು. ಆದಾಗ್ಯೂ ಓಹಿಲ ಯ್ಯನು. ನಡುಗದೆ, ಸಡಿಲದೆ, ಭಯವನ್ನು ಹೊಂದದೆ, ಮನಸ್ಸನ್ನು ಅಲ್ಲಾಡಿಸದೆ, ಕಣ್ಣುಗಳನ್ನು ಮುಚ್ಚದೆ, ತನ್ನ ಬುದ್ಧಿಯನ್ನುಬಿಡದೆ, ಕಷ್ಟದಿಂದುಂಟಾಗುವ ಮಾತನ್ನು ಹೇಳದೆ, ತನ್ನಲ್ಲಿ ಸಾಹಸವನ್ನು ಬಿಡದೆ, ಮನಸ್ಸುಕದಡದೆ ಶಿವನಲ್ಲಿಇ ಚ್ಛೆಯನ್ನು ಹೆಚ್ಚಿಸಿ ತನ್ನಧೈರ್ಯವನ್ನುಬಿಡದೆ, ಹಿಂಭಾಗವನ್ನು ನೋಡದೆ, ನಿಶ್ಚಯ ಜ್ಞಾನದಿಂದ ಧೃಢನಾಗಿ, ಸಾಹಸವನ್ನು ಕುಂದಿಸದೆ, ಮೋಹ ಪಾಶರೂಪವಾ ದ ಸಂಸಾರವನ್ನು ವೃದ್ಧಿಗೊಳಿಸದೆ, ತನ್ನ ಜಯಕೆಯಮೇಲೆ ದೃಷ್ಟಿಯನ್ನಿಡದೆ ಜಡತೆಯನ್ನು ಹೊಂದದೆ, ಶಿವನಿಗೆಸೋಲದೆ;— ಎಲೈಸೋಮೇಶನೇ ! ಶ್ರೇಷ್ಠವಾ

ದನನ್ನ ದೇಹವೆಂಬಧೂಪವನ್ನು ಒಪ್ಪಿಸಿಕೋ, ಇದರಿಂದ ಮಹಿಷಾಕ್ಷಿಗುಗ್ಗುಳ ಧೂಪದಸುವಾಸನೆಯು ಹೊರಡದಿದ್ದರೆ ನನ್ನನಿಯಮಕ್ಕೆ ಭಂಗವುಂಟಾಗಲಿ. ನಿನ್ನಭಕ್ತನೂ ಆಗದೆಹೋಗುನೆನು.

ಪೂರ್ವದಲ್ಲಿ ಕೀರ್ತಿವಂತನಾಗಿಯೂ, ಮಹಾತ್ಮನಾಗಿಯೂ ಇರುವ ಧೂಪದ ಮಾಚಯ್ಯನೆಂಬ ಭಕ್ತನು ಪ್ರತಿದಿನವೂ ಶಿವನಿಗೆ ಒಂದು ಪಲತೂಕದಗುಗ್ಗುಲವನ್ನು ತ್ರಿಕಾಲದಲ್ಲೂ ಪ್ರೀತಿಯಿಂದ ಸಮರ್ಪಿಸುತ್ತಾ ಇದ್ದನು. ಹೀಗಿರುವಲ್ಲಿ ಒಂದಾನೊಂದುದಿನ ಎಲ್ಲಿಯೂ ಗುಗ್ಗುಳವು ದೊರೆಯದಿರಲು; ಅದಕ್ಕೆಪ್ರತಿಯಾಗಿ ತನ್ನದೇಹದಲ್ಲಿ ಒಂದೊಂದು ಪಲತೂಕದ ಮಾಂಸವನ್ನು ಕೊಟ್ಟನು. ಆಗ ಅದರಲ್ಲಿ ಗುಗ್ಗುಳದವಾಸನೆಯೋ ಹೊರತು ದುರ್ಗಂಧವುಂಟಾಯಿತೇ ?

ಇದಲ್ಲದೆ ಶ್ರೀಶೈಲದಲ್ಲಿ ಶಿವಭಕ್ತನಾದ ವೀರಶಂಕರದೇವ ನೆಂಬವನು ಕಾಯಿಸಿದ ಹುರಿಯೋಡಿನ ಮಧ್ಯದಲ್ಲಿ ಕುಳಿತುಕೊಂಡು, ಮೂವತ್ತೆರಡು ಆಯುಧಗಳಿಂದಲೂ ತನ್ನ ದೇಹವನ್ನು ಛೇದಿಸಿ ಹುರಿಯೋಡಿಗೆ ಹಾಕಿದನು. ಎಲೈ ಶಿವನೇ ! ಆಗ ಆತನದೇಹದ ತುಂಡುಗಳಿಂದ ದುರ್ಗಂಧವುಂಟಾಯಿತೇ ?

ಪೂರ್ವದಲ್ಲಿಗುಗ್ಗುಳದ ಕಲಿಯಾರೆಂಬ ಭಕ್ತನು ತನ್ನ ದೇಹದ ತೂಕದ ಮಹಿಷಾಕ್ಷಿಗುಗ್ಗಳದ ಧೂಪವನ್ನು ಪ್ರತಿದಿನವೂ ಶಿವನಿಗೆ ಸಮರ್ಪಿಸುತ್ತಾ ಇದ್ದನು. ಒಂದು ದಿವಸ ಗುಗ್ಗುಳವು ದೊರೆಯದಿರಲು; ತನ್ನ ಪ್ರಾಣಗಳನ್ನೇ ಸಮರ್ಪಿಸುವದಕ್ಕೋಸ್ಕರ ಹರಿತವಾದ ಕತ್ತಿಯನ್ನು ಕುತ್ತಿಗೆಯಲ್ಲಿಡುತ್ತಿರಲು; ಆ ಶಿರಸ್ಸು ಅರಳಿದ ತಾವರೆಯಂತೆ ಸುಗಂಧ ಭರಿತವಾಗಲಿಲ್ಲವೇ?

ಕಡವಲನಂಬಿಯೆಂಬ ಶಿವಭಕ್ತನು ಶಿವನಮುಂದೆ ನಂದದದೀವಿಗೆಗಳನ್ನು ಸುರಿಸುವವ್ರತವನ್ನು ನಡಸುತ್ತಿರುವಲ್ಲಿ ಒಂದಾನೊಂದು ದಿನ ಆ ದೀಪಗಳು ಎಣ್ಣೆಯಿಲ್ಲದೆ ಆರಿಹೋಗುವಂತಾಗಲು; ತನ್ನ ಕೂದಲುಗಳನ್ನು ಹತ್ತಿಸಿ, ಶಿವನಿಗೆ ದೀಪವನ್ನು ಬೆಳಗಿದನು. ಆಗ ದುರ್ವಾಸನೆಯು ಹೊರಟೀತೇ?

ಮತ್ತು ಅಣುಮೂರ್ತಿಯೆಂದು ಪ್ರಸಿದ್ಧನಾದ ಒಬ್ಬ ಭಕ್ತನು ಶ್ರೀಗಂಧವು ದೊರೆಯದಿರಲು; ತನ್ನ ಮೊಳಕೈಯನ್ನೇ ಗಂಧಕ್ಕೆ ಪ್ರತಿಯಾಗಿ ಸಾಣೆಯಕಲ್ಲಿನಲ್ಲಿ ತೇದನು. ಆಗ ಅದು ದುರ್ಗಂಧವನ್ನು ಬಿಟ್ಟು ಸುಗಂಧವಾಗಲಿಲ್ಲವೇ?

ಇದಲ್ಲದೆ ದೀಪಕದಲಿಯಾರನೆಂಬ ಹೆಸರುಳ್ಳ ಒಬ್ಬ ಮಹಾಭಕ್ತಿ ಸಂಪನ್ನನಾದ ಮುಗ್ಧನು ಶಿವನನ್ನು ಕಾಯಬೇಕೆಂದು ನಿತ್ಯವೂ ರಾತ್ರಿಕಾಲದಲ್ಲಿ ತಳವಾ

ರನಾಗಿ ದೇವಾಲಯದ ಸುತ್ತಲೂ ತಿರುಗುತ್ತಾ, ಒಂದಾನೊಂದುದಿನ ಎಣ್ಣೆಗೆ ಮಾರ್ಗಲ್ಲದೆ ದೀಪಗಳೆಲ್ಲಾ ಆರಿಹೋಗುತ್ತಿರಲು; ತನ್ನ ತಲೇಕೂದಲನ್ನು ಜಡೇ ಹೊಸಿದು, ಅದನ್ನು ಕಯ್ಯಲ್ಲಿ ಹಿಡಿದು ದೀವಟಿಗೆಯನ್ನಾಗಿ ಮಾಡಿದನು. ಆಗ ಅದರಲ್ಲಿ ದುರ್ಗಂಧವು ಹೊರಡಿತೇಯೇನು ?

ಅಂಥಾ ಶಿವಭಕ್ತರ ದಿವ್ಯವಾದ ಅನುಗ್ರಹದಿಂದ ಉತ್ಪನ್ನನಾದ ಈ ನನ್ನ ದೇಹವುಕೂಡ ಅಂಥಾದಲ್ಲವೇ ? ಈ ದೇಹವೆಲ್ಲವೂ ಉರಿದು ಹೋಗುವಪರ್ಯಂತರ ಘಂಟೆಯಶಬ್ದವು ನಿಂತುಹೋದರೆ, ಹಸ್ತವು ಅಲ್ಲಾಡದಿದ್ದರೆ, ಪರಿಮಳವು ತಪ್ಪಿ ದರೆ, ಕಾಂತಿಯುನಷ್ಟವಾದರೆ, ದ್ರವವಾದರೆ, ದುರ್ವಾಸನೆಹುಟ್ಟಿದರೆ, ನರಗಳು ಕೊಕ್ಕರಿಸಿದರೆ; ಶರೀರವು ಬೆವರಿ ಅಲ್ಲಾಡಿದರೆ, ಪೂರ್ವಸ್ಥಿತಿಯನ್ನು ಬಿಟ್ಟು ಬೇರೆ ವರ್ಣವುಂಟಾದರೆ, ತೊಗಲು ಮೂಳೆಗಳು ಬಿಳೀ ಧೂಪದಂತೆ ಕರಗದಿದ್ದರೆ, ಪಿತ್ತ ಶ್ಲೇಷ್ಮಗಳು ಮೂಗುಮೊದಲಾದ ರಂಧ್ರಗಳಿಂದ ಹೊರಟರೆ, ಮೈಕೂದಲುಗಳಲ್ಲಿ ಕಂಟುವಾಸನೆತೋರಿದರೆ, ರಕ್ತವು ದೇಹದೊಳಗಿಂದ ಹೊರಗೆಚಲಿಸಿದರೆ, ಹೊಗೆಯು ಮುಂಕ್ಕಾದರೆ, ಬೆಂಕಿಯು ಆರಿದರೆ, ಕಣ್ಣಿನಲ್ಲಿ ನೀರುಸುರಿದರೆ, ಹೊಗೆಯು ತಣ್ಣ ಗಿಲ್ಲದಿದ್ದರೆ, ಈ ಧೂಪದಹೊಗೆಯ ಸುವಾಸನೆಯು ತನ್ನಷ್ಟಕ್ಕೆ ತಾನೇ ನಿನಗೆ ಅರ್ಪಿತವಾಗದಿದ್ದರೆ ಈ ದೇಹವು ಸಂಪೂರ್ಣವಾಗಿ ವುರಿಯದೆ ಉಳಿದರೆ, ನೋಟವು ಚಲಿಸಿದರೆ, ಪ್ರಮಥರಮೇಲೆ ಆಣೆಯಿಡುವೆನು. ನನ್ನನ್ನು ನೋಡು. ಎಂದು ಪ್ರಮಥರನ್ನು ಭಕ್ತಿಯಿಂದ ನೆನೆದು, ಆ ಧೂಪವರ್ತಿಯಮಧ್ಯದಲ್ಲಿ ಕುಳಿತು ಕೊಂಡನು. ಆಗ ಆ ಧೂಪದಶ್ರೇಷ್ಠವಾದ ಸುಗಂಧವು ಶಿವಲಿಂಗದ ಸುತ್ತಲೂ ವ್ಯಾಪಿಸಿಕೊಂಡಿದ್ದಲ್ಲದೆ ಎಲ್ಲಾ ಕಡೆಗೂ ಹರಡಿಕೊಂಡಿತು. ಅನಂತರದಲ್ಲಿ ಭಕ್ತ ವತ್ಸಲ್ಯನಾದ ಪರಮೇಶ್ವರನು ಪ್ರತ್ಯಕ್ಷನಾಗಿ ಓಹಿಲಯ್ಯನನ್ನು ತನ್ನ ಸಮೀಪಕ್ಕೆ ಬರಮಾಡಿಕೊಂಡು, ಕರುಣಾದೃಷ್ಟಿಯೆಂಬ ಅಮೃತಸಮುದ್ರದಲ್ಲಿ ಮುಳುಗಿಸಿ, ತಬ್ಬಿಕೊಂಡು, ಪ್ರಸನ್ನವಾದ ಮುಖಕಮಲವುಳ್ಳವನಾಗಿ, ಗುಣಗಳಸಮೂಹಕ್ಕೆ ಆಶ್ರಯನಾಗಿಯೂ, ಸಂತೋಷಭರಿತನಾಗಿಯೂ, ಪಾಪನಾಶಕನಾಗಿಯೂ, ತತ್ವಗಳ ಸಾರವನ್ನು ತಿಳಿದವನಾಗಿಯೂ, ಇರುವ ಆ ಓಹಿಲಯ್ಯನಿಗೆ ಪ್ರಮಥಾ ಧಿಪತ್ಯವೆಂಬ ಅಧಿಕಾರದಲ್ಲಿ ಪಟ್ಟವನ್ನು ಕಟ್ಟಿ, ಮೆಚ್ಚಿಕೆಯಿಂದ ಸಾರೂಪ್ಯಪದ ವಿಯನ್ನೂ ಕೊಟ್ಟನು. * * * * *

ಬಸವೇಶವಿಜಯದಲ್ಲಿ ಮೂವತ್ತನೇ ಅಧ್ಯಾಯವು
ಸಂಪೂರ್ಣವು.

# ಮೂವತ್ತೊಂದನೇ ಅಧ್ಯಾಯವು.

---

## ಪಾಲಗುರ್ಜರನ ಕಥೆ

ಅನಂತರದಲ್ಲಿ ಸದ್ಭಕ್ತಿಎಂಬ ಸ್ತ್ರೀಗೆ ವಲ್ಲಭನಾದ ಓಹಿಲನೆಂಬ ಗಣಾಧೀಶನು ಹಸ್ತದಲ್ಲಿ ಘಂಟೆಯ ಘಣಘಣ ಧ್ವನಿಯು ಸಂಭ್ರಮದಿಂದ ಪ್ರಕಾಶಿಸುವವನಾಗಿ ಶಿವನ ಅಪ್ಪಣೆಯಪ್ರಕಾರ ಸಂತೋಷದಿಂದ ಕೈಲಾಸವನ್ನು ಕುರಿತುಹೋಗುತ್ತಾನೆ. ಸಕಲಜನಗಳೂ ನೋಡಿರಿ ನೋಡಿರಿ. ಎಂದು ಭಕ್ತರು ಸಂತೋಷದಿಂದ ಕೂಗುತ್ತಿರಲು; ಸೌರಾಷ್ಟ್ರದೇಶವೆಲ್ಲಾ ಹರ್ಷದಿಂದ ತುಂಬುತ್ತಿರಲು; ಧೂಪವುದಿಗಂತಗಳನ್ನು ಮುಚ್ಚುತ್ತಿರಲು; ಪಾಪವು ನಾಶವನ್ನು ಹೊಂದುತ್ತಿರಲು; ಸಡಗರವು ಬಹಳವಾಗಿ ಹೆಚ್ಚುತ್ತಿರಲು, ಪರವಾದಿಗಳು ದುಃಖಪಡುತ್ತಿರಲು; ಒಳ್ಳೇ ಕೀರ್ತಿಯು ಎಲ್ಲಾಕಡೆಗಳಲ್ಲೂ ವ್ಯಾಪಿಸುತ್ತಿರಲು; ವಾದ್ಯಗಳು ಘಟ್ಟಿಯಾಗಿ ಧ್ವನಿಮಾಡುತ್ತಿರಲು; ದೂಷಕರೆಲ್ಲರೂ, ಅತಿಭಯಂಕರವಾದ ಹಾನಿಯನ್ನು ಪಡೆಯುತ್ತಿರಲು; ಪ್ರತಿಜ್ಞೆಯು ಮನುಷ್ಯರಿಗೆ ಅಸಾಧ್ಯವಾಗಿರುವಂತೆ ಕೊನೆಮುಟ್ಟುತ್ತಿರಲು; ಪರಮೇಶ್ವರನು ನೂತನವಾದ ಸಂತೋಷವನ್ನು ಹೊಂದುತ್ತಿರಲು; ಅತ್ಯಂತವಾದ ಆಶ್ಚರ್ಯವು ತೋರುತ್ತಿರಲು; ನೋಡುವದಕ್ಕೆ ಬಂದ ಶಿವಶರಣರು ಉಘೇ ಎಂದು ಕೂಗಿಕೊಂಡು ನಮಸ್ಕರಿಸುತ್ತಾ; ಜಯ ಜಯ ಎಂದು ಸ್ತುತಿಸುತ್ತಿರಲು ಓಹಿಲಯ್ಯನು ಕೈಲಾಸವನ್ನು ಸೇರುವದಕಿಂತ ಮುಂಚೆ ಅಜ್ಞಾನದಿಂದಾವರಿಸಲ್ಪಟ್ಟಿದ್ದ ಗೌಳ ತಮ್ಮಡಿಗಳು, ನಾಚಿಕೆಯನ್ನು ಬಿಟ್ಟು, ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಓಹಿಲಯ್ಯನನ್ನು ಕುರಿತು;—ಎಲೈ ಭಕ್ತಶಿರೋಮಣಿಯೇ? ಶಾಂತಿಗುಣದಿಂದ ಮಹೋನ್ನತನಾದವನೇ! ಯಥಾರ್ಥಜ್ಞಾನವುಳ್ಳವನೇ? ದಯೆಯಿಂದಕೂಡಿದವನೇ! ವೀರಶೈವರಿಂದ ಬಿಡಲ್ಪಟ್ಟ ಅನ್ಯದೈವಗಳೆಂಬ ಅರಣ್ಯಕ್ಕೆದವಾಗ್ನಿಯಾದವನೇ! ನಾಸ್ತಿಕರನ್ನು ಕೊಡಹಿದವನೇ! ಮನೋಹರವಾದ ಭಕ್ತಿಭಾವವುಳ್ಳವನೇ! ಶ್ರೇಷ್ಠವಾದ ಅಭಿವೃದ್ಧಿಯುಳ್ಳವನೇ! ನಮ್ಮ ತಪ್ಪುಗಳನ್ನು ಮನ್ನಿಸುವದಕ್ಕೂ, ನಮ್ಮ ಕೊಬ್ಬಿದಪಾಪವನ್ನು ಪರಿಹರಿಸುವದಕ್ಕೂ, ನಮ್ಮನ್ನು ರಕ್ಷಿಸುವದಕ್ಕೂ, ಅನುಗ್ರಹವನ್ನು ಮಾಡು.

ನಮಗೆ ಬೇರೆ ಯಾವದೈವವಿದೆ. ನೀನೇ ದೇವಾಧಿದೇವನು. ನಮ್ಮನ್ನು ಕಾಪಾಡು ಎಂದು ಆ ಪಟ್ಟಣದಲ್ಲಿ ಈಗ ಸ್ತುತಿಸುತ್ತಾರೆ. ಈ ಓಹಿಲಯ್ಯನು ಅದನ್ನು ಗಣನೆಗೆತಾರದೆ, ತಾನೊಬ್ಬನೇ ಕೈಲಾಸಕ್ಕೆ ಹೋಗುತ್ತಾನೆ. ವಲ್ಲಭೆಯೇ ಅವನನ್ನು ನೋಡಿ ನಕ್ಕೆನು. ಯಾಕಂದರೆ ಕೇಳು. ಅತಿ ಕ್ರೂರವಾದ ತಪಸ್ಸನ್ನು ಬಹಳವಾಗಿಮಾಡಿ, ವೀರವ್ರತಗಳನ್ನಾಚರಿಸಿ, ದಾಟುವದಕ್ಕಾಗದ ದುಃಖಗಳನ್ನನುಭವಿಸಿ, ಶಿವನನ್ನು ಮೆಚ್ಚಿಸಿದಾಗ್ಯೂ ತಾನೊಬ್ಬನೇ ಹೋಗುತ್ತಾನೆ. ಸಮೀಪದಲ್ಲಿ ಕೆಲವು ಪಟ್ಟಣಗಳಿರಲಿಲ್ಲವೇ? ತನ್ನ ಊರಿನಲ್ಲಿ ಜನರಿರಲಿಲ್ಲವೇ? ಒಬ್ಬನೇ ಹೋಗುತ್ತಾನೆ. ಇದೆಂಥಾದರಿದ್ರವು. ಈ ಪ್ರಕಾರವಾಗಿ ಹೇಳಿ, ತಿರಿಗಿ ಆ ಓಹಿಲಯ್ಯನನ್ನು ನೋಡಿನೋಡಿ ನಗುತ್ತಿದ್ದನು. ಆ ರಾಜಪತ್ನಿಯು, ರೆಪ್ಪೆಗಳನ್ನು ಮುಚ್ಚದೆನೋಡಿ, ಓಹಿಲಯ್ಯನನ್ನು ಹುಡುಕಿ, ಒಂದು ಕಡೆಯಲ್ಲಿಯೂ ಕಾಣದೆ ಪತಿಗೆ ನಮಸ್ಕರಿಸಿ, ಕೈಗಳನ್ನು ಜೋಡಿಸಿಕೊಂಡು;—ಸ್ವಾಮಿ! ಯಾವದಿಕ್ಕಿನಲ್ಲಿ ಯಾವಮೇಘಗಳ ಬಳಿಯಲ್ಲಿ ಎಷ್ಟುದೂರದಲ್ಲಿ ಮಹಾತ್ಮನಾದ ಓಹಿಲಯ್ಯನು ಹೋಗುತ್ತಾನೆ. ನನಗೆ ತೋರಿಸೆಂದು ಕೇಳಲು; ರಾಯನು ತನ್ನ ಪತ್ನಿಗೆ,— ಎಲೌಕಮಲಮುಖಿಯೇ! ಇಗೋ ಮುಂದುಗಡೆಯಲ್ಲಿ ಕಯ್ಯಲ್ಲಿ ಘಂಟೆಯನ್ನು ಬಾಜಿಸುತ್ತಾ ಬಹು ಸಂತೋಷದಿಂದ ಕೈಲಾಸಕ್ಕೆ ಹೋಗುತ್ತಾನೆ. ನೋಡು ನೋಡು, ಎಂದು ಹೇಳಿತೋರಿಸಲು; ರಾಣಿಯು ಪರಮಸಂತೋಷದಿಂದ ಓಹಿಲಯ್ಯನನ್ನು ನೋಡಿ, ಸಾಷ್ಟಾಂಗನಮಸ್ಕಾರವನ್ನು ಮಾಡಿ, ಆ ಶಿವಭಕ್ತಾಗ್ರಣಿಯನ್ನು ಸ್ತುತಿಸಿ;—ರಾಯನನ್ನು ಕುರಿತು;—ಎಲೈ ವಲ್ಲಭನೇ ಯಾವ ಮಹಾತ್ಮನ ತಪೋ ಮಹಿಮೆಯಿಂದ ಧೂಪಾಗ್ನಿಯು ದೇಹವನ್ನು ಸುಡಲಿಲ್ಲವೋ ದುರ್ವಾಸನೆ ಯುಂಟಾಗಲಿಲ್ಲವೋ? ಧೂಪವು ಶಿವನಿಗೆ ಅರ್ಪಿತವಾಯಿತೋ ಆ ಓಹಿಲಯ್ಯನು ಭಕ್ತಿಯಿಂದ ಶಿವನನ್ನು ಮೆಚ್ಚಿಸಿ, ಕಾಯ ಸಹಿತವಾಗಿ ಸರ್ವರಿಂದಲೂ ಸ್ತುತಿ ಮಾಡಿಕೊಳ್ಳುತ್ತಾ ಕೈಲಾಸಕ್ಕೆ ಹೋಗುವನು. ಇದು ಆಶ್ಚರ್ಯವಲ್ಲವೇ? ಮತ್ತೊಬ್ಬರಿಂದ ನಡಸುವದಕ್ಕೆ ಹ್ಯಾಗೆ ಸಾಧ್ಯವಾದೀತು? ಆದರೆ ಈ ಸಂಗತಿಯನ್ನು ಬಾಯಿಂದ ಹೇಳುವದು ಎಲ್ಲರಿಗೂ ಸುಲಭವು. ಎಂದು ಹೇಳಲು; ರಾಯನು ಕೇಳಿ, ಉತ್ತರವನ್ನು ಹೇಳಿದ್ದೇನಂದರೆ;——

ಎಲೌರಮಣಿಯೇ! ಪುರಾತನ ಭಕ್ತರ ಚರಿತ್ರೆಯನ್ನು ನೋಡಿದರೆ; ಇದೇನಾಶ್ಚರ್ಯ? ಅದಕಿಂತಲೂ ಇವೇನು ಹೆಚ್ಚಾದದ್ದೋ? ನೀನು ತಿಳಿಯೆ. ಅಗ್ನಿಯು

ಶಿವಭಕ್ತರಿಗೆ ನೋವನ್ನುಂಟು ಮಾಡುವದರಲ್ಲಿ ಸಮರ್ಥನೇ! ವೀರಭದ್ರನು ಆಯ ಜ್ಞೇಶ್ವರನ ಮುಂದಣ ನಾಲಗೆಗಳನ್ನೂ, ತೋಳುಗಳನ್ನೂ, ಕತ್ತರಿಸಲಿಲ್ಲವೇ? ಇದೇನು? ಒಬ್ಬಾನೊಬ್ಬ ಪ್ರಮಥನು ಬಡಬಾಗ್ನಿಯನ್ನು ಹಣೆಯಲ್ಲಿ ತಿಲಕವ ನ್ನು ಮಾಡಿಕೊಂಡನು. ಇನ್ನೊಬ್ಬ ಪ್ರಮಥನು ಬಹುಕಾಲದ ತನಕ ತನ್ನ ಕಡೆ ಗಣ್ಣಿನಲ್ಲಿ ಪ್ರಳಯಾಗ್ನಿಯನ್ನು ಬಚ್ಚಿಟ್ಟುಕೊಂಡಿರಲಿಲ್ಲವೇ? ವ್ಯಾಘ್ರಪಾದ ಮು ನಿಯ ಮೊದಲನೆಯ ಮಗನನ್ನು ಸುತ್ತಿಕೊಂಡ ಅಗ್ನಿಯು ಏನನ್ನು ಮಾಡಿತು? ಶಂಕರದಾಸಯ್ಯನ ಹಣೆಯಲ್ಲಿ ಅಗ್ನಿ ಇರಲಿಲ್ಲವೇ? ಪರಮತಸ್ಥರು ಶಿವಭಕ್ತನಾ ದ ವಾಗೀಶನನ್ನು ಉರಿಯುವ ಬೆಂಕಿಯಲ್ಲಿ ಹಾಕಲು; ಬೆಂಕಿಯು ತಂಗೊಳಕ್ಕೆ ಸಮಾನವಾಗಿ, ಆತನ ದೇಹದಲ್ಲಿರುವ ರೋಮವನ್ನು ಸುಡುವದಕ್ಕಾದರೂ ಶಕ್ತ ವಾಯಿತೇ? ಪೂರ್ವದಲ್ಲಿ ಪಿಳ್ಳೈನೈನಾರಿಯೆಂಬ ಭಕ್ತನನ್ನು ಜೈನರು ಮಧುರೆಯ ಲ್ಲಿ ದುರಾಲೋಚನೆಯಿಂದ ಹಗ್ಗದಲ್ಲಿ ಕೈಕಾಲುಗಳನ್ನು ಬಿಗಿದು, ಅವನ ಮನೆಗೆ ಬೆಂಕಿಯನ್ನು ಹಚ್ಚಲು; ಆ ಬೆಂಕಿಯು ಒಂದು ಹುಲ್ಲನ್ನಾದರೂ ಸುಟ್ಟಿತೇ ಏನು? ಮಹಿಮೆಯಿಂದ ಪೂರ್ಣನಾದ ಶ್ರೀಪತಿಪಂಡಿತನು,-ಶಿವನೇ ಜಗತ್ಕರ್ತನು, ಶಿವ ಭಕ್ತರೇ ಶ್ರೇಷ್ಠರಲ್ಲದೆ ಇತರರು ಶ್ರೇಷ್ಠರಲ್ಲ, ಎಂದು ಪ್ರತಿವಾದಿಗಳಮುಂದೆ ಪ್ರಸಂಗಿಸಿ, ದೃಷ್ಟಾಂತಕ್ಕಾಗಿ ತನ್ನ ಉತ್ತರೀಯ ವಸ್ತ್ರದಲ್ಲಿ ಬೆಂಕಿಯನ್ನು ಕಟ್ಟಿ ದನು. ಬೆಂಕಿಯು ಏನುಮಾಡಿತು. ಅದರಿಂದ ಅಗ್ನಿಯು ಶಿವಭಕ್ತರಿಗೆ ಭ ಯಪಡುತ್ತದೆ. ಎಲೌ ಕಮಲನಯನೇ; ಓಹಿಲಯ್ಯನ ದೇಹದಲ್ಲಿ ಧೂಪವಾಸನೆ ಯುಂಟಾದದ್ದು ಪರಮಾಶ್ಚರ್ಯವೆಂದು ಹೇಳಿವೆಯಷ್ಟೆ. ಶಿವಭಕ್ತರ ಚರಿತ್ರೆಯ ನ್ನು ತಿಳಿದವನಿಗೆ ಇದೇನು ವಿಶೇಷವು? ಹಿಂದೆ ಮೊರಟದ ಬಂಕನೆಂಬ ಮಹಾತ್ಮನಿಗೆ ಒಣಗಿದ ಮೋಟುಮರವು ಚಿಗುರಿದ್ದಲ್ಲದೆ ಬಂಜೆ ಹಸುವು ಪ್ರಸವಿಸಿ ಕೊಡದಷ್ಟು ದಪ್ಪವಾದ ಕೆಚ್ಚಲುಳ್ಳದಾಗಿ ಹಾಲನ್ನು ಕರೆಯಲಿಲ್ಲವೇ? ತಿಲಕಾಂಬೆಯು ಭಕ್ತಿಮಹಿಮೆಯಿಂದ ಪುರುಷತ್ವವನ್ನು ಪಡೆಯಲಿಲ್ಲವೇ? ಕಲಕೇತಬ್ರಹ್ಮಯ್ಯನ ಕೈ ಸೋಂಕಿನಿಂದ ಭೂಮಿಯ ಧೂಳಿಯು ಆತನ ಭಕ್ತಿಯಬಲದಿಂದ ಸುವರ್ಣ ವಾಗಲಿಲ್ಲವೇ? ಮೋಳಿಗೇಮಾರಯ್ಯನಿಂದ ತರಲ್ಪಟ್ಟ ಸೌದೆಗಳು ಆತನ ಮಹಿ ಮೆಯಿಂದ ಚಿನ್ನದ ತುಂಡುಗಳಾಗಲಿಲ್ಲವೇ? ಮುಸುಡಿಚೌಡಯ್ಯನ ಭಕ್ತಿಪ್ರ ಭಾವದಿಂದ ತೊಟ್ಟೇಹಣ್ಣುಗಳು ಅಮೃತವಾಗಲಿಲ್ಲವೇ? ಮತ್ತು ದಡವನ್ನು ಕಟ್ಟಿ ಹರಿಯುತ್ತಿದ್ದ ನದೀ ಪ್ರವಾಹವು ಕಾಲುಹೊಳೆಯಾಗಲಿಲ್ಲವೇ? ಏಕಾದ

ನಾಥನ ಭಕ್ತಿಯಿಂದ ಕೈಕತ್ತಿಯು ಪುಷ್ಪಮಾಲಿಕೆಯಾಗಲಿಲ್ಲವೇ ? ಬಸವೇಶನ ಮಗನು ಹುತ್ತಕ್ಕೆ ಕೈಯ್ಯನ್ನಿಡಲು; ಭಯಂಕರವಾದ ಕೃಷ್ಣಸರ್ಪವುಕೂಡ ಮುತ್ತಿನ ಸರವಾಗಲಿಲ್ಲವೆ! ಯಲೇಶಕೇತಯ್ಯನ ಭಕ್ತಿಬಲದಿಂದ ಸುಟ್ಟುಬೂದೀಮಾಡಿದ ಬೀಜಗಳು ಮೊಳೆತು ಫಲಿಸಲಿಲ್ಲವೇ ? ಕುಲಚ್ಚರಿಯನೆಂಬ ಭಕ್ತನ ಭಕ್ತಿಸಾಮರ್ಥ್ಯದಿಂದ ನರಿಗಳು ಜಾತ್ಯಾಶ್ವಗಳಾಗಲಿಲ್ಲವೇ ? ಪೂಸಲನೈನಾರಿಯ ಭಕ್ತಿಯಿಂದ ಸ್ಮರಿಸಿದಮಾತ್ರಕ್ಕೆ ಆಶ್ಚರ್ಯಕರವಾದ ಶಿವಾಲಯವುಂಟಾಗಲಿಲ್ಲವೇ ? ನಮಿನಂದಿಯು ಸದ್ಭಕ್ತಿಬಲದಿಂದ ಒರೀ ನೀರನಿಂದ ಸಾವಿರ ದೀಪಗಳು ಚೆನ್ನಾಗಿ ಉರಿಯಲಿಲ್ಲವೇ ? ಆಜ್ಞಾಸಿದ್ಧಿಯುಳ್ಳ ಇನ್ನೂ ಅನೇಕ ಭಕ್ತರಿದ್ದಾರೆ ಕಾಯಸಹಿತವಾಗಿ ಕೈಲಾಸಕ್ಕೆ ಹೋಗುವುದು ಆಶ್ಚರ್ಯವೆಂದು ತಿಳಿದಿದ್ದೀಯೆ, ಒಬ್ಬನೇಹೋಗುವುದು ಇದೊಂದಾಶ್ಚರ್ಯವೇ ? ಚೇರಮರಾಯನು ರುದ್ರಾಕ್ಷಕವಚಗಳಿಂದ ಕೂಡಿದ ಎಂಭತ್ತು ಸಾವಿರ ಕುದುರೆಗಳೊಡನೆ ಶಿವಪುರಿಯನ್ನೈದಿದನು. ಪೂರ್ವದಲ್ಲಿ ಸಾಮವೇದಿಯು ಶಿವನನ್ನು ಶಿವನನ್ನು ಮೆಚ್ಚಿಸ ಮೂವತ್ತೆರಡು ಪಟ್ಟಣಗಳೊಡನೆ ಕೈಲಾಸಕ್ಕೆ ಹೋಗಲಿಲ್ಲವೇ ? ಹಲಾಯುಧಯ್ಯನು ಒಂಭತ್ತು ಗ್ರಾಮಗಳೊಡನೆ ಕೈಲಾಸವನ್ನೈದಲಿಲ್ಲವೇ ? ಮತ್ತು ಹಿಂದೆ ಶಿವಭಕ್ತಿಸಂಪನ್ನನಾದ ಪಿಳ್ಳೈನೈನಾರಿಯೆಂಬುವನು ತನ್ನ ಪಟ್ಟಣದಲ್ಲಿರುವ ಸಕಲ ಜನಗಳನ್ನೂ ಸಂಗಡ ಕರೆದುಕೊಂಡು, ಶಿವನಲ್ಲಿ ಪ್ರವೇಶಲಿಲ್ಲವೇ ? ಮಹಾತ್ಮನಾದ ಚಿರತೊಂಡನೆಂಬ ಭಕ್ತನು ಕಾಂಚೀಪಟ್ಟಣದ ಏಳುಬೀದೀ ಜನಗಳೊಡನೆ ಕೈಲಾಸಕ್ಕೆ ಹೋಗಲಿಲ್ಲವೇ ? ಮಲಯರಾಜನು ತನ್ನ ಪುರಜನಗಳನ್ನು ಕರೆದುಕೊಂಡು ರಜತಾದ್ರಿಯನ್ನೈದಲಿಲ್ಲವೇ ? ಮಿರುಮಿಂಡೆಯ್ಯನು ಸರ್ವರಿಗೂ ಸಂತೋಷವನ್ನುಂಟುಮಾಡಬೇಕೆಂಬ ಕುತೂಹಲದೊಡನೆ ಸದ್ಭಕ್ತರೆಲ್ಲರನ್ನೂ ಜೊತೆಯಲ್ಲಿ ಕರೆದುಕೊಂಡು ಕೈಲಾಸಕ್ಕೆ ಹೋಗಲಿಲ್ಲವೇ ? ನಮ್ಮ ಮಾನಕಂಜಾರನು ತನ್ನ ಮಗಳೊಡನೆಯೂ, ತನ್ನ ಅಳಿಯನೊಡನೆಯೂ ಸಂತೋಷದಿಂದ ಶಿವಲೋಕವನ್ನೈದಲಿಲ್ಲವೇ ? ಉದ್ಭಟಯ್ಯನು ಏಳುನೂರು ಭೂತಗಳಸಂಗಡ ಆಲದಮರ ಸಹಿತವಾಗಿ ಶಿವಪುರಕ್ಕೆ ಸೇರಲಿಲ್ಲವೇ ? ಶಿವಭಕ್ತಿಯಿಂದ ಅಲಂಕರಿಸಲ್ಪಟ್ಟ ತೆಲುಗ ಜೋನಮಯ್ಯನು ಪ್ರತಿದಿನವೂ ಏಳೇಳು ಮೃಗಗಳನ್ನು ಸಂತೋಷದಿಂದ ಶಿವಪುರಿಗೆ ಕಳುಹಿಸಲಿಲ್ಲವೇ ? ಮಲ್ಲಣನು ಪೂರ್ವದಲ್ಲಿ ತನ್ನ ಸೂಳೆಯನ್ನೂ ಅವಳ ಗಿಳಿಯನ್ನೂ ಅವಳ ತಾಯಿಯನ್ನೂ ಕರೆದುಕೊಂಡು

ಕೈಲಾಸಕ್ಕೆ ಹೋಗಲಿಲ್ಲವೇ ? ನಂಬಿಯಣ್ಣನು ಇಬ್ಬರು ಸ್ತ್ರೀಯರಿಂದಲೂ ಬಂಧುಗಳಿಂದಲೂ, ಸಹಿತವಾಗಿ ಶಿವನಪಟ್ಟಣಕ್ಕೆ ಹೋಗಲಿಲ್ಲವೇ ? ಇವಲ್ಲದೆ ಪುರಾತನರಾದ ಶಿವಭಕ್ತರೊಳಗೆ ಶಿವಭಕ್ತಿಪರಾಯಣರಾಗಿ ಕೈಲಾಸವನ್ನೈದಿದವರು ಎಷ್ಟೋಮಂದಿಗಳಿದ್ದಾರೆ. ಓಬ್ಬನೇ ಕೈಲಾಸಕ್ಕೆಹೋಗುವ ಈ ಓಹಿಲಯ್ಯನು ಅಷ್ಟು ಸ್ತೋತ್ರಕ್ಕೆ ಪಾತ್ರನಾಗಿದ್ದಾನೆಯೇ ?

ಈ ರೀತಿಯಾಗಿ ಓಹಿಲಯ್ಯನ ತಿರಸ್ಕಾರಪೂರ್ವಕವಾಗಿ ರಾಯರು ಹೇಳುತ್ತಿರಲು, ರಾಜಪತ್ನಿಯು ಆ ಮಾತನ್ನು ಸೈರಿಸದವಳಾಗಿ,-ಎಲೈ ವಲ್ಲಭನೇ ! ನೀನು ಕೆಟ್ಟಕಾಮಿಯು. ಆತನು ನಿಷ್ಕಾಮಿಯು. ನೀನು ರಾಜನು. ಆತನು ಶಿವಯೋಗಿಯು. ನೀನು ಜೂಜಿನಲ್ಲಿ ಆಸಕ್ತಿಯುಳ್ಳವನು. ಆತನು ಶಿವಪೂಜೆಯಲ್ಲಿ ತತ್ಪರನು. ನೀನು ಸಂಸಾರದಲ್ಲಿ ಅನುರಕ್ತನು. ಆತನು ಸಂಸಾರದಲ್ಲಿ ವಿರಕ್ತನು. ನೀನು ಭೂಲೋಕದಲ್ಲಿಮಾತ್ರ ಸಂಚರಿಸುತ್ತೀಯೇ. ಆತನು ದೇವಲೋಕದಲ್ಲಿ ಸಂಚರಿಸುವನು. ನಿನಗೆ ಆತನಲ್ಲಿ ಪ್ರೇಮವಿದ್ದರೆ ಶ್ಲಾಘನೆಮಾಡು. ಇಲ್ಲದಿದ್ದರೆ ಸುಮ್ಮನಿರು. ಸದ್ಭಕ್ತನಾದ ಓಹಿಲಯ್ಯನನ್ನು ಲಘುವಾಗಿ ಮಾತಾಡಬೇಡ, ಎಂದು ಹೇಳಿದಳು. ಈ ಮಾತನ್ನು ಕೇಳಿ, ರಾಯನು ತನ್ನ ಪತ್ನಿಯನ್ನು ಕುರಿತು ನಿಷ್ಕಾಮಿಗಳಾದವರು ಕಾಮವಿಲ್ಲದಿದ್ದರೆ ಶಿವನನ್ನು ಹೊಂದುವದಕ್ಕೆ ಹೇಗಾದೀತು ? ಶಿವನು ಸುಂದರನಂಬಿಯನ್ನು ಕಾಮಿಯೆಂದು ತಿರಸ್ಕರಿಸಿ ನಿಷ್ಕಾಮರ ಬಳಿಗೆ ಹೋದನೋ ? ಭೂಮಿಯಲ್ಲಿರುವ ಪದಾರ್ಥಗಳ ಅಪೇಕ್ಷೆಯಿಲ್ಲದವನು ಹ್ಯಾಗೆ ಶಿವಸೇವೆಯಲ್ಲಿ ಆಸಕ್ತನೆನಿಸಿಕೊಂಡಾನು ? ಶಿವನು ಕರಿಕಾಲಚೋಳ, ರಾಜೇಂದ್ರಚೋಳ, ಉತ್ತುಂಗಚೋಳ, ಕರವೂರಚೋಳ, ವೀರಚೋಳ, ಶ್ರೀವೀರಚೋಳ, ವಿಕ್ರಮಚೋಳ, ಮುಂತಾದ ಭಕ್ತರನ್ನು ರಾಜರೆಂದು ನಿರಾಕರಿಸಿ, ಧನಹೀನರಾದ ದೇಹವಂಚಕರೊಡನೆ ಸೇರಿದನೇ ? ಎಲೌ ಕಮಲಾಕ್ಷಿಯೇ ! ನಾವು ರಾಜರಾದಮಾತ್ರದಿಂದ ಭಕ್ತಿಮಾರ್ಗಕ್ಕೆ ಬಾಹ್ಯರಾಗುವೆವೆ ? ಶಿವನಿಗೆ ಸಮರ್ಪಣೆಮಾಡುವುದಲ್ಲಿ ಸಮರ್ಥನಾದ ಪುರುಷನು ವಿನೋದಕ್ಕಾಗಿ ಜೂಜಾಡಿದರೆ ಅದು ನಿಂದ್ಯವಾದೀತೇ ?

ಪೂರ್ವದಲ್ಲಿ ಮೂರ್ಖನೈನಾರಿಯೆಂಬ ಒಬ್ಬ ಸದ್ಭಕ್ತನು ಬೇರೆ ಯಾವಕೆಲಸವನ್ನು ತಿಳಿಯದವನಾಗಿದ್ದರಿಂದ ಜೂಜಾಡಿ ದ್ರವ್ಯಸಂಪಾದನೆಯನ್ನು ಮಾಡಿ ತಂದು ಯಥಾವಾಗಲೂ ಜಂಗಮಾರಾಧನೆಯನ್ನು ಮಾಡಿಕೊಂಡು ಸಂತೋಷದಿಂದಿ

ದ್ದಿನು. ಹೀಗಿರುವಲ್ಲಿ ಒಂದಾನೊಂದು ದಿನ ಶಿವನು ಆತನ ಭಕ್ತಿಯನ್ನು ಲೋಕದಲ್ಲಿ ಪ್ರಕಾಶಗೊಳಿಸಬೇಕೆಂದು, ತನ್ನ ರೂಪನ್ನು ಮರಸಿಕೊಂಡು, ಬೇರೆ ವೇಷದಿಂದ ಆತನೊಡನೆ ಜೂಜಾಡುವದಕ್ಕೆ ಬಂದು; ಅವನಿಗೆ ಸೋತು ನನ್ನ ಹತ್ತಿರವೇನೂ ಇಲ್ಲವೆಂದು ಹೇಳಿದನು. ಆಗ ಆ ಭಕ್ತನು ನಿನ್ನಿಂದ ನನ್ನ ಜಂಗಮಾರ್ಚನೆಗೆ ಭಂಗವುಂಟಾಯಿತಲ್ಲಾ ! ಎಂದು ತನ್ನ ಪಾಗಿನಿಂದ ಆತನ ಕಾಲುಗಳನ್ನು ಬಿಗಿದನು. ಶಿವನು ನನ್ನನ್ನು ಇವನು ಬಿಡುವದಿಲ್ಲವೆಂದು ತಿಳಿದು, ತನ್ನ ವಸ್ತ್ರದೊಳಗಿದ್ದ ಶಿವಸೂತ್ರವನ್ನು ಸ್ವಲ್ಪತೋರಿಸಲು; ಆ ಭಕ್ತನು ನೋಡಿ;—ಶಿವಶಿವಾ—ನನಗೆ ಬಹುಪಾಪವು ಸಂಘಟಿಸಿತು. ಪಾಗಿನಿಂದ ಈ ಭಕ್ತನನ್ನು ಕಟ್ಟಿಹಾಕಿದೆನಲ್ಲಾ; ಈ ಪಾಪನಿವಾರಣಾರ್ಥವಾಗಿ ನನ್ನ ಶಿರಸ್ಸು ಛೇದಿಸಬೇಕೆಂದು ಮಸ್ತಕಕ್ಕೆ ಖಡ್ಗವನ್ನಿಡುವಷ್ಟರೊಳಗೆ ಶಿವನು ಪ್ರಸನ್ನನಾಗಿ;—ನಿನ್ನ ಇಷ್ಟಾರ್ಥವೇನು ? ಕೇಳು, ಕೊಡುತ್ತೇನೆಂದು ಹೇಳಿದ್ದಕ್ಕೆ ಆ ಭಕ್ತನು;—ಸ್ವಾಮಿ! ನೀನು ಜೂಜಿನಲ್ಲಿ ಸೋತದ್ರವ್ಯವನ್ನು ಕೊಡು; ನನಗೆ ಅದೇ ಸಾಕು. ಜಂಗಮರ ಧನವನ್ನು ಯಾರಾದರೂ ಉದಾಸೀನಮಾಡಕೂಡದು, ಎಂದು ಹೇಳಿದನು. ಅನಂತರದಲ್ಲಿ ಪರಮೇಶ್ವರನು ಅವನಿಗೆ ಬೇಕಾದಷ್ಟು ಧನವನ್ನು ಕೊಟ್ಟು ಕಳುಹಿಸಿ, ಆ ಧನದಿಂದ ಅವನು ಜಂಗಮಾರ್ಚನೆಯನ್ನು ಕ್ರಮವಾಗಿ ನಡಿಸಿದಮೇಲೆ ಕರುಣದಿಂದ ಆ ಮೂರ್ಖನೈನಾರಿಯನ್ನು ಕೈಲಾಸಕ್ಕೆ ಕರಕೊಂಡು ಹೋದನು

ಸರ್ವಜ್ಞನಾದ ಶಿವನು ಆ ಮೂರ್ಖನೈನಾರಿಯನ್ನು ಜೂಜುಗಾರನೆಂದು ಅವನನ್ನು ಬಿಟ್ಟು ಹೋದನೇ ? ಧರ್ಮರಾಯ ಮೊದಲಾದವರು ಬೇರೆ ಚಿಂತೆಯಿಂದ ಜೂಜಾಡಿ ಕೆಟ್ಟುಹೋದರು. ಭಕ್ತಿಗೋಸ್ಕರ ಮೂರ್ಖನೈನಾರಿಯು ಜೂಜಾಡಿ ಶಿವಸಾಯುಜ್ಯವನ್ನು ಪಡೆದನು. ಸಂಸಾರದಲ್ಲಿ ವೈರಾಗ್ಯವೂ ಅನುರಾಗವೂ ಯಾವಾಗಲೂ ಜನಗಳಿಂದ ಒಂದೇ ವಿಧವಾಗಿ ಆಚರಿಸಲ್ಪಡುತ್ತದೆ. ಶಿವನಿಗೆ ಸಮರ್ಪಿಸದೆ ಯಿರುವ ಸೌಖ್ಯವನ್ನು ಬಿಡುವದೇ ವೈರಾಗ್ಯವು. ಶಿವಪ್ರಸಾದವನ್ನು ಬಿಟ್ಟು, ಬೇರೆ ಪದಾರ್ಥಗಳನ್ನು ಪ್ರೀತಿಸುವದೇ ಸಂಸಾರದ ಅನುರಾಗವು. ಈ ರಾಗವಿರಾಗಗಳೆರಡೂ ಕೂಡಿದವುಗಳಂತೆ ತೋರುತ್ತವೆ. ಆದರೆ ತಾವರೆಯೆಲೆಯೂ ನೀರೂ ಒಂದಕ್ಕೊಂದು ಸೇರದಿರುವಂತೆ ಅವೆರಡೂ ಸೇರುವದಿಲ್ಲ. ಶಿವನಲ್ಲಿ ಏಕಾಗ್ರಚಿತ್ತನಾದವನು ಸಂಸಾರಕ್ಕೆ ಸಿಕ್ಕುವದಿಲ್ಲ. ಸಂಸಾರಿಗಳ ಕಣ್ಣಿಗೆ ಸಂಸಾರಿಯಂತೆ ಕಾಣಿಸುತ್ತಾನೆ. ಪ್ರಪಂಚದ ಭೇದವನ್ನು ವಿಚಾರಿಸಿದರೆ ಭಕ್ತರು ಈ

ಪ್ರಪಂಚವನ್ನು ಬಿಟ್ಟಿರುವರು. ಶಿವಯೋಗದಲ್ಲಿರುವವರಿಗೆ ಶಿವಲೋಕವು ಮನುಷ್ಯಲೋಕವು ಎಂಬಭೇದವಿಲ್ಲ. ಎಲೇ ವಲ್ಲಭೆಯೇ ನೀನು ಭಕ್ತಿಯರಹಸ್ಯವನ್ನು ತಿಳಿಯೆ. ಬಹಳ ಮಾತುಗಳಿಂದೇನು ? ಈ ಪ್ರಕಾರವಾಗಿ ರಾಯನು ಹೇಳಿದ್ದಕ್ಕೆ ರಾಜಪತ್ನಿಯು ಆಕ್ಷೇಪದೊಡನೆ;-ಎಲೈಸ್ವಾಮಿಯೇ ! ನಾನು ಭಕ್ತಿಯ ಸ್ವರೂಪವನ್ನು ತಿಳಿಯೆನು. ನೀನು ವಿಶೇಷವಾಗಿ ತಿಳಿವಿದ್ದೀಯೆ. ಇಂಥಾ ಸದ್ಭಕ್ತನಾದ ನೀನು ಓಹಿಲಯ್ಯನನ್ನು ಧಿಕ್ಕರಿಸಿ ನಿನ್ನ ಸಾಮರ್ಥ್ಯದಿಂದ ಹ್ಯಾಗೆಕೈಲಾಸಕ್ಕೆ ಹೋದೀಯೆ ? ಯಾವರೀತಿಯಿಂದ ಯಾವಾಗ ಎಷ್ಟು ಜನಗಳನ್ನು ಸಂಗಡಕರದು ಕೊಂಡು ಹೋಗುತ್ತೀಯೆ ? ಎಂದು ಕೇಳಲು; ರಾಯನು ಎಲೌ ಕಮಲಮುಖಿಯೇ ! ನೀನು ಆಕ್ಷೇಪಿಸಿ ಮಾತನಾಡಿದಮೇಲೆ ನಾನು ನಿನ್ನ ಕೂಡ ಪಗಡೆಯನ್ನಾಡುತ್ತಾ ಈಗಲೇ ನನ್ನ ಪಟ್ಟಣದಲ್ಲಿರುವ ಸಮಸ್ತ ಜನಗಳೊಡನೆ ಹೋಗುತ್ತೇನೆ. ಬಹುಕಾಲ ಅವಧಿಯನ್ನಿಡುವದರಿಂದ ಪ್ರಯೋಜನವೇನು ? ಸಾವಕಾಶ ಮಾಡುವದು ಯೋಗ್ಯವಲ್ಲವಷ್ಟೆ. ನೋಡಿ ಸಂತೋಷಪಡು ಎಂದು ಹೇಳಿ, ಕಂಚುಕಿಯನ್ನು ಕರೆದು, ಕೈಲಾಸವನ್ನು ಕುರಿತುಹೋಗುವದಕ್ಕೆ ಆಶೆಯುಳ್ಳವರೆಲ್ಲರೂ ಸನ್ನದ್ಧರಾಗಿ ಬನ್ನಿರಿ. ಎಂದು ಪಟ್ಟಣದಲ್ಲಿ ಸಾರೆಂದು ಅವನಿಗೆ ಆಜ್ಞಾಪಿಸಿ, ಪಟ್ಟಣದ ಜನಗಳನ್ನೆಲ್ಲಾ ಕರಿಸಿ, ತಾನು ಅಲಂಕಾರವನ್ನು ಮಾಡಿಕೊಂಡು, ಒಂದು ಉತ್ತಮವಾದಕುದುರೆಯನ್ನೇರಿ, ಬಹುಸಂಭ್ರಮದಿಂದ ಬಂಧುಗಳು, ಮಿತ್ರರು, ಹೆಂಡತಿ ಮಕ್ಕಳು ಇವರಿಂದ ಬಳಸಲ್ಪಟ್ಟವನಾಗಿ, ಅಲ್ಲಲ್ಲಿ ಭಕ್ತರಸಮೂಹವು ಜಯ ಜಯ ಎಂದು ಕೂಗುತ್ತಿರಲು; ಉನ್ನತಧ್ವಜಗಳೂ ಕೊಡೆಗಳೂ ಆಕಾಶವನ್ನು ಮುಚ್ಚುತ್ತಿರಲು; ಮಂಗಳಕರವಾಗಿಯೂ, ಸಂತೋಷವನ್ನು ಕೊಡುವದಾಗಿಯೂ, ಇರುವಸಂಗೀತವು ಎಲ್ಲಾಕಡೆಯಲ್ಲಿಯೂ ವ್ಯಾಪಿಸುತ್ತಿರಲು ಶಿವದುಂದುಭಿಧ್ವನಿಯಿಂದ ಆಕಾಶವು ನೊಳಗುತ್ತಿರಲು; ಹೂವಿನಮಳೆಯು ಸುರಿಸುತ್ತಿರಲು; ಮಹಿಮೆಯಿಂದ ಅಂತರಿಕ್ಷವು ಪ್ರಕಾಶಗೊಳಿಸುತ್ತಿರಲು; ದೇವತಾಸಮೂಹಗಳು ಸ್ತುತಿಸುತ್ತಿರಲು; ಭಕ್ತರ ಅಪ್ಪಣೆಯನ್ನು ಕೇಳಿ, ಅವರ ಕೃಪೆಯನ್ನು ಪಡೆದು, ಸ್ಥಿರವಾದ ಶಿವಭಕ್ತಿಯ ತೇಜಸ್ಸಿನಿಂದ ಹೆಚ್ಚಿದ ಕೀರ್ತಿಯಿಂದ ಕೂಡಿದವನಾಗಿ ಏನೋ ಒಂದು ಮಹೋತ್ಸವಕ್ಕಾಗಿ ಸಮೀಪದಲ್ಲಿರುವ ಗ್ರಾಮವನ್ನೈದುವವನಂತೆ ಶೀಘ್ರದಲ್ಲಿ ಕೈಲಾಸವನ್ನೈದಿದನು. * * *

ಬಸವೇಶವಿಜಯದಲ್ಲಿ ಮೂವತ್ತೊಂದನೇ ಅಧ್ಯಾಯವು ಸಂಪೂರ್ಣವು

## ಮೂವತ್ತೆರಡನೇ ಅಧ್ಯಾಯವು

---

### ಗುರುಭಕ್ತಾಂಡಾರಿಯ ಮಹಿಮೆ

ಆದಕಾರಣದಿಂದ ಲೋಕದಲ್ಲಿ ಸ್ತ್ರೀಯರು ವಿನೋದವಾಗಿ ಯಾದರೂ ಹೇಳಿದ ಹಿತವಚನವನ್ನು ಅನುಸರಿಸಿದವನಿಗೆ ಶ್ರೇಯಸ್ಸಾಗುವವಿಷಯದಲ್ಲಿ ಏನೂ ಸಂಶಯವಿಲ್ಲ.

ಈ ರೀತಿಯಾಗಿ ಪ್ರೌಢವತಿಯು ಹೇಳುತ್ತಿರಲು; ಶಿವಭಕ್ತಿಯ ಮಹಿಮೆಯೂ, ಪ್ರೌಢವತಿದೇವಿಯ ಜಾಣ್ಮೆಯೂ, ವಿದ್ಯಾವಿಚಕ್ಷಣತೆಯೂ, ಚನ್ನಾಗಿತಿಳಿಯಬಂದದ್ದರಿಂದಲೂ, ಆಕೆಯ ಸಂಭಾಷಣೆಯನ್ನು ಕೇಳಿದ್ದರಿಂದಲೂ, ಆ ಭಕ್ತನಿಗೆ ಕಾಮಾಗ್ನಿಯು ಸಾವಿರಪಾಲು ಹೆಚ್ಚಾಗಿ ಮೇಲೆಬೀಳುವದಕ್ಕೆ ಉದ್ಯುಕ್ತನಾದ ಭಾವವನ್ನು ತಿಳಿದು, ಆ ಪ್ರೌಢವತಿಯು ಆತನನ್ನ ನೋಡಿ, ಹೇಳಿದ್ದೇನಂದರೆ;—ಕಾಮದಿಂದ ಕುರುಡಾದವರಿಗೆ ಯಾವದೂತೋರುವದಿಲ್ಲ ವೆಂಬ ಮಾತು ಈಗ ನಿದರ್ಶನಕ್ಕೆ ಬಂದು ಏನುಮಾಡಲಿ? ಶಿವಾಜ್ಞೆಯು ಹ್ಯಾಗಾಗುವದೋ? ನೀನು ಅಜ್ಞಾನವಶದಿಂದ ಯಾವರೀತಿಯಾದರೂ ನನ್ನ ಮಾತನ್ನು ಕೇಳುವದಿಲ್ಲ. ಇನ್ನು ನನ್ನಮೇಲೆ ತಪ್ಪಿಲ್ಲ. ಹೇಳದೇ ಇರುವದಕ್ಕಾಗುವದಿಲ್ಲ. ಎಲೈರಾಯನೇ! ನಿನಗೆ ಗುರುಭಕ್ತಿಯೇ ಪ್ರಾಣವು. ನನಗೆ ಸತ್ಯವೇ ಪ್ರಾಣವು. ನಾನು ಅಜ್ಞಾನದಿಂದ ದ್ರವ್ಯಾಪೇಕ್ಷೆಯನ್ನು ಮಾಡಿ, ನಿನ್ನೊಡನೆ ಕೂಡಬಹುದೇ? ಪೂರ್ವದಲ್ಲಿ ಒಂದುದಿವಸ ನಿನ್ನ ಗುರುವು ಬಂದು ನನ್ನಲ್ಲಿ ಕೂಡಿದನು. ಆದುದರಿಂದ ನೀನು ನನ್ನೊಡನೆ ಕೂಡದಂತೆನಿನಗೆ ಬಹಳವಾಗಿ ಬೋಧಿಸಿದೆನು. ಎಂದಳು. ಹೀಗೆ ಹೇಳಿದ ಮಾತ್ರದಿಂದಲೇ ಗುರು ಭಕ್ತಾಂಡಾರಿಯು ಭಯಪಟ್ಟು ಬೆಂಕಿಯಿಂದ ಸುಡಲ್ಪಟ್ಟಂತೆ ಬಾಯನ್ನು ಬಡಿದುಕೊಳ್ಳುತ್ತಾ ನೆಲದಮೇಲೆ ಬಿದ್ದು ಮೂರ್ಛೆಯನ್ನು ಹೊಂದಿ, ಎಚ್ಚೆತ್ತು ಮೆಲ್ಲಮೆಲ್ಲನೆ ರೋದನವನ್ನು ಮಾಡಿ, ದುಃಖಕ್ರಾಂತವಾದ ಹೃದಯವುಳ್ಳವನಾಗಿ;—ಎಲೈಗುರುನಾಥನೆ! ಶಿವಸ್ವರೂಪನೇ ನಾನು ಕೆಟ್ಟೆನು; ನನಗೇನುಗತಿ? ಎಂದು ಘಟ್ಟಿಯಾಗಿ ಹೇಳುತ್ತಾ, ಪ್ರೌಢಮತಿಗೆ ನಮಸ್ಕರಿಸಿ;—ತಾಯಿ! ನಿನ್ನಮೇಲೆ ನನ್ನ ದೃಷ್ಟಿಯನಿಟ್ಟ ಮೂಢತ್ವ

ಕ್ಕೇನುಗತಿ ! ನಿನ್ನ ವಿಷಯವಾಗಿ ಪ್ರೀತಿಸಿದ್ದನ್ನು ಹ್ಯಾಗೆ ಸೈರಿಸಲಿ ? ನಿನ್ನಮೇಲೆ ಕೋಪಿಸಿಕೊಂಡ ದೋಷಕ್ಕೆ ಪರಿಹಾರವೇನು ? ಹೇಳು. ಎಲೌ ತಾಯಿಯೇ ! ನಾನು ಮಿತಿಮೀರಿ, ನಿನ್ನನ್ನು ಕುರಿತು ಕಠಿನವಚನಗಳನ್ನಾಡಿದ್ದಕ್ಕೇನು ಮಾಡಬೇಕು? ಹೇಳು. ಈ ವಿಷಯದಲ್ಲಿ ಏನು ನಿರ್ಣಯಿಸಬೇಕು? ನಿನ್ನಮೇಲೆ ಎರಗಿದ ಈ ದುರ್ವ್ಯಾಪಾರವುಳ್ಳನನ್ನ ಮನಸ್ಸಿಗೇನುಗತಿ? ಅಕಾಲದಲ್ಲಿ ಸಿಡಿಲುಬಡಿದಂತಾಯಿತಲ್ಲಾ ! ಜನ್ಮಾಂತರದಲ್ಲಿ ಶಿವನೂ ನಾನೂ ಒಂದೇ ಎಂಬ ದುರ್ಬುದ್ಧಿಯುಳ್ಳವನಾಗಿ ಶಿವನನ್ನು ಪೂಜಿಸಲಿಲ್ಲವೋ ? ನಾನು ಸೇವಕನು, ಶಿವನು ನನ್ನ ಒಡೆಯನು ಎಂದು ಭಾವಿಸಲಿಲ್ಲವೋ ? ಉಪಚಾರಗಳು ಹದಿನಾರು ಎಂಬ ಭ್ರಾಂತಿಯಿಂದ ಶಿವನಿಗೆ ರಾಜೋಪಚಾರಗಳನ್ನು ಮಾಡಲಿಲ್ಲವೋ? ಆಶೆಗೊಳಗಾಗಿ ಶಿವನ ಪೂಜೆಯನ್ನು ಮಾಡಿದೆನೋ ? ದುರಾಲೋಚನೆಯಿಂದ ಶಿವಶಾಸ್ತ್ರಗಳನ್ನು ಬಿಟ್ಟು ಅನ್ಯಶಾಸ್ತ್ರಗಳನ್ನು ಅಭ್ಯಾಸಮಾಡಿದನೋ ? ಮಧ್ಯಾಹ್ನಕಾಲದಲ್ಲಿ ಅತಿಥಿಗಳಾಗಿ ಮನೆಗೆ ಬಂದ ಶಿವಭಕ್ತರನ್ನು ತಿರಸ್ಕರಿಸಿದನೋ? ಜಂಗಮ ಸ್ಥಾನಕ್ಕೆ ಬಂದವರನ್ನು ನೋಡಿದ ಕೂಡಲೇ ನಮಸ್ಕರಿಸಲಿಲ್ಲವೋ ? ಅಥವಾ ಅಜ್ಞಾನದಿಂದಾವರಿಸಲ್ಪಟ್ಟವನಾಗಿ, ಉನ್ನತವಾದ ಪೀಠದಲ್ಲಿ ಕುಳಿತುಕೊಂಡು, ಭಸ್ಮರುದ್ರಾಕ್ಷಿಧಾರಿಗಳಾದ ಶಿವಭಕ್ತರನ್ನು ತಿರಸ್ಕರಿಸಿದೆನೋ? ಜಂಗಮಮೂರ್ತಿಯು ಮನೆಗೆಬಂದರೆ, ಗರ್ವಗೊಂಡು ಮಾಡಬೇಕಾದ ಆಯಾಯ ಉಪಚಾರಗಳನ್ನು ಮಾಡಲಿಲ್ಲವೋ? ಭಕ್ತಿಯಿಂದ ಯಾವಾಗಲೂ ಜಂಗಮಮೂರ್ತಿಯನ್ನು ಪೂಜಿಸಲಿಲ್ಲವೋ? ಅಥವಾ ಭೋಜನ ಸಮಯದಲ್ಲಿ ಅಜ್ಞಾನದಿಂದಲೂ, ಬಡಮನಸ್ಸಿನಿಂದಲೂ ಭಕ್ತರಲ್ಲಿ ಪಂಕ್ತಿಭೇದವನ್ನು ಮಾಡಿದೆನೋ? ಜಂಗಮಸ್ಥಲವನ್ನು ಹೊಂದಿದ ಚರಮೂರ್ತಿಗಳ ಕುಲವನ್ನು ವಿಚಾರಿಸಿದೆನೋ? ಭವಿಗಳನ್ನು ಮುಟ್ಟಿದೆನೋ? ಶಿವದೀಕ್ಷೆಯಿಲ್ಲದವರು ಪಾಕಮಾಡಿದ ಅನ್ನವನ್ನು ಬುಂಜಿಸಿದೆನೋ? ಭವಿಗಳ ಸಂಗವನ್ನು ಬಿಡಲಿಲ್ಲವೋ? ಜಂಗಮವು ಶಿವಸ್ವರೂಪವಿಲ್ಲವೆಂಬ ವಿವೇಕವಿಲ್ಲದೆ ಅವರಿಗೆ ಅವಮಾನಪಡಿಸಿದೆನೋ? ಇಲ್ಲವೆಸಭೆಯಲ್ಲಿ ಅವರನ್ನು ನಾಚಿಕೆಪಡಿಸಿದೆನೋ? ವಿಧ್ಯಾಗೂ ಶಿವನಿಗೂ ಗುರುವಿಗೂಭೇದವನ್ನು ಮಾಡಿದೆನೋ? ಅಧಿಕವಾದಭಕ್ತಿಯಿಂದ ಗುರುಸೇವೆಯನ್ನು ಮಾಡಲಿಲ್ಲವೋ ? ಗುರುವಿನಲ್ಲಿ ಚಿತ್ತವನ್ನಿಡಲಿಲ್ಲವೋ ಆ ಗುರುಪಾದಕಮಲಗಳಿಗೆ ದೃಢಭಕ್ತಿಯಿಂದ ನಮಸ್ಕರಿಸಲಿಲ್ಲವೋ ? ಗುರುಸಂಪ್ರದಾಯಸ್ಥರಿಗೆ ಸನ್ಮಾನವನ್ನು ಮಾಡಲಿಲ್ಲವೋ ? ಓಹೋ ನೋಯಿಗೊಂಡು ಪೂರ್ವಕರ್ಮ

ಗಳನ್ನು ಮರಿಯಲಿಲ್ಲವೋ? ಮೀರುವುದಕ್ಕಾಗದ ಶಿವಾಜ್ಞೆಗೆ ಭಯಪಡಲಿಲ್ಲವೋ? ಶಿವಾರ್ಪಿತವಲ್ಲದ ಪದಾರ್ಥವನ್ನು ಇಂದ್ರಿಯಗಳಿಂದ ಮುಟ್ಟಿದೆನೋ? ಪ್ರತಿಜ್ಞೆಗಳನ್ನು ಮಾಡಿ ನಡಿಸದೆಬಿಟ್ಟೆನೋ? ಶಿವಪ್ರಸಾದವನ್ನು ಮೀರಿದೆನೋ? ಅಥವಾ ಮಿಗಿಸಿದೆನೋ? ಪ್ರಸಾದದಲ್ಲಿ ರುಚಿಯನ್ನು ಹುಡುಕಿದೆನೋ? ಪ್ರಸಾದವನ್ನು ಬಿಟ್ಟು ಬೇರೆ ದೈವವನ್ನು ನೆನಸಿದೆನೋ? ಸಂಸಾರದಲ್ಲಿ ಅಪೇಕ್ಷೆಯನ್ನು ಮಾಡಿದೆನೋ? ಅಸತ್ಯವನ್ನಾಡಿದೆನೋ? ದೂಷಕರಿಗೆ ಭಯಪಟ್ಟೆನೋ ಶಿವನಿಂದೆಯನ್ನು ಕೇಳಿದೆನೋ? ವ್ರತಭ್ರಷ್ಟರನ್ನು ನೋಡಿದೆನೋ? ಪರಸ್ತ್ರೀಯರನ್ನು ಆಶೆಯಿಂದ ನೋಡಿದೆನೋ? ಅಜ್ಞಾನದಿಂದ ಜನಗಳಸಂಗಡ ಜಗಳವನ್ನಾಡಿದೆನೊ? ಹಿಂಸೆಯನ್ನು ಮಾಡಿದೆನೋ? ಶಿವಭಕ್ತರಿಗೆ ವ್ಯರ್ಥವಾಗಿ ಮೋಸಮಾಡಿ, ಅವರ ಸಂಗವನ್ನು ಬಿಟ್ಟೆನೋ? ಮೂಢತನದಿಂದ ಕೋಪವನ್ನು ಮಾಡಿದೆನೋ? ಏನು ಪಾಪಕರ್ಮಿಯೊ? ಮತದ್ರೋಹಿಯೋ? ಹರಟೆಗಾರನೋ? ಗರ್ವಿಷ್ಠನೋ? ನೀತಿಮಾರ್ಗವನ್ನು ಬಿಟ್ಟವನೋ? ಚಾಡಿಗಾರನೋ? ವೀರಮಾಹೇಶ್ವರರು ಶಾಸ್ತ್ರೀಯವಾದ ಆಚಾರವನ್ನು ಬಿಟ್ಟೆನೋ? ನನಗೆ ಇಂಥಾ ಗುರುಪತ್ನೀಗಮನದಲ್ಲಿ ಇಚ್ಛೆಯು ಯಾಕೆ ತೋರಿತು? ಊಢಾದ್ಯೃಥಾಚಕ್ರೀತಾಚಮೌಲ್ಯೇನಚಸ್ವಮಾವೃತಾ || ಸಕೃತ್ಕಾಮಗತಾವಾಪಿ ಪಂಚಧಾ ಗುರುಯೋಷಿತಃ || ಎಂಬ ಪ್ರಮಾಣದಿಂದ ಗುರುವು ಮದುವೆ ಮಾಡಿಕೊಂಡವಳು, ಇಟ್ಟುಕೊಂಡವಳು, ಕ್ರಯವನ್ನು ಕೊಟ್ಟು ಕೊಂಡುಕೊಂಡವಳು, ಗುರುವನ್ನು ವರಿಸಿದವಳು, ಗುರುವನ್ನು ಒಂದು ವೇಳೆಯಾದರೂ ಕೂಡಿದವಳು, ಈ ಐದುಮಂದಿ ಗುರುಪತ್ನಿಯರೆಂದೆನಿಸಿಕೊಳ್ಳುವರು. ಮತ್ತೂ ಲೋಕದಲ್ಲಿ ಗುರುವಿನ ಅತ್ತಿಗೆ ನಾದಿನಿಯರು, ಆತನ ಸಂಬಂಧಿನಿಯರು, ಗುರುವು ಇಟ್ಟುಕೊಂಡಿದ್ದು ಬಿಟ್ಟ ವೇಶ್ಯಾಜನವು ಆತನ ಪ್ರೇಮಕ್ಕೆ ಪಾತ್ರರಾದ ಬೆಲೆವೆಣ್ಣುಗಳು, ಗುರುವು ಧನವನ್ನು ಕೊಟ್ಟು ವಶಪಡಿಸಿಕೊಂಡಿರುವ ವೇಶ್ಯಾಸ್ತ್ರೀಯರು, ಒಂದುವೇಳೆಯಾಬಾಗ್ಯೂ ಗುರುವಿನಿಂದ ಅನುಭವಿಸಲ್ಪಟ್ಟ ಸ್ತ್ರೀಯರು, ಈ ಆರುವಿಧವಾದವರೂ ಗುರುಪತ್ನಿಯರಿಗೆ ಸಮಾನರಲ್ಲವೇ ನನಗೆ ಪ್ರಾಪ್ತವಾದ ಈ ಭಯಂಕರವಾದ ಪಾಪವನ್ನು ಹ್ಯಾಗೆ ಸೈರಿಸಲಿ? ಏನು ಮಾಡಲಿ? ಹೇಳು; ಎಂದು ದುಃಖಾಕ್ರಾಂತನಾಗಿ, ಕ್ಲೇಶಪಡುತ್ತಾ, ಬೀಳುತ್ತಾ, ಏಳುತ್ತಾ, ಮರಳಿ ಮರಳಿ ಆಕೆಯನ್ನು ನೋಡಿ, ಆಕೆಯ ಪಾದಗಳಿಗೆ ನಮಸ್ಕರಿಸುವನು. ತಲೆಯನ್ನು ಬಡಿದುಕೊಳ್ಳುವನು. ಹೊಟ್ಟೆಯನ್ನು ಹಿಸಿಕಿಕೊಳ್ಳು

ವನು. ನೆಲದಮೇಲೆ ಹೊರಳಿ, ಅತ್ತು, ದೇಹವನ್ನು ಬಿಡುವುದಕ್ಕೆ ಆಲೋಚಿಸಿ, ಲಿಂಗದ ಗರ್ಭವನ್ನು ಪ್ರವೇಶಿಸುವುದಕ್ಕೆ ಯತ್ನಿಸುವನು. ತನ್ನ ದೇಹವನ್ನು ಸೀಳಿ ಭೂಮಿಗೆ ಬಲಿಯನ್ನುಕೊಡುವುದಕ್ಕೆ ನೋಡುವನು. ತನ್ನ ಶರೀರವನ್ನು ಒರಳು ಕಲ್ಲಿನಲ್ಲಿ ಕುಟ್ಟಿ, ಹೊಳೆಯ ನೀರಿನಲ್ಲಿ ಹಾಕುವುದಕ್ಕೆ ಉಪಕ್ರಮಿಸುವನು. ಮತ್ತು ತುಂಡುಮಾಡಿ ಕಬ್ಬಿಣದ ಹುರಿಯೋಡಿನಲ್ಲಿ ಹಾಕಿ ಸುಡುವುದಕ್ಕೆ ಉದ್ಯುಕ್ತನಾಗುವನು. ದೇಹವನ್ನು ಬೂದಿಮಾಡಿ, ಗಾಳಿಯಲ್ಲಿ ತೂರುವುದಕ್ಕೆ ನೋಡುವನು. ಮತ್ತು ಸಾಣೆಯಕಲ್ಲಿನಲ್ಲಿ ತೇದು ಸವರುವುದಕ್ಕೆ ಅಪೇಕ್ಷಿಸುವನು. ತನ್ನಷ್ಟಕ್ಕೆತಾನೇ ಸಾಯುವುದಕ್ಕೆ ಇಚ್ಛೈಸುವನು. ಆಕೆಯನ್ನು ನೋಡಿದ ಕಣ್ಣುಗಳನ್ನು ಕಿತ್ತು. ಆಕೆಯಲ್ಲಿ ಸುರತವನ್ನುಬಯಸಿದ ಶಿಶ್ನವನ್ನು ಕೊಯ್ದು ಆಕೆಯ ಮನೆಗೆ ಹೋದ ಕಾಲುಗಳನ್ನು ಕಡಿದು, ಆಕೆಯ ಆಲಿಂಗನೆಯಲ್ಲಿ ಉದ್ಯುಕ್ತವಾದ ಕೈಗಳನ್ನು ಸೀಳಿ, ಆಕೆಯೊಡನೆ ಪ್ರೌಢವಾದ ಮಾತುಗಳನ್ನಾಡಿದ ನಾಲಿಗೆಯನ್ನು ಬೇರುಸಹಿತ ಕಿತ್ತು, ಆಕೆಯನ್ನು ನೋಡಿ ಅರಳಿದ ಮುಖವನ್ನು ಮುದುಡಿ, ಆಕೆಯನ್ನು ನೋಡುವುದಕ್ಕೆ ಎತ್ತಿದ ತಲೆಯನ್ನು ತಿರಿಚಿ, ಕತ್ತರಿಸಿ, ಕಾಮದಿಂದ ಗೋಮಾಂಚವನ್ನು ಹೊಂದಿದ ಚರ್ಮವನ್ನು ಸಣ್ಣನಾಗಿ ಕೊಚ್ಚಿ, ಆಕೆಯಕುಚಗಳನ್ನು ಆಲಿಂಗಿಸಬೇಕೆಂದು ಇಚ್ಛೈಸಿದ ಎದೆಯನ್ನು ಸೀಳಿ, ಹೊಟ್ಟೆಯನ್ನುಕೊರೆದು, ನರಗಳನ್ನು ಕಡಿದು, ಅವುಗಳನ್ನೆಲ್ಲಾ ಶಿವಾಲಯದಲ್ಲಿ ಕಟ್ಟಬೇಕೆಂದುಆಲೋಚಿಸಿ, ಈರೀತಿಯಾಗಿ ಮಾಡಿದಲ್ಲದೆ ಈ ಪಾಪವು ಹೋಗುವುದಿಲ್ಲವೆಂದು ಪದೇಪದೇ ಹೇಳುತ್ತಾ, ದುಃಖಾಗ್ನಿಯಿಂದ ತುಂಬಲ್ಪಟ್ಟ ಕಣ್ಣುಗಳುಳ್ಳವನಾಗಿ ತನ್ನನ್ನೂ, ಮತ್ತೊಬ್ಬರನ್ನೂ ನೋಡಲಸಕ್ತನಾಗಿ ಭ್ರಾಂತಿಹಿಡಿದವನಂತೆ ನಿಂತುಕೊಳ್ಳುವನು. ಅಲ್ಲಿಂದ ಹೊರಟು ಪಟ್ಟಣವನ್ನು ಕುರಿತು ಓಡುವನು. ಹಿಂತಿರುಗುವನು. ಮನೆಯಿಂದ ಹೊರಟು ನೆಲಕ್ಕೆಬಿದ್ದು, ಎದ್ದು ಸುತ್ತಲೂ ನೋಡುವನು. ಸಂದೇಹವು ಹೋಗದಕಾರಣದಿಂದ ಅರಣ್ಯವನ್ನು ಕುರಿತು ಹೊರಟು, ಸಿಕ್ಕಿದಕಡೆಗೆನಡೆದು ದುಃಖಾತಿಶಯದಿಂದ ಬಹಳವಾಗಿ ಮೋಹಗೊಂಡು ಒಂದು ಕಡೆಯಲ್ಲಿಯೂ ನಿಲ್ಲದೆ, ಎಲೈ ದಾರಿಕಾರರಾದ ಭಕ್ತರೇ? ಈ ಪಾಪಕ್ಕೆ ಪ್ರಾಯಶ್ಚಿತ್ತವೇನು? ವಪ್ರಕ್ರೀಡೆಯಲ್ಲಿ ಆಸಕ್ತವಾದ ಎಲೈ ವೃಷಭನೇ ? ನನಗೇನಾದರೂ ಆಧಾರವುಂಟೇ ಎಂದು ಕೇಳುತ್ತಾ, ಕಲಕಲ್ಪಟ್ಟ ಮನಸ್ಸುಳ್ಳವನಾಗಿ, ಎಲೈ ಮಾವಿನಮರವೇ! ನಾನು ಮಾಡಿದ ದೋಷವನ್ನು ಪರಿಹರಿಸತಕ್ಕ ವಿಧಾನವನ್ನು

ಹೇಳು. ಈ ಹೆಂಗಸು ಗುರುವಿಗೆ ಸಂಬಂಧಪಟ್ಟವಳು. ಇವಳನ್ನು ಮೋಹಿಸಿ ನಾನು ಕೆಟ್ಟೆನು. ಎಲೈ ಅಶೋಕವೃಕ್ಷವೇ! ನಿನಗೆ ನನ್ನ ವಿಷಯದಲ್ಲಿ ವ್ಯಸನ ವಿದ್ದರೆ ನನ್ನನ್ನು ನೋಡಿ, ನನ್ನ ಪಾಪವನ್ನು ಶೀಘ್ರದಲ್ಲಿ ಪರಿಹರಿಸುವ ಉಪಾ ಯುವನ್ನು ಹೇಳು. ಎಲೈ ಏಳೆಲೆಬಾಳೆಯೇ! ನನ್ನ ಪಾಪವನ್ನು ನಿವಾರಿಸುವುದಕ್ಕೆ ತಕ್ಕ ಕಾರ್ಯವೇನಾದರೂ ಉಂಟೇ? ಎಲೈ ಶ್ರೀಗಂಧದಮರವೇ! ನನ್ನ ಆನಂ ದವು ನೆಲೆಗೊಳ್ಳಲಿಲ್ಲ. ಏನುಮಾಡಲಿ? ಎಲೈ ಸುತ್ತುತ್ತಿರುವ ತುಂಬಿಯೇ! ನನ್ನ ಕಳವಳವು ಎಂದಿಗೆ ನಾಶವಾಗುವುದು? ಗರಿಗಳನ್ನು ಅಗಲಿಸಿಕೊಂಡು ಕುಣಿಯು ತ್ತಿರುವ ಎಲೈ ನವಿಲೇ! ನಾನು ಶಿವಪುರವನ್ನು ಬಿಟ್ಟು ಯಮಪುರವನ್ನು ಹ್ಯಾಗೆ ಪ್ರವೇಶಿಸಲಿ? ಎಲೈ ಕೂಗುತ್ತಿರುವ ಕೋಗಿಲೆಯೇ! ನನ್ನ ಈ ಗೋಳು ಎಂದಿಗೆ ಅಡಗುವುದು? ಎಲೈ ಹಂಸಪಕ್ಷಿಯೇ ನನ್ನ ದುರವಸ್ಥೆಯನ್ನು ನೋಡಿ, ನಿನ್ನ ಧ್ವನಿಯಿಂದ ನನ್ನನ್ನು ಯಾಕೆ ಹಾಸ್ಯಮಾಡುತ್ತೀಯೆ? ಮನೋಹರವಾಗಿ ಕೂಗು ತ್ತಿರುವ ಗಿಳಿಯೇ! ಭಯಪಡಬೇಡ, ಎಂಬ ವಾಕ್ಯವು ನಿನ್ನಲ್ಲಿದ್ದರೆ, ನನ್ನಲ್ಲಿ ಚೆನ್ನಾಗಿ ತೋರಿರುವ ಈ ದೋಷವು ಹೋಗುವುದಕ್ಕೆ ಯಾವ ಪ್ರಮಾಣವಿದೆ? ಹೇಳು. ಶಿವನ ಮುಖಕ್ಕೆ ಮಂಗಳಕರನಾದ ಎಲೈ ವೃಷಭೇಶ್ವರನೇ! ನನಗೆ ಈ ಕಷ್ಟವು ಒಳ್ಳೇದಾದೀತೇ? ನನಗೆ ಸಂತೋಷವುಂಟಾಗುವಂತೆ ಶೀಘ್ರದಲ್ಲಿ ಹೇಳು. ಎಲೈ ನಂದಿಮಹಾಕಾಳರೇ! ಶ್ರೀಕಂಠನ ಕರುಣವು ನನ್ನಮೇಲೆ ಎಂದಿಗೆ ಬರು ವುದು? ಎಲೈವೀರಭದ್ರನೇ! ಎಲೌಪಾರ್ವತಿಯೇ! ನನಗೇನಾದ್ದರೂ ಗತಿಯುಂಟೇ ಎಲೈ ಪ್ರಮಥರೇ! ನನ್ನ ಪಾಪಗಳು ನಾಶವಾಗುವುದಕ್ಕೆ ತಕ್ಕ ಉಪಾಯವನ್ನು ಹೇಳಿರಿ. ಎಲೈ ಪುರಾತನಭಕ್ತರೇ! ನಾನು ಈವಿಧವಾದ ಪಾಪವನ್ನು ಮಾಡು ವುದಕ್ಕೆ ಸಮರ್ಥನೇ? ಇಷ್ಟಾದರೂ ನೀವು ಸುಮ್ಮನಿರುವುದು ಸರಿಯೇ? ಎಲೈ ಅಸಂಖ್ಯಾತಸದ್ಭಕ್ತರೇ! ವೀರಮಾಹೇಶ್ವರರೇ! ಈ ಆಲಸ್ಯದಿಂದೇನು? ನನ್ನ ವಿಜ್ಞಾಪನೆಯನ್ನು ಕೇಳಿರಿ. ಎಲೈ ಶಿವನೇ! ಬಹಳ ಮಾತುಗಳಿಂದೇನು? ದೇಹ ವನ್ನು ಬಿಟ್ಟು ಶುದ್ಧನಾಗುವೆನು. ಈ ಪ್ರಕಾರವಾಗಿ ಪ್ರಲಾಪಿಸಿ, ಒಂದು ದಸಿ ಯಿಂದ ತನ್ನ ಎರಡು ಕಣ್ಣುಗಳನ್ನೂ ತಿವಿದುಕೊಂಡು, ಸ್ವಲ್ಪವೂ ಭಯವಿಲ್ಲದೆ ತನ್ನ ಅವಯುವಗಳನ್ನು ಕತ್ತರಿಸುವುದಕ್ಕೆ ಉಪಕ್ರಮವನ್ನು ಮಾಡಿದನು. ಅನಂ ತರದಲ್ಲಿ ಆ ವೃತ್ತಾಂತವನ್ನು ಒಳ್ಳೇ ನಡತೆಗಳುಳ್ಳವನಾಗಿಯೂ, ಜ್ಞಾನಾನಂದ ದಿಂದ ಕೂಡಿದವನಾಗಿಯೂ, ಸದ್ಗುಣಗಳಿಂದ ತುಂಬಲ್ಪಟ್ಟವನಾಗಿಯೂ,

ಮಹಾತ್ಮನಾಗಿಯೂ, ಗುರುಕರಸಂಜಾತನಾಗಿಯೂ ಇರುವ ಗುರುಭಕ್ತಾಂಡಾರಿಯ ಗುರುವು ಕೇಳಿ ಅಲ್ಲಿಗೆ ಬಂದನು. ಬಳಿಕ ಭಯಭಕ್ತಿ ವಿನಯಗಳಿಂದ ಭರಿತನಾದ ಗುರುಭಕ್ತಾಂಡಾರಿಯು ಪ್ರಜ್ವಲಿಸಿದ ದುಃಖಾಗ್ನಿಯಿಂದ ಬೇಯುತ್ತಾ, ಗುರುವಿನ ಪಾದಗಳಲ್ಲಿ ಬಿದ್ದು, ಗಟ್ಟಿಯಾಗಿ ಅಳುತ್ತಾನಿಂತನು. ಗುರುವು ನೋಡಿ, ಕರುಣದಿಂದ;—ಗುರುಭಕ್ತಿಗೆ ಅಲಂಕಾರವಾದವನೇ! ಗುರುಭಕ್ತಿಯೇ ಶೃಂಗಾರರಸವಾಗುಳ್ಳವನೇ! ಗುರುಭಕ್ತಿಯಿಂದ ಸಾಂದ್ರಸಾದವನೇ! ಮನಸ್ಸಿನಲ್ಲಿ ದುಃಖವನ್ನಿಟ್ಟುಕೊಳ್ಳಬೇಡ. ಇನ್ನುಮೇಲೆ ಒಳ್ಳೇದಾಗುವುದು. ಈಗ ನಿನ್ನ ಗುರುಭಕ್ತಿಯು ಪ್ರಮಥರಿಗೆ ಸಮ್ಮತವಾಯಿತು. ನಿನಗೆ ಕ್ಲೇಶದಿಂದೇನು? ಮನಸ್ಸಿನ ಸಂತಾಪವನ್ನು ಅಡಗಿಸಿಕೋ. ಏಳು ಎಂದು ಆತನನ್ನು ಎತ್ತಿ ಪ್ರೇಮದಿಂದ ಆಲಿಂಗಿಸಿ, ಮಸ್ತಕವನ್ನಾಘ್ರಾಣಿಸಿ, ರಕ್ತಧಾರೆನ್ನು ಒರಸಿದನು. ಆ ಗುರುಭಕ್ತಾಂಡಾರಿಯು ಗುರು ಪಾದಕಮಲಗಳನ್ನು ಸ್ಮರಿಸುತ್ತಿರಲು, ಶಿವಭಕ್ತರು ಸಂತೋಷಪಡುತ್ತಿರಲು, ನೋಡುವ ಜನಗಳೆಲ್ಲರೂ ಆಶ್ಚರ್ಯಪಡುತ್ತಿರಲು ಆತನ ಗುರುಭಕ್ತಿಮಹಿಮೆಯಿಂದ ಕಣ್ಣುಗಳೆರಡೂ ಬಂದವು. * *

ಬಸವೇಶವಿಜಯದಲ್ಲಿ ಮೂವತ್ತೆರಡನೇ ಅಧ್ಯಾಯವು ಸಂಪೂರ್ಣವು.

---

## ಮೂವತ್ತಮೂರನೇ ಅಧ್ಯಾಯವು.

---

### ವೇಮನಾರಾಧ್ಯರ ಕಥೆ.

ಶಿವಭಕ್ತರಲ್ಲಿ ಮದ್ದಾನೆಯೆನಿಸಿ ಬೆಳ್ದೇವಿ ವೇಮನಾರಾಧ್ಯನೆಂಬ ಒಬ್ಬ ಶೈವಮತಾಚಾರ್ಯನಿದ್ದನು. ಸಕಲಗುಣಗಳಿಂದ ಅಧಿಕನಾಗಿಯು, ಶಿಷ್ಯರಪಾಶವನ್ನು ಬಿಡಿಸುವದರಲ್ಲಿ ವಿಚಕ್ಷಣನೂ, ವೇದಗಳನ್ನು ಸಾಂಗವಾಗಿ ತಿಳಿದವನೂ, ನಿರ್ಮಲವಾದಬುದ್ಧಿಯುಳ್ಳವನೂ, ಧರ್ಮ, ಅರ್ಥ, ಕಾಮ, ಮೋಕ್ಷ, ಎಂಬ ಚತುರ್ವಿಧಪುರುಷಾರ್ಥಗಳನ್ನು ನಿರ್ಣಯಿಸುವದರಿಂದ ಪ್ರಸಿದ್ಧವಾದ ಕೀರ್ತಿಯುಳ್ಳ

ವನೂ, ಸತ್ಯಸಂಧನೂ, ನಿರ್ನಿಮಿತ್ಯವಾದ ಕರುಣಾ ಕಟಾಕ್ಷದಿಂದ ನೋಡುವದ ರಲ್ಲಿ ಚಂದ್ರನೂ, ವೀರಮಾಹೇಶ್ವರರಿಗೆ ಉಕ್ತವಾದ ಚಾರಗಳನ್ನು ಪ್ರಚಾರಪ ಡಿಸುವ ಗುಣದಿಂದ ಅಲಂಕರಿಸಲ್ಪಟ್ಟವನೂ, ಬಸವೇಶ್ವರನ ಪಾದಕಮಲದಿಂದ ಪರಿಶುದ್ಧವಾದ ಹೃದಯವುಳ್ಳವನೂ, ಶಾಪಾನುಗ್ರಹಸಮರ್ಥನೂ, ಬಹಳದೊಡ್ಡ ವನೂ, ನಮಸ್ಕರಿಸಿದವರಿಗೆ ಮೃತ್ಯುವನ್ನು ಪರಿಹರಿಸುವ ಮಹಿಮೆಯುಳ್ಳವನೂ, ಮರೆಹೊಕ್ಕವಂಗೆ ಮರಳಿ ಪ್ರಾಣವನ್ನು ಕೊಡುವವನೂ, ಲೋಕಕ್ಕೆ ಅಧಿಕನೂ, ಗಾಳಿ,ಬೆಂಕಿ,ನೀರು,ರಾಜ, ಚೋರ, ಇವರ ಅಹಂಕಾರವನ್ನು ಮುರಿಯುವವನೂ, ಹುಲಿ ಮುಂತಾದ ದುಷ್ಟಮೃಗಗಳು, ಹಾವುಗಳು, ಚೇಳುಗಳು, ಇವುಗಳ ಗರ್ವ ವನ್ನು ಮುರಿಯುವವನೂ, ಸಕಲಜನಕ್ಕು ಸಂತೋಷವನ್ನುಂಟುಮಾಡುವವನೂ, ಆಗಿದ್ದನು. ಹೀಗಿರುವಾಗ ಒಂದಾನೊಂದುದಿನ ಸಮೀಪದಊರಿನವನಾದ ಒಬ್ಬ ಅರಸುಮಗನು ಮದುವೇ ಮಾಡಿಕೊಂಡು,ಹೆಂಡತಿಯನ್ನು ಸಂಗಡ ಕರಕೊಂಡು, ಬರುತ್ತಾ ಮುಂದುಗಡೆಯಲ್ಲಿ ವೇಮನಾರಾಧ್ಯನನ್ನು ಕಂಡು, ನಮಸ್ಕರಿಸಿದನು. ವೇಮನಾರಾಧ್ಯನು ತೋಟದಲ್ಲಿ ಹೂವುಗಳನ್ನು ಕೂಯ್ಯುತ್ತಾ, ರಥದಮೇಲೆ ಕುಳಿತಿರುವ ಆ ಅರಸುಮಗನನ್ನು ನೋಡಿ, ತ್ರಿಕಾಲಸಂಗತಿಗಳನ್ನು ತಿಳಿಯತಕ್ಕವ ನಾದದ್ದರಿಂದ ಅವನನ್ನು ಅಲ್ಪಾಯುಷ್ಯವುಳ್ಳವನೆಂದು ತಿಳಿದು, ಆಶೀರ್ವದಿಸದೆ, ಮತೊಂದುಕಡೆ ಹೋದನು. ನಾನು ನಮಸ್ಕರಿಸಿದಾಗ್ಯೂ ಇವರು ಆಶೀರ್ವಾದ ಮಾಡಲಿಲ್ಲ. ಇದನ್ನುಕಂಡರೆ ನನ್ನ ಹೆಂಡತೀಯು ನಗದೆ ಬಿಡುವದಿಲ್ಲವೆಂದು ಬಹ ಳವಾಗಿನಾಚಿದ್ದವನಾಗಿ;-ಇವರು, ನಾನು ನಮಸ್ಕರಿಸುತ್ತೇನೆಂದು ಹೇಳಿದಮಾತು ಕೇಳಲಿಲ್ಲವೋ? ಕೇಳಿದರೂ ಕೇಳದಂತೆ ಹೋಗುತ್ತಾರೆಯೋ? ನಾನು ಕೈ ಮುಗಿ ದುದ್ದನ್ನು ನೋಡಲಿಲ್ಲವೋ? ನೋಡಿದಾಗ್ಯೂ ಸುಮ್ಮನಿದ್ದ ಗರ್ವವೋ? ಎಂದು ರಥದಿಂದ ಇಳಿದುಹೋಗಿ, ಕೈಗಳನ್ನು ಮುಗಿದು, ನಿನಗೆ ನಮಸ್ಕಾರವೆಂದು ಹೇಳಿ ದನು.ಆದಾಗ್ಯೂ ವೇಮನಾರಾಧ್ಯನು ಆಶೀರ್ವಾದವನ್ನು ಮಾಡದೆ ಸುಮ್ಮನಿರಲು; ಆರಾಜಪುತ್ರನು ಸ್ವಲ್ಪಕೋಪದಿಂದಲೂ, ನಾಚಿಕೆಯಿಂದಲೂ. ಭಕ್ತಿಯಿಂದಲೂ, ಕೂಡಿದವನಾಗಿ; —ಸ್ವಾಮೀ! ನೀವು ಶಿವಭಕ್ತಶ್ರೇಷ್ಟರೂ, ಒಳ್ಳೆದನ್ನು ಮಾಡು ವರೂ, ದೊಡ್ಡ ಬ್ರಾಹ್ಮಣರೂ ಶಿವಲಾಂಛನಧಾರಿಗಳೂ, ಪಾಪನಾಶಕರೂ, ಭಕ್ತಿ ಯಲ್ಲಿ ಆಸಕ್ತರೂ, ಪೂಜ್ಯರೂ, ಶಿವಮತಕ್ಕೆ ಆಚಾರ್ಯರೂ, ಸ್ಥಿರಬುದ್ಧಿಗಳೂ, ವಿವೇಕಿಗಳೂ, ಅಧಿಕವಾದ ಶಕ್ತಿಯುಳ್ಳವರೂ, ಒಳ್ಳೇ ನಡತೆಯುಳ್ಳವರೂ,

ಗುರುಶ್ರೇಷ್ಠರೂ ಎಂದು ತಿಳಿದು ನಾನು ನಿಮಗೆ ನಮಸ್ಕಾರವನ್ನು ಮಾಡಿದರೆ ನೀವು ಆಶೀರ್ವದಿಸದೆ ಸುಮ್ಮನಿರುವದು ಯೋಗ್ಯತೆಯೋ! ಗಾಂಭೀರ್ಯವೋ? ಸಾಮರ್ಥ್ಯವೋ? ಗುಣವೋ? ಸದ್ಭಕ್ತಿಯೋ? ಮಹಿಮೆಯೋ? ಗೌರವವೋ ಹೇಳಬೇಕು. ನಿಮ್ಮ ಮೂರ್ತಿಗೂ, ನಿಮ್ಮ ಮಹಿಮೆಗೂ, ನಿಮ್ಮ ಗುರುತ್ವಕ್ಕೂ ಈ ವೇಷಕ್ಕೂ ಅಹಂಕಾರವು ಸರಿಯಾದ್ದೋ? ನೀವು ಆಶೀರ್ವಾದವನ್ನು ಮಾಡಿದ ಮಾತ್ರಕ್ಕೆ ಸಾಸಿವೆಯಷ್ಟಾದರೂ ಆಯುಷ್ಯಯುಂಟಾದೀತೆ? ಆಯುಷ್ಯವಿಲ್ಲದವರನ್ನು ಬದುಕಿಸುವುದು ನಿನ್ನಿಂದಾಗುವದೇ? ನನ್ನನ್ನು ಉದ್ದೇಶಿಸಿಕೊಂಡು ಬರುವ ಮೃತ್ಯುವು ನಿನ್ನ ಕೈಕೆಳಗಣ ಗೌಡಿಯೋ? ಬ್ರಹ್ಮನು ಹಣೆಯಲ್ಲಿ ಬರೆದಿರುವದು ತಪ್ಪುವದೇ? ಬಹಳ ಮಾತುಗಳಿಂದೇನು ಮೊದಲು ಬರೆದದ್ದನ್ನು ಅಳಿಸಿ, ಕಾಪಾಡುವದಕ್ಕೆ ಬ್ರಹ್ಮನಿಗೂ ಅಶಕ್ಯವು. ನಾವು ಈ ಭೂಮಂಡಲದಲ್ಲಿ ಎಲ್ಲಿಯೂ ನೋಡಲಿಲ್ಲ. ಪೂಜ್ಯರಾಗಿಯೂ, ಸತ್ಪುರಷರಾಗಿಯೂ ಇರುವ ನಿಮ್ಮಂಥಾವರು ಕೂಡ ಹೀಗಾದರೆ ಬುದ್ಧಿಶಾಲಿಗಳಾದವರು ನಿಮ್ಮನ್ನು ಹ್ಯಾಗೆ ಅಂಗೀಕರಿಸುವರು? ಹೀಗಾದರೆ ಈ ಭೂಮಿಯಲ್ಲಿ ಮನುಷ್ಯರು ನಿಮಗೆ ಹ್ಯಾಗೆ ನಮಸ್ಕಾರವನ್ನು ಮಾಡ್ಯಾರು? ನಿಮ್ಮ ಬಾಯಿಯಲ್ಲಿ ಆಶೀರ್ವಾದವು ಹೊರಟರೆ ನಿಮಗೇನಾದರೂ ನಷ್ಟವೋ? ಇದು ಗುರುಗಳ ಸಂಪ್ರದಾಯವೋ? ನಿನ್ನ ಮಹಿಮೆಯು ಹಾಗಿರಲಿ. ನೀವು ಆಶೀರ್ವಾದಮಾಡದಿದ್ದರೆ, ಹಾನಿಯೇನು? ಆಶೀರ್ವಾದವನ್ನು ಮಾಡತಕ್ಕ ಪೂಜ್ಯರು ಭೂಮಿಯಮೇಲೆ ಯಾರೂ ಇಲ್ಲವೋ? ಎಂದು ಈ ರೀತಿಯಲ್ಲಿ ಆಕ್ಷೇಪಿಸಲು, ವೇಮನಾರಾಧ್ಯನು ಕೇಳಿ;-- ಅಯ್ಯೋ ರಾಜಪುತ್ರನೇ! ನಿನಗೆ ನಾಳೇದಿನ ಮಧ್ಯಾಹ್ನದೊಳಗೆ ಮರಣವು ಸಂಭವಿಸುತ್ತದೆ. ಈ ವಾದದಿಂದೇನು ಫಲವು? ನನ್ನಬಾಯಲ್ಲಿ ಆಶಿರ್ವಾದವು ಹೊರಡುವದಿಲ್ಲ. ನೀನು ಜನ್ಮಾಂತರದಲ್ಲಿ ಯಾವಪಾಪವನ್ನು ಮಾಡಿದೆಯೋ? ನಾಳೆಯೇನಿನಗೆಸಾವು ಬರುವದು, ಸಂಶಯವಿಲ್ಲ, ಹೋಗು. ಎನಲು; ರಾಜಪುತ್ರನು ಕೇಳಿ ಕೋಪಗೊಂಡು ವೇಮನಾರಾಧ್ಯನನ್ನು ಕುರಿತು;—ವಿಷ್ಣುವಾದಾಗ್ಯು ಶಿವನ ಉರಿಗಣ್ಣಿನಿಂದ ಬೆಂದು ಹೋದ ತನ್ನಮಗನಾದ ಮನ್ಮಥನನ್ನು ಪ್ರೇಮದಿಂದ ಬದುಕಿಸಲಾರದೆ ಹೋದನು. ಬ್ರಹ್ಮನು ಕೂಡ ಶಿವನಿಂದ ಕತ್ತರಿಸಲ್ಪಟ್ಟ ತನ್ನ ತಲೆಯನ್ನು ಕಾಪಾಡಿಕೊಳ್ಳಲಾರದೆಹೋದನು. ಕೋಪದಿಂ ಗಜಾಸುರನನ್ನು ಕೊಲ್ಲುವದಕ್ಕೂ, ರಕ್ಷಿಸುವದಕ್ಕೂ ಪರಶಿವನೊಬ್ಬನೇ ಸಮರ್ಥನಾಗಿದ್ದಾನಲ್ಲದೆ ಮತ್ತೊಬ್ಬ ಮನು

ಷ್ಯನು ಸಮರ್ಥನಾಗಲಾರನು. ಶಿವಲಾಂಛನಗಳನ್ನು ಧರಿಸಿದವನೆಂದು ನಾನು ನಮಸ್ಕಾರವನ್ನು ಮಾಡಿದಮಾತ್ರಕ್ಕೆ ನೀನು ಶಿವನಾಗುವೆಯೋ? ನಾನು ನಾಳೇದಿನ ಮೃತನಾದರೆ ನೀನಾಡಿದ ಮಾತೆಲ್ಲಾ ಸತ್ಯವು. ನಿನಗೆಸಮಾನರಾದ ಗುರುಗಳು ಭೂಲೋಕದೊಳಗೇಇಲ್ಲ. ಈ ಪ್ರಕಾರವಾಗಿ ಅಹಂಕಾರಮಾತುಗಳನ್ನಾಡಿ ತನ್ನ ಮನೆಗೆ ಹೋದನು. ಅನಂತರದಲ್ಲಿ ತನ್ನ ಪತ್ನಿಯೊಡನೆ ಕೇಳೀಗೃಹದಲ್ಲಿ ಸುರತ ಸುಖವೆಂಬ ಸಮುದ್ರದಲ್ಲಿ ಮುಳುಗಿದವನಾಗಿ ಸುರತಾಂತರದಲ್ಲಿ ಬಳಲಿದದೇಹವುಳ್ಳವನಾಗಿ, ನಿದ್ರೆಯಂ ಮಾಡುತ್ತಿರಲು; ಅವನುಮಲಗಿರುವ ತೂಗಮಂಚದ ಸರಪಳಿಯ ಮಾರ್ಗವಾಗಿ ಒಂದಾನೊಂದು ಸರ್ಪವು ಬಂದು, ಅವನಕಯ್ಯ ಹೆಬ್ಬೆರಳ ಬುಡವನ್ನು ಕಚ್ಚಿ ಹೊರಳಿತು. ಅಷ್ಟರಲ್ಲಿಯೇ ಅವನಹೆಂಡತಿಯು ಎಚ್ಚರವಾಗಿ ಎದ್ದು, ಸರ್ಪವನ್ನು ನೋಡಿ, ಭಯದಿಂದಮೂರ್ಛಿತಳಾದಳು. ಹಾಗೆಯೇ ಸ್ವಲ್ಪ ಹೊತ್ತಿನೊಳಗಾಗಿ ಆರಾಜಪುತ್ರನು ಮೃತನಾಗಲು; ಹಳಬರಾಗಿಯೂ, ಪ್ರಸಿದ್ಧರಾಗಿಯೂ, ಅನುಭವಶಾಲಿಗಳಾಗಿಯೂ ಇರುವ ವಿಷವೈದ್ಯರೂ, ಶಾಸ್ತ್ರಿಗಳೂ, ಗಾರುಡಮಂತ್ರವನ್ನು ಬಲ್ಲವರೂ, ಬಂದುನೋಡಿ;—ಈ ವಿಷಯುವನ್ನು ಇಳಿಸುವದು ನಮ್ಮಿಂದಾಗದೆಂದು ನಿರ್ಣಯಿಸಿ ಕೊಂಡು ಹೊರಟು ಹೋದರು. ಗರುಡಮಂತ್ರವನ್ನು ಸಿದ್ಧಿಮಾಡಿಕೊಂಡಿದ್ದ ಒಬ್ಬಪುರುಷನುಬಂದು, ವಿಷೋಲ್ಬಣವಾದ ಸರ್ಪದ ಹಲ್ಲಿನ ಭಾವವನ್ನು ನೋಡಿ, ಚನ್ನಾಗಿ ನಿಶ್ಚಯಿಸಿ ಹೇಳಿದ್ದೇನಂದರೆ;—ಅಯ್ಯೋ! ಶಿವ ಶಿವಾ! ಈತನು ಕ್ರೂರವಾದ ಸರ್ಪದಿಂದ ಕಚ್ಚಲ್ಪಟ್ಟನು. ಈತನಿಗೆ ಆಯುಸ್ಯವು ಇಲ್ಲಿಗೆ ಪೂರ್ಣವಾಯಿತೋ ಏನೋ? ಸುಮನೋಮಣಿ, ಪುರಾಣ, ಕುಮುದಾಕ್ಷ, ಕರ್ಕೋಟಕ, ಅನಿಲ, ಗುಹ ತಲಪೋತಕ, ವಾಮನ, ಶಬಲಾಸ್ಯ, ತರಲ, ಮಹೋದರ, ಹವಿರ್ಮುಖ, ಹಿಮ, ಶಂಖನಖ, ಹವ್ಯಕರ್ಣ, ಧನಂಜಯ, ವಾಸುಕಿ, ಆರ್ಯಕ, ಮಹಚ್ಛಿಕಿ, ಪಂಚಕರ, ಐರಾವತ, ಮಲಿನ, ತಕ್ಷಕ, ಪುಂಡ್ರಕ, ಶೇಷ, ಪಿಂಡಕರ, ಉಚ್ಚಂಡ, ಕಾಲ, ಕೌಶಿಕ, ಶಂಖಪಾಲ, ಶಕಲ, ಮುದ್ಗ, ಕೈಲಾಸ ಮೊದಲಾದ ಸರ್ಪಶ್ರೇಷ್ಠಗಳು ಅನೇಕಗಳಿವೆ. ಅವುಗಳೊಳಗೆ ಎಂಟುಜಾತಿಗಳು ನಾಗಗಳೆಂದು ಪ್ರಸಿದ್ಧಗಳಾಗಿವೆ. ಒಂದುದಿನದ ಎಂಟುಜಾವಗಳಿಗೂ ಆ ಎಂಟು ನಾಗಗಳು ಅಧಿಪತಿಗಳು. ತಮ್ಮ ತಮ್ಮ ಜಾವದಲ್ಲಿಯೇ ಕಚ್ಚುತ್ತವೆ. ಅವುಗಳ ವಿಷವು ಕಾಲಮೃತ್ಯುವಿಲ್ಲದಿದ್ದರೆ ಗಾರುಡಮಂತ್ರದಿಂದಲೂ, ತಂತ್ರದಿಂದಲೂ, ಔಷಧಿಗಳಿಂದಲೂ, ಇಳಿಯುತ್ತದೆ

ಮನುಷ್ಯನೂ ಬದುಕಿಕೊಳ್ಳುತ್ತಾನೆ. ಇದಲ್ಲದೆ ಗಜಮಿತ್ರ, ಅತಿಕುಳಿಕ ಮೊದಲಾದ ದುಷ್ಟಸರ್ಪಗಳು ಅನೇಕ ಸಹಸ್ರವಿರುವವು. ಅವುಗಳು ಮನುಷ್ಯರನ್ನು ಕಚ್ಚಿದರೆ, ಕಾಲಮೃತ್ಯುವಿಲ್ಲದಿದ್ದರೆ, ಆ ವಿಷವು ಮಂತ್ರಗಳಿಂದಲೂ ಔಷಧಗಳಿಂದಲೂ ಇಳಿದುಹೋಗುತ್ತದೆ. ಅದಕ್ಕೆ ಗಾರುಡಕರ್ಮಪ್ರಯೋಗವು ಅವಶ್ಯಕವಿಲ್ಲ. ಎಂಟುವಿಧವಾದ ನಾಗಗಳೊಳಗೆ ಇಂಥಾದ್ದಕ್ಕೆ ಇಷ್ಟು ಹಲ್ಲುಗಳು; ಇದರ ಜಾತಿ ಇದು, ಇಂಥಾ ಕಾಲದಲ್ಲಿ ಇಂಥಾ ಭಾಗದಲ್ಲಿ ಇಂಥಾ ಅಂಗದಲ್ಲಿ ಕಚ್ಚುತ್ತದೆಎಂದು ನಿಬಂಧನೆಯುಂಟು. ಆ ಎಂಟುನಾಗಗಳೊಳಗೆ ಯಾವು ತಮತಮಗೆ ಹೇಳಲ್ಪಟ್ಟ ರೀತಿಯನ್ನು ಬಿಡದೆ ಕಚ್ಚುತ್ತವೆಯೋ, ಅವು ಗಾರುಡಕರ್ಮಪ್ರಯೋಗದಿಂದ ಮನುಷ್ಯರಲ್ಲಿ ಆವೇಶವಾಗಿ ಮುಂದಾಗುವದನ್ನು ಯಥಾರ್ಥವಾಗಿ ಹೇಳುತ್ತವೆ. ಕಾಲಮೃತ್ಯುವಿಲ್ಲದಿದ್ದರೆ ವಿಷವನ್ನು ಎಳೆದು ಬದುಕಿಸುತ್ತವೆ. ಅಪಮೃತ್ಯುವಿನಲ್ಲಿಯಾದಾಗ್ಯೂ ಆ ಮಹಾನಾಗಗಳು ಎಲ್ಲಾ ಹಲ್ಲುಗಳನ್ನೂ ಇಳಿಸಿ ಕಚ್ಚಿದರೆ ಬದುಕಿಸುವದಕ್ಕೆ ಸಮರ್ಥರಾದವರು ಭೂಮಿಯಲ್ಲಿ ಯಾರೂ ಇಲ್ಲ. ಒಂದೇಹಲ್ಲು ಇಳಿದಿದ್ದರೆ ಬೆಂಕಿಯಿಂದ ಕಾಸುವದು, ನೀರನ್ನು ಹೊಯ್ಯುವುದು ಮೊದಲಾದ ಉಪಾಯಗಳಿಂದ ವಿಷವು ಇಳಿಯುವದು. ಎರಡು ಹಲ್ಲುಗಳಿಂದ ಕಚ್ಚಿದರೆ ಅದರ ವಿಷವು ಮಹಾ ಮಂತ್ರದಿಂದಲೂ, ತಂತ್ರದಿಂದಲೂ ಇಳಿದುಹೋಗುವದು. ಮೂರು ಹಲ್ಲುಗಳಿಂದ ಕಚ್ಚಲ್ಪಟ್ಟವರು ಬದುಕುವದು ಕಷ್ಟವು. ಮಂತ್ರ, ತಂತ್ರ ಔಷಧಗಳ ಪ್ರಯೋಗದಿಂದ ವಿಷವು ಇಳಿದರೆ, ಬಹುಕಾಲ ಪರ್ಯಂತ ಭೂಮಿಯಲ್ಲಿ ಜೀವಿಸುವರು. ನಾಲ್ಕುಹಲ್ಲುಗಳಿಂದಲೂ ಕಚ್ಚಿದರೆ, ಮಂತ್ರ, ತಂತ್ರ ಮೊದಲಾದ ಚಿಕಿತ್ಸೆಗಳೆಲ್ಲವೂ ವ್ಯರ್ಥವು. ವಿಷ್ಣುಬ್ರಹ್ಮರಿಂದಲೂ ಆ ಮನುಷ್ಯನನ್ನು ಬದುಕಿಸುವದಕ್ಕಾಗುವದಿಲ್ಲ. ಈತನನ್ನು ಕಚ್ಚಿರುವ ಸರ್ಪವು ಕರ್ಕೋಟಕ ಜಾತಿಗೆ ಸಂಬಂಧಪಟ್ಟದ್ದು. ನಾಲ್ಕು ಹಲ್ಲುಗಳಿಂದಲೂ ಈ ಅರಸನನ್ನು ಕಚ್ಚಿಯಿದೆ. ಹಣೆಗಣ್ಣುಳ್ಳವನಾಗಿಯೂ, ಸರ್ಪಗಳನ್ನೇ ಕಡಗಗಳನ್ನಾಗಿ ಮಾಡಿಕೊಂಡವನಾಗಿಯೂ, ಯಮನನ್ನು ಸಂಹರಿಸಿದವನಾಗಿಯೂ, ಕಂಠದಲ್ಲಿ ವಿಷವನ್ನು ಧರಿಸಿದವನಾಗಿಯೂ, ಇರುವ ಪರಶಿವನಿಗಾದರೂ ಇವನನ್ನು ಬದುಕಿಸುವದಕ್ಕೆ ಶಕ್ತಿಯಿದೆಯೋ ಇಲ್ಲವೋ? ಈ ಪ್ರಕಾರವಾಗಿ ಹೇಳಿ ಆತನು ಹೊರಟುಹೋಗಲು, ಆ ಅರಸನ ನೆಂಟರೂ, ಸೇವಕರೂ, ಪಟ್ಟಣದ ಜನರೂ, ಅಯ್ಯೋ! ಎಂದು ದುಃಖಧ್ವನಿಗಳಿಂದ ಅಳುತ್ತಿರಲು

ಆತನ ಪತ್ನಿಯು ತನ್ನ ಪತಿಯನ್ನು ನೋಡಿ, ಆ ಗುರುವಿನ ಮಾತು ಯಥಾರ್ಥ ವೆಂದು ನಿಶ್ಚಯಿಸಿ ತನ್ನವರಸಂಗಡ ನಡೆದ ಸಂಗತಿಯೆಲ್ಲವನ್ನೂ ಹೇಳಿದಳು. ಅದ ನ್ನುಕೇಳಿ ಆತನ ತಾಯಿ, ತಂದೆ ಮುಂತಾದ ಸಕಲ ಬಂಧುಗಳೂ ಅದನ್ನು ಸತ್ಯವೆಂದು ನಂಬಿ;--ಈಗ ಶಾವಕಾಶವನ್ನು ಮಾಡುವದರಿಂದೇನು ? ನಾವೆಲ್ಲ ರೂಕೂಡಿ ಹೋಗೋಣ; ಇವನನ್ನು ಆ ಮಹಾತ್ಮನ ಮನೆಯಬಾಗಿಲ ಸಮೀ ಪದಲ್ಲಿ ಮಡಗಿ ಆತನಿಗೆ ಶರಣಾಗತರಾಗೋಣ. ಕೃಪಾಸಿಂಧುವಾದ ಆ ಗುರುಶ್ರೇ ಷ್ಠನು ರಕ್ಷಿಸುತ್ತಾನೆಯೇ ಹೊರತು ಉಪೇಕ್ಷೆಮಾಡುವದಿಲ್ಲ. ಎಂದಾಲೋಚಿಸಿ, ಅವರೆಲ್ಲರೂ, ಹೋಗಿ, ಆತನಿಗೆ ನಮಸ್ಕಾರವಂಮಾಡಿ, ಬಹಳ ದುಃಖದಿಂದ;--- ಎಲೈ ಸ್ವಾಮಿಯೇ ! ನಿನ್ನ ಸೇವಕನಾದ ಈತನು ನಿನ್ನ ಆಶೀರ್ವಾದವನ್ನು ಪಡೆ ಯದೆ, ಮೃತನಾದನು. ಅವನ ಕಾಲವೂ ಸಮೀಪಿಸಿತು, ನಿನ್ನ ಮಾತು ಯಾವಾ ಗಲಾದರೂ ಹುಸಿಯಾಗುವದುಂಟೇ ? ಸದ್ಭಕ್ತರ ಹೃದಯಕಮಲದಲ್ಲಿ ವಾಸಿಸು ವವನೇ ! ಮಹಾಬುದ್ಧಿಸಂಪನ್ನನೇ ! ಅನೇಕಫಲಗಳನ್ನು ಕೊಡುವದಾಗಿಯೂ, ಸಾರ್ಥಕವಾದದ್ದಾಗಿಯೂ, ಇರುವ ಆಶೀರ್ವಾದವುಳ್ಳವನೇ! ಗಂಭೀರವಾದ ಅರ್ಥವು ಳ್ಳವೇದವನ್ನು ಅಭ್ಯಾಸಿಸಿರುವವನೇ, ಪರಮಾನಂದದಿಂದ ಪರಿಪೂರ್ಣನಾದವನೇ! ಸದ್ಗುಣಗಳಿಗೆ ಸಮುದ್ರನೇ! ನಿರಂತರದಲ್ಲಿ ದುಃಖಿತರಿಗೆ ಅಭಯದಾನವನ್ನು ಮಾಡು ವವಿನೋದವುಳ್ಳವನೇ! ಮಹಿಮೆಯಿಂದ ಶ್ರೇಷ್ಠನೇ! ಆನಂದವನ್ನೂ, ಪುಣ್ಯವನ್ನು ಭಕ್ತಿಯನ್ನೂ, ವೃದ್ಧಿಗೊಳಿಸುವವನೇ ! ವೀರಭಕ್ತರಲ್ಲಿ ಅಗ್ರೇಸನಾದವನೇ ! ಸತ್ಯಸಂಭವನೇ! ಶಿವಮತಾಚರಣೆಗಳಲ್ಲಿ ಶ್ರೇಷ್ಠನಾದವನೇ! ಸಕಲ ಲೋಕ ಗಳಲ್ಲಿಯೂ ಹರಡಿಕೊಂಡಿರುವ ಕೀರ್ತಿಯಿಂದ ಪ್ರಕಾಶಿಸಲ್ಪಟ್ಟವನೇ ! ಶಿವ ಯೋಗವನ್ನು ಅನುಸರಿಸಿದ ಮೂರ್ತಿಯುಳ್ಳವನೇ! ಪಶು, ಪಾಶ, ಪತಿ ಎಂಬ ತ್ರಿವಿಧಪದಾರ್ಥಗಳ ಜ್ಞಾನವುಳ್ಳವನೇ ! ಶಿವಸಮಾನನೇ ! ಸರ್ಪದಷ್ಟನಾದ ವನನ್ನು ಕಾಪಾಡುವದಕ್ಕೂ, ನಮ್ಮನ್ನು ನೋಡುವುದಕ್ಕೂ, ನೀನೇ ಸಮರ್ಥ ನಲ್ಲದೆ ಬೇರೆಯಿಲ್ಲ. ಭಯದಿಂದ ದುಃಖಿತರಾದ ನಮಗೆ ಅಭಯವನ್ನು ಕೊಡು. ನಿನ್ನ ಕೃಪೆಯನ್ನು ಪಡೆಯುವುದಕ್ಕೆ ಅಶಕ್ತನಾದ ಈ ಅರಸನು ಸರ್ಪದ ಹಲ್ಲಿಗೆ ಆಹುತಿಯಾದನು. ಇದಲ್ಲದೆ ನಿನಗೆ ನಮಸ್ಕರಿಸಿದ ಪ್ರಾಣಿಯು ನಾಶವಾಗು ವುದಿಲ್ಲ. ಸತ್ಯವು. ಎಲೈ ಗುರುವರ್ಯನೇ! ಇವನು ಮೊದಲೇ ನಿನಗೆ ನಮಸ್ಕಾರ ವನ್ನು ಮಾಡಿದನು. ನಮಸ್ಕರಿಸದೆ ಮೃತನಾಗಿದ್ದರೆ, ಅದು ಬಹಳ ದೋಷವೇ

ಸರಿ. ಹಿಂದೆ ಮುಸುಡಿಚೌಡಯ್ಯನಿಗೆ ಭಕ್ತಿಯಿಂದ ನಮಸ್ಕರಿಸಿದ ಒಬ್ಬಕನ್ಯೆಯು ಮೊದಲು ಆತನಿಂದ ಸತ್ಯವಾದ ಆಶೀರ್ವಾದವನ್ನು ಪಡೆದಿದ್ದು ಆಮೇಲೆ ಮೃತಳಾಗಲು, ಆಶೀರ್ವಾದವನ್ನು ಮಾಡಿದ ಆ ಚೌಡಯ್ಯನು ಆಕೆಯನ್ನು ಬದುಕಿಸಲಿಲ್ಲವೇ? ಆತನು ಆಕೆಗೆ ಅಲ್ಪಾಯುಷ್ಯವುಳ್ಳವಳೆಂದು ತಿಳಿದು ಆಶೀರ್ವಾದವನ್ನು ಮಾಡಲಿಲ್ಲವೇ? ಆಕೆಯ ತಂದೆಯು ಮಗಳ ದೇಹವನ್ನು ತೆಗೆದುಕೊಂಡು ಹೋಗಿ, ಆತನಮುಂದಿಟ್ಟು;—ಎಲೈ ಸ್ವಾಮಿಯೇ! ನಿನ್ನ ಆಶೀರ್ವಾದವು ಯಾಕೆ ವ್ಯರ್ಥವಾಯಿತೆಂದು ಆತನ ಪಾದಗಳಲ್ಲಿ ಬಿದ್ದುಕೊಂಡು ಏಳದಿರಲು; ಆತನು ಆಯುಷ್ಯವನ್ನು ಕೊಡಲಿಲ್ಲವೇ ? ಈ ಸಂಗತಿಯು ಎಲ್ಲಾ ಲೋಕಗಳಲ್ಲಿಯು ಪ್ರಸಿದ್ಧವಲ್ಲವೇ ; ಭಕ್ತರ ಶಿವಭಕ್ತಿಮಹಿಮೆಯನ್ನು ನೋಡಿದರೆಇದೇನಾಶ್ಚರ್ಯವು? ಆದುದರಿಂದ ಎಲೈ ಕರುಣಾನಿಧಿಯೇ! ನಮ್ಮನ್ನು ಕಡೆಗಣ್ಣಿನಿಂದ ನೋಡಿ, ಇವನಿಗೆ ಪ್ರಾಣದಾನವನ್ನುಮಾಡು ಸ್ವಾಮಿಾ ! ಎಂದು ಹೇಳಿಕೊಂಡು ಅನೇಕಾವರ್ತಿ ನಮಸ್ಕರಿಸಿ, ಎಲೈ ಗುರುಶ್ರೇಷ್ಠನೆ! ಮರೆಹೊಕ್ಕವರನ್ನು ಸಂರಕ್ಷಿಸುವವರೆಂಬ ಬಿರುದನ್ನು ನೀವು ಮರೆಯುವುದು ಯೋಗ್ಯವೇ? ಅಭಯವನ್ನು ಬೇಡುತ್ತಿರುವಲ್ಲಿ ನೀವು ಸುಮ್ಮನಿರುವುದು ಯುಕ್ತವೇ? ಆಶ್ರೈಸಿದವರ ವಿಷಯದಲ್ಲಿ ಬೇರೆ ವಿಧವಾಗಿ ಭಾವಿಸುವುದು ವೀರಭಕ್ತಿಗೆ ತಕ್ಕದ್ದೇ? ನೀನೇ ದಿಕ್ಕು ಎಂದು ಹೇಳಿದವರನ್ನು ಉದಾಸೀನತೆಯಿಂದ ತ್ಯಜಿಸುವದು ನಿನಗೆ ಸರಿಯೆ? ಆಶ್ರಯವೂ, ಗತಿಯೂ, ಮತಿಯೂ, ಸಕಲವೂ ನೀನೇ ಎಂದುತಿಳಿದವರಲ್ಲಿ ಅಲಕ್ಷ್ಯವಾಗಿರುವದು ಭಕ್ತಿಮಾರ್ಗಕ್ಕೆ ಒಪ್ಪವದೇ? ಈರೀತಿಯಾಗಿ ಪ್ರಾರ್ಥಿಸುತ್ತಾ ಪಾದಗಳಿಗೆರಗಿ, ಸ್ತುತಿಸಿದವರಾಗಿ, ಪ್ರಾಣದಾನವನ್ನು ಕೇಳುತ್ತಾ, ವೇಮನಾರಾಧ್ಯನ ಕರುಣಾಕಟಾಕ್ಷವನ್ನು ಅಪೇಕ್ಷಿಸಿಕೊಂಡಿದ್ದರು. ಆಗ ಆ ಮಹಾತ್ಮನು ಅವರನ್ನು ಕೃಪಾದೃಷ್ಟಿಯಿಂದ ನೋಡಿ, ಭಕ್ತಿಮಹಿಮೆಯನ್ನು ಮರೆತಿದ್ದೆನಲ್ಲಾ ಎಂದು ಸ್ಮರಿಸಿಕೊಂಡು;—ಮರೆಹೊಕ್ಕವರನ್ನು ಕಾಪಾಡಲಾರದಿರುವದು ಭಕ್ತಿಮಹಿಮೆಗೆ ಕೊರತೆಯಿಲ್ಲವೇ ? ಯಾವದಾದರೂ ಒಂದು ಸಂಗತಿಯನ್ನು ಬಿಚ್ಚಿ ಹೇಳಿದಲ್ಲಿ ಮೂರ್ಖತನದಿಂದ ಹಾಸ್ಯಮಾಡಿ, ಕೋಪಗೊಳ್ಳುವದು ಸಾಮರ್ಥ್ಯಕ್ಕೆ ಕುಂದಕವಲ್ಲವೇ? ಶಿವಭಕ್ತಿಯನ್ನು ಗುರಿಯಿಟ್ಟು ಹೇಳಿದಮಾತನ್ನು ನಾನು ಸಡಿಲಬಿಟ್ಟರೆ; ಶಿವನು ನನ್ನನ್ನು ನೋಡಿ ನಗುವದಿಲ್ಲವೇ ? ಒಡೆಯನಿಂದ ಯುದ್ಧಕ್ಕೆ ಕಳುಹಿಸಲ್ಪಟ್ಟ ವೀರನು ಶತ್ರುಗಳಗುಂಪನ್ನು ಕಂಡು ಹೆದರಿಕೊಂಡು ಓಡಿಹೋ

ದರೆ; ಅವನಿಗೆ ಅದು ಕೀರ್ತಿಕರವಾದೀತೇ? ಪ್ರಾಣದಾನವನ್ನು ಬೇಡಿ, ಭಕ್ತಿಮ ಹಿಮೆಯನ್ನು ತೋರಿಸಿದಾಗ್ಯೂ ಪ್ರಾಣಗಳನ್ನು ವಂಚಿಸುವದು ವೀರತ್ವವೆನಿಸುವದೇ ? ಎಂದು ಆಲೋಚಿಸಿದವನಾಗಿ ಶಿವಭಕ್ತರನ್ನು ಕರೆದು ಭಕ್ತಿಪೂರ್ವಕವಾಗಿ ನಮಸ್ಕರಿಸಿ, ಉತ್ತಮವಾದ ಪೀಠಗಳಲ್ಲಿ ಕುಳ್ಳಿರಿಸಿ, ಬಹುಪ್ರೀತಿಯಿಂದ ಕೂಡಿದವನಾಗಿ, ಭಕ್ತರ ಉಘೇಎಂಬ ಶಬ್ಧವೂ, ಜಯಜಯ ಎಂಬ ಧ್ವನಿಯೂ, ವೃದ್ಧಿಹೊಂದುತ್ತಿರಲು; ಕವಿಗಳೂ, ಸ್ತುತಿಪಾಠಕರೂ, ಸ್ತೋತ್ರವನ್ನು ಮಾಡುತ್ತಿರಲಾಗಿ, ವಾದ್ಯಗಳು ಬಡಿಯಲ್ಪಡುತ್ತಿರಲು; ಆ ಶಿವಭಕ್ತರ ಪಾದಗಳನ್ನು ಭಕ್ತಿಯಿಂದ ತೊಳೆದು, ಆ ಪಾದೋದಕವನ್ನು ಕಲಶಗಳಲ್ಲಿ ತುಂಬಿ, ಮಡಿಬಟ್ಟೆಗಳಿಂದ ಮುಚ್ಚಿ, ಭಕ್ತಸಭಾಮಧ್ಯದಲ್ಲಿಟ್ಟು ಆ ಕಲಶಗಳನ್ನು ಪೂಜಿಸಿ, ಗಂಧ, ಅಕ್ಷತ, ಪುಷ್ಪಗಳಿಂದ ಭಕ್ತರನ್ನು ಪೂಜಿಸಿ, ಅನೇಕ ಘಂಟೆಗಳ ಧ್ವನಿಯೊಡನೆ ಧೂಪ, ದೀಪ ಮುಂತಾದವುಗಳನ್ನೂ ಭಸ್ಮ ತಾಂಬೂಲಗಳನ್ನೂ ಸಮರ್ಪಿಸಿ, ಸಂತೋಷದಿಂದ ಪುಷ್ಪಾಂಜಲಿಯನ್ನು ಮಾಡಿ, ಮೂರುಸಾರಿ ಪ್ರದಕ್ಷಿಣೆಯಂಬಂದು, ಅತಿಕಭಕ್ತಿಯಿಂದ ನಮಸ್ಕರಿಸಿ, ಅವರ ಅಪ್ಪಣೆಯಂ ಪಡೆದು, ಆ ರಾಜಪುತ್ರನ ಶವವನ್ನು ತರುವದಕ್ಕಾಗಿ ಅವನ ಬಂಧುಗಳನ್ನು ಕಳುಹಿಸಿದನು. ದುಃಖಿತರಾಗಿದ್ದ ಬಂಧುಗಳು, ಬಾಯನ್ನು ತೆರೆದುಕೊಂಡಿರುವದಾಗಿಯೂ, ತಲೆಕೆಳಕಾಗಿಯೂ, ನಿಶ್ಚಲವಾಗಿಯೂ, ಇರುವ ಕಣ್ಣುಗುಡ್ಡೆಗಳುಳ್ಳದ್ದಾಗಿಯೂ, ಊದಿಕೊಂಡಿರುವ ತುಟಿಗಳುಳ್ಳದ್ದಾಗಿಯೂ, ಮುಚ್ಚಲ್ಪಟ್ಟ ರೆಪ್ಪೆಗಳುಳ್ಳದ್ದಾಗಿಯೂ, ಹತ್ತಿಕೊಂಡ ಕೆನ್ನೆಗಳುಳ್ಳದ್ದಾಗಿಯೂ, ಬಹಳ ಮೆತ್ತಗಾಗಿ ಊದಿ ಅರಳಿದ ಮೂಗುಳ್ಳದ್ದಾಗಿಯೂ ಹಸುರಾದ ಹಲ್ಲುಗಳುಳ್ಳದ್ದಾಗಿಯೂ, ಜೊಲ್ಲು ಸುರಿದು ಹೇಸಿಕೆಯನ್ನುಂಟುಮಾಡುವದಾಗಿಯೂ, ಸೋರುತ್ತಿರುವರಂಧ್ರಗಳುಳ್ಳದ್ದಾಗಿಯೂ, ಬಿಚ್ಚಿಹೋದ ಜುಟ್ಟುಳ್ಳದ್ದಾಗಿಯೂ, ಭಯಂಕರವಾಗಿಯೂ, ಕಾಂತಿಗುಂದಿದ ಮೈಯುಳ್ಳದ್ದಾಗಿಯೂ ಉಬ್ಬರಿಸಿದ ಹೊಟ್ಟೆಯುಳ್ಳದ್ದಾಗಿಯೂ, ಜೋತುಬಿದ್ದ ಕೊರಳುಳ್ಳದ್ದಾಗಿಯೂ, ಕುಗ್ಗಿದ ಬೆನ್ನುಳ್ಳದ್ದಾಗಿಯೂ, ಸಡಿಲಿದ ಕೀಲುಗಳುಳ್ಳದ್ದಾಗಿಯೂ, ರಕ್ತವಿಲ್ಲದ ತೊಗಲುಳ್ಳದ್ದಾಗಿಯೂ, ಬಹಳ ದುರ್ಗಂಧದಿಂದ ತುಂಬಲ್ಪಟ್ಟದ್ದಾಗಿಯೂ, ನೋಡುವದಕ್ಕೆ ಅಶಕ್ಯವಾಗಿಯೂ, ಬಹುಕೊಳಕಾಗಿಯೂ, ಹಾರಿಬಂದು ಮುತ್ತುತ್ತಿರುವ ನೊಣಗಳ ಶಬ್ದದಿಂದ ಕೂಡಿದ್ದಾಗಿಯೂ ಇರುವ ಆ ಹೆಣವನ್ನು ನೋಡಿದ ಜನಗಳು ಹೇಸಿಕೆಯಿಂದ ತಮ್ಮ ಮೂ

ಗುಮುಚ್ಚಿಕೊಂಡು, ನೆಲದಮೇಲೆ ಉಗುಳಿಕೊಂಡು ತೊಲಗುತ್ತಿರಲಾಗಿ ಹೊತ್ತುಕೊಂಡುಬಂದು, ಸಭಾಮಧ್ಯದಲ್ಲಿಟ್ಟರು. ಬಳಿಕ ಪಾಪಸಮೂಹವೆಂಬ ಗೋಧುವೆಗೆ ಬೀಸುವಕಲ್ಲಾಗಿಯೂ, ದಿಗಂತವಿಶ್ರಾಂತವಾದ ಕೀರ್ತಿಯುಳ್ಳವನಾಗಿಯೂ ಭಕ್ತಿಮಹಿಮೆಯಿಂದ ಪ್ರಸಿದ್ಧನಾಗಿಯೂ ಇರುವ ವೇಮನಾರಾಧ್ಯನು ಆ ದೇಹವನ್ನು ಭಕ್ತ ಪಾದೋದಕದಿಂದ ಚೆನ್ನಾಗಿ ತೊಳೆದು, ಭಕ್ತರ ಹಸ್ತದಿಂದ ಕೊಡಲ್ಪಟ್ಟ ಭಸ್ಮಕ್ಕೆ ಅವರ ಚರಣಧೂಳಿಯನ್ನು ಮಿಶ್ರಮಾಡಿ ಅವರ ಪಾದತೀರ್ಥದಿಂದ ಕಲಸಿ, ದೇಹಕ್ಕೆಲ್ಲಾ ಬಳಿದು ತ್ರಿಪುಂಡ್ರವನ್ನು ಆಯಾಸ್ಥಾನದಲ್ಲಿ ಧರಿಸಿ ಭಕ್ತರ ನಿರ್ಮಾಲ್ಯ ಪುಷ್ಪಮಾಲಿಕೆಗಳನ್ನು ದೇಹಕ್ಕೆ ಕಟ್ಟಿ, ವಿನಯದಿಂದ ನಮ್ರನಾಗಿ ಅವರ ಅಪ್ಪಣೆಯನ್ನು ಕೇಳಿ, ಅವರ ಕರುಣವಂ ಪಡೆದು, ಸಂತೋಷಗೊಂಡು ಮರಳಿ, ಆ ಸದ್ಭಕ್ತರಸಭೆಗೆ ಸಾಷ್ಟಾಂಗ ನಮಸ್ಕಾರವಂ ಮಾಡಿ, ಆ ಕಳೇಬರಕ್ಕೆದಿರಾಗಿ ನಿಂತು, ಪ್ರಮಥಗಣ, ರುದ್ರಗಣ, ಭಕ್ತಗಣಂಗಳ ಚರಣಸ್ಮರಣೆಯನ್ನು ಮಾಡಿ, ಶ್ರೇಷ್ಠವಾದ ಪಂಚಾಕ್ಷರೀ ಮಂತ್ರಜಪದ ಮಹಿಮೆಯಿಂದ ಕೂಡಿ, ಭಕ್ತರಿಂದ ಕೊಡಲ್ಪಟ್ಟ ಶ್ರೀ ವಿಭೂತಿಯನ್ನು ಆ ಹೆಣದ ಬಾಯಲ್ಲಿ ಉದುರಿಸಿ, ಎಲೈ ಅರಸೇ! ಏಳುಏಳೆಂದು ಆತನ ಕೈಯನ್ನು ಹಿಡಿದನು. ಆ ಕ್ಷಣದಲ್ಲಿಯೇ ರಾಜನು, ಪ್ರಾಣವಂ ಹೊಂದಿದವನಾಗಿ, ಮನದ ಭೀತಿಯನ್ನು ಬಿಟ್ಟು ಅಧಿಕಭಕ್ತಿಯಿಂದ ವೇಮನಾರ್ಯನ ಪಾದಗಳಿಗೆ ನಮಸ್ಕರಿಸಿದನು. ಆ ವೇಮನಾರಾಧ್ಯನು ಭಕ್ತಿಮಹಿಮೆಯಿಂದ ಕೃಪೆಯೂ ಕೀರ್ತಿಯೂ ಮಹೋನ್ನತವಾಗುತ್ತಿರಲು; ಆ ರಾಜಪುತ್ರನಿಗೆ ಲಿಂಗಧಾರಣವಂಮಾಡಿ, ಆತನೊಡನೆ ಭಕ್ತರಿಗೆಲ್ಲಾ ಸಾಷ್ಟಾಂಗ ನಮಸ್ಕಾರವಂ ಮಾಡಲು; ಆ ಭಕ್ತಶ್ರೇಷ್ಠರು ಗಾಂಭೀರ್ಯದಿಂದಲಂಕೃತನಾದ, ಸದ್ಭಕ್ತರ ಪಾದಕಮಲಗಳೇ ಮಸ್ತಕದಲ್ಲಿಉಳ್ಳ ಯೋಗ್ಯನಾದ ನಿತ್ಯಾನಂದನಾದ, ಲೋಕದಲ್ಲಿ ಪ್ರಸಿದ್ಧವಾದ ವೈಭವವುಳ್ಳ ಭಕ್ತರ ಪಾದಧೂಳಿಯಿಂದ ಪಾವನವಾದ ಹಣೆಯುಳ್ಳ, ಪರಮಪ್ರಕಾಶನಾದ, ವೀರಮಾಹೇಶ್ವರರಿಗೆ ಶಿರೋಭೂಷಣನಾದ, ಸಜ್ಜನರ ಪ್ರೀತಿಗೆ ಪಾತ್ರನಾದ, ಭಕ್ತರ ಪಾದಕಮಲಗಳ ಮಕರಂದದಿಂದಾವರಿಸಲ್ಪಟ್ಟ ದೇಹವುಳ್ಳ, ಬಸವೇಶನ ಧ್ಯಾನದಿಂದ ಪೂಜ್ಯವಾದ ಹೃದಯವುಳ್ಳ ಪ್ರಮಥರ ಪಾದಗಳ ಉಗುರುಗಳೆಂಬ ಕನ್ನಡಿಯಲ್ಲಿ ಪ್ರತಿಬಿಂಬಿಸುವ ಮುಗುಳ್ನಗೆಯಿಂ ಕೂಡಿದ ಮುಖಳ್ಳವು, ಸದ್ಗುಣಗಳಿಂದ ಭರಿತನಾದ ದಾಸೋಹಂಭಾವದಿಂದ ಪ್ರಕಾಶಿಸುವ,

ಭಕ್ತರಪಾದ ನಖಗಳ ಕಾಂತಿಯೆಂಬ ಬೆಳದಿಂಗಳಿಗೆ ಚಕೋರಪಕ್ಷಿಯಾದ, ನಾಶರಹಿತನಾದ ಔದಾರ್ಯವಂತನಾದ ಪತ್ರವನ್ನು ಹರಡುವ ಅಪರಿಮಿತವಾದ ಕರುಣಾರಸಕ್ಕೆ ಸಮುದ್ರನಾದ, ಬ್ರಹ್ಮನಿಂದ ಬರೆಯಲ್ಪಟ್ಟ ಹಣೆಯಬರಹವನ್ನು ಕೆಡಿಸುವದರಲ್ಲಿ ಸಮರ್ಥನಾದ ಮಹಿಮೆಯಿಂದ ತುಂಬಲ್ಪಟ್ಟ ಮೂಢತ್ವವಿಲ್ಲದ, ಅಭಿವೃದ್ಧಿಯಿಂ ಕೂಡಿದ, ವಿಷ್ಣುಮಾಯೆಯನ್ನು ಶಾಂತಿಗೊಳಿಸುವುದರಲ್ಲಿ ವಿಚಕ್ಷಣನಾದ, ಪುರುಷಶ್ರೇಷ್ಠನಾದ, ಪಶುಗಳಾದ ಜೀವರ ಮಾಯಾಪಾಶಗವನ್ನು ಬಿಡಿಸುವದರಲ್ಲಿ ಸಮರ್ಥನಾದ, ಶಿವನಿಗೆ ಸಮಾನನಾದ, ಭಕ್ತರಿಗೆ ನಿಕ್ಷೇಪಸ್ವರೂಪನಾದ ಸೌಖ್ಯವನ್ನುಕೊಡುವ ಸ್ವಭಾವವುಳ್ಳ, ಮೃತ್ಯುವಿನ ಕೋರದಾಡೆಗಳನ್ನು ಮುರಿಯುವ ವಿದ್ಯೆಯಲ್ಲಿ ಶಕ್ತನಾದ, ನಿಶ್ಚಂಚಲನಾದ, ಗಣಂಗಳಿಂದ ಸಂತೋಷಗೊಳಿಸಲ್ಪಟ್ಟ, ಯಮದಂಡವನ್ನು ಹೋಗಲಾಡಿಸುವ ಕಾರ್ಯದಿಂದ ಕೂಡಿದ, ಪ್ರಸಿದ್ಧವಾದ, ಕಾಲನೆಂಬ ಸರ್ಪದ ವಿಷವನ್ನು ಪರಿಹರಿಸಿದ, ದುಃಖದಲ್ಲಿ ಬಿದ್ದಿರುವವರನ್ನು ಉದ್ಧರಿಸುವ, ಧೈರ್ಯವಂತನಾದ ಆ ವೇಮನಾರ್ಯನನ್ನು ತಮ್ಮ ದಯಾರಸವೆಂಬ ಸಮುದ್ರದಲ್ಲಿ ಮುಳುಗಿಸಿದವರಾಗಿ, ಸಂತೋಷವಂಹೊಂದಿದರು. ಅನಂತರದಲ್ಲಿ ಆತನು ತಮಗೆ ಮರಳಿ ಮರಳಿ ನಮಸ್ಕಾರವಂ ಮಾಡಲು; ಅವರು ಜ್ಞಾನಸುಖದಿಂದ ಪೂರ್ಣನಾದ ಆ ವೇಮನಾರ್ಯನನ್ನು ಎತ್ತಿ ಪರಸ್ಪರಾಲಿಂಗನೆಯಿಂದ ರಕ್ಷಿಸಿ, ಅಧಿಕವಾದ ಸಂತೋಷದಿಂದ ಭರಿತವಾದ ಮುಖವುಳ್ಳವರಾಗಿ, ಎಲೈ ವೇಮನಾರಾಧ್ಯನೇ! ಭಲಾ! ಸರ್ವಜ್ಞನಾದವನೇ ಮಹಿಮೆಯಿಂದ ಉನ್ನತನಾದ ವೇಮನಾರಾಧ್ಯನೇ ಭಲಾ! ಸದ್ಭಕ್ತರಿಗೆ ಮನೋಹರನಾದವನೇ! ದಯಾನಿಧಿಯೇ ಭಲಾ! ಆನಂದಭರಿತವಾದ ಮೂರ್ತಿಯುಳ್ಳವನೇ! ತಡೆಯಿಲ್ಲದವನೇ ಭಲಾ! ಹೆಣಕ್ಕೆ ಪ್ರಾಣವನ್ನುಕೊಟ್ಟು ಬದುಕಿಸುವದು ನಿನಗಲ್ಲದೆ ಮತ್ತಾರಿಗೆ ಸಾಧ್ಯವಾದೀತು? ಯಮನಬಾಯಿಂದ ಎಳೆಯುವದೂ ಕಾಲಮೃತ್ಯುವನ್ನು ಅಟ್ಟಿ ಬದುಕಿಸುವದೂ, ಬ್ರಹ್ಮವಿಷ್ಣುಗಳಿಂದಾಗುವುದೇ? ಈ ವಿಧವಾದ ವೀರತ್ವವನ್ನೂ, ಇಂಥಾ ಧೈರ್ಯವನ್ನೂ ಈ ಪ್ರಕಾರವಾದ ಮಹಿಮೆಯನ್ನು ನಿನ್ನಲ್ಲಿಯೇ ನೋಡಿದೆವು ನಿನ್ನಲ್ಲಿಯೇ ಕೇಳಿದೆವು. ಈ ಪ್ರಕಾರವಾಗಿ ಸ್ತುತಿಸುತ್ತಿರಲು; ಶಕ್ತಿವಂತನಾದ ವೇಮನಾರಾಧ್ಯನು ಆ ರಾಯನಿಗೆ ಕರುಣದಿಂದ ಪ್ರಾಣಗಳನ್ನು ಕೊಟ್ಟದ್ದು ಬಹು ಪ್ರಸಿದ್ಧವಾಗಿರುವದು.

ಬಸವೇಶವಿಜಯದಲ್ಲಿ ಮುವ್ವತ್ತುಮೂರನೆಯ ಅಧ್ಯಾಯವು ಸಂಪೂರ್ಣ.

## ಮುವ್ವತ್ತನಾಲ್ಕನೇ ಅಧ್ಯಾಯವು.

---

### ಚಿಕ್ಕಮಾದಣ್ಣನ ಕಥೆ

ನಿಷ್ಕಲಂಕವಾದ ಮಹಾಭಕ್ತಿಯುಳ್ಳವನೂ, ವೀರಶೈವಮತಾಚಾರಗಳನ್ನು ನಡಸುವವನೂ, ಎನಿಸಿದ ಸಕಲೇಶಮಾದರಸನು ಕಾಲಮೃತ್ಯುವಿನ ಕಣ್ಣಿಗೆ ದೂಳನ್ನು ಎರಚಿ, ಯಮನ ಮೋರೆಯನ್ನು ಎಡಗಾಲಿನಿಂದ ಒದ್ದು, ಬ್ರಹ್ಮನನ್ನು ಧಿಕ್ಕರಿಸಿ, ಅದೃಷ್ಟದ ತಿಕದಮೇಲೆ ಹೊಡೆದು, ನೆಲಕ್ಕೆ ಬೀಳಿಸಿ, ವಿಷ್ಣುಮಾಯೆಯನ್ನು ಧ್ವಂಸಮಾಡುವನೆಂದು ಕೂಗುತ್ತಿರುವ ಬಿರುದಿನ ಕಹಳೆಯುಳ್ಳವನಾಗಿ, ಮನುಷ್ಯನು ನೂರುವರ್ಷದಾಯುಷ್ಯವುಳ್ಳವನು ಎಂಬರ್ಥವುಳ್ಳ ಶತಾಯುಃ ಪುರುಷಃ ಎಂಬ ಶ್ರುತಿಯನ್ನು ತಿರಸ್ಕರಿಸಿ, ಏಳುನೂರುವರ್ಷಗಳತನಕ ಲಿಂಗಪೂಜೆಯಲ್ಲಿಯೂ ಜಂಗಮಸೇವೆಯಲ್ಲಿಯೂ, ಆಸಕ್ತನಾಗಿ, ಆನಂದಸಮುದ್ರದಲ್ಲಿ ಮುಳುಗಿದವನಾಗಿ, ಅತ್ಯುತ್ತಮವಾದ ಶಿವಾಚಾರಗಳಲ್ಲಿ ನಿರತನಾಗಿದ್ದನು, ಬಳಿಕ ಚಿಕ್ಕಮಾದಣ್ಣನೆಂಬ ಹೆಸರುಳ್ಳ ಮತ್ತೊಬ್ಬ ಸಾತ್ವಿಕಭಕ್ತನು ಬಹು ಪ್ರೀತಿಯಿಂದ ತನ್ನ ಪತ್ನಿಯೊಡನೆಯೂ, ಪುತ್ರನೊಡನೆಯೂ, ಆ ಮಾದಿರಾಜನ ಪಾದಗಳನ್ನು ನಿತ್ಯದಲ್ಲಿಯೂ ಸೇವಿಸುತ್ತಾ; ಇದು ನಾನು ಬದುಕುವ ಉಪಾಯವು, ನನ್ನಸಂಸಾರಕ್ಕೋಸ್ಕರ ಈಗ ಇದನ್ನು ಸಂಪಾದಿಸಬೇಕು, ಎಂಬ ವಿಚಾರವನ್ನು ಬಿಟ್ಟು, ಶಿವನಿಂದ ಉಪದೇಶಿಸಲ್ಪಟ್ಟ ವೀರಶೈವಾಚಾರ ರೂಪವಾದ ಮಿತವಾದ ಕರ್ಮದಲ್ಲಿದ್ದುಕೊಂಡು, ತನ್ನ ಬಡತನದ ಕಷ್ಟವನ್ನೂ, ಮನೆಯ ವ್ಯಸನವನ್ನೂ ಸ್ವಲ್ಪವಾದರೂ ಮನಸ್ಸಿಗೆ ತಂದುಕೊಳ್ಳದೆ, ಬಹುಸಂತೋಷವುಳ್ಳವನಾಗಿ, ಸದ್ಭಕ್ತಿಯಿಂದ ಮಾದಿರಾಜಯ್ಯನ ಪಾದಗಳೇಗತಿಯೂ ಮತಿಯೂ ಸರ್ವವೂ ಎಂದು ಮನಸ್ಸಿನಲ್ಲಿ ತಿಳಿದು ಕಾಲವನ್ನು ಕಳೆಯುತ್ತಿದ್ದನು.

ಆತನು ಒಂದಾನೊಂದು ದಿನ ಆಕಸ್ಮಿಕವಾಗಿ ಮೃತನಾಗಲು; ಆತನ ಹೆಂಡತಿಯು, ಬುದ್ಧಿಭ್ರಾಂತಳಾಗದೆ, ಪಾದೋದಕದಿಂದ ಪತಿಯ ಶರೀರವನ್ನು ತೊಳೆದು, ಸರ್ವಾಂಗಕ್ಕೂ ಭಸ್ಮವನ್ನು ಲೇಪಿಸಿ, ಆ ಶವವನ್ನು ಕಂಬದಮರೆಯಲ್ಲಿ ಒರಗಿಸಿಟ್ಟು, ಜನಗಳು ಕಾಣದಂತೆ ಮನೆಯೊಳಗೆ ಪತಿಯನ್ನು ಹೂಳಿಡುವದ

ಕ್ಕಾಗಿ ಯೋಗ್ಯವಾದ ಗವಿಯನ್ನು ತೋಡುತ್ತಾ ಇದ್ದಳು. ಆ ಕಾಲದಲ್ಲಿ ನಿದ್ರೆಯನ್ನು ಮಾಡುತ್ತಿದ್ದ ಆಕೆಯಮಗನು ಆ ಶಬ್ದವನ್ನು ಕೇಳಿ, ಎದ್ದು ತನ್ನ ತಾಯಿಯನ್ನು ಕಳವಳದಿಂದ ಕೇಳಿದ್ಧೇನಂದರೆ;—ಅಮ್ಮಾ ಈ ನಮರಾತ್ರಿಯಲ್ಲಿ ನೀನು ಮಾಡುವದೇನು? ತಂದೆಯು ಕಂಬದಸಮೀಪದಲ್ಲಿ ಸುಮ್ಮನೆ ಕುಳಿತಿದಾನೆ. ಏಕೆಹೇಳು. ಗುರುಸೇಯನ್ನುಮಾಡುವದಕ್ಕೆ ಯಾಕೆ ಹೊಗಲಿಲ್ಲ. ನೀನೊಬ್ಬಳೇ ಶಿವಪೂಜೆಗೋಸ್ಕರ ವೇದಿಕೆಯನ್ನು ಯಾಕೆವ್ಯರ್ಥವಾಗಿ ಅಗಿಯುತ್ತೀಯೆ ? ನಮ್ಮ ತಂದೆಯು ಪೂಜೆಯನ್ನು ಮಾಡತಕ್ಕ ಜಗಲಿಯಲ್ಲಿ ಚಿಲಿಮೆಯನ್ನು ಮಾಡದೆ ಶಿವನನ್ನು ಪೂಜಿಸುವದಿಲ್ಲವೆಂಬ ವ್ರತವನ್ನು ಹಿಡಿದಿದ್ಧಾನೆಯೋ? ಆ ಚಿಲಿಮೆಯಲ್ಲಿ ನೀರೂರಿದರೆ, ಆದರಿಂದ ಶಿವನಿಗೆ ಅಭಿಷೇಕವಾಗುವ ಪರ್‍ಯಂತರ ತಂದೆಯು ನಮ್ಮ ಸಂಗಡ ಮಾತನಾಡುವದಿಲ್ಲವೋ ? ಅಲ್ಲದಿದ್ದರೆ; ಯಾವದೋ ಒಂದು ಕಾರಣ ದಿಂದ, ಈಗ ನನ್ನ ತಂದೆಯು ವಾಗ್ವಾದದಿಂದ ಹೃದಯದಲ್ಲಿ ನಿನ್ನ ವಿಷಯವಾಗಿ ಸಿಟ್ಟುಗೊಂಡಿದ್ಧಾನೋ ? ಪೂರ್ವದಲ್ಲಿ ಯಾವಾಗಲೂ ಯಾವರೀತಿಯಿಂದಲೂ ಹೀಗೆ ಕೋಪಗೊಂಡಿರಲಿಲ್ಲ. ಈಗ ನಿನ್ನ ಮೇಲೆ ಕೋಪಗೊಳ್ಳುವದಕ್ಕೆ ಕಾರಣ ವೇನು ? ಹೇಳು. ಶಿವಪೂಜೆಯ ವೇಳೆಗಳನ್ನು ಮೀರಿದೆಯೋ ? ಉತ್ತಮವಾದ ಸದಾಚಾರವ್ರತಕ್ಕೆ ಲೋಪವನ್ನು ಮಾಡಿದೆಯೋ ? ಪರಿಶುದ್ಧರಾದ ಜಂಗಮರು ಮನೆಗೆ ಬಂದಿರುವಲ್ಲಿ ಆಲಸ್ಯದಿಂದ ಅವರನ್ನು ಪೂಜಿಸಲಿಲ್ಲವೋ ? ಶಿವಪೂಜೋಪಕರಣಪಾತ್ರೆಗಳನ್ನು ಬೆಳಗಲಿಲ್ಲವೋ ? ಬರಣಿಗಳನ್ನು ಹೆಚ್ಚು ಕಡಿಮೆಯಾಗಿ ಮಡಗಿದೆಯೋ ? ಬಟ್ಟಲುಗಳನ್ನ ಚನ್ನಾಗಿ ತೊಳೆಯಲಿಲ್ಲವೋ ? ಗೋಮಯದಿಂದ ನೆಲವನ್ನು ಸಾರಿಸಲಿಲ್ಲವೋ? ಗೋಮಯದಲ್ಲಿದ್ದ ಹುಳುಗಳು ನಾಶವನ್ನು ಹೊಂದಿದವೋ ? ರಂಗವಲ್ಲಿಯು ಸಂಪೂರ್ಣವಾಗಿರಲಿಲ್ಲವೋ ? ಕಮಲಗಳು ಒಡೆದು ಹೋದವೋ ? ಶ್ರೀಗಂಧವು ಮಲಿನವಾಯಿತೋ ? ಜಲವನ್ನು ಬಟ್ಟೆಯಲ್ಲಿ ಶೋಧಿಸಲಿಲ್ಲವೋ ? ಒದ್ದೆಯನ್ನು ಒರಸತಕ್ಕ ವಸ್ತ್ರವು ಕೊಳೆಯಾಗಿರುವಲ್ಲಿ ಅದನ್ನು ತೊಳೆಯಲಿಲ್ಲವೋ? ಒರಟಾಗಿಯೂ, ಸುವಾಸನೆಯಿಲ್ಲದಾಗಿಯೂ ಇರುವ ಹಳೇ ಹೂವನ್ನು ಶೋಧಿಸಿದ ಹೂವುಗಳೊಡನೆ ಬೆರಸಿದೆಯೋ ? ಗುಗ್ಗುಳ ಧೂಪವು ಸಾಲದೆ ಹೋಯಿತೋ ? ಗುಗ್ಗುಳದ ರಸವುಹೆಚ್ಚಾದದ್ದರಿಂದ ಧೂಪವರ್ತಿಯಲ್ಲಿದ್ದ ಬೆಂಕಿಯು ಆರಿಹೋಯಿತೋ ? ಆರತಿಯದೀಪಗಳು ನಿತ್ಯನೇಮದ ಸಂಖ್ಯೆಗಿಂತಲೂ ಕಡಮೆಯಾದವೋ ? ಏಕಾರತಿ ಮೊದಲಾದ ಆರತಿಗಳನ್ನು

ಕ್ರಮವಾಗಿ ಕೊಡಲಿಲ್ಲವೋ? ಎರಡು ಕಡೆಗಳಲ್ಲಿಯೂ ಇಟ್ಟಿದ್ದ ದೀಪಗಳು ಬಲವಾದ ಪ್ರಕಾಶ ವುಳ್ಳವುಗಳಾಗಿರಲಿಲ್ಲವೋ? ದೀಪದಬತ್ತಿಯ ತುದಿಯನ್ನು ಬಹಳವಾಗಿ ಎತ್ತಿದ್ದರಿಂದ ಸೆಕೆಯು ಎದ್ದಿತೋ? ಶಿವನಿಗೆ ನೈವೇದ್ಯವನ್ನು ಸಮರ್ಪಿಸುವ ಸಮಯದಲ್ಲಿ ನಿನ್ನಮನಸ್ಸು ಅದರಲ್ಲಿ ಆಶೆಯುಳ್ಳದ್ದಾಯಿತೋ? ಶಿವನಿಗೆ ನಿವೇದಿಸುವದಕ್ಕೆ ಯೋಗ್ಯವಾದ ಪದಾರ್ಥಗಳ ಕೂಡ ನಿವೇದನ ಮಾಡಿದ ವಸ್ತುವನ್ನು, ಮಿಶ್ರಮಾಡಿದೆಯೋ? ಗುರು, ಲಿಂಗ ಜಂಗಮ ಪಾದ ತೀರ್ಥಗಳಲ್ಲಿ ಒಂದಕ್ಕೊಂದನ್ನು ಬೆರಸಿದೆಯೋ? ಪ್ರಸಾದದಲ್ಲಿ ಅನ್ನವೆಂಬ ಬುದ್ಧಿಯನ್ನು ಮಾಡಿದೆಯೋ? ಹೇಳಿದಕೆಲಸವನ್ನು ಆಕ್ಷಣವೇ ಮಾಡಲಿಲ್ಲವೋ? ಕರೆದರೂ ಸುಮ್ಮನಿದ್ದೆಯೋ? ಪ್ರತಿಕೂಲವಾಗಿ ಉತ್ತರಕೊಟ್ಟೆಯೋ? ಕ್ರೀಡಾವಿನೋದದಿಂದ ಪರವಶೆಯಾಗಿ, ಭೀತಿಯನ್ನೇ ಬಿಟ್ಟೆಯೋ? ಕಿವಿಗೆ ಮಾತುಬೀಳಲಿಲ್ಲವೋ? ವಿರೋಧವಾಗಿನಡೆದೆಯೋ? ಈ ಗುಣವು ನಿನಗೆ ಯಾವಾಗಲೂ ಇಲ್ಲ. ನೆರೆಮನೆಗೆಹೋಗಿ, ಬಹಳ ಹೊತ್ತಿನತನಕ ಅಲ್ಲಿಯೇ ಇದ್ದೆಯೋ? ತಂದೆಯು ಕೋಪಗೊಂಡಿರುವದಕ್ಕೆ ಕಾರಣವೇನು? ಕೋಪವನ್ನು ಬಿಟ್ಟರೆ ನಮ್ಮ ಸಂಗಡಮಾತನಾಡುತ್ತಾನೆ, ಶಿವಾರ್ಚನೆಯನ್ನು ಮಾಡುವದಕ್ಕೆ ಬರುತ್ತಾನೆ. ಗುರುವನ್ನು ನಮಸ್ಕರಿಸುವದಕ್ಕೆ ಹೋಗುತ್ತಾನೆ. ತಾಯಿ? ಆಮೇಲೆಹೋಗಿ ಚಿಲಿಮೆಯನ್ನು ತೆಗೆಯುವದಕ್ಕಾಗುವದಿಲ್ಲವೇ? ಅಲ್ಲಿವರಿಗೆ ಕೋಪವನ್ನು ಶಾಂತಿಗೊಳಿಸೋಣ. ಕೋಪವನ್ನು ಸಮಾಧಾನಗೊಳಿಸುವದಕ್ಕಾಗಿ ನಾವಿಬ್ಬರೂ ಪಾದಗಳಿಗೆ ಅಡ್ಡಬಿದ್ದುನಿಂತುಕೊಳ್ಳೋಣ. ಶೀಘ್ರದಲ್ಲಿಬಾ. ಈ ರೀತಿಯಾಗಿ ಹೇಳಿ, ತನ್ನ ಸೀರೆಯನ್ನು ಹಿಡಿದೆಳೆಯಲು; ತಾಯಿಯು ಮಗನನ್ನು ಕುರಿತು ಸ್ವಲ್ಪಕೋಪಗೊಂಡವಳಾಗಿ;—ಎಲೈ ಮಗನೇ? ನೀನು ದುರ್ಭಾಶೆಗಳನ್ನು ಅಭ್ಯಾಸಮಾಡಿದವನಾಗಿದ್ದೀಯೆ. ಇದೇನು ಅವಿವೇಕದಮಾತುಗಳು ಸಾಕು. ಚಿಲಿಮೆಯನ್ನು ತೆಗೆದರೆ ನಿನ್ನ ತಂದೆಯು ಕೋಪವನ್ನು ಬಿಡುತ್ತಾನೆ. ಆದ್ದರಿಂದ ಚಿಲಿಮೆಯನ್ನು ತೆಗೆದು ಬರುತ್ತೇನೆ. ನೀನುಹೋಗಿಮಲಗಿಕೋ? ನಿಮ್ಮ ತಂದೆಗೆ ಮಾಡತಕ್ಕದ್ದನ್ನು ಮಾಡಿಕೊಟ್ಟು, ಇನ್ನುಮೇಲೆ ಕೋಪದಿಂದ ಒಂದುಮಾತನ್ನೂ ಆಡದಂತೆ ಬಿಗಿಮಾಡಿ; ನಿನ್ನನ್ನು ಎಚ್ಚರಿಸುತ್ತೇನೆ. ಅಲ್ಲಿಯತನಕ ಮಲಗಿರು. ನಿನ್ನತಂದೆಯ ಕೋಪವನ್ನು ಸಮಾಧಾನಗೊಳಿಸುವದು ಸಾಧ್ಯವಾಗಿದೆ. ಎಂದುಹೇಳಿ, ಮಗನ ಕೈಯನ್ನು ಬಲಾತ್ಕಾರದಿಂದ ಬಿಡಿಸಿಕೊಂಡು, ಗಂಡನನ್ನು ನೋಡಿ, ನಕ್ಕು, ತಿರಗಿ ಹಳ್ಳ

ವನ್ನು ತೋಡುತ್ತಾ ಇದ್ದಳು. ಅನಂತರದಲ್ಲಿ ಆ ಮಗುವು ದುಗುಡದಿಂದ ಮನಸ್ಸಿನಲ್ಲಿ ಕಳವಳಪಟ್ಟು, ತನ್ನ ತಂದೆಯಕೂಡ ಗುರುವಿನಮನೆಗೆ ಹೋಗುತ್ತಿದ್ದ ರೀತಿಯಿಂದ, ತಾನೊಬ್ಬನೇ ಗುರುವಿನ ಮನೆಗೆಹೋಗಿ, ನಾದವೆಂಬ ಅಮೃತರಸದ ಸಮುದ್ರದಲ್ಲಿಮುಳುಗಿರುವ ಮಾದರಸನೆಂಬ ಗುರುವನ್ನು ನಮಸ್ಕರಿಸಿ;-ಸ್ವಾಮಿಾ ಈಗ ನನ್ನತಂದೆಯು ನನ್ನ ತಾಯಸಂಗಡ ಮಾತನಾಡುವದಿಲ್ಲ. ನೀನೇ ಬಂದು ಈ ಕೋಪವನ್ನು ಸಮಾಧಾನಗೊಳಿಸುವದಕ್ಕೆ ಸಮರ್ಥನಾಗಿದ್ದೀಯೆ. ಇದು ಕಪಟವು ಅಪರಾಧವು ಎಂದು ಯಾವಕಾರಣವನ್ನೂ ಹೇಳುವದಿಲ್ಲ. ಹರಕುಬಜಿರ್ವಾಸವನ್ನು ನೋಡಿ, ತಾವು ದಯಪಾಲಸಿದ ಕಾವಿಯುಬಟ್ಟೆಯನ್ನು ಈಗ ಚೆನ್ನಾಗಿ ಹೊದ್ದುಕೊಂಡು, ಸರ್ವಾಂಗಕ್ಕೂ ಭಸ್ಮವನ್ನು ಧರಿಸಿದವನಾಗಿ, ಕಂಬವನ್ನು ಒರಗಿಕೊಂಡು ತುಳಿತಿದ್ದಾನೆ ಸ್ವಲ್ಪವೂ ಅಲ್ಲಾಡುವದಿಲ್ಲ. ಹೊಸನೇಮವನ್ನು ಹಿಡಿದನು. ನನ್ನ ತಾಯಿಯು ಶಿವಪೂಜಾಸ್ಥಳದಲ್ಲಿ ಜಿಲಿಮೆಯನ್ನು ತೆಗೆಯುತ್ತಾ; ಇದನ್ನು ತೆಗೆಯದಿದ್ದರೆ ಈತನು ತನ್ನ ಕೋಪವನ್ನು ಬಿಡುವದಿಲ್ಲವೆಂದು ನಕ್ಕಳು. ನನ್ನ ತಾಯಿಯಮೇಲೆ ಕೋಪಿಸಿಕೊಳ್ಳಲಿ, ಪೂರ್ವದಲ್ಲಿನನ್ನನ್ನು ನನ್ನಪ್ರಾಣಗಳನ್ನಾಗಿ ತಿಳಿದಿದ್ದನು. ಈಗ ನನ್ನೊಡನೆ ಮಾತನಾಡುವದಿಲ್ಲ. ಇದು ಪರಮಾಶ್ಚರ್ಯವು. ಹಿಂದೆ ನನ್ನನ್ನು ನೋಡಿದ ಮಾತ್ರದಿಂದ, ಮಂದಹಾಸದಿಂದ ಕೂಡಿದಮುಖವುಳ್ಳವನಾಗಿರೋಮಾಂಚದಿಂದ ವ್ಯಾಪ್ತವಾದ ದೇಹವುಳ್ಳವನಾಗಿ,-ಬಾಲಲಿಂಗೈಯ್ಯನೇ ಬಾ. ಎಂದು ಕರೆದು. ಕಯ್ಗಗಳನ್ನು ಮುಂದಕ್ಕೆನೀಡಿ, ಸಂತೋಷಿಸುತ್ತಿದ್ದನು. ನಾನು ಎದುರಿಗೆ ಬಂದರೆ ತನ್ನ ಎದೆಯನ್ನು ಕೊಟ್ಟು ಕಯ್ಗಳಿಂದ ಆಲಿಂಗಿಸಿಕೊಂಡು ತೊಡೆಯಮೇಲೆ ಕುಳ್ಳಿರಿಸಿಕೊಂಡವನಾಗಿ ನನ್ನ ಜುಲುಪನ್ನು ಮೆಲ್ಲಗೆ ಕೆರೆಯುತ್ತಿದ್ದನು. ಜಡೆಯನ್ನು ಹೆಣೆದು ನೂತನವಾದ ಹೂವನ್ನು ಮುಡಿಸುತ್ತಿದ್ದನು. ಹಣೆಯಮೇಲೆ ವಿಭೂತಿಯನ್ನು ಧರಿಸಿ, ಕಣ್ಣಿಗೆ ಕಾಡಿಗೆಯನ್ನು ಹಚ್ಚುತ್ತಿದ್ದನು. ತಲೆಯನ್ನು ಮೇಲಕ್ಕೆಎತ್ತಿ ಹುಸಿನಗೆಯೊಡನೆ ನನ್ನ ಮುಖವನ್ನು ನೋಡುತ್ತಿದ್ದನು. ನನ್ನ ಎರಡು ಪಕ್ಕಗಳನ್ನೂ ತನ್ನ ಎರಡು ಕೈಗಳಿಂದ ಸವರಿ, ಕಂಕುಳಲ್ಲಿ ಬೆರಳನ್ನಿಟ್ಟು, ವಿನೋದದಿಂದ ನಗಿಸುತ್ತಿದ್ದನು. ನನ್ನ ಮಾತನ್ನು ಕೇಳುವುದಕ್ಕೆ ಅಪೇಕ್ಷಿಸುವನು. ಮುದ್ದನ್ನು ಬೇಡುವನು. ಪಂಚಾಕ್ಷರವನ್ನು ಹೇಳಿಸಿ, ಸಂತೋಷದಿಂದ ಮುದ್ದಿಡುವನು. ನೀನು ಬಸವೇಶನ ಮನೆಯ ಗೌಡಿಯ ಮಗನೋ ? ಮುಸುಡಿಚೌಡಯ್ಯನ ಮೊಮ್ಮಗನೋ ? ಸುರುಗಿಚೌಡ

ಯ್ಯನ ಪರಿಚಾರಕನೋ ? ಕರಿಕಾಲಚೋಳರಾಯನ ಕತ್ತಿಯ ಊಳಿಗದವನೋ? ಕಕ್ಕಯ್ಯನ ದ್ವಾರಪಾಲಕನೋ ? ಚಿಕ್ಕಬಸವಯ್ಯನ ಶಿಷ್ಯನೋ ? ಸಿರಿಯಾಳನ ಪ್ರಿಯಮಿತ್ರನೋ ? ಪಂಡಿತಾರಾಧ್ಯನ ಮೊಮ್ಮಗನೋ ? ತೆಲಗುಬೊಮ್ಮಯ್ಯನ ಬೇಟೆಯಾಳೋ ? ಕಲಕೇತಬೊಮ್ಮಯ್ಯನ ಜೀತದವನೋ ? ಸೊಡ್ಡಳಭಾಸ್ಕರೈಯ್ಯನ ಕೂಸೋ ? ನಿಂಬಿಯಮ್ಮನ ಮಗನೋ ? ಅಮ್ಮವ್ವೆಯ ಸಾಕುಮಗನೋ ? ಎಲೇಶಕೇತಯ್ಯನ ಮನೆಯ ದನಗಳನ್ನು ಕಾಯುವವನೋ ? ಮೋಳಿಗೇಮಾರಯ್ಯನ ಬೊಕ್ಕಸದ ಗೊಲ್ಲನೋ ? ಶಂಕರದಾಸಯ್ಯನ ಕಿಂಕರನೋ ? ಸುಂಕದ ಬಂಕಯ್ಯನ ಸಂಬಳದಾಳೋ ? ಪ್ರಭುದೇವನ ಸ್ನಾನಕ್ಕೆ ಜಲವನ್ನು ಕೊಡುವವನೋ ? ಚನ್ನಯ್ಯನ ಊಟದಾಳೋ? ಕಿನ್ನರಯ್ಯನ ಸ್ವಂತಮಗನೊ? ಸತ್ಯೇಶಚಾಮರಸಯ್ಯನ ಪ್ರಸಾದಿಕನೋ ? ಜೇರಮಯ್ಯನ ಕುದುರೆಯವನೋ? ಸಿದ್ಧರಾಮನ ಯುದ್ಧದಾಳೋ ? ಮಾದಿರಾಜಯ್ಯನ ಗುಣಾಢ್ಯನಾದ ಮೊಮ್ಮಗನೋ? ಅಥವಾ ಚಿಕ್ಕಮಾದಣ್ಣ ಮಹಾದೇವಿಯರ ಮಗನೋ ? ಎಂದು ಹೇಳಿ, ಬಾರಿಬಾರಿಗೂ ಮುದ್ದಿಡುವನು. ಬಹುಸಂತೋಷದಿಂದ ಕುಣಿಯುವನು. ನಾನು ಸ್ವಲ್ಪ ಹಸಿದಿರುವಲ್ಲಿ ನನ್ನ ತಾಯಿಯನ್ನು ಕುರಿತು;—ಈ ಹುಡುಗನಿಗೆ ಶೀಘ್ರವಾಗಿ ಊಟಕ್ಕೆ ನೀಡುವುದಕ್ಕೆ ಮತ್ತೊಂದು ಕಯ್ಯಾಗಬೇಕೆ ? ಯಾಕೆ ಹೀಗೆ ಸಾವಕಾಶಮಾಡುತ್ತೀಯೆ ? ಎಂದು ಬಹು ಪ್ರೀತಿಯಿಂದ ಹೇಳುವನು. ಬಾಲಲಿಂಗನು ಹಸಿದನು. ಬೇರೇ ಕೆಲಸಗಳಿಂದೇನು ಫಲವು ? ಬಾಲಲಿಂಗನಿಗೆ ಭೋಜನವನ್ನು ಮಾಡಿಸುವದಕ್ಕಾಗಿ ಬೇಗಬಾ. ಎಂದು ನನ್ನ ತಾಯಿಯನ್ನು ಕರೆಯುವನು. ಆಕೆಗೇನಾದರೂ ಬೇರೇ ಕೆಲಸವಿದ್ದರೆ, ತಾನೇ ತುತ್ತುಮಾಡಿ ಮೆಲ್ಲನೆ ನನಗೆ ಊಟವನ್ನು ಮಾಡಿಸುವನು. ನಿಮ್ಮ ಸನ್ನಿಧಿಗೆ ಬರುವಲ್ಲಿ ನನ್ನನ್ನು ಎದೆಯಲ್ಲಿ ಅವಚಿಕೊಂಡು ಬರುವನು. ನನ್ನ ತಂದೆಯು ಮೂಢರಂತೆ ಮಗನೆಂಬ ಭ್ರಾಂತಿಯಿಂದ ನನ್ನಲ್ಲಿ ಪ್ರೇಮವನ್ನಿಟ್ಟಿರಲಿಲ್ಲ. ಮತ್ತೇನಂದರೆ;—ತಾನು ಆರಾಧಿಸುವ ಸ್ವಾಮಿಯ ನಾಮವುಳ್ಳವನೆಂಬ ಭಾವದಿಂದ ಪ್ರೇಮವನ್ನಿಟ್ಟಿದ್ದನು. ಭೂಲೋಕದಲ್ಲಿ ಮಕ್ಕಳಿಗೆ ಯಾವ ಆಟಗಳುಂಟೋ ಆ ಆಟಗಳೆಂಬೆಲ್ಲಾ ನನ್ನನ್ನಾಡಿಸುವನು. ಹೀಗೆ ಪೂರ್ವದಲ್ಲಿ ನನ್ನಮೇಲೆ ಪ್ರೇಮವುಳ್ಳವನಾಗಿದ್ದನು. ಈಗ ಏನು ಕೋಪವೋ? ಮುಂದುಗಡೆನಿಂತು ಎಷ್ಟು ಕರೆದರೂ ಕೇಳುವದಿಲ್ಲ. ಆಹಾ ! ನಾನು ಸಮಯೋಚಿತವಾದ ಸ್ನಾನವೇಳೆಗಳನ್ನು ಮೀರಿದವ

ನಲ್ಲ. ಹುಡುಗರೊಡನೆ ಆಡುವದಕ್ಕೆ ಯಾವಾಗಲೂ ಹೋದವನಲ್ಲ. ಬೀದಿಯು ಲ್ಲಿಮಾರತಕ್ಕ ಹಣ್ಣುಗಳನ್ನು ನೋಡಿ, ಇಚ್ಛೈಸಿದವನಲ್ಲ, ಅವುಗಳು ನನಗೆ ಬೇಕೆಂದು ತೊಂದರೆಪಡಿಸಿದವನಲ್ಲ. ಲಿಂಗಕ್ಕೆ ಸಮರ್ಪಿಸಲ್ಪಡದ ಯಾವದೊಂದು ವಸ್ತುವನ್ನಾದಾಗ್ಯೂ ಒಂದು ಕಾಲದಲ್ಲಿಯೂ ತಿಂದವನಲ್ಲ. ಸಿಟ್ಟುಗೊಳ್ಳುವದಕ್ಕೆ ಯೋಗ್ಯವಾದ ಅಯುಕ್ತಕಾರ್ಯವನ್ನು ಮಾಡಿದವನಲ್ಲ. ಹೀಗಿದ್ದಾಗ್ಯೂ ನನ್ನಮೇಲೆ ಕೋಪಿಸಿಕೊಂಡಿರುವದು ಆಶ್ಚರ್ಯಕರವಾಗಿ ತೋರುತ್ತೆ. ಇಂಥಾ ಕೋಪವೂ ಕ್ಷಣಮಾತ್ರದಲ್ಲಿ ನಿಮ್ಮಿಂದ ಶಾಂತವಾಗದೇ ಇದ್ದೀತೇ? ಎಲೈ ಸ್ವಾಮಿಯೇ! ಶೀಘ್ರದಲ್ಲಿ ನನ್ನೊಡನೆ ಬರಬೇಕು. ಎಂದು ಪ್ರೀತಿಯಿಂದ ಬಗ್ಗಿ ಬಹುದುಃಖದಿಂದ ಪಾದಗಳನ್ನು ಹಿಡಿದು ಗದ್ಗದದಿಂದ ಕೂಡಿದ ಮಾತುಗಳುಳ್ಳವನಾಗಿ ಅನೇಕಸಾರಿ, ನಮಸ್ಕರಿಸಿ, ಎದೆಯಲ್ಲಿರುವ ತನ್ನ ಇಷ್ಟಲಿಂಗವನ್ನು ಕಂಕುಳಲ್ಲಿ ಸೇರಿಸಿಕೊಂಡು ಏಳುವನು. ಮರಳಿ ಅಡ್ಡಬಿದ್ದು ಮತ್ತೆ ಬಹಳವಾಗಿ ಅಳುವನು. ನಿಮ್ಮನ್ನುಬಿಟ್ಟರೆ ಮತ್ತೊಬ್ಬನಿಂದ ರೋಗವು ಹೋಗುವದಿಲ್ಲವೆಂದು ಹೇಳುತ್ತಾ, ಆತನ ಉತ್ತರೀಯ ವಸ್ತ್ರವನ್ನು ಹಿಡಿದುಕೊಂಡು ಬಲಾತ್ಕಾರದಿಂದ ಎಳೆಯುವನು. ಈ ಪ್ರಕಾರವಾಗಿ ಆ ಬಾಲಲಿಂಗಯ್ಯನು ದುಃಖಿಸುತ್ತಿರಲು, ಕರುಣಾಸಮುದ್ರನಾದ ಮಾದರಸನು ಪ್ರಕಾಶಿಸುವ ದಂತಕಾಂತಿಯಿಂದ ಮನೋಹರವಾದ ಮಂದಹಾಸದಿಂದ ಕೂಡಿದ ಮುಖವುಳ್ಳವನಾಗಿ ಲೋಕದಲ್ಲಿ ಮನೆಮನೆಗೂ ಸದಾಚಾರವಂತರಿದ್ದಾರೆ. ಈರೀತಿಯಾಗಿ ಮನೆಯೊಳಗೆ ಚಿಲುಮೆಯನ್ನು ಮಾಡಿಕೊಳ್ಳುವದಿಲ್ಲ. ಕೋಪಗೊಂಡವರು ಹೆದರಿಸುತ್ತಾರೆ. ಅಥವಾ ಹೊಡೆಯುತ್ತಾರೆ. ಮಾತನಾಡದೆಯೂ ಅಲ್ಲಾಡದೆಯೂ ಸುಮ್ಮನೆ ಕುಳಿತುಕೊಳ್ಳುತ್ತಾರೆಯೇ? ಇಂಥ ಮುಗ್ಧರಾದಹುಡುಗರು ಎಲ್ಲಿಯಾದರೂ ಇದ್ದಾರೆಯೇ? ಈ ಹುಡುಗನ ಮಾತಿನಿಂದ ನನ್ನ ಮನಸ್ಸಿಗೆ ಬೇರೇ ವಿಧವಾಗಿ ತೋರುತ್ತದೆ. ಇದೇನು ಶಿವಾಜ್ಞೆಯೋ? ಹೋಗುತ್ತೇನೆ ಎಂದು ಎದ್ದನು.

ಬಳಿಕ ದೇವತಾಸಾರ್ವಭೌಮನಾದ ಪರಶಿವನೇ! ನಾನು ಯಾವಾಗಲೂ, ಉತ್ತಮವಾದ ಸಾಲೋಕ್ಯಾದಿಗಳನ್ನು ಅಪೇಕ್ಷಿಸುವದಿಲ್ಲ. ಈ ವಿಷಯದಲ್ಲಿ ನೀನೇ ಪ್ರಮಾಣವಾಗಿದ್ದೀಯೆ. ಭಕ್ತರಿಗೆ ವರಗಳನ್ನು ಕೊಡುವಂಥ, ದೀನರನ್ನು ರಕ್ಷಿಸುವಂಥ, ಭಕ್ತರಿಗೆ ನಿಧಿಯಾದಂಥ, ಸಕಲೇಶಸ್ವಾಮಿಯೇ! ನನಗೆ ಇದಾಗ ಬೇಕೆಂದು ಹೇಳುವದಿಲ್ಲ. ಆದಕಾರಣದಿಂದ ಈಗ ನನ್ನಮಾತನ್ನು ಕಾಪಾಡು.

ಈ ಪ್ರಕಾರವಾಗಿ ಇಂಪಾಗಿಯೂ ಮನೋಹರವಾಗಿಯೂ ಇರುವ ಒಂದು ಕೀರ್ತನೆಯನ್ನು ಹಾಡುತ್ತಾ, ಮುಗುಳ್ನಗೆಯಿಂ ಕೂಡಿದ ಮುಖವುಳ್ಳವನಾಗಿ, ಚಿಕ್ಕ ಮಾದಣ್ಣನ ಮನೆಗೆ ಬಂದು;-ಎಲೌ ಮಹಾದೇವಿಯೇ! ನೀನು ಮನೆಯೊಳಗೆ ಏನು ಮಾಡುತ್ತೀಯೆ? ನಿನ್ನ ಗಂಡನು ಯಾತಕ್ಕಾಗಿ ಕೋಪಿಸಿಕೊಂಡಿದ್ದಾನೆ. ಈ ರಾತ್ರಿಯಲ್ಲಿ ನಿನ್ನ ಪ್ರಿಯಪುತ್ರನಾದ ಬಾಲಲಿಂಗಣ್ಣನು ಯಾಕೆ ಮನೆಯಿಂದ ಹೊರಟು ಬಂದನು? ಎಂದು ಕೇಳಲು; ಮಹಾದೇವಿಯು ಕಳವಳಗೊಂಡವಳಾಗಿ ಬಂದು, ಗುರುವಾದ ಮಾದರಸನಿಗೆ ನಮಸ್ಕರಿಸಿ, ಭಕ್ತಿಯ ಉದ್ರೇಕದಿಂದ ಮರಳಿ ಮರಳಿ ಸಾಷ್ಟಾಂಗನಮಸ್ಕಾರವನ್ನು ಮಾಡಿದಳು. ಬಳಿಕ ಮಾದರಸ ಮುನಿಯು ಸ್ವಲ್ಪವಾಗಿ ಮನೆಯನ್ನು ಹೊಕ್ಕು;—ಎಲೈ ಚಿಕ್ಕಮಾದಣ್ಣಾ! ಎಲ್ಲಿದ್ದೀಯೆ? ಏನುಮಾಡುತ್ತೀಯೆ? ಏಳುಏಳು. ಶೀಘ್ರವಾಗಿ ಇಲ್ಲಿಬಾ. ಬಹುಬುದ್ಧಿಸಂಪನ್ನನಾದವನೇ! ಲಿಂಗಪೂಜೆಯ ಹೊತ್ತಾಯಿತು. ಯಾಕೆ ಇನ್ನೂ ಇದ್ದೀಯೆ. ಆ ಮೋಕ್ಷಪದವಿಯಲ್ಲಿ ವಿಶೇಷವಾದ ಸೌಖ್ಯವಿದೆಯೋ? ಭೂಮಿಯಲ್ಲಿ ಭಕ್ತಿಮಾರ್ಗವೆಂಬುವದು ನಮಗೇ ಅಧೀನವಾಗಿದೆಯಲ್ಲವೇ? ಆದ್ದರಿಂದ ಚೈತನ್ಯವನ್ನು ಹೊಂದು; ಇನ್ನು ಮೇಲೆ ಮೌನವನ್ನು ಬಿಡು. ಮಾತನ್ನು ಬಿಟ್ಟು ಹೀಗೆ ಹಠವನ್ನು ಮಾಡುವದು ನಮಗೆ ಇಷ್ಟವೇ? ನಿನಗೆ ಕೋಪವೇನಾದರೂ ಇದ್ದರೆ; ಈ ಬಾಲಲಿಂಗಯ್ಯನು ಈಗ ನಿನ್ನ ಕೋಪವನ್ನು ಸಮಾಧಾನಪಡಿಸುವದಕ್ಕೋಸ್ಕರ ಬಂದು, ನಮ್ಮನ್ನು ಬೇಡಿಕೊಂಡು ಕರತಂದಿದ್ದಾನೆ. ಎಂದುಹೇಳಿ, ತನ್ನ ಕರುಣಾದೃಷ್ಟಿಯೆಂಬ ಅಮೃತಸಮುದ್ರವನ್ನು ಆ ಚಿಕ್ಕಮಾದಣ್ಣನ ಮೃತಶರೀರದಮೇಲೆ ಎಲ್ಲಾ ಕಡೆಯಲ್ಲೂ ವಿಶೇಷವಾಗಿ ಹರಿಸಲು; ಆಕ್ಷಣದಲ್ಲಿಯೇ ದೇಹದಲ್ಲಿ ಎಲ್ಲಾ ಕಡೆಯಲ್ಲೂ ಪ್ರಾಣಗಳು ವ್ಯಾಪಿಸಲು, ಚಿಕ್ಕಮಾದಣ್ಣನು ಕಯ್ಯಿಂದ ತಟ್ಟಿದರೆ ನಿದ್ರೆಯಿಂದ ಎಚ್ಚರಗೊಳ್ವಮಾರ್ಗಸ್ಥನಂತೆ ಬೆನ್ನನ್ನು ಅಡ್ಡಲಾಗಿ ಅಲ್ಲಾಡಿಸಿ, ಕೈಬೆರಳುಗಳನ್ನು ಜೋಡಿಸಿ, ಡೊಂಕುಗೊಳಿಸಿ, ಕ್ರಮವಾಗಿ ಬೆವರು ಅವಯವದಲ್ಲೆಲ್ಲಾ ಅಧಿಕವಾಗಿ ವ್ಯಾಪಿಸುತ್ತಿರಲು; ತೋಳುಗಳನ್ನು ತಲೆಯಮೇಲೆ ಗುಂಡಾಗಿಚಾಚಿ, ಹುಬ್ಬುಗಳನ್ನೂ, ಅಳ್ಳೆಗಳನ್ನೂ ನೆಟ್ಟಗೆಮಾಡಿ, ಮತ್ತು ಮೂಗಿನ ಎರಡು ಭಾಗಗಳೂ ಸಂಕೋಚವನ್ನು ಹೊಂದುವಂತೆಯೂ, ತುಟಿಗಳೆರಡೂ ಕೂಡುವಂತೆಯೂ ಸುಖವಾಗಿ ಮೇಲಕ್ಕೆ ಎತ್ತಿ, ದೇಹವನ್ನು ಅಲ್ಲಾಡಿಸಿ ಮೈಮುರಿದುಕೊಂಡು, ಆಕಳಿಸಿ, ಮೆಲ್ಲಗೆ ಶ್ವಾಸೋಚ್ಛ್ವಾಸ

ಗಳನ್ನು ಬಿಡುತ್ತಾ, ಕಣ್ಣುಗಳನ್ನು ಬಿಟ್ಟು, ಆ ಗುರುವನ್ನು ಕಂಡು, ಭೀತಿ, ಸಡಗರ, ಭಕ್ತಿ, ನಡುಕ ಇವುಗಳಿಂದ ಕೂಡಿದವನಾಗಿ, ನಮಸ್ಕಾರವನ್ನು ಮಾಡಿ, ದೈನ್ಯರಹಿತನೇ! ಸೈರಣೆಯಲ್ಲಿ ಆಸಕ್ತನೇ! ತಾಯ್ಮೊಲೆವಾಲನ್ನು ಕುಡಿಯುವದನ್ನು ಹೋಗಲಾಡಿಸಿದವನೇ! ಸಂಸಾರದಲ್ಲುಂಟಾಗುವ ದುಃಖಗಳಿಂದ ಬಿಡಲ್ಪಟ್ಟವನೇ! ಸೀಚರನ್ನು ದೂರೀಕರಿಸಿದವನೇ! ಮನ್ಮಥನ ಸೇನೆಯನ್ನು ಕೊಂದವನೇ! ಪರಮತದ ಸಾಮರ್ಥ್ಯವನ್ನು ಮುರಿದವನೇ! ಪರಮಶ್ರೇಷ್ಠನೇ! ನಾನೇ ಕೃತಾರ್ಥನೂ, ಪುಣ್ಯಶಾಲಿಯೂ ಆಗಿದ್ದೇನೆ. ಎಂಬದಾಗಿ ಸ್ತೋತ್ರವನ್ನು ಮಾಡಿ, ಪತ್ನೀಪುತ್ರರೊಡನೆ ಗುರುಶ್ರೇಷ್ಠಗೆ ನಮಸ್ಕಾರವಂ ಮಾಡಿದನು.

ಅನಂತರದಲ್ಲಿ ಭಕ್ತಗಣಂಗಳು ಬಂದು, ಆಶ್ಚರ್ಯಪಟ್ಟವರಾಗಿ; ಹೇಳಿದ್ದೇನಂದರೆ,—ಪೂರ್ವದಲ್ಲಿ ಪರಶಿವನು ತಂದೆಯಾದ ಸಿರಿಯಾಳ್ವನಭಕ್ತಿಭಾವಕ್ಕೆ ಮೆಚ್ಚಿ ಮಗನಾದ ಚೀಲಾಳನಿಗೆ ಪ್ರಾಣಗಳನ್ನು ಕೊಟ್ಟನು. ಈಗ ನೀನು ಮಗನಾದ ಬಾಲಲಿಂಗಣ್ಣನ ಭಕ್ತಿಗಾಗಿ ತಂದೆಯಾದ ಚಿಕ್ಕಮಾದಣ್ಣನಿಗೆ ಪ್ರಾಣಗಳನ್ನು ಕೊಟ್ಟೆ; ಭಕ್ತರ ಹೃದಯದಲ್ಲಿ ವಾಸಿಸುವ ನಿತ್ಯವಾದ ಸಕಲೇಶಮಾದರಸನೇ! ದೂರದಿಂದಲೇ ನಿನ್ನ ಮೂರ್ತಿಯನ್ನು ದರ್ಶನಮಾಡಿದ ಜನಗಳ ಸಕಲಪಾಪವೂ ಓಡಿಹೋಗುವದಿಲ್ಲವೇ? ಅವಿಧೇಯನಾದಾಗ್ಯೂ ನಿನ್ನ ದರ್ಶನವನ್ನು ಮಾಡಿದವನು ಕೃತಾರ್ಥನಾಗುವನಲ್ಲವೇ? ಬಹಳಮಾತುಗಳಿಂದೇನು? ನಿನ್ನ ಮೈನೆಳಲನ್ನು ಸೋಂಕಿದ ಪ್ರಾಣಿಗಳಸಮಸ್ತ ಸಂಸಾರದುಃಖಗಳೂ ನಾಶವನ್ನೈದಿದವು. ನೀನು ಮುಗುಳ್ನಗೆಯಿಂದ ನೋಡಿದ ಮಾತ್ರಕ್ಕೆ ರೋಗಿಷ್ಠನಾದವನು ಆಕ್ಷಣವೇ ರೋಗರಹಿತನಾಗುವದಿಲ್ಲವೇ? ನೀನು ನೋಡಿದರೆ, ಕುರುಡನಿಗೆ ಕಣ್ಣು ಬರುವದಿಲ್ಲವೇ? ನಿನ್ನ ಕರುಣಾಕಟಾಕ್ಷವು ಬಿದ್ದಮಾತ್ರದಿಂದ ಮುದುಕಾದವನು ಯೌವನಸ್ಥನಾಗುವದಿಲ್ಲವೇ? ನಿನ್ನ ಕಡೆಗಣ್ಣೋಟದಿಂದ ಕಬ್ಬಿಣದಬೊಂಬೆಯು ಚಿಗುರುವದಿಲ್ಲವೇ? ನಿನ್ನ ಕೃಪಾದೃಷ್ಟಿಯಿಂದ ಹೆಣವು ಚೈತನ್ಯವನ್ನು ಹೊಂದುವದಿಲ್ಲವೇ? ನೀನು ಪ್ರೇಮದಿಂದ ನೋಡಿದರೆ, ಕಾಡುಕಿಚ್ಚು ತಣ್ಣಗಾಗುವದಿಲ್ಲವೇ? ನಿನ್ನ ದೃಷ್ಟಿಯಿಂದ ವಿಷವು ಕೂಡ ಅಮೃತವಾಗುವದಿಲ್ಲವೇ? ಎಲೈ ಗುರುವೇ! ಎಲ್ಲಾ ದಿಕ್ಕುಗಳಲ್ಲಿಯೂ ಹರಡಿಕೊಂಡಿರುವ ನಿನ್ನ ಮಹಿಮೆಯುಳ್ಳ ಪ್ರತ್ಯಕ್ಷವಾಗಿರುವಲ್ಲಿ ಬಾಯಿಂದಹೇಳುವದೇಕೆ? ನಿನಗೆ ಮಹಿಮೆಯೆಂಬುವದು ಸ್ವಾಭಾವಿಕವು. ಹೀಗಿರುವಲ್ಲಿ ಬಾಲಕನ ಮೊರೆಯನ್ನು ಕೇಳಿ, ಮನಸ್ಸಿಗೆ ತಂದುಕೊಂಡು,

ಅವನ ಇಷ್ಟಾರ್ಥವನ್ನು ಪೂರೈಸುವದಕ್ಕಾಗಿ ಬಂದು, ಪ್ರಾಣದಾನವನ್ನು ಮಾಡಿದ್ದರಿಂದ ಚಿಕ್ಕಮಾದಣ್ಣನು ಬದುಕಿದನೆಂಬುವದೇನಾಶ್ಚರ್ಯವು? ಎಂದು ಶಿವಭಕ್ತರೆಲ್ಲರೂ, ಹೊಗಳುತ್ತಿರಲು; ಮಾದರಸನು ಚಿಕ್ಕಮಾದಣ್ಣನಿಗೆ ಪ್ರಾಣಗಳನ್ನು ಕೊಟ್ಟನು.

ಬಸವೇಶವಿಜಯದಲ್ಲಿ ಮೂವತ್ತನಾಲ್ಕನೇ ಅಧ್ಯಾಯವು
ಸಂಪೂರ್ಣವು.

## ಮೂವತ್ತೈದನೇ ಅಧ್ಯಾಯವು.

### ಕದಿರರೇಮಯ್ಯನ ಕಥೆ.

ಕರುಣಾಶಾಲಿಯಾಗಿಯೂ, ನಿರ್ಮಲವಾದ ಯಶಸ್ಸುಳ್ಳವನಾಗಿಯೂ, ಉತ್ತಮವಾದ ನಡತೆಯುಳ್ಳವನಾಗಿಯೂ, ನಮಸ್ಕರಿಸಿದವರ ಮನೋವ್ಯಥೆಯನ್ನು ಪರಿಹರಿಸುವವನಾಗಿಯೂ, ಜ್ಞಾನಸ್ವರೂಪನಾಗಿಯೂ, ಶಿವಾಗಮಗಳಲ್ಲಿ ವಿಚಕ್ಷಣನಾಗಿಯೂ, ಪೂಜ್ಯನಾದ ಗುರುಮೂರ್ತಿಯಾಗಿಯೂ, ತೇಜಸ್ಸಿನಿಂದ ಅಲಂಕರಿಸಲ್ಪಟ್ಟವ ನಾಗಿಯೂ, ಲೋಕದಲ್ಲಿ ವಿಧಿನಿಷೇಧಗಳನ್ನು ಮೀರಿದಂಥ ಮುಕ್ತಿಯನ್ನು ಕೊಡುವಂಥ ಸತ್ಕರ್ಮಗಳಿಗೆ ಸಾರ್ವಭೌಮನಾಗಿಯೂ, ಇರುವ ಕದಿರರೇಮಯ್ಯನೆಂಬ ಭಕ್ತಶಿರೋಮಣಿಯಿದ್ದನು. ಅವನು ಒಂದಾನೊಂದು ದಿನದಲ್ಲಿ ತನ್ನ ಗುರುವನ್ನು ನೋಡವುದಕ್ಕಾಗಿ ಹೋಗುತ್ತಾ ಮಧ್ಯಮಾರ್ಗದಲ್ಲಿ ಯಾವದೋ ಒಂದು ಊರಿನ ಸಮೀಪದಲ್ಲಿ ಶಿವಪೂಜಾಸಮಯವು ಪ್ರಾಪ್ತವಾಗಲು "ಶಿವಾರ್ಚನಾತಿಕ್ರಮಣಂ ಮಹಾದೋಷಸ್ಯ ಕಾರಣಂ" ಎಂವರೆ—(ಶಿವಪೂಜೆಯು ಕಾಲವನ್ನತಿ ಕ್ರಮಿಸುವದು ಮಹಾಪಾಪಕ್ಕೆ ಕಾರಣವು) ಎಂದು ಶಿವಪುರಾಣಗಳಲ್ಲಿ ತಿಳಿದಿದ್ದವನಾದದ್ದರಿಂದ ತ್ರಿಕಾಲಪೂಜಾವ್ರತವು ಕೆಟ್ಟುಹೋಗಬಾರದೆಂದು ಆಲೋಚಿಸಿ ಶಿವಾರ್ಚನೆಗೋಸ್ಕರ ಒಬ್ಬ ಶಿವಭಕ್ತನ ಮನೆಗೆ ಹೋದನು. ಆ ಭಕ್ತನು ಬಹುಭಕ್ತಿಯಿಂ

ದ ಪತ್ನೀಪುತ್ರರೊಡನೆ ನಮಸ್ಕರಿಸಿ, ಲಿಂಗಪೂಜೆಗೆ ತಕ್ಕದ್ದನ್ನು ಒದಗಿಸಿಕೊಟ್ಟನು. ಕದಿರೆರೇಮಯ್ಯನು ಶಿವಪೂಜೆಯನ್ನು ಮಾಡಿ, ಭೋಜನವನ್ನು ಮಾಡುತ್ತಿರಲು, ಆ ಭಕ್ತನು ನಮಸ್ಕರಿಸಿ, ಆತನ ಪ್ರಸಾದವನ್ನು ತೆಗೆದುಕೊಂಡನು. ಆತನ ಹುಡುಗನೂಕೂಡ ಅಡ್ಡಬಿದ್ದು, ಪ್ರಸಾದವನ್ನು ಪಡೆದುಕೊಂಡು ತನ್ನ ತಾಯಿಯ ಸಂಗಡ ಊಟವಂ ಮಾಡಿದನು.

ಅನಂತರದಲ್ಲಿ ಕದಿರೆರೇಮಯ್ಯನು ತನ್ನ ಗುರುವಿನ ಸನ್ನಿಧಾನವನ್ನೈದಿ, ಆತನ ಕರುಣಾರಸವೆಂಬ ಕ್ಷೀರಸಮುದ್ರದಲ್ಲಿ ಮುಳಿಗಿದವನಾಗಿದ್ದನು. ಹೀಗಿರುವಲ್ಲಿ ಕದಿರೆರೇಮಯ್ಯನಿಗೆ ಲಿಂಗಪೂಜೆಗೆ ಯೋಗ್ಯವಾದ ಪದಾರ್ಥವನ್ನು ಒದಗಿಸಿಕೊಟ್ಟ ಭಕ್ತನ ಹೆಂಡತಿಯು, ಬೆರಣಿಗಳನ್ನು ತರುವುದಕ್ಕಾಗಿ ಹಿತ್ತಲಿಗೆಹೋದಳು. ಆಕೆಯಮಗನು ತನ್ನ ತಾಯಿಯಹಿಂದೆ ಹೋಗುತ್ತಿರಲು ಒಂದಾನೊಂದು ದೊಡ್ಡ ನಾಗರಹಾವು ಬಂದು, ಆ ಹುಡುಗನನ್ನು ಕಚ್ಚಿತು. ಆಗ ಆ ಮಗನು ಶಿವಾಜ್ಞೆಯೆಂದು ತಿಳಿದು ನಗುತ್ತಾ ತನ್ನ ತಾಯಿಯನ್ನು ಕುರಿತು;— ತಾಯಿಾ! ಇಲ್ಲಿ ಸರ್ಪವಿದೆ, ಬರಬೇಡ ಎಂದು ಹೇಳುತ್ತಾ ಹಾಗೆಯೇ ಮೃತನಾದನು. ಆಕೆಯು ಅದಕ್ಕೆ, ದುಃಖಪಡದೆ ಮಗನು ಸತ್ತನೆಂದಾಗಲೀ ಶೀಘ್ರದಲ್ಲಿ ವಿಷವೈದ್ಯರನ್ನು ಕರತರಬೇಕೆಂದಾಗಲೀ, ಈ ಕೆಟ್ಟಹಾವು ಎಲ್ಲಿಂದಬಂತು ಎಂದಾಗಲೀ ಹೇಳದೆ, ಹಣೆಯಬರಹವು ಲೋಕದಲ್ಲಿ ಹ್ಯಾಗೆ ವ್ಯರ್ಥವಾದೀತೆಂದು ಹೇಳಿ, ಮನಸ್ಸಿನಲ್ಲಿ ಕಳವಳಪಡದೆ, ಮನಸ್ಸಿನಲ್ಲಿ ನೊಂದುಕೊಳ್ಳದೆ ಶಿವಶಿವಾ! ಎನ್ನದೆ, ಅಯ್ಯೋ ನನಗೆ ಇವನೊಬ್ಬನೇ ಮಗನಿದ್ದನಲ್ಲಾ! ಈ ಪಾಪಿಸರ್ಪವು ನನ್ನ ಮಗುವನ್ನು ಕಚ್ಚಿ, ನನ್ನನ್ನು ಯಾಕೆ ಕಚ್ಚಲಿಲ್ಲವೋ? ಎಲೈ ಶಿವನೇ! ಕಳಿತ ಹಣ್ಣಿದ್ದಾಗ್ಯೂ ಕಸುಗಾಯನ್ನು ಕೀಳುತ್ತೀಯಲ್ಲಾ! ಇದು ನಿನಗೆ ಘನತೆಯೋ? ಎಂದು ಹೇಳದೆ ಎಲೈ ಶಂಭುವೇ! ಹಿತ್ತಲತೋಟಕ್ಕೆ ನುಗ್ಗಿದಕಳ್ಳನು ಪಕ್ವವಾದ ಹಣ್ಣನ್ನು ಕಾಣದೆ, ಕಾಯಿಗಳನ್ನೆಲ್ಲಾ ಕೀಳುವಂತೆವಯಸ್ಸು ಕಳೆದ ನಾವಿರುವಲ್ಲಿ ಈ ಹಸುಮಗನನ್ನು ಕೊಲ್ಲಬಹುದೇ? ಎಂದು ದುಃಖದಿಂದ ಹೇಳದೆ, ನನ್ನಮಗನು ಭಕ್ತರು ಕೊಟ್ಟ ವಿಭೂತಿಯಿಂದಾದರೂ ಬದುಕಲಾರನೇ? ಎಂದು ಉಸುರದೆ, ಎಲೈ ಮಹಾದೇವನೇ! ಭೂಮಿಯಲ್ಲಿ ನಿನ್ನ ಭಕ್ತರ ಒಂದು ಕಷ್ಟವನ್ನಾದರೂ ಪರಿಹರಿಸಬಾರದೇ? ಎಂದು ನುಡಿಯದೆ, ಧರ್ಮವು ತಲೆಯನ್ನು ಕಾಯುತ್ತದೆಯೆಂದು ಜನರು ಬಹಳವಾಗಿ ಹೇಳುತ್ತಾರಪ್ಪೆ. ಆ ಧರ್ಮವಾದರೂ ಈಗ ನನ್ನಮಗನನ್ನು

ರಕ್ಷಿಸುವದು ನ್ಯಾಯುವಲ್ಲವೇ ? ಎಂದು ವಾಚಿಸದೆ, ಎಲೈ ಈಶ್ವರನೇ ? ನಿನ್ನ ಪೂಜೆಯ ಫಲದಿಂದ ನನ್ನ ಮುದ್ದುಮಗನು ಸತ್ತನೆಂದು ಹೇಳದೆ, ಎಲೈ ಶಂಕರನೇ ? ನೀನೇ ನನ್ನ ಮಗುವನ್ನು ತಿನ್ನಬಹುದಾಗಿತ್ತು; ಯಾಕೆ ಆ ಸರ್ಪದಬಾಯಗೆ ತುತ್ತುಮಾಡಿದೆ ? ಎಲೈ ಫಾಲನೇತ್ರನೇ ? ನಿನ್ನ ಕೊರಳಿನಲ್ಲಿ ವಿಷದವುರಿಯೂ, ತಲೆಯಲ್ಲಿ ವಿಷಪ್ರವಾಹವೂ, ಮುಂಗೈಯಲ್ಲಿ ವಿಷಭರಿತವಾದ ದೊಡ್ಡಸರ್ಪವೂ ಯಾವಾಗಲೂ ಇರುವವು. ಹೀಗಿರುವಲ್ಲಿ ನಿನ್ನ ಸೇವಕರಿಗೆ ಸರ್ವಪ್ರಕಾರವಾಗಿಯೂ ಮರಣವುಂಟಾಗದೆ ಇದ್ದೀತೇ ? ಎಂದುಪ್ರಲಾಪಿಸದೆ, ಎಲೈ ಶಂಕರನೇ ? ನೀನು ನನ್ನ ಮಗನ ಪ್ರಾಣಗಳನ್ನು ಕೊಟ್ಟರೆ ನಿನ್ನಮುಂದೆ ನಾಟ್ಯವನ್ನು ಮಾಡುವೆನೆಂಬದಾಗಿ ಯಾದರೂ, ಎಲೈ ವೀರಭದ್ರನೇ ? ಈಗ ನೀನು ಈ ಕಷ್ಟವನ್ನು ನೀಗಿದರೆ; ನಿನ್ನಜಾತ್ರೆಗೆ ಬರುತ್ತೇನೆಂಬದಾಗಿ ಯಾದರೂ, ಎಲೈ ಪ್ರಮಥವರ್‍ಯರೇ ? ನನ್ನ ಮಗನನ್ನು ಬದುಕಿಸಿರಿ, ನಿಮಗೆ ನನ್ನ ಬೆರಳುಗಳಿಂದ ದೀಪಗಳನ್ನು ಅರ್ಪಿಸುತ್ತೇನೆಂಬದಾಗಿ ಯಾದರೂ, ಎಲೌ ಗುಡ್ಡವ್ವೆಯೇ! ಈ ಮಗನನ್ನು ಬದುಕಿಸು; ನಿನ್ನ ಸೇವೆಯನ್ನು ಮಾಡುತ್ತೇನೆ; ಎಂಬದಾಗಿ ಯಾದರೂ ಎಲೈ ಪುರಾತನ ಭಕ್ತರಿರಾ ! ನನ್ನಮಗನ ಪ್ರಾಣಗಳನ್ನು ಕರುಣಿಸಿರಿ. ನಿಮಗೆ ನನ್ನ ಎರಡು ಭುಜಶಿರಸ್ಸುಗಳ ಮಾಂಸಖಂಡಗಳನ್ನು ಒಪ್ಪಿಸುವೆನೆಂಬದಾಗಿ ಯಾದರೂ ಹೇಳದೆ, ಗಂಡಹೆಂಡರಿಬ್ಬರೂ ನಕ್ಕು ಮಗನನ್ನು ನೋಡಿ, ಈಗ ಒಳ್ಳೆದಾಯಿತು. ಈ ಪುತ್ರನು ಪ್ರಮಥಶ್ರೇಷ್ಠರೊಳಗೆ ಸಂದನು ಎಂದು ಸಂತೋಷಿಸಿ, ಯಾರಿಗೂ ತಿಳಿಯದಂತೆ ತಮ್ಮ ಮನೆಯೊಳಗೆ ಶಿವಪೂಜೆಯ ಜಗಲಿಯಲ್ಲಿ ಸಮಾಧಿಯನ್ನು ಮಾಡಿ, ಅದರಲ್ಲಿಟ್ಟು ಸಂಸ್ಕರಿಸಿದರು.

ಅನಂತರದಲ್ಲಿ ಗುರುಭಕ್ತಿತತ್ಪರನಾದ ಕದಿರೆರೇಮಯ್ಯನು ಗುರುಸ್ವಾಮಿಯನ್ನು ಭಕ್ತಿಯಿಂದ ಏಳುದಿವಸಗಳ ಪರ್‍ಯಂತರ ಸೇವಿಸಿ, ಅವರ ಅಪ್ಪಣೆಯನ್ನು ಶಿರಸಾವಹಿಸಿ, ಅವನಿಂದ ಕಳುಹಿಸಲ್ಪಟ್ಟವನಾಗಿ ಅಲ್ಲಿಂದ ಹೊರಟು, ಮುಂಚಿನಂತೆ ಆ ಭಕ್ತನ ಮನೆಗೆ ಬಂದನು. ಆ ಭಕ್ತನು ಕದಿರೆರೇಮಯ್ಯನಿಗೆ ನಮಸ್ಕರಿಸಿ, ಆತನಿಗೆ ಯೋಗ್ಯವಾದ ಉಪಚಾರಗಳನ್ನೆಲ್ಲಾ ಮಾಡಿದನು. ಕದಿರೆರೇಮಯ್ಯನು ಶಿವಪೂಜೆಯನ್ನು ಮಾಡಿ, ಪ್ರಸಾದವನ್ನು ಸೇವಿಸುವ ಸಮಯದಲ್ಲಿ ಆ ದಂಪತಿಗಳನ್ನು ನೋಡಿ, ಸಂತೋಷದಿಂದ ಹೇಳಿದ್ದೇನಂದರೆ:—ಗುಣಾಢ್ಯನಾದ ನಿಮ್ಮ ಮಗನು ಎಲ್ಲಿಗೆ ಹೋದನು? ನಾನು ಬಂದಾಗಿನಿಂದಲೂ ನಾನು

ಕಾಣೆನು. ಅವನನ್ನು ಯಾಕೆ ನೀವು ಕರೆಯುವುದಿಲ್ಲ. ನಿಮಗಿಂತಲೂ ಮುಂಚಿತವಾಗಿಯೇ ತಾನು ನನಗೆ ನಮಸ್ಕರಿಸಿದವನಾಗಿ ನೀವು ಸೇವಿಸುತ್ತಿರುವಲ್ಲಿ ನೋಡಿ ಸಂತೋಷದಿಂದ ತಾನೂ ಭಕ್ತಿತತ್ಪರನಾಗಿದ್ದು, ನನ್ನ ಲಿಂಗಪ್ರಸಾದವನ್ನು ಸ್ವೀಕರಿಸಿದನು. ಆಗ ನಮ್ಮ ಸಮೀಪದಲ್ಲಿಯೇ ಇದ್ದನು. ಈಗ ಇಲ್ಲ. ಮನೆಯಲ್ಲಿಯೇ ಇಲ್ಲವೋ? ಬಾಗಿಲಲ್ಲೇನಾದರೂ ನಿಂತಿದ್ದರೆ, ಅಮ್ಮಾ ಅವನನ್ನು ಕರೆ; ಶೀಘ್ರದಲ್ಲಿ ಬರುತ್ತಾನೆ.

ಈ ಪ್ರಕಾರವಾಗಿ ಕದಿರೆರೇಮಯ್ಯನು ಹೇಳಿದ್ದನ್ನು ಕೇಳಿ, ಆ ಭಕ್ತನ ಹೆಂಡತಿಯು, ಸ್ವಾಮೀ! ನಾನು ಮಗನನ್ನು ಕರಯುವುದಕ್ಕೂ, ಕರೆಯದಿರುವುದಕ್ಕೂ ಶಕ್ತಳಾದ ಚಂಗಳವ್ವೆಯೋ? ಅಸದೃಶಳಾದ ನೀಲಬವ್ವೆಯೋ? ಆಕೆಯ ಮನೆಯ ಗೌಡಿಗೂ ಸಮಳಲ್ಲ; ನನ್ನ ಮಗನನ್ನು ಅಂಥಾ ಸದ್ಭಕ್ತರ ಮಗನನ್ನಾಗಿ ತಿಳಿದು, ಕರೆ ಎಂಬ ಮಾತನ್ನು ಅಪ್ಪಣೆ ಕೊಡಿಸುವುದು ಹ್ಯಾಗೆ ಸಮಂಜಸವಾದೀತು? ಮಗನನ್ನು ಕರೆಯದಿದ್ದಮಾತ್ರಕ್ಕೆ ವೈರಾಗ್ಯವೇನಾಗುವುದು? ಕರೆದಮಾತ್ರದಿಂದ ಸಂಸಾರವೇನಾಗುವುದು? ಎಲೈ ಆಚಾರ್ಯವರ್ಯನೇ! ನಾನು ಮಗನನ್ನು ಕರೆಯುವುದನ್ನೂ ಬಿಡುವುದನ್ನೂ ಕಾಣೆನು. ಕರುಣಾರಸಕ್ಕೆ ಕ್ಷೀರಸಮುದ್ರನಾದವನೇ! ನೀನೇ ತಿಳಿದಿದ್ದೀಯೆ. ನನ್ನ ಮಗನು ನಿಮ್ಮ ಪಾದಗಳ ಅಡಿಯಲ್ಲಿ ಇರುತ್ತಿರುವಲ್ಲಿ ಆ ಮಗುವನ್ನು ಕರೆದದ್ದರಿಂದಾಗಲಿ, ಕರೆಯದಿರುವದರಿಂದಾಗಲಿ ಏನು ಪ್ರಯೋಜನವು? ಎಂದು ಹೇಳಲು; ಆ ಕದಿರೆರೇಮಯ್ಯನು ಆ ಸಮಾಧಿಸ್ಥಲವನ್ನು ಆ ಮಗುವಿನ ತಂದೆಯ ಕೈಯಿಂದ ಅಗಿಸಿ, ಸುತ್ತಲೂ ಇರುವ ಬಿಲ್ವಪತ್ರಗಳ ಸಮೂಹವನ್ನೂ ಭಸ್ಮವನ್ನೂ ತೆಗೆಯಿಸಿ, ಹೆಸರನ್ನು ಹಿಡಿದು ಕರೆದನು. ಕರೆದಕೂಡಲೇ ಆ ಮಗುವು ಮಲಗಿದ್ದವನಂತೆ ಎದ್ದು ರೇಮಯ್ಯನನ್ನು ನೋಡಿ, ಭಕ್ತಿಯಿಂದ ಶರಣಾರ್ಥಿಯೆಂದು ಕೈಗಳನ್ನು ಮುಗಿದನು. ತಾಯಿಯು ಆ ಮಗುವನ್ನು ತೋಳುಗಳಿಂದ ತಬ್ಬಿಕೊಂಡು ಬಂದು ಸ್ತನ್ಯಧಾರೆಗಳು ಸುರಿಯುತ್ತಿರಲು, ಕದಿರೆರೇಮಯ್ಯನಿಗೆ ನಮಸ್ಕಾರವಂ ಮಾಡಿ ಸಂತೋಷದಿಂದ ಆತನಮುಂದೆ ನಿಲ್ಲಿಸಿದಳು. ಆ ರೇಮಯ್ಯನು ಕರುಣಾರಸದಿಂದ ತುಂಬಿಲ್ಪಟ್ಟ ಹೃದಯವುಳ್ಳವನಾಗಿ, ತಂದೆತಾಯಿಗಳಿಗೆ ಅತ್ಯಂತ ಸಂತೋಷವೂ, ಆಶ್ಚರ್ಯವೂ ಉಂಟಾಗುತ್ತಿರಲು, ಅವನಿಗೆ ತನ್ನ ಪ್ರಸಾದವನ್ನು ಕೊಟ್ಟನು.

ಈರೀತಿಯಾಗಿ ಕದಿರೆರೇಮಯ್ಯನು ಸತ್ತು ಏಳು ದಿವಸ ಸಮಾಧಿಯಲ್ಲಿದ್ದ ಮಗುವಿನ ದೇಹಕ್ಕೆ ತನ್ನ ಮಹಿಮೆಯ ಬಲದಿಂದ ಪ್ರಾಣಗಳನ್ನು ಕೊಟ್ಟು, ಭೂಮಂಡಲದಲ್ಲಿ ಪ್ರಸಿದ್ಧನಾದನು.

ಬಸವೇಶವಿಜಯದಲ್ಲಿ ಮೂವತ್ತೈದನೆಯ ಅಧ್ಯಾಯವು
ಸಂಪೂರ್ಣವು.

## ಮೂವತ್ತಾರನೆಯ ಅಧ್ಯಾಯವು.

### ಏಕಾಂತರಾಮಯ್ಯನ ಕಥೆ,

ವೀರಭದ್ರನ ಎರಡನೆಯ ಮೂರ್ತಿಯಾಗಿಯೂ, ಇಂದ್ರಿಯಭೋಗಗಳಲ್ಲಿ ನಿರಪೇಕ್ಷನಾಗಿಯೂ, ಭವಿಸಂಗವನ್ನು ಬಿಟ್ಟವನಾಗಿಯೂ, ಜಗತ್ತನ್ನು ಪರಿಶುದ್ಧಗೊಳಿಸುವ ನೋಟವುಳ್ಳವನಾಗಿಯೂ, ತ್ರಿಭುವನಕ್ಕೂ ಪೂಜ್ಯನಾಗಿಯೂ, ಶೂರನಾಗಿಯೂ, ಬಹಳ ಉದಾರವೂ ಗಂಭೀರವೂ ಆದ ಬುದ್ಧಿಯುಳ್ಳವನಾಗಿಯೂ ಲಿಂಗತತ್ವವನ್ನು ಬಲ್ಲವನಾಗಿಯೂ, ಲಿಂಗಾಭಿಮಾನಿಯಾಗಿಯೂ, ಲೋಕಭಯವಿಲ್ಲದವನಾಗಿಯೂ, ಭಕ್ತಿಯಿಂದ ಅಲಂಕರಿಸಲ್ಪಟ್ಟವನಾಗಿಯೂ, ತನ್ನ ಕೀರ್ತಿಪರಂಪರೆಯಿಂದ ಸಕಲ ದಿಕ್ಕುಗಳನ್ನೂ ಬೆಳಗುವವನಾಗಿಯೂ, ಏಕಾಂತವಾದ ಭಕ್ತಿಯುಳ್ಳವನಾದುದರಿಂದ ಏಕಾಂತರಾಮಯ್ಯನೆಂಬ ಹೆಸರಿನಿಂದ ಪ್ರಸಿದ್ಧನಾಗಿಯೂ ಇರುವ ಒಬ್ಬ ತಪೋನಿಧಿಯು ಆ ಕಲ್ಯಾಣಪಟ್ಟಣದಲ್ಲಿದ್ದನು. ಆತನು ಪ್ರತಿದಿನವೂ ಕೈಲಾಸಕ್ಕೆ ಹೋಗಿ ಬರುತ್ತಿರುವನು. ಯೋಗೀಶ್ವರರಲ್ಲಿ ಶ್ರೇಷ್ಠನಾದ ಆ ಮಹಾನುಭಾವನು ಒಂದಾನೊಂದುದಿನ ಶಿವಾಲಯದಲ್ಲಿ ಕುಳಿತುಕೊಂಡಿರುವಾಗ, ಒಬ್ಬ ಜೈನನು ಕೆರವನ್ನು ಮೆಟ್ಟಿಕೊಂಡು, ಶಿವಾಲಯವನ್ನು ಪ್ರವೇಶಿಸಲು, ಅವನನ್ನು ನೋಡಿ,-ಎಲಾ ಮೂಢಾತ್ಮನೇ! ನೀನು ಅಜ್ಞಾನದಿಂದ ಕೆರಗಳನ್ನು ಮೆಟ್ಟಿಕೊಂಡು ಶಿವಾಲಯವನ್ನು ಪ್ರವೇಶಿಸಿದೆ. ಆ ಕೆರಗಳನ್ನು ಬಿಟ್ಟು, ಶಿವನಿಗೆ ನಮಸ್ಕರಿಸಿ ಹೋಗು. ಇಲ್ಲದಿದ್ದರೆ ಕೆಳಗೆ ಬೀಳುವೆ ಎಂದನು. ಆ ಮಾತನ್ನು ಕೇಳಿದ ಜೈನನು, ನೀನು ಸುಳ್ಳುಮಾತನ್ನಾಡಬೇಡ. ಲೋಕದಲ್ಲಿ

ಜಿನನೇ ದೇವನು, ಅವನ ಆಲಯವೇ ದೇವಾಲಯವು, ಭಕ್ತಿಯನ್ನು ಬೆಳೆಸಿದ ನೀನು ಶಿವಾಲಯಗಳಿಗೆ ಆಶ್ರಯನಾಗಿದ್ದೀಯೆ. ನೀನು ನಿನ್ನ ತಲೆಯನ್ನು ಕತ್ತರಿಸಿಕೊಂಡು, ಶಿವನಿಂದ ತಿರಿಗಿ ಪಡೆದುಕೋ. ಆಗ ಶಿವನೇ ದೊಡ್ಡ ದೇವರು. ನೀನೇ ಶಿವಭಕ್ತನು ಎಂದು ತಿಳಿಯಬಹುದು. ಎಂದು ಕುಹಕವನ್ನು ಮಾಡಲು, ಏಕಾಂತರಾಮಯ್ಯನು ಮನಸ್ಸಿನಲ್ಲಿ ಆಲೋಚಿಸಿ, ತಲೆಯನ್ನು ಕತ್ತರಿಸಿಕೊಂಡು ತಿರಿಗಿ ಶಿವನಿಂದ ಪಡೆದು, ಈ ಜೈನನನ್ನು ಜೈಸಿ, ಆಮೇಲೆ ಇವನ ತಲೆಯನ್ನು ಕತ್ತರಿಸುವುದೇ ನ್ಯಾಯವಲ್ಲದೆ ಮತ್ತೆ ಬೇರೆ ಇಲ್ಲವೆಂದು ನಿರ್ಣಯಿಸಿ, ಆ ಜಿನ ಮುನಿಯನ್ನು ಕುರಿತು ಹೇಳಿದ್ದೇನೆಂದರೆ;—ಎಲಾ ನೀಚಜೈನನೇ! ಶಿರಸ್ಸನ್ನು ಕತ್ತರಿಸಿಕೊಂಡು ಮರಳಿ ಪಡೆಯುವುದು ಅಸಾಧ್ಯವೇ? ಪೂರ್ವದ ಭಕ್ತರ ಮಹಿಮೆಯನ್ನು ನೀನು ಕೇಳಿಲ್ಲವೇ? ಹೇಳುವವರಿಗೂ, ಕೇಳುವವರಿಗೂ ಆಶ್ಚರ್ಯವನ್ನುಂಟುಮಾಡುವ ಅವರ ಚರಿತ್ರೆಯನ್ನು ಹೇಳುವೆನು ಕೇಳು.

ಪೂರ್ವದಲ್ಲಿ ಜಂಬೂರೆಂಬ ಗ್ರಾಮದಲ್ಲಿ ವೀರಮಾಹೇಶ್ವರರಲ್ಲಿ ಉತ್ಕೃಷ್ಟನೂ, ಮಹಾಕಾಳನೆಂಬ ಹೆಸರಿನಿಂದ ಪ್ರಸಿದ್ಧನೂ, ಆದ ಒಬ್ಬ ಶಿವಯೋಗಿಯು ಇದ್ದನು. ಆತನು ತನ್ನ ತಲೆಯನ್ನು ಕತ್ತರಿಸಿ, ಅದರಿಂದ ಶಿವನನ್ನು ಪೂಜಿಸಿ, ಮರಳಿ ಅದನ್ನು ತನ್ನ ಕೊರಳಲ್ಲಿ ಸೇರಿಸಿಕೊಂಡು ಹೋಗಿ ಮಾರಣೇದಿನವೂ ಅದೇ ಶಿರಸ್ಸಿನಿಂದ ಅದೇರೀತಿಯಾಗಿ ಶಿವನನ್ನು ಪೂಜಿಸುತ್ತಿದ್ದನು. ಹೀಗಿರುವಲ್ಲಿ ಗೋವಿಂದ ಭಟ್ಟಾರನೆಂದು ಪ್ರಸಿದ್ಧನಾದ ಮತ್ತೊಬ್ಬ ಭಕ್ತನು ಮಹಾಕಾಳನ ಪೂಜಾಕ್ರಮವನ್ನು ನೋಡಿ, ಮನಸ್ಸಿನಲ್ಲಿ ನಿರ್ಮಾಲ್ಯವಾದ ತಲೆಯಿಂದ ಶಿವನನ್ನು ಪೂಜಿಸುವುದು, ಕೊಟ್ಟು ತೆಗೆದುಕೊಳ್ಳುವುದು, ಇವೆರಡೂ ಯೋಗ್ಯವಲ್ಲ. ಎಂದು ಆಲೋಚಿಸುವವನಾಗಿ ವೀರವ್ರತಾಚರಣೆಯುಳ್ಳವರಲ್ಲಿ ಅಗ್ರೇಸರನಾಗಿಯೂ, ಧೈರ್ಯಶಾಲಿಯಾಗಿಯೂ ಇರುವ ತಾನು ತನ್ನ ತಲೆಯಿಂದ ಶಿವನನ್ನು ಪೂಜಿಸಿ, ಮೂರುದಿವಸದಮೇಲೆ ವಿಕಸಿತವಾದ ಕಮಲಕ್ಕೆ ಸಮಾನವಾದ ಹೊಸ ತಲೆಯನ್ನು ಪಡೆದನು.

ವೀರಶಿರೋಮಣಿಯಾದ ಮೊರಟದಬಂಕನೆಂಬ ಮತ್ತೊಬ್ಬ ಭಕ್ತನು ಆ ಸುದ್ಧಿಯನ್ನು ಕೇಳಿ, ಭಯಂಕರವಾದ ಮಾತನ್ನಾಡಿದನು. ಏನೆಂದರೆ;—ಗೋವಿಂದಭಟ್ಟಾರಕನ ತಲೆಯು ಮೂರುದಿನದಮೇಲೆ ಹುಟ್ಟಿತಲ್ಲವೇ ? ಅಷ್ಟು ದಿನಗಳ ಪರ್ಯಂತರ ಪರಮೇಶ್ವರನು ದೇಶಾಂತರಕ್ಕೆ ಹೋಗಿದ್ದನೋ ? ಮೃತನಾಗಿದ್ದನೋ?

ಈ ಪ್ರಕಾರವಾಗಿ ಹೇಳಿ, ಖಡ್ಗದಿಂದ ತನ್ನ ತಲೆಯನ್ನು ಕತ್ತರಿಸಿ, ಲಿಂಗದಮುಂದಿಟ್ಟನು. ಆ ಕ್ಷಣದಲ್ಲಿಯೇ ಆ ಕಂಠನಾಳದಿಂದ ಮತ್ತೊಂದು ತಲೆಯು ಹುಟ್ಟಿತು. ಅದನ್ನು ಕತ್ತರಿಸಲು, ಅದರಿಂದ ಮತ್ತೊಂದು ಶಿರಸ್ಸು ಉದ್ಭವಿಸಿತು. ಅದನ್ನು ಕತ್ತರಿಸಲು, ಜಾಗ್ರತೆಯಲ್ಲಿ ಮತ್ತೊಂದು ಮಸ್ತಕವು ಉತ್ಪನ್ನವಾಯಿತು. ಅದನ್ನೂ ಕತ್ತರಿಸುವಷ್ಟರಲ್ಲಿಯೇ ಕತ್ತರಿಸುವದಕ್ಕೆ ಸಾವಕಾಶವನ್ನು ಸೈರಿಸದಿರುವಂತೆ ಆ ತಲೆಯ ಪಕ್ಕದಿಂದ ಮತ್ತೊಂದು ನಗೆಮೊಗವು ಜನಿಸಿತು. ಅದನ್ನು ಕತ್ತರಿಸಲು, ಅದರಿಂದ ಇನ್ನೊಂದು ಮುಗುಳ್ನಗೆಯುಳ್ಳ ಮುಖವು ಪ್ರಾದುರ್ಭವಿಸಿತು. ಅದನ್ನು ಛೇದಿಸಲು, ಅದು ವೇಗದಿಂದ ಮೇಲಕ್ಕೆ ಹಾರಿತು. ಈ ಪ್ರಕಾರವಾಗಿ ಹುಟ್ಟಿದ ಕಂಠವೂ, ಹುಟ್ಟುತ್ತಿರುವ ಶಿರಸ್ಸೂ, ಕತ್ತರಿಸಲ್ಪಡುತ್ತಿರಲಾಗಿ,–ಅರಳಿದ ತಾವರೆಗೆ ಸಮಾನವಾದ ಮತ್ತೊಂದು ಮುಖವು ಸಿದ್ಧವಾಗುತಿತ್ತು. ನಿರ್ದುಷ್ಟವಾದ ಧೈರ್ಯವುಳ್ಳ ಆ ಬಂಕಯ್ಯನ ಭಕ್ತಿಗೆ ಕೊನೆಯಿಲ್ಲದಂತೆ ಕತ್ತರಿಸಲ್ಪಟ್ಟ ಶಿರಸ್ಸುಗಳಿಗೆ ಕೊನೆಯಿರಲಿಲ್ಲ. ಕೆಲವು ತಲೆಗಳು ಶಿವಕೀರ್ತನೆಗಳನ್ನು ಹಾಡುತ್ತಿದ್ದವು. ಕೆಲವು ತಲೆಗಳು ಆ ಶಬ್ದಗಳಿಗೆ ಸರಿಯಾಗಿ ಕುಣಿಯುತ್ತಿದ್ದವು. ಕೆಲವು ತಲೆಗಳು ಆ ನಾಟ್ಯದ ತಾಳವನ್ನು ಉಗ್ಗಡಿಸುತ್ತಿದ್ದವು. ಕೆಲವು ತಲೆಗಳು ಆ ಗಾನ, ನರ್ತನ, ಉಗ್ಗಡಣೆಗಳನ್ನು ಶ್ಲಾಘಿಸುತ್ತಿದ್ದವು. ಕೆಲವು ಶಿವಲಿಂಗದಮುಂದೆ ಹಾರುತ್ತಿದ್ದವು. ಕೆಲವು ಲಿಂಗಕ್ಕೆ ಪ್ರದಕ್ಷಿಣ ಮಾಡುತ್ತಿದ್ದವು. ಕೆಲವು ಶಿವನ ಬಿರುದಾವಳಿಗಳನ್ನು ಹೇಳುತ್ತಿದ್ದವು. ಕೆಲವು ಬಹಳ ಸಡಗರದಿಂದ ನಗುತ್ತಿದ್ದವು. ಕೆಲವು ಸೋಕುತ್ತಿದ್ದವು. ಕೆಲವು ಬಡಿಯುತ್ತಿದ್ದವು. ಕೆಲವು ಆಲಿಂಗಿಸುತ್ತಿದ್ದವು. ಕೆಲವು ಲಿಂಗದಮೇಲೆ ಹತ್ತುತ್ತಿದ್ದವು. ಕೆಲವು ನೆಕ್ಕುತ್ತಿದ್ದವು. ಕೆಲವು ಬಾರಿಬಾರಿಗೂ ಮೂಸುತ್ತಿದ್ದವು. ಕೆಲವು ಅನೇಕವಿಧವಾದ ಮುಖವಿಕಾರಗಳನ್ನು ತೋರಿಸುತ್ತಿದ್ದವು. ಒಂದುಕಡೆಯಲ್ಲಿ ಒಂದೊಂದು ತಲೆಯಮೇಲೆ ನೂರಿನ್ನೂರು ತಲೆಗಳು ಅಡಕಿರುವವು. ಆಗ ಸಾವಿರಾರು ತಲೆಗಳು ಲಿಂಗದಸುತ್ತಲೂ ಸುತ್ತಿಕೊಂಡವು. ಕೆಲವು ಮಧುರವಾದ ಮಾತುಗಳನ್ನಾಡುತ್ತಿದ್ದವು. ಕೆಲವು ಭಲಾ! ಭಲಾ! ಎಂದು ಹೇಳುತ್ತಿದ್ದವು. ಕೆಲವು ಶರಣಾರ್ತಿ ಎಂದು ಉಚ್ಚರಿಸುತ್ತಿದ್ದವು. ಕೆಲವು ಜಯಶಬ್ದವನ್ನು ಪ್ರಯೋಗಿಸುತ್ತಿದ್ದವು. ಕೆಲವು ಬಂಕಯ್ಯನಿಗೆ ಆಶೀರ್ವಾದವನ್ನು ಮಾಡುವುದಕ್ಕೆ ಉದ್ಯುಕ್ತಗಳಾದವು. ಕೆಲವು ಕಿಲಕಿಲಧ್ವನಿಮಾಡುತ್ತಿದ್ದವು. ಕೆಲವು

ಶೀಘ್ರದಲ್ಲಿ ಛೇದಿಸು, ಶಿವನನ್ನು ಪೂಜಿಸು, ಎಂದು ಬಂಕಯ್ಯನನ್ನು ಪ್ರೇರಿಸುತ್ತಿದ್ದವು. ಕೆಲವು ಸಾವಕಾಶಮಾಡಬೇಡ, ನನ್ನನ್ನು ಶಿವನಿಗೆ ಸಮರ್ಪಿಸು ಎಂದು ಹೇಳುತ್ತಿದ್ದವು. ಕೆಲವು ತುಟಿಯನ್ನು ತೋರಿಸಿ, ಕಡೆಗಣ್ಣನ್ನು ಮುಚ್ಚಿಕೊಂಡು ನಾಲಿಗೆಯನ್ನು ಮುಂದಕ್ಕೆ ನೀಡಿ, ಹಾಸ್ಯವನ್ನು ಮಾಡುತ್ತಿದ್ದವು. ಕೆಲವು ಸ್ವಾಮಿಯು ನಮ್ಮನ್ನು ಹೊರಲಾರನೆಂದು ದೆಯೆಯಿಂದ ಇಳಿಯುತ್ತಿರುವವು. ಕೆಲವು ನಮ್ಮನ್ನು ಭೂಮಿಯಾದರೂ ಹ್ಯಾಗೆ ವಹಿಸೀತು ? ಎಂದು ಲಿಂಗದಮೇಲೆಯೇ ಇದ್ದವು. ಕೆಲವು ನಮಗೆ ಒಳಗಿರುವದಕ್ಕೆ ಅವಕಾಶವಿಲ್ಲ. ಇಲ್ಲಿ ಬಹಳ ಇಕ್ಕಟ್ಟು, ಎಂದು ಸುಳಿಗಾಳಿ ಬೀಸುವ ತಂಪಾದ ಹೊರಅಂಗಳದಲ್ಲಿ ವಿಹರಿಸುತ್ತಿದ್ದವು. ಕೆಲವು ಬಸವೇಶ್ವರನಮೇಲೆ ಹತ್ತಿಕೊಂಡು, ಶಿವನನ್ನು ಅಣಕಿಸುತ್ತ ನಾವು ರುದ್ರರು, ನಮಗೆ ನಮಸ್ಕರಿಸಿರಿ ಎಂದು ಹೇಳುತ್ತಿದ್ದವು. ಭಕ್ತನು ವೇಗದಿಂದ ಕತ್ತರಿಸುವಂಥವನಾದಾಗ್ಯೂ ಅವನನ್ನು ಕೆಲವು ತಲೆಗಳು;—ನನ್ನನ್ನು ಛೇದಿಸುವಾಗ ಮತ್ತೊಂದು ತಲೆಯು ನೋಡಿತು. ನಾನು ಶೀಘ್ರದಲ್ಲಿ ತಲೆಯನ್ನು ಕತ್ತರಿಸಲೋ ಏನು ? ಎಂದು ಹೀಯಾಳಿಸುತ್ತಿದ್ದವು.

ಈ ಪ್ರಕಾರವಾಗಿ ನಾನಾ ವಿಧವಾದ ಆಕಾರ, ವ್ಯಾಪಾರ, ಮಾತು, ನೋಟ ಇವುಗಳುಳ್ಳ ಶಿರಸ್ಸುಗಳಿಂದ ವ್ಯಾಪಿಸಲ್ಪಟ್ಟ ಮೂರ್ತಿಯುಳ್ಳ ಈಶ್ವರನು; ಎಲೈ ಬಂಕಯ್ಯನೇ ! ನಿನ್ನ ವೀರಭಕ್ತಿಗೆ ಮೆಚ್ಚಿದ್ದೇನೆ. ನಿನ್ನ ತಲೆಗಳ ಭಾರದಿಂದ ಇರುವದಕ್ಕೂ, ಅಲ್ಲಾಡುವುದಕ್ಕೂ, ಉಸಿರುಬಿಡುವುದಕ್ಕೂ ಆಗುವುದಿಲ್ಲ. ಎಂದು ಹೇಳಿ, ಆ ಭಕ್ತನ ಕಯ್ಯಂ ಹಿಡಿದುಕೊಂಡು, ನಿನ್ನ ಭಕ್ತಿಯು ಸಾಕುಸಾಕೆಂದು ನಿಲ್ಲಿಸಿ ಆ ತಲೆಗಳನ್ನು ತನ್ನದೇಹದಲ್ಲಿ ಅಡಗಿಸಿ, ಮರಳಿ ಅದೃಶ್ಯನಾದನು. ಎಲಾ ಜೈನನೇ ! ನನಗಿಂತಲೂ ಹೆಚ್ಚಾದ ಪರಾಕ್ರಮವುಳ್ಳವನೂ, ಶಿವಾಲಯಗಳಿಗೆ ಅಲಂಕಾರಪ್ರಾಯನೂ ಆದ ಆ ಬಂಕಯ್ಯನು ಬಸವಣ್ಣ ಮೊದಲಾದ ಭಕ್ತರಿಂದ ಪೂಜಿಸಲ್ಪಟ್ಟವನಾಗಿ ಆ ಪಟ್ಟಣದಲ್ಲಿದ್ದನು. ಶಿವಭಕ್ತರ ಮಹಿಮೆಯನ್ನು ಕೇಳುವದಕ್ಕೆ ಅನೇಕ ವರ್ಷಗಳಾದರೂ ಸಾಲವು. ಅಲ್ಪಕಾಲಜೀವಿಯಾದ ನಿನ್ನಿಂದಾಗುವುದೇ ? ನಿನ್ನ ಮಾತನ್ನು ಜೈಸಿ, ಜಯಧ್ವಜಗಳಿಂದ ಪ್ರಕಾಶಿಸುವ ಭಕ್ತರ ಚರಿತ್ರೆಯನ್ನು ಹೇಳುತ್ತೇನೆ.

ನವಲೂರೆಂದು ಪ್ರಸಿದ್ಧವಾದ ಪಟ್ಟಣದಲ್ಲಿ ಜಿನಶಾಸ್ತ್ರಗಳಲ್ಲಿ ಪಾರಂಗತನಾದ ನಾವುಕ್ಕರಿಸನೆಂಬ ಒಬ್ಬ ಜಿನಮುನಿ ಇದ್ದನು. ಅವನುಬಂದಾನೊಂದು

ಕಾಲದಲ್ಲಿ ಶೂಲರೋಗದಿಂದ ಪೀಡಿಸಲ್ಪಟ್ಟವನಾಗಿ, ಆ ವೇಧೆಯನ್ನು ಸೈರಿಸಲಾರದೆ ಪ್ರಾಣತ್ಯಾಗವನ್ನು ಮಾಡಿಕೊಳ್ಳುವುದಕ್ಕೆ ಉದ್ಯುಕ್ತನಾದನು. ಶಿವಭಕ್ತಿ ಪಾರಾಯಣೆಯಾದ ಪುಣ್ಯಶೀಲೆಯೆಂಬ ಹೆಸರುಳ್ಳ ಆತನ ಅಕ್ಕನುಬಂದು, ಪ್ರಾಣ ತ್ಯಾಗದಿಂದ ಪ್ರಯೋಜನವೇನು? ಏನೂ ಫಲವಿಲ್ಲ. ದೋಷವೇ ಸಂಭವಿಸುತ್ತದೆ. ಎಂದು ರಹಸ್ಯದಲ್ಲಿ ಹೇಳಿದಳು. ಅದಕ್ಕವನು;—ಅಕ್ಕಾ! ನಾನುರೋಗಬಾಧೆ ಯನ್ನು ಸೈರಿಸಲಾರದೆ ಹಾಗೆ ಆಲೋಚಿಸಿದೆನು. ಎನಲು, ಆಕೆಯು;-ನಿನ್ನ ಬೇನೆ ಯನ್ನು ಹೋಗಲಾಡಿಸತಕ್ಕ ಔಷಧವನ್ನು ಹೇಳುತ್ತೇನೆ; ಅದನ್ನು ಮಾಡಿದರೆ ಆ ಕ್ಷಣವೇ ಮನುಷ್ಯರಿಗೆ ಸಿದ್ಧಿಯುಂಟಾಗುವದೆಂದು ಹೇಳಿದಳು. ಆ ಮಾತನ್ನು ಕೇಳಿ, ಆತನು;-ಅಮ್ಮಾ! ವಿಷದಿಂದಾಗಲಿ ಅಮೃತದಿಂದಾಗಲಿ ಈ ಬಾಧೆಯು ಪರಿಹರಿಸಲ್ಪಡುವದಾದರೆ ಅದನ್ನು ಮಾಡುತ್ತೇನೆ. ಈ ವಿಷಯದಲ್ಲಿ ಬೇರೊಂದಾ ಲೋಚಿಸಬೇಡ, ಎನಲು; ಆಕೆಯು;-ಹಿತಾರ್ಥಿಯಾದ ತಮ್ಮನೇ! ನಿನ್ನ ವ್ಯಥೆಯನ್ನು ನೋಡಿ ದುಃಖಯುಕ್ತೆಯಾದ ನನ್ನ ಮಾತನ್ನು ಕೇಳು. ನಾನು ಮಾಡುವ ಚಿಕಿ ತ್ಸೆಯು, ದೇಹದಲ್ಲಿ ಹುಟ್ಟಿದ ರೋಗವನ್ನು ಹೋಗಲಾಡಿಸುವದು ಮಾತ್ರವಲ್ಲದೆ ಹೊರಗೆ ಲೇಪಿಸುವದರಿಂದ ಮನಸ್ಸಿನ ರೋಗವನ್ನೂ ಹೋಗಲಾಡಿಸುತ್ತದೆ. ಅದರ ಫಲವನ್ನು ನೀನು ತಿಳಿದಿಲ್ಲ. ಶೀಘ್ರದಲ್ಲಿ ಮಾಡು. ಮಾತುಗಳಿಂದ ಪ್ರಯೋಜ ನವೇನು? ಎಂದಳು. ಅದಕ್ಕೆ ಹಾಗೇ ಆಗಲಿ. ಆ ಔಷಧವನ್ನು ಪ್ರಯೋಗಿಸೆಂದು ಅವನಿಂದ ಪ್ರೇರಿಸಲ್ಪಟ್ಟವಳಾಗಿ, ಪಂಚಾಕ್ಷರೀ ಮಂತ್ರವನ್ನು ಉಚ್ಚರಿಸುತ್ತಾ, ಹಸ್ತದಿಂದ ಭಸ್ಮವನ್ನು ತೆಗೆದುಕೊಂಡು, ಆ ಭಸ್ಮದಿಂದ ಆತನ ದೇಹವನ್ನು ಮುಟ್ಟಿದಳು. ಆ ರೋಗವು ಪ್ರಮಥರ ಅಪ್ಪಣೆಯಿಂದ ಅವನ ಪೂರ್ವಭಾವದ ಸಂಗಡ ಎಲ್ಲಿಯೋ ಹೋಯಿತು. ಬಾಧೆಯಿಂದ ಬಿಡಲ್ಪಟ್ಟ ಆತನು ಅಕ್ಕನ ಪಾದಕಮಲಗಳಲ್ಲಿ ಮಸ್ತಕವನ್ನಿಟ್ಟು, ತಾಯಿ! ನನ್ನನ್ನು ನೀನು ಬದುಕಿಸಿದೆ. ಶಿವದೀಕ್ಷೆಯನ್ನು ಕೊಟ್ಟು ನನ್ನನ್ನು ರಕ್ಷಿಸು, ಎನಲು; ಆಕೆಯು ಆ ಮಾತನ್ನು ಕೇಳಿ, ದಿವ್ಯತೇಜೋಮಯನೂ, ಶಿವಾಚಾರಗಳ ಪೂರ್ವೋತ್ತರ ರಹಸ್ಯಾರ್ಥ ಗಳನ್ನು ಸಂಪೂರ್ಣವಾಗಿ ತಿಳಿದವನೂ, ಹಣೆಗಣ್ಣನ್ನು ಮರೆಮಾಡಿಕೊಂಡಿರುವ ಸಾಕ್ಷಾತ್ಪರಶಿವನಂತಿರುವವನೂ ಆಗಿರುವಗುರುವನ್ನು ತೋರಿಸಿದಳು. ಗುರು ಶ್ರೇಷ್ಠನು ನಮಸ್ಕರಿಸಿದ ಆತನ ಹಣೆಯಲ್ಲಿ ಶಿವದೀಕ್ಷಾವ್ರತಕ್ಕೆ ಸಾಧಕವಾದ ವಿಭೂತಿ ಪಟ್ಟವನ್ನು ಮಾಡಿದನು. ಮಂತ್ರಪೂತವಾದ ಕಲಶಜಲಧಾರೆಯಿಂದ

ಅಭಿಷೇಕಿಸಿ, ಅವನಿಗೆ ಶಿವಾಗಮಾರ್ಗವನ್ನು ತಿಳಿಸಿ, ಭವಪಾಶವನ್ನು ಹರಿದು, ಯಾವ ಪ್ರತಿಬಂಧವೂ ಇಲ್ಲದಂತೆ ಮಾಡಿದನು. ಆ ಶಿವದೀಕ್ಷೆಯನ್ನು ಹೊಂದಿದ ನಾವುಕ್ಕರಸನು ಜೀವನ್ಮುಕ್ತಿಗೆ ಕಾರಣವಾದ ಶಿವಜ್ಞಾನದ ಆಧಾರದಿಂದ ಜ್ಞಾನ ಸ್ವರೂಪನಾಗಿ ಶಿವಾಚಾರಗಳನ್ನು ನಡಸುವುದರಲ್ಲಿ ಆಸಕ್ತನಾದನು. ಮತ್ತು ಗುರುವಿನ ಅನುಗ್ರಹದಿಂದ ಪಂಚಾಕ್ಷರೀ ಮಂತ್ರವೆಂಬ ಅಧಿಕವಾದ ದ್ರವ್ಯವನ್ನು ಪಡೆದುಕೊಂಡು, ವಿಷ್ಣು ಬ್ರಹ್ಮ ದೇವೇಂದ್ರ ಮುಂತಾದವರ ಐಶ್ವರ್ಯಗಳನ್ನು ಹುಲ್ಲಿನಂತೆ ಎಣಿಸಿದನು. ವಿಭೂತಿಯಿಂದ ನಿರ್ಮಲವಾಗಿ ಮಾಡಲ್ಪಟ್ಟ ದೇಹವುಳ್ಳವನೂ, ರುದ್ರಾಕ್ಷಿಗಳಿಂದ ಅಲಂಕರಿಸಲ್ಪಟ್ಟವನೂ, ಶಿವಭಕ್ತರಿಗೆ ಬಂಧುವೂ, ಆದ ಆ ನಾವುಕ್ಕರಸನನ್ನು ದುಷ್ಟಜೈನರು ಹಗ್ಗದಿಂದ ಬಿಗಿದರು ಅವನ ತೋಳುಗಳಿಗೆ ಕಟ್ಟಿದ ಹಗ್ಗಗಳೆಲ್ಲವೂ ಆಕ್ಷಣವೇ ಪುಡಿಯಾದವು. ಬಿಡಿಸಿಕೊಳ್ಳುವದಕ್ಕೆ ಅಶಕ್ಯವಾದ ಭವಪಾಶವನ್ನೇ ಕಡಿಸತಕ್ಕ ಶಿವಭಕ್ತಿಯಿರುವಲ್ಲಿ ಸಾಧಾರಣವಾದ ಆ ಹಗ್ಗಗಳು ಏನು ಮಾಡಬಲ್ಲವು ? ಅನಂತರದಲ್ಲಿ ಆ ನೀಚರು ಅವನನ್ನು ನೀರಿನಲ್ಲಿ ಎತ್ತಿಹಾಕಿದರು. ಕೂಡಲೇ ಎತ್ತಲ್ಪಟ್ಟವನಂತೆ ಮೇಲಕ್ಕೆ ಬಂದನು. ಗಂಗೆಯನ್ನು ತಲೆಯಲ್ಲಿ ಧರಿಸಿದ ಶಿವನ ಭೃತ್ಯನನ್ನು ಆ ನೀರು ಏನು ಮಾಡೀತು ? ಆಮೇಲೆ ಆ ಕ್ರೂರರು ಎತ್ತಿಕೊಂಡು ಹೋಗಿ, ಬೆಂಕಿಯಲ್ಲಿ ಹಾಕಿದರು. ಅದರಲ್ಲಿ ದೇಹಕ್ಕೆ ಯಾವದೊಂದು ಬಾಧೆಯೂ ಇಲ್ಲದಂತೆ ಸುಖವಾಗಿದ್ದನು. ಫಾಲನೇತ್ರನಾದ ಶಿವನ ಸೇವಕನಿಗೆ ಆ ಬೆಂಕಿಯಿಂದ ಯಾವ ದುಃಖವುಂಟಾದೀತು ? ಅನಂತರದಲ್ಲಿ ಆ ಘಾತುಕರು ಆ ಭಕ್ತನಿಗೆ ಹದಿನೆಂಟು ಬಗೆಯಾದ ವಿಷವನ್ನು ಸೇರಿಸಿ ಕೊಟ್ಟರು. ವಿಷಪಾನವನ್ನು ಮಾಡಿದ ಶಿವನ ಕಿಂಕರನನ್ನು ಆ ವಿಷವು ಏನು ಮಾಡೀತು ? ಬಳಿಕ ಆ ಕ್ಷುದ್ರರು ಕೋಪಗೊಂಡು, ಹಿಂಗಟ್ಟುಕಟ್ಟಿ, ಒಂದು ಮದಹತ್ತಿದ ಆನೆಯಮುಂದಕ್ಕೆ ಬಿಸಾಡಿದರು. ಗಜಾಸುರನನ್ನು ಕೊಂದು ಅವನ ಚರ್ಮವನ್ನು ಹೊದ್ದಿರುವವನ ಭೃತ್ಯನನ್ನು ಆ ಗಜವು ಸೊಂಡಲಿಂದ ಹ್ಯಾಗೆ ತಾನೇ ಮುಟ್ಟೀತು ? ಇಷ್ಟಾದಮೇಲೆ ಆ ಜೈನರು ಶಿವಕಿಂಕರನಾದ ಅವನನ್ನು ಯಾವ ಅಪಾಯಕ್ಕೂ ಒಳಗಾಗುವನಲ್ಲವೆಂದು ತಿಳಿದು;—ಇವನು ಮಹಾತ್ಮನಾಗಿರುವದರಿಂದ ಇವನಿಗೆ ದ್ರೋಹವನ್ನು ಮಾಡಿದ ನಮಗೇನಾದರೂ ಕೇಡು ಸಂಭವಿಸಬಹುದು! ಎಂದು ಭಯಪಟ್ಟವರಾಗಿ, ಬಂದು ಆತನನ್ನೇ ಮರೆಹೊಕ್ಕರು. ಆಗ ಆ ಭಕ್ತನು ಅವರ ಜಿನಚಿಹ್ನೆಗಳನ್ನು ತೆಗೆಯಿಸಿ ಶಿವಚಿಹ್ನೆಗಳನ್ನು

ಕೊಡಿಸಿ, ಜಿನಾಲಯಗಳನ್ನೆಲ್ಲಾ ಮುರಿದು, ಜೈನಕೋಲಾಹಲನೆಂಬ ಪ್ರಸಿದ್ಧಿಯನ್ನು ಹೊಂದಿ, ಭಕ್ತರಿಂದ ಪೂಜಿಸಲ್ಪಟ್ಟ ಪಾದಗಳುಳ್ಳವನಾಗಿ ಶಿವನ ಚರಣಕಮಲದಲ್ಲಿ ಮಾತ್ರ ಭಕ್ತಿಯುಳ್ಳವನಾಗಿ, ಶಿವಪೂಜೆಯಲ್ಲಿ ನಿರತನಾಗಿದ್ದನು.

ಚಲ್ಲತಿರುವಾಳೂರೆಂಬ ಊರಿನಲ್ಲಿ ಇರುತ್ತಾಂಡಿಯೆಂದು ಪ್ರಸಿದ್ಧನಾದ ಒಬ್ಬ ಭಕ್ತನಿದ್ದನು. ಅವನು ಹುಟ್ಟುಕುರುಡನಾದಾಗ್ಯೂ, ತನ್ನ ಮನಸ್ಸಿನಲ್ಲಿ ಜ್ಞಾನದೃಷ್ಟಿಯಿಂದ ಶಿವನೇ ಕಾವನಾಯೆಂದು ತಿಳಿದವನಾಗಿ, ಒಂದು ಕೆರೆಯನ್ನು ಕಟ್ಟಬೇಕೆಂದು ಸಂಕಲ್ಪವನ್ನು ಮಾಡಿ, ಬಲವಾದ ಗುದ್ದಲಿ ಗೂಡೆಗಳನ್ನು ತೆಗೆದುಕೊಂಡು ಎತ್ತಿನಮೇಲೆ ಕುಳಿತುಕೊಂಡು ಬಂದು ಶಿವಾಲಯದ ಮುಂದೆ ಹಳ್ಳವಾದ ಒಂದು ಸ್ಥಳದಲ್ಲಿ ನೆಲವನ್ನು ಅಗಿದು ಆ ಮಣ್ಣನ್ನು ಮಂಕರಿಗೆ ತುಂಬಿ ತಲೆಯಮೇಲೆ ಹೊತ್ತುಕೊಂಡು ಮೆಲ್ಲಮೆಲ್ಲಗೆ ಬಹು ಎಚ್ಚರಿಕೆಯಿಂದ ಹೆಜ್ಜೆಗಳನ್ನಿಡುತ್ತಾ, ಗುರುತಿಗಾಗಿ ಮುಂಚೆ ಕೆರೆಯ ಏರಿಯ ಒಳಗಡೆಯಲ್ಲಿ ಎತ್ತರವಾದ ಗೂಟಗಳನ್ನು ನೆಟ್ಟು ಅದಕ್ಕೆ ಕಟ್ಟಿದ ಹಗ್ಗವನ್ನು ಹಿಡಿದುಕೊಂಡು ಆ ಮಣ್ಣನ್ನು ದಡದಲ್ಲಿ ಹಾಕುವನು. ಈ ರೀತಿಯಾಗಿ ಪ್ರತಿದಿನವೂ ಮಾಡುತ್ತಿರಲು, ಅವನ ಕೆಲಸವನ್ನು ಸೈರಿಸಲಾರದೆ, ದ್ವೇಷಿಗಳಾದ ಜೈನರು ಆ ಮಂಕರಿಯನ್ನು ದೂರಕ್ಕೆ ಬಿಸಾಡಿ ಹಗ್ಗವನ್ನು ಮೂರುನಾಲ್ಕು ಪಾಲಾಗಿ ಕತ್ತರಿಸಿ ಆ ಏರಡುಗೂಟಗಳನ್ನು ಕಿತ್ತುಹಾಕಿ;—ನೀನು ಇನ್ನೇನಾದರೂ ಈ ಕೆಲಸಕ್ಕೆ ಪ್ರವರ್ತಿಸಿದರೆ ಕೊಲ್ಲುವೆನೆಂಬುವದೇ ಮೊದಲಾದ ಮಾತುಗಳಿಂದ ಬೆದರಿಸಿ, ಆ ಭಕ್ತನ ಕಾರ್ಯಕ್ಕೆ ವಿಘ್ನವಂ ಮಾಡಿದರು. ಆ ಭಕ್ತನು ಕೋಪಗೊಂಡವನಾಗಿ, ಆ ಕ್ಷಣವೇ ಶಿವನ ಕರುಣದಿಂದ ಕಣ್ಣುಗಳನ್ನು ಪಡೆದು, ಚಪಲರಾದ ಆ ಜೈನರೆಲ್ಲಾ ಕುರುಡರನ್ನು ಮಾಡಿದನು. ಅನಂತರದಲ್ಲಿ ಶಿವಕೃಪೆಗೆ ಪಾತ್ರನಾದ ಆ ಇರುತ್ತಾಂಡಿಯು ಜೈನರನ್ನೆಲ್ಲಾ ಓಡಿಸಿ ಅವರಮನೆಗಳನ್ನು ಸುಡಲಿಲ್ಲವೇ ?

ಮಹಾಕಾಲ, ಗೋವಿಂದಭಟ್ಟಾರ, ಬಂಕಯ್ಯ ನಾಉಕ್ಕರಸ, ಇವರ ಆಶ್ಚರ್ಯಕರವಾದ ಚರಿತ್ರೆಗಳನ್ನು ಯಾರು ಭಕ್ತಿಯಿಂದ ಓದುತ್ತಾರೋ ಯಾರು ಬರೆಯುತ್ತಾರೋ ಯಾರು ಅವುಗಳನ್ನು ಬೋಧಿಸುತ್ತಾರೋ ಅವರು ತಮ್ಮ ಇಷ್ಟಾರ್ಥಸಿದ್ಧಿಯನ್ನು ಹೊಂದುವರು. ಶಿವಜ್ಞಾನವನ್ನು ಕೊಡುವುದರಿಂದ ಪ್ರಸಿದ್ಧವಾದ ಮಹಿಮೆಯುಳ್ಳ ಇರುತ್ತಾಂಡಿಯ ಪಾವನವಾದ ಕಥೆಯನ್ನು ಯಾವನು ಭೂಮಿಯಲ್ಲಿ ಭಕ್ತಿಯಿಂದ ಪ್ರಾತಃಕಾಲದಲ್ಲಿ ಓದುತ್ತಾನೋ ಅವನು ಶೀಘ್ರದಲ್ಲಿ ಜ್ಞಾನನೇತ್ರವನ್ನು ಪಡೆಯುವನು. ಇದು ಸತ್ಯವು.

ಬಸವೇಶವಿಜಯದಲ್ಲಿ ಮೂವತ್ತಾರನೆಯ ಅಧ್ಯಾಯವು ಸಂಪೂರ್ಣವು.

# ಮೂವತ್ತೇಳನೆಯ ಅಧ್ಯಾಯವು.

---

## ಜ್ಞಾನಸಂಬಂಧಿಗಳ ಕಥೆ

ಮಹಾತ್ಮನಾದ ಏಕಾಂತರಾಮಯ್ಯನು ಮತ್ತೂ ಆ ಜೈನನಿಗೆ ಹೇಳುತ್ತಾನೆ. ಏನಂದರೆ:—ಪೂರ್ವದಲ್ಲಿ ತಾರಕಾಸುರಧ್ವಂಸಿಯಾದ ಷಣ್ಮುಖಸ್ವಾಮಿಯು ಶಿವಧೂಷಕರನ್ನು ಶಿಕ್ಷಿಸುವದಕ್ಕೋಸ್ಕರ ಕಾಲಪುರವೆಂಬ ಊರಿನಲ್ಲಿ ವಾಸಿಸುವ ಶಿವದ್ವಿಜನಲ್ಲಿ ಜನಿಸಿದನು. ಆ ಬ್ರಾಹ್ಮಣನು ಒಂದಾನೊಂದುದಿನ ತನಗೆ ಮಗನಾಗಿ ಹುಟ್ಟಿದ್ದ ಕುಮಾರಸ್ವಾಮಿಯನ್ನು ಬಹುತಿಳಿಯಾಗಿಯೂ, ಸೀಯಾಗಿಯೂ, ತಂಪಾಗಿಯೂ, ಲಘುವಾಗಿಯೂ ಇರುವ ಜಲವುಳ್ಳ ಒಂದು ಸರೋವರಕ್ಕೆ ಕರತಂದು, ಆ ಕೊಳದತಡಿಯಲ್ಲಿ ಕುಳ್ಳಿರಿಸಿ, ತಾನು ಸ್ನಾನಾರ್ಥವಾಗಿ ಇಳಿದನು. ಆ ಸಮಯದಲ್ಲಿ ಪಾರ್ವತೀಪರಮೇಶ್ವರರು ವಿಮಾನದಮೇಲೆ ಕುಳಿತುಕೊಂಡು ಬಂದರು. ಅನಂತರದಲ್ಲಿ ಪಾರ್ವತಿಯು ವಿಮಾನದಿಂದಿಳಿದು ಆ ಕುಮಾರನನ್ನು ತೆಗೆದು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ಶಿವದೀಕ್ಷೆಯಿಂದ ಧನ್ಯನನ್ನುಮಾಡಿ, ಅಂಥಾ ಭಾಗ್ಯಶಾಲಿಯಾದ ಆತನಿಗೆ ಸ್ತನ್ಯವೂಲುತ್ತಿರುವ ತನ್ನ ಸ್ತನವನ್ನು ಕೊಟ್ಟಳು. ಆ ಬಾಲಕನು ಕೂಡ ಆಶ್ಚರ್ಯಕರವಾದ ಆ ಸ್ತನ್ಯಧಾರೆಯನ್ನು ಜ್ಞಾನಧಾರೆಯನ್ನು ಪಾನಾಮಾಡುವಂತೆ ಪಾನಾಮಾಡಿದನು. ಅನಂತರದಲ್ಲಿ ಪಾರ್ವತಿಯು ತನ್ನ ಸ್ತನ್ಯವನ್ನು ಕರೆದು ಪಾತ್ರೆಗೆ ತುಂಬಿಕೊಟ್ಟಳು. ವೇಧಾದೀಕ್ಷೆಯಿಂದ ನಿರ್ಮಲನಾದ ಆ ಬಾಲಕನಿಗೆ ಸ್ತನ್ಯಪಾನವು ಪರಿಶುದ್ಧವಾದ ಶಿವದೀಕ್ಷೆಯಿಂದ ಉತ್ಪನ್ನವಾದ ಜ್ಞಾನವೆಂಬ ಅಗ್ನಿಗೆ ಹವಿಸ್ಸಿನೋಪಾದಿಯಲ್ಲಿ ಆಯಿತು. ಶರತ್ಕಾಲದಲ್ಲಿ ನಿರ್ಮಲನಾದ ಚಂದ್ರನಿಗೆ ಹುಣ್ಣುಮೆ ಬಂದು ಆಲಿಂಗಿಸಿದಂತೆ ಪಾರ್ವತೀದೇವಿಯು ಆ ಮಗನನ್ನು ಆಲಿಂಗಿಸಿ ಬಾರಿಬಾರಿಗೂ ಮೂರ್ಧಾಘ್ರಾಣವನ್ನು ಮಾಡಿ, ಆಶೀರ್ವಾದಗಳಿಂದ ಅನುಗ್ರಹಿಸಿ ತನ್ನ ಪತಿಯ ಸಮೀಪವನ್ನೈದಿದಳು. ಆ ಬ್ರಾಹ್ಮಣನು ತೀರ್ಥಸ್ನಾನದಿಂದ ಪರಿಶುದ್ಧವಾದ ದೇಹವುಳ್ಳವನಾಗಿ ಮಾಧ್ಯಾಹ್ನಿಕವನ್ನು ಮಾಡಿ ಪರಶಿವನನ್ನು ಧ್ಯಾನಿಸಿ ಆ ಸರೋವರದ ದಡಕ್ಕೆ ಬಂದು, ಕಟವಾಯಿಂದ ಹರಿಯುತ್ತಿರುವ ಕ್ಷೀರಧಾರೆ

ಯಿಂದ ಗುರುತು ಮಾಡಲ್ಪಟ್ಟ ಎದೆಯುಳ್ಳವನಾಗಿಯೂ ಹಾಲು ತುಂಬಿದ ಚಿನ್ನದ ಬಟ್ಟಲನ್ನು ಹಸ್ತದಲ್ಲಿ ಹಿಡಿದುಕೊಂಡವನಾಗಿಯೂ ಇರುವ ತನ್ನ ಮಗುವನ್ನು ನೋಡಿ-ಈ ಹಾಲು ಎಲ್ಲಿಂದ ಬಂತು? ನಿನಗೆ ಈ ಚಿನ್ನದ ಬಟ್ಟಲನ್ನು ಯಾರು ಕೊಟ್ಟರು? ಎಂದು ಬೆದರಿಸಲು, ಮಹಾತೇಜಸ್ವಿಯಾದ ಆ ಬಾಲಕನು ಹೇಳಿದ್ದೇನಂದರೆ——ಎಲೈ ತಂದೆಯೇ, ನನ್ನನ್ನು ಯಾತಕ್ಕೆ ಬೆದರಿಸುತ್ತೀಯೆ? ನನ್ನ ಮಾತನ್ನು ಕೇಳು, ಪಾರ್ವತೀಪರಮೇಶ್ವರರು ಆಕಾಶಮಾರ್ಗದಲ್ಲಿ ವಿಮಾನದಮೇಲೆ ಬಂದರು. ಕೃಪಾನಿಧಿಯಾದ ಪಾರ್ವತಿಯು ಶಿವನ ಸಮೀಪದಿಂದ ಬಂದು ರತ್ನಕಿರೀಟವುಳ್ಳವಳು ಜಟಾಜೂಟವುಳ್ಳವನ ಸನ್ನಿಧಿಯಿಂದ ಬಂದು, ರತ್ನಾಭರಣಗಳುಳ್ಳವಳೂ ಸರ್ಪಾಭರಣನಾದವನ ಮಗ್ಗುಲಿಂದ ಬಂದು, ನೈದಿಲೆಯನ್ನು ಮುಡಿದುಕೊಂಡಿರುವಾಕೆಯು ಚಂದ್ರಮೌಳಿಯ ಬಳಿಯಿಂದ ಬಂದು, ಹಂಸಪಕ್ಷಿಯಂತೆ ನಡೆಯುವಾಕೆಯು, ವೃಷಭದಮೇಲೆ ಸಂಚರಿಸುವವನ ಹತ್ತಿರದಿಂದಬಂದು ಎರಡು ಕಣ್ಣುಗಳುಳ್ಳವಳೂ ಮೂರುಕಣ್ಣುಗಳುಳ್ಳವನ ತೊಡೆಯಮೇಲಿಣಿಂದ ಬಂದು, ಶ್ರೀಗಂಧರಸದಿಂದ ಲೇಪಿಸಲ್ಪಟ್ಟ ಸ್ತನಭಾರದಿಂದ ಬಗ್ಗಿದಾಕೆಯು ಭಸ್ಮದಿಂದ ಲೇಪಿಸಲ್ಪಟ್ಟ ಎದೆಯುಳ್ಳವನ ಸನಿಹದಿಂದ ಬಂದು, ಲೋಕಗಳಿಗೆ ತಾಯಿಯಾದವಳು ಲೋಕಗಳ ತಂತೆಯ ಸಮೀಪದಿಂದಿಳಿದು ಬಂದು, ಮನೋಹರವಾದ ವಸ್ತ್ರವನ್ನುಟ್ಟುಕೊಂಡಿರುವವಳು ಚರ್ಮಾಂಬರವನ್ನು ಧರಿಸಿದವನ ಕಡೆಯಿಂದ ಬಂದು, ತಾಯಿಯು ಮಗನನ್ನು ತೊಡೆಯಮೇಲೆ ಕುಳ್ಳಿರಿಸಿಕೊಳ್ಳುವಂತೆ ನನ್ನನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ಕೃಪಾರಸದಿಂದ ತೋಯಿಸಲ್ಪಟ್ಟ ಕಡೆಗಣ್ಣೋಟಗಳಿಂದ ಪರತತ್ವವನ್ನು ತಿಳಿಯಪಡಿಸಿ, ಸ್ತನ್ಯವೆಂಬ ಅಮೃತದ ಪರಿಮಳದಿಂದ ಒಪ್ಪುತ್ತಿರುವ ಮೊಲೆಗಳನ್ನೊಡಿ ತಿರಿಗಿ ಬಟ್ಟಲಿಗೆ ಸ್ತನ್ಯವನ್ನು ಕರೆದು, ನನ್ನ ಕೈಗೆ ಕೊಟ್ಟಳು. ಬಳಿಕ ಲೋಕಮಾತೆಯು ಪ್ರೇಮದಿಂದ ಮತ್ತಮತ್ತೆ ತಬ್ಬಿಕೊಂಡು ಮೂರ್ಧಾಘ್ರಾಣವನ್ನು ಮಾಡಿ, ಇಗೋ ಹೋಗುತ್ತಾಳೆ. ತಂದೆಯೇ, ಪರಿಶುದ್ಧಳಾದ ಆಕೆಯನ್ನು ನೋಡು ಎಂದು ತೋರಿಸಲು, ಆ ಬ್ರಾಹ್ಮಣನು ತನ್ನ ಮಗನಿಂದ ತೋರಿಸಲ್ಪಟ್ಟವಳಾಗಿಯೂ, ಶಿವನ ತೊಡೆಯೆಂಬ ಪೀಠವನ್ನೇರಿದವಳಾಗಿಯೂ ಇರುವ ಪಾರ್ವತಿಯನ್ನು ಶಿವನೊಡನೆ ಕಂಡು, ಪಾರ್ವತಿಯ ಸ್ತನ್ಯಧಾರಿಯಿಂದ ಪರಿಶುದ್ಧವಾದ ದೇಹವುಳ್ಳವಳಾಗಿಯೂ ಶಿವದೀಕ್ಷೆಯಿಂದ ಪ್ರತ್ಯಕ್ಷೀಕರಿಸಲ್ಪಟ್ಟ ಶಿವನು

ವಳ್ಳಳಾಗಿಯೂ ಇರುವ ಕುಮಾರನನ್ನು ತಂದೆಯಂತೆಯೂ ಗುರುವಿನಂತೆಯೂ ರಾಜನಂತೆಯೂ ನಿಕ್ಷೇಪದಂತೆಯೂ ಶಿವನಂತೆಯೂ ಕಂಡು, ತನ್ನ ಹೆಗಲಮೇಲೆ ಕುಳ್ಳಿರಿಸ್ಸಿಕೊಂಡು ಮನೆಗೆಹೋಗಿ, ಆಶ್ಚರ್ಯಕರವಾದ ಮಗನ ವೃತ್ತಾಂತವನ್ನೂ ತನಗೆ ಪಾರ್ವತೀಪರಮೇಶ್ವರರ ದರ್ಶನವಾದದ್ದನ್ನೂ, ತನ್ನ ಪತ್ನಿಗೆ ತಿಳಿಸಿ, ಪಿಳ್ಳೆನೈನಾರಿಯೆಂದು ಪ್ರಸಿದ್ಧನಾದ ಮಗನನ್ನು ನೋಡಿ, ತನನ್ನು ಮಕ್ಕಳುಳ್ಳವರೊಳಗೆ ಮೊದಲಿಗನಾಗಿಯೂ ಸುಕೃತಿಯಾಗಿಯೂ ತಿಳಿದನು. ಯಾವ ಕಾರಣದಿಂದ ಪಾರ್ವತಿಯು ಜ್ಞಾನದಿಂದ ಕೂಡಿದವನನ್ನಾಗಿಮಾಡಿದಳೋ ಆ ಕಾರಣದಿಂದ ಆ ಬಾಲಕನು ಭೂಮಿಯಲ್ಲಿ ಜ್ಞಾನಸಂಬಂಧನೆಂದು ಪ್ರಸಿದ್ಧನಾದನು. ಆ ಬಾಲಕನು ಪಾರ್ವತಿಯ ಗುಡಿಗೆ ಹೋಗಿ ಆಕೆಯನ್ನು ಹಾಡುಗಳಿಂದ ಸಂತೋಷಪಡಿಸಿದನು. ಪಾರ್ವತಿಯು ಮೆಚ್ಚಿ ಚಿನ್ನದಎರಡು ತಾಳಗಳನ್ನು ಕೊಟ್ಟಳು. ಪರಮೇಶ್ವರನು ಚಿನ್ನದ ಚಾಮರ. ಪಾಲಕಿ, ಕಾಳಂಜಿ, ಕಾಳೆ, ಪೀಠ, ಮುತ್ತಿನಕೊಡೆ ಇವುಗಳನ್ನು ಕೊಟ್ಟನು. ತರುವಾಯ ಶಾಸ್ತ್ರಪ್ರಸಂಗದಲ್ಲಿ ಅತಿ ಸಮರ್ಥನಾದ ಜ್ಞಾನಸಂಬಂಧನು ವಾದದಿಂದ ಎರಡುಸಾವಿರ ಬೌದ್ಧರನ್ನು ಗೆದ್ದನು. ಇನ್ನೆರಡುಸಾವಿರಬೌದ್ಧರನ್ನು ಶಿವದೀಕ್ಷೆಯಿಂದ ಶಿವನ ಚರಣಸೇವಕರನ್ನು ಮಾಡಿದನು. ಬಹುಕಾಲದಿಂದಲೂ ಬಲವಾಗಿ ಮುಚ್ಚಲ್ಪಟ್ಟಿದ್ದ ಬ್ರಹ್ಮೇಶ್ವರನ ಗುಡಿಯ ಕದವನ್ನು ತೆಗೆದು, ಬ್ರಹ್ಮೇಶನೆಂಬ ಹೆಸರುಳ್ಳ ಶಿವಲಿಂಗವನ್ನು ಪೂಜಿಸಿದನು. ಮತ್ತು ಸರ್ಪದಿಂದ ಕಚ್ಚಲ್ಪಟ್ಟು ಮೃತನಾಗಿದ್ದ ತನ್ನ ಸ್ನೇಹಿತನನ್ನು ಮನಸ್ಸಿನಲ್ಲಿ ಮೃತ್ಯುಹರನಾದ ಶಿವನನ್ನು ಧ್ಯಾನಿಸುತ್ತಾ ತಿವಿಗಿ ಬದುಕಿಸಿದನು. ಕುಲಶಿರೋಮಣಿಯಾದ ಉತ್ತುಂಗಚೋಳರಾಜನನ್ನು ತನ್ನ ಶಕ್ತಿಯಿಂದ ವಶಪಡಿಸಿಕೊಂಡು, ತನಗೆ ಶಿಷ್ಯನನ್ನಾಗಿ ಮಾಡಿಕೊಂಡನು. ಭೂಮಂಡಲಕ್ಕೆ ಅಲಂಕಾರಭೂತವಾಗಿರುವ ಪಾಂಡ್ಯದೇಶವು ಶಿವಭಕ್ತಿಗೆ ದೂರವಾಗಿ ಜೈನಶಾಸ್ತ್ರವೆಂಬ ಬೆಟ್ಟವನ್ನು ಹತ್ತಿರುವುದೆಂದು ಸಂಗಡ ಇದ್ದ ಭಕ್ತರಿಂದ ಕೇಳಿ, ಶಿವಭಕ್ತೆಯಾದ ರಾಜಪತ್ನಿಯಿಂದಲೂ ಪಾಂಡ್ಯದೇಶದವರಿಂದಲೂ, ಪ್ರಾರ್ಥಿಸಲ್ಪಟ್ಟವನಾಗಿ ಮಧುರಾಪಟ್ಟಣಕ್ಕೆ ಬಂದನು. ಈ ಮಧುರೆಯು ಆಶ್ಚರ್ಯಕರವಾಗಿಯೂ ವಿದ್ವಾಂಸರ ವಿಹಾರಕ್ಕೆ ಯೋಗ್ಯವಾಗಿಯೂ ಇರುವ ಶಂಖಫಲಕವನ್ನು, ಕುಕ್ಷಿಯಲ್ಲಿ ರಕ್ಷಿಸುವಂತೆ ಬಾವಿಯಲ್ಲಿ ಈಗಲೂ ರಕ್ಷಿಸುತ್ತದೆ. ಮತ್ತು ಪ್ರಖ್ಯಾತನಾದ ಪಾಂಡ್ಯರಾಯನ ಬಾಹುದಂಡದಿಂದ ರಕ್ಷಿಸಲ್ಪಟ್ಟ ಈ ಮಧುರಾನಗರಿಯು ದಕ್ಷಿಣದಿ ಗಂಗೆಯ ಮುಖದಲ್ಲಿರುವ ತಿಲಕದಂತೆ ಶೋಭಿ

ಸುತ್ತಿರುವುದು. ಅಂಥಾ ಮಧುರಾನಗರಿಯಲ್ಲಿ ಜ್ಞಾನಸಂಬಂಧನು ಒಬ್ಬಭಕ್ತನ ಮನೆಯಲ್ಲಿ ವಾಸಮಾಡಿದನು. ಜೈನರ ಮನಸ್ಸುಗಳಲ್ಲಿ ಮಹತ್ತರವಾದ ದುಃಖವು ವಾಸಮಾಡಿತು. ಅಲ್ಲಿ ಪರಮತವೆಂಬ ಆನೆಗೆ ಸಿಂಹನು, ಪರಸಮಯವೆಂಬ ಕಟ್ಟಿಗೆಗೆ ಬೆಂಕಿಯಾದವನು, ಪರಮೇಶನ ಯುದ್ಧವೀರನು ಎಂಬ ಕಹಳಾಧ್ವನಿಯು ಕೇಳಬಂತು. ಆ ಜಿನಮುನಿಗಳು ಸಿಂಹಧ್ವನಿಯೋಪಾದಿಯಲ್ಲಿರುವ ಕಹಳಾಧ್ವನಿಯನ್ನು ಕೇಳಿ, ಆನೆಗಳಂತೆ ಮೂರ್ಛಿತರಾದರು. ತರುವಾಯ ಎಲ್ಲರೂ ಕೂಡಿ ಆಲೋಚನೆಯನ್ನು ಮಾಡಿಕೊಂಡು, ತಮ್ಮ ಅರಸನಬಳಿಗೆ ಹೋಗಿ ಕೋಪದಿಂದ ಕೆಂಪಾದ ಕಣ್ಣುಗಳುಳ್ಳವರಾಗಿ ತುಟಿಗಳನ್ನೂ ಕೈಗಳನ್ನೂ ನಡಗಿಸುತ್ತಾ;— ಎಲೈ ಭೂಪತಿಯೇ, ಜೈನಬೌದ್ಧರನ್ನು ದೂಷಿಸುವವನಾಗಿಯೂ ದುರಹಂಕಾರದಿಂದ ತುಂಬಲ್ಪಟ್ಟವನಾಗಿಯೂ ಇರುವ ಶಿವಬ್ರಾಹ್ಮಣರ ಹುಡುಗನೊಬ್ಬನು ಬಂದಿದ್ದಾನೆ. ಇವನನ್ನು ನಮ್ಮ ಪಟ್ಟಣದಿಂದ ಹೊರಡಿಸಬೇಕೆಂದು ಹೇಳಲು,- ಅರಸನು ನೀವು ಹೇಳುವ ಶೈವನು ಶಿವಾಗಮಗಳಲ್ಲಿ ವಿಚಕ್ಷಣನಾಗಿರುವಂತೆ ವೇದಗಳಲ್ಲಿಯೂ ವಿಚಕ್ಷಣನಾಗಿದ್ದಾನೆ. ಉತ್ತುಂಗಚೋಳನಿಗೆ ಗುರುವಾಗಿದ್ದಾನೆ. ಇವನನ್ನು ಹ್ಯಾಗೆ ಹೊರಡಿಸುವುದಕ್ಕಾದೀತು? ನನಗೆ ಗುರುವಾಗಿರುವ ನೀವುಗಳು ಚೋಳರಾಯನಿಗೆ ಗುರುವಾದ ಆತನನ್ನು ಕ್ರಮವಾಗಿ ವಾದದಲ್ಲಿ ಜೈಸಿರಿ. ಆಮೇಲೆ ಆತನನ್ನು ನಾನು ಹೊರಡಿಸುತ್ತೇನೆ. ಎಂದರು. ಅವರು ಹಾಗೇ ಆಗಲೆಂದು ಒಪ್ಪಿ, ಜ್ಞಾನಸಂಬಂಧನೊಡನೆ ವಾದವನ್ನು ಮಾಡಿ ಆತನಿಗೆ ಸೋತು ಹೋಗಿ ಕೋಪದಿಂದ ರಾತ್ರಿವೇಳೆಯಲ್ಲಿ ಎಲ್ಲರೂ ಮಲಗಿ ನಿದ್ರಿಸುತ್ತಿರುವಾಗ, ಆತನ ವಾಸಸ್ಥಳಕ್ಕೆ ಅಗ್ನಿಪ್ರವೇಶವನ್ನು ಮಾಡಿಸಿದರು. ಅಗ್ನಿಯು ಆತನ ವಾಸಗೃಹವನ್ನು ಸುಡುವುದಕ್ಕೆ ಹೆದರಿ ಆತನ ಸನ್ನಿಧಿಗೆ ಬಂದು ನಿಂತುಕೊಳ್ಳಲು, ಜ್ಞಾನಸಂಬಂಧನು ಅಗ್ನಿಯನ್ನು ನೋಡಿ,-ಎಲೈ ಅಗ್ನಿಯೇ, ಪೂರ್ವದಲ್ಲಿ ವೀರಭದ್ರನು ನಿನ್ನ ನಾಲಗೆಗಳನ್ನೂ ಕೈಗಳನ್ನೂ ಕತ್ತರಿಸಿದನು. ಈಗ ಜೈನರಿಂದ ಕಳುಹಿಸಲ್ಪಟ್ಟವನಾಗಿ, ಉಳಿದಿರುವ ಕಿವಿಮೂಗುಗಳನ್ನು ಕತ್ತರಿಸಿಕ್ಕೊಳ್ಳುವುದಕ್ಕೆ ಬಂದಿದ್ದೀಯೋ? ಅವರ ಶಕ್ತಿಯನ್ನು ನೋಡುವೆವು. ನೀನು ಹೋಗಿ ಆ ಜೈನರ ಆಜ್ಞೆಗೆ ಸ್ವಾಧೀನವಾಗಿರುವ ಪಾಂಡ್ಯರಾಯನನ್ನು ತಪಿಸು, ಎಂದು ಹೇಳಲು-ಆತನ ಅಪ್ಪಣೆಯಮೇರೆಗೆ ಅಗ್ನಿಯು ರಾಯನ ದೇಹದೊಳಗೆ ಪ್ರವೇಶಿಸಿ ವುರಿಗಳಪಜ್ಞೆಗಳಿಂದ ಮಸ್ತಕಪರ್ಯಂತರ ಆವರಿಸಿಕೊಂಡು ಪ್ರಜ್ವಲಿಸಿದನು. ಆಗ

ದೇಹದೊಳಗೆಪ್ರವೇಶಿಸಿದ ಬೆಂಕಿಯ ಹುರಿಯಿಂದ ಹಿಡಿಯಲ್ಪಟ್ಟ ಮನಸ್ಸುಳ್ಳ ರಾಯನು, ಪೊಟ್ಟರೆಯ ಒಳಗಡೆಯಲ್ಲಿ ಬೆಂಕಿಯುಳ್ಳ ಮರದಂತೆ ಬಾಡಿದವನಾಗಿ ಕಣ್ಣುಗಳನ್ನು ಬಿಡುವುದಕ್ಕೂ ಮುಚ್ಚುವುದಕ್ಕೂ ನಿಲ್ಲುವುದಕ್ಕೂ ಒಂದು ಹೆಜ್ಜೆಯಷ್ಟು ದೂರ ನಡೆಯುವುದಕ್ಕೂ ಒಂದು ಮಾತನ್ನು ಆಡುವುದಕ್ಕೂ ಸಮರ್ಥನಾಗದೆ ಹೋದನು. ತಾಪದಿಂದ ಮೂರ್ಛಿತನಾಗಿಯೂ ನಿಶ್ಚೇಷ್ಟನಾಗಿಯೂ ಪರವಶನಾಗಿಯೂ ಇರುವ ರಾಜನ ಶ್ರೀಗಂಧರಸದಿಂದ ತೋಯಿಸಲ್ಪಟ್ಟ ಶಿಲಾಪ್ರದೇಶದಲ್ಲಿ ಸೇವಕರುಗಳು ಉಪವನಭೂಮಿಗೆ ತೆಗೆದುಕೊಂಡುಹೋದರು. ಅಲ್ಲಿ ಅಗ್ನಿಯ ಸ್ನೇಹವನ್ನು ಪ್ರಕಾಶಿಸುತ್ತಾ ಪುಂಖಾಪುಂಖವಾಗಿ ಹೊರಡುವ ಉಚ್ಛ್ವಾಸನಿಶ್ವಾಸವಾಯುಗಳಿಂದ ಮರಬಳ್ಳಿಗಳೂ ಕೂಡ ಬಾಡಿಹೋದವು. ಕೆಲವರು ಪರಿಚಾರಿಣಿಯರು ಕಾಲಿನಿಂದ ತಲೆಯವರಿಗೂ ಶ್ರೀಗಂಧರಸವನ್ನು ಬಳಿದುಕೊಂಡು, ಇಮ್ಮಡಿಕೆಯಾಗಿಯೂ, ನಿರ್ಮಲವಾಗಿಯೂ ಸಣ್ಣನಾಗಿಯೂ, ಇರುವ ವಸ್ತ್ರವನ್ನು ನೀರಿನಿಂದ ನೆನಸಿ ಉಟ್ಟುಕೊಂಡವರಾಗಿ ಉದ್ದವಾಗಿಯೂ ಅಗಲವಾಗಿಯೂ ಇರುವ ಬಾಳೇ ಎಲೆಗಳಿಂದ ಮಾಡಲ್ಪಟ್ಟ ಬೀಸಣಿಗೆಗಳಿಗೆ ಪನ್ನೀರನ್ನೂ ಶ್ರೀಗಂಧವನ್ನೂ ಚಿಮುಕಿಸಿ, ಅವುಗಳಿಂದ ಬೀಸಿದರು. ಆತನ ಸಮೀಪಕ್ಕೆ ಹೋದ ಕೆಲವರು ಸ್ತ್ರೀಯರು ಒಳಗೆ ಹೊರಗೆ ವೃದ್ಧಿಹೊಂದುತ್ತಿರುವ ಆತನ ದೇಹದ ಬೆಂಕಿಯ ಉರಿಯಿಂದ ಬಡಿಯಲ್ಪಟ್ಟು ಮೂರ್ಛಿತರಾಗಿ ಬಿದ್ದರು. ಆ ರಾಯನನ್ನು ತೆಗೆದುಕೊಂಡು ಹೋಗಬೇಕೆಂದು ಬಂದ ಯಮದೂತರು ಆತನ ಉಸುರಿನ ಗಾಳಿಯ ವೇಗದಿಂದ ನೂಕಲ್ಪಟ್ಟವರಾಗಿ ಅವನ ಮೈಬೆಂಕಿಯಿಂದ ಸುಡಲ್ಪಟ್ಟು ಬೆಂದು ಆತನನ್ನು ಮುಟ್ಟಲಾರದೆಹೋದರು. ಒಳಗಣ ಅತ್ಯಂತ ತಾಪದಿಂದ ಸಡಲಿದ ಶಕ್ತಿಯೂ ಸಡಗರವೂ ವುಳ್ಳ ಪ್ರಾಣಗಳು ಹೊರಡುವುದಕ್ಕೆ ಅಪೇಕ್ಷೆಯುಳ್ಳವುಗಳಾದಾಗ್ಯೂ ಹೋಗುವುದಕ್ಕೆ ಅಸಮರ್ಥಗಳಾದವು. ಅವಿಚ್ಛಿನ್ನವಾಗಿ ಸುರಿಯುತ್ತಿರುವ ಕಣ್ಣೀರಿನ ಪ್ರವಾಹಕ್ಕೆ ಸಮುದ್ರನಾದ ಆ ರಾಯನ ಉರಿಯುತ್ತಿರುವ ಕಣ್ಣಿನ ಕಾಂತಿಗಳು ಪ್ರಳಯಕಾಲದಲ್ಲಿ ಕೊಳ್ಳಿಗಳಾಗಿ ನಿರ್ಮಿಸಲ್ಪಟ್ಟವು. ಆತನ ಉಸುರಿನ ಗಾಳಿಯ ಅಂಶಗಳು ಸಂಹಾರಕಾಲದ ವಾಯುಗಳಾದವು. ಆತನ ದೇಹತಾಪವೆಂಬ ಬೆಂಕಿಯ ಕಿಡಿಯು ಬಡಬಾಗ್ನಿಯಾಯಿತು. ಆಯುರ್ವೇದದಲ್ಲಿ ಹೇಳಲ್ಪಟ್ಟ ಚಿಕಿತ್ಸಾಪ್ರಾರಂಭಶಕ್ತಿಯಲ್ಲಾ ನಿಂತಿದ್ದರಿಂದ ಆ ತಾಪಕ್ಕೆ ಮೂಲಕಾರಣವನ್ನು ತಿಳಿಯದೆ ವೈದ್ಯರುಕೂಡ ಆಲೋಚಿಸುತ್ತಿದ್ದರು. ಈ ವಿಧವಾದ

ರಾಯನ ಅವಸ್ಥೆಯನ್ನು ದೂತರಮುಖದಿಂದ ತಿಳಿದ ಆತನ ಗುರುಗಳು ನವಿಲು ಗರೀ ದೊಂದೆಯನ್ನು ಹಿಡಿದುಕೊಂಡವರಾಗಿ ಬಂದು ತಾಪದಿಂದ ದುಃಖಿತನಾಗಿಯೂ ನೆಲದಮೇಲೆ ಹೊರಳುತ್ತಿರುವವನಾಗಿಯೂ, ಕ್ಷೀಣವಾದ ತೇಜಸ್ಸುಳ್ಳವನಾಗಿಯೂ ಇರುವ ಆ ರಾಯನನ್ನು ನೋಡಿ, ವಿಶೇಷವಾದ ಮನೋವ್ಯಥೆಯುಳ್ಳವರಾದರು. ಮತ್ತು ಆತನ ತಡೆಯಿಲ್ಲದ ಶರೀರತಾಪದ ಜೆಂಕಿಯಿಂದ ಹೊಡೆಯಲ್ಪಟ್ಟವರಾಗಿ, ಧ್ಯಾನದ ನೆವದಿಂದ ತಮ್ಮ ಕಣ್ಣುಗಳನ್ನು ಮುಚ್ಚಿಕೊಂಡರು. ಅನಂತರ ಪದ್ಮಾವತೀದೇವಿಯನ್ನು ಕುಕ್ಕುಟನಾಥನನ್ನೂ ಮನಸ್ಸಿನಲ್ಲಿ ಧ್ಯಾನಿಸಿ ಕಣ್ಣುಗಳನ್ನು ಬಿಟ್ಟು ತಮ್ಮ ನವಿಲುಗರಿ ಕಟ್ಟಿನಿಂದ ಆತನ ದೇಹವನ್ನು ಸವರಿದರು. ಆತನ ದೇಹಕ್ಕೆದುರಾಗಿ ಹಾಸಿದ್ದ ಚಾಪೆಯು, ಆರಾಯನ ದೇಹದ ಬೆಂಕಿಯಿಂದ ಸುಟ್ಟು ಉಟ್ಟಿರುವ ಬಟ್ಟೆಯಂತೆ ಕುಂಡಿಗೆ ಹತ್ತಿಕೊಳ್ಳುತಿರಲಾಗಿ, ಕೈಗಳನ್ನು ಅವನ ಕಾಲಿನಲ್ಲಿಟ್ಟು ಪದ್ಮಾವತಿ, ಕುಕ್ಕುಟನಾಥ ಮುಂತಾದ ಮಂತ್ರಗಳ ಸಿದ್ಧಿಯುಳ್ಳ ಪಂಚಮಲಧಾರಿಗಳು ಮಂತ್ರಿಸಿ ಹಾಕಿದ ನೀರಿನಿಂದ ಬೆಂಕಿಯು ತುಪ್ಪದಿಂದ ಹೆಚ್ಚುವಂತೆ ತಾಪವು ಹೆಚ್ಚಿತು.

ಆಗ ನಿಷ್ಫಲವಾದ ತಮ್ಮ ಮಂತ್ರಾರ್ಥವುಳ್ಳವರಾಗಿಯೂ, ಗುಪ್ತವಾದ ಬಹಳೆ ದುಃಖಪಡುವವರಾಗಿಯೂ, ಹಾಗಿದ್ದಾಗ್ಯೂ ಗರ್ವವನ್ನು ಹೊಂದಿರುವವರಾಗಿಯೂ ಇರುವ ಜಿನಮುನಿಗಳನ್ನು ಕುರಿತು ಆ ರಾಯನ ಪಟ್ಟದರಾಣಿಯು ಹೇಳಿದ್ದೇನೆಂದರೆ;— ಜೈನತಪಸ್ವಿಗಳ ಮಂತ್ರಶಕ್ತಿಯಲ್ಲವೂ ವ್ಯರ್ಥವಾಗುತ್ತಿರಲಾಗಿ, ನನಗೆ ಧೈರ್ಯವು ಹೋಯಿತು. ಈಗ ನಾನೊಂದು ಮಾತನಾಡುವೆನು. ಏನಂದರೆ—ಜ್ಞಾನಸಂಬಂಧನೆಂಬ ಹೆಸರುಳ್ಳ ಶಿವಾಚಾರ್ಯನು ಬಂದಿದ್ದಾನೆ. ಆತನನ್ನು ಕರಸುತ್ತೇನೆ. ಆತನ ಕೃಪಾದೃಷ್ಟಿಯೇ ನನ್ನ ಪತಿಗೆ ಪ್ರಾಪ್ತವಾಗಿರುವ ರೋಗಕ್ಕೆ ಚಿಕಿತ್ಸೆಯಾಗಿದೆ. ಶಿವಮತಸ್ಥನಾಗಲಿ, ವಿಷ್ಣುಭಕ್ತನಾಗಲಿ, ಶಕ್ತಿಮತದವನಾಗಲಿ, ಮಾಂತ್ರಿಕನಾಗಲಿ, ಯಾವನು ರಾಜನನ್ನು ಬದುಕಿಸುತ್ತಾನೋ ಅವನೇ ನನ್ನ ಕುಲದೈವವು. ಎಂದು ಹೇಳಿದಳು. ಆಕೆಯ ಮಾತನ್ನು ಕೇಳಿದ ಜೈನಗುರುಗಳೆಲ್ಲರೂ ಮನೋವಿಕಾರವನ್ನು ಹೊಂದಿದವರಾಗಿ ಜಿನನನ್ನು ಹೊರತು ಇತರ ದೇವರನ್ನಾಗಲಿ ಅವರ ಭಕ್ತರನ್ನಾಗಲಿ ಸೇವಿಸುವುದರಿಂದ ನಿನಗೆ ಪಾಪವು ಸಂಭವಿಸುವುದು. ನಮ್ಮ ತಪಸ್ಸಿಗೆ ಅಸಾಧ್ಯವಾದದ್ವರಮೇಲೆ ಆ ಶೈವರ ಹುಡುಗನ ಶಕ್ತಿಯು ಹ್ಯಾಗೆ ನಡೆದೀತು? ವಜ್ರಾಯುಧದಿಂದಲೂ ಭೇದಿಸುವುದಕ್ಕೆ

ಆಶಕ್ತವಾದ ಪರ್ವತದಮೇಲೆ ಕತ್ತಿಯಶಕ್ತಿ ನಡೆದೀತೇ? ಮಾಯೆಯಿಂದಕೂಡಿದ ಶಿವನು ಮಾಯಾರಹಿತನಾದ ಜಿನನಮುಂದೆಸಮರ್ಥನಾದಾನೇ? ಅಂಥಾ ಜಿನಭಕ್ತನಮುಂದೆ ಆ ಶಿವಭಕ್ತನಸಾಮರ್ಥ್ಯನಡೆಯುವುದುಂಟೇ? ಆದಕಾರಣದಿಂದ ಈ ಅಸಾಧ್ಯವಾದ ರೋಗವುಅವನಿಂದಾದರೂ ಹೆಚ್ಚುವುದೇಹೊರತುತಗ್ಗುವುದಿಲ್ಲ. ಎಲೌ ಮಂಗಳಾಂಗಿಯೆ ಆ ಶೈವನನ್ನು ಬೇಡಿಕೊಂಡಾಗ್ಯೂ ದುಃಖವಲ್ಲದೆ ಮತ್ತೇನೂ ಸಿದ್ಧಿಸುವುದಿಲ್ಲ. ದೂಷಕರಾದ ಕ್ರೂರಜನರನ್ನು ಪ್ರಾರ್ಥಿಸುವ ವಿಷಯದಲ್ಲಿ ದೈನ್ಯೋಕ್ತಿಗಳನ್ನುಬಿಟ್ಟು, ಸುಮ್ಮನಿರು. ಜಿನನ ಕರುಣೆಯಿಂದ ಕ್ರಮವಾಗಿ ಶುಭವಾಗುವುದುಎಂದು ಆದುರಾಚಾರರಾದ ಜೈನರು ಹೇಳಲು; ಆ ಮಾತನ್ನು ಕೇಳಿ, ಕೋಪಗೊಂಡವಳಾಗಿ ಎಲೈ ಕ್ಷಪಣಕರೆ, ದೂಷಕರಲ್ಲದವರನ್ನು ದೂಷಿಸುವವರು ನೀಚಚಂಡಾಲರಾಗಿ ಎಣಿಸಲ್ಪಡುತ್ತಾರೆ. ವಿದ್ಯಾವಂತನಾದವನು ತನ್ನ ಸಾಮರ್ಥ್ಯವನ್ನು ಹೇಳಿಕೊಳ್ಳುತ್ತಾನೆ. ಅದು ದೂಷಣೆಯಲ್ಲ. ಅವಿದ್ಯಾವಂತನಾದವನು ವಿದ್ಯಾವಂತನನ್ನು ದೂಷಿಸಿದರೆ ಅದೇ ದೂಷಣೆಯು ಎಂಬದಾಗಿ ಹೇಳಿ, ಅನಂತರದಲ್ಲಿ ತನ್ನ ಪತಿಯ ಅನುಮತಿಯಿಂದ ಜ್ಞಾನಸಂಬಂಧನನ್ನು ಕರಸಿದಳು. ಆತನು ಶಿಷ್ಯರಿಂದ ಸ್ತುತಿಸಲ್ಪಟ್ಟವನಾಗಿ ಬಂದನು. ಭಸ್ಮಸ್ನಾನದಿಂದ ನಿರ್ಮಲನೂ, ರುದ್ರಾಕ್ಷಗಳಿಂದ ಅಲಂಕರಿಸಲ್ಪಟ್ಟವನೂ, ಅತಿ ತೇಜಸ್ವಿಯೂ ಆಗಿರುವ ಆ ಜ್ಞಾನಸಂಬಂಧನನ್ನು ರಾಜಪತ್ನಿಯು ಸಾಕ್ಷಾತ್ಪರಶಿವನೆಂದೇ ತಿಳಿದು ನಮಸ್ಕರಿಸಿದಳು. ಆ ಮಹಾನುಭಾವನು–ಎಲೌ ಮಗಳೇ ಪುತ್ರವತಿಯಾಗಿ ಬಹುಕಾಲ ಬದುಕು ಎಂದು ಆಶೀರ್ವದಿಸಿ, ಆಕೆಯ ಹಣೆಯಲ್ಲಿ ವಿಭೂತಿಯನ್ನು ಧರಿಸಿದನು. ವಿಭೂತಿರೇಖೆಯೆಂಬ ಸೌಭಾಗ್ಯರಕ್ಷೆಯ ವಿಧಾನದಲ್ಲಿ ನಿಪುಣೆಯಾದ ಆ ರಾಜಪತ್ನಿಯು ಜೈನರನ್ನು ಧ್ವಂಸಮಾಡುವ ಪ್ರತಿಜ್ಞಾಪತ್ರಿಕೆಯಂತೆ ಮಾತನಾಡಿದ್ದೇನಂದರೆ,–ಎಲೈ ಗುರುವೇ, ಇತರರಿಂದ ಪಡೆಯಲ್ಪಡದಿರುವಂಥವುಗಳಾಗಿಯೂ, ಪಾಪರಹಿತಳಾಗಿಯೂ ಇರುವ ಕರುಣಾಕಟಾಕ್ಷಗಳೆಂಬ ಅಮೃತಗಳಿಂದ ಸ್ನಾನವನ್ನು ಮಾಡಿಸಿ, ಸಂತಾಪದಿಂದ ಮೂರ್ಛೆಯನ್ನುಹೊಂದಿದ ರಾಜನ ಪ್ರಾಣಗಳನ್ನು ರಕ್ಷಿಸು. ಈರೀತಿಯಾಗಿ ಅಂಜಲಿಬದ್ಧಳಾಗಿ ಹೇಳಿದ ದೈನ್ಯಗರ್ಭಿತವಾದ ಆಕೆಯ ಮಾತನ್ನು ಕೇಳಿ, ಆಶ್ಚರ್ಯಕರವಾದ ಪ್ರತಿಜ್ಞಾವಚನವನ್ನು ಹೇಳಿದನು. ಶಿವನು ರಾಜನ ಅರ್ಧಶರೀರವನ್ನು ರಕ್ಷಿಸಲಿ. ಉಳಿದ ಅರ್ಧಶರೀರವನ್ನು ಜಿನನು ರಕ್ಷಿಸಲಿ ಎಂದು ಪ್ರತಿಜ್ಞೆಮಾಡಿ, ಕೈಯಿಂದ ವಿಭೂತಿಯನ್ನು ತೆಗೆದು

ಕೊಂಡು, ಅದನ್ನು ರಾಜನ ದೇಹಕ್ಕೆಲೇಪಿಸಿದನು. ಅನಂತರದಲ್ಲಿ ಆ ದೇಹಾರ್ಧದಲ್ಲಿ ಅಗ್ನಿಯು ಉಳಿದ ದೇಹಭಾಗದಲ್ಲಿಸೇರಿ, ದ್ವಿಗುಣವಾದ ಉರಿಯಿಂದ ವ್ಯಾಪ್ತವಾಗಿ ಬಡಬಾಗ್ನಿ ಜ್ವಾಲೆಗಳ ಸಮೂಹವನ್ನು ಜೈಸಿತು.

ಇಬ್ಬರಿಂದ ಹೊರಲ್ಪಡುವದು ಯಾವದೋ ಅದನ್ನು ಒಬ್ಬನೇ ಹೊರುವದಕ್ಕೆ ಶಕ್ತನಾಗದಂತೆ ದೇಹದಲ್ಲೆಲ್ಲಾ ಇದ್ದ ತಾಪವನ್ನು ಅರ್ಧದೇಹವು ಸಹಿಸುವದಕ್ಕೆ ಶಕ್ತವಾಗಲಿಲ್ಲ. ಒಂದು ಭಾಗದಲ್ಲಿ ತಾಪವನ್ನೂ ಮತ್ತೊಂದುಕಡೆ ತಂಪನ್ನೂ ವಹಿಸಿರುವ ಆತನ ದೇಹವು ವಿಷವನ್ನೂ ಅಮೃತವನ್ನೂ ಧರಿಸಿರುವ ಸಮುದ್ರದ ನೀರಿನಂತೆ ತೋರಿತು. ಅನಂತರದಲ್ಲಿ ಆ ಜಿನಮುನಿಗಳು ರಾಯನ ದುರವಸ್ಥೆಯನ್ನು ನೋಡಿ, ತಮ್ಮ ಭಾಗಕ್ಕೆ ಒಂದಿದ್ದದೇಹಕ್ಕೆ ಬೇಕಾದಷ್ಟು ಕಾಹುಕಟ್ಟುಗಳನ್ನು ಮಾಡಿದರು. ಆ ರಾಯನ ದೇಹಾಗ್ನಿಯಲ್ಲಿ ಅವರ ಮಂತ್ರ ಚಿಹ್ನೆಗಳು. ಪ್ರಚಂಡವಾದ ಬಡಬಾಗ್ನಿಯಲ್ಲಿ ಕೂಸಿನಸೇರೆಯ ನೀರಿನಂತೆ ಕಾಣದೆಹೋದವು. ಒಳಿಕ ಆ ಜೈನರು ನಮ್ಮ ಕೋರಿಕೆಗಳೆಲ್ಲವೂ ಸಿದ್ಧಿಸದೆ ಹೋದದ್ದರಿಂದ ನಿಸ್ತೇಜಸ್ಕವಾದ ಮುಖವುಳ್ಳವರಾಗುತ್ತಿರಲು; ರಾಜನು ತನಗೆ ಅರ್ಧಪ್ರಾಣಗಳನ್ನು ಕೊಟ್ಟತಿರುಜ್ಞಾನಸಂಬಂಡವನ್ನು ಉಳಿದ ಅರ್ಧಪ್ರಾಣವನ್ನೂ ಪಡೆಯುವದಕ್ಕೋಸ್ಕರಸೇವಿಸಿದನು. ಸತ್ಪುಷರಿಗೆ ಬಂಧುವಾದವನೇ, ಗುರುಶ್ರೇಷ್ಠನೇ, ಜ್ಞಾನಸಂಬಂಧನೇ, ದುಷ್ಟಗುರುಗಳೆಂಬ ಬೇಸಿಗೆಯ ತಾಪದಿಂದ ಪೀಡಿತನಾದವನನ್ನು ನಿನ್ನ ಕರುಣೆಯೆಂಬ ಬೆಳ್ದಿಂಗಳಿಂದ ರಕ್ಷಿಸುಎಂದು ತನ್ನ ಒಂದೇ ಕೈಯನ್ನು ಮುಗಿದು ಹೇಳಿಕೊಂಡದ್ದರಿಂದ ಜ್ಞಾನಸಂಬಂಧನು ಉಳಿದ ಅರ್ಧಶರೀರವನ್ನೂ ಭಸ್ಮದಿಂದ ಅಲಂಕರಿಸಿದನು. ವಿಭೂತಿಯೆಂಬ ಶ್ರೇಷ್ಠವಾದ ಔಷಧವನ್ನು ಸವರುವದರಿಂದ ಪರಿಹರಿಸಲ್ಪಟ್ಟ ಒಳಹೊರಗಣತಾಪವುಳ್ಳ ರಾಯನು ಕ್ಷಣಮಾತ್ರದಲ್ಲಿ ಅಮೃತದಕೊಳದಲ್ಲಿ ಮುಳುಗಿದವನಂತೆಸಂತೋಷವಂ ಹೊಂದಿದನು. ಆ ಮಹಾನುಭಾವನ ಕೈಸೋಂಕಿನಿಂದ ಆ ರಾಯನ ದೇಹದ ಜ್ವರವು ಮಾತ್ರವೇ ಹೋಗಲಿಲ್ಲ; ಆತನ ದೇಹವಿಕಾರಕ್ಕೆ ಕಾರಣಭೂತವಾದ ಹುಟ್ಟುಗೂನು ಸಹಹೋಯಿತು. ಕುಬ್ಜತನವು ಹೋಗಿ ಹೊಸಸೌದರ್ಯವು ಬರಲು, ಆ ರಾಯನು ಅದು ಮೊದಲುಗೊಂಡು ಕೂನಪಾಂಡ್ಯನೆಂಬ ಹೆಸರನ್ನು ಬಿಟ್ಟು ಸುಂದರಪಾಂಡ್ಯನೆಂದು ಪ್ರಸಿದ್ಧನಾದನು. ಆಗ ರಾಯನ ದೇಹವೆಂಬ ಕಬ್ಬಿಣವು ಗುರುವಿನ ಕೈಯೆಂಬ ಪರುಷದ ಸೋಂಕಿದಿಂದ ಸುವರ್ಣತ್ವವನ್ನು ಪಡೆಯಿತು. ಗೂನೆಂಬ ವಿಶೇಷವಾದ

ಕಳಂಕವು ತೆಗೆಯಲ್ಪಟ್ಟಿತು. ಪುರೋಹಿತ, ರಾಣಿ ದಳವಾಯಿ, ಪುರಜನ ಮೊದ ಲಾದ ಜನಗಳೆಲ್ಲರೂ ರಾಜನ ಪ್ರಾಣಗಳು ಬದುಕಿದ್ದರಿಂದ ಸಂತೋಷಪಟ್ಟರು. ರಾಯನು ದಯಾಸ್ವರೂಪನಾದ ಗುರುವನ್ನು ಕಿರೀಟ, ಒಡವೆ, ಊರಂಬಳಿ, ಆ ನೆ, ಕುದುರೆ, ಛತ್ರಚಾಮರಗಳಿಂದ ಪೂಜಿಸಿದನು. ಹೀಗೆ ಎಲ್ಲರೂ ರಾಯನಬಳಿ ಯಲ್ಲಿ ಸಂತೋಷದಿಂದ ಕುಳಿತಿರುವಾಗ; ಜ್ಞಾನಸಂಭಧನ ಶಿಷ್ಯನೊಬ್ಬನು ಕೋ ಪಗೊಂಡಿರುವ ಜೈನರನ್ನು ಕುರಿತು;-ಎಲೈ ಕ್ಷಪಣಕರೇ, ರಾಯನಿಗುಂಟಾಗಿದ್ದ ಜ್ವರವನ್ನು ನಿವಾರಿಸುವವಿಷಯದಲ್ಲಿ ಮೊದಲು ಪರಾಜಯವನ್ನು ಹೊಂದಿದವರು, ಈ ದೇಶವನ್ನು ಬಿಟ್ಟುಹೋಗಬೇಕೆಂದು ಉಭಯರಿಂದಲೂ ಪ್ರತಿಜ್ಞೆಮಾಡಲ್ಪಟ್ಟಿ ತಷ್ಟೆ. ಮೊದಲು ಪ್ರತಿಜ್ಞೆಮಾಡಿದರೀತಿಯಲ್ಲಿ ನಡಿಸುವದು ಮನುಷ್ಯರಿಗೆ ನ್ಯಾ ಯುವಲ್ಲವೇ ? ಎನಲು, ಆ ಮಾತುಗಳನ್ನು ಕೇಳಿ ಆ ನೀಚಜೈನರು-ಜ್ವರವನ್ನು ಪ ರಿಹರಿಸಿದ ಮಾತ್ರದಲ್ಲಿ ಈ ಬ್ರಾಹ್ಮಣನು ಪೂಜ್ಯನಾಗುವಲ್ಲಿ ಸಕಲರೋಗಗಳನ್ನೂ ಪರಿಹರಿಸುವ ವೈದ್ಯರು ಮಾಡಿದ ಅಪರಾಧವೇನು ? ಆದಕಾರಣ ವೈದ್ಯರಿಂದಾಗ ತಕ್ಕ ಜ್ವರಪರಿಹಾರವನ್ನು ಮಾಡಿದಮಾತ್ರದಿಂದ ಜಯವಲ್ಲ. ನೀನು ಒಪ್ಪಿಕೊಂ ಡರೆ ಈಗ ಪ್ರತಿಜ್ಞೆಯನ್ನು ಹೇಳುತ್ತೇವೆ. ಏನಂದರೆ-ಒಂದು ಪತ್ರಿಕೆಯಲ್ಲಿ ಶಿವ ಮಂತ್ರವನ್ನೂ, ಒಂದು ಪತ್ರಿಕೆಯಲ್ಲಿ ಜಿನಮಂತ್ರವನ್ನೂ ಬರೆದು, ಬೆಂಕಿಯಲ್ಲಿ ಹಾಕಿದಲ್ಲಿ ಯಾವ ಪತ್ರಿಕೆಯು ಬೇಯುವದಿಲ್ಲವೋ ಅದೇಜಯಪತ್ರಿಕೆಯೆಂದು ಹೇಳಿದರು. ಬಳಿಕ ಜ್ಞಾನಸಂಬಂಧನು ನಾಯಿಮೂಳೆಯು ಚಿನ್ನದಗಟ್ಟಿಯ ಸಂಗಡಲೂ, ಸೌದೆಯು ಶ್ರೀಗಂಧದಮರದ ಸಂಗಡಲೂ, ತಕ್ಕಡಿಯಲ್ಲಿಟ್ಟರೆ ಆ ವೆರಡು ಚಿನ್ನಕ್ಕೂ ಶ್ರೀಗಂಧಕ್ಕೂ ಸಮನಾದಾವೇ ? ಅದರಂತೆ ತ್ರಾಸಿನಲ್ಲಿ ಒಂ ದುಕಡೆ ಇಡಲ್ಪಟ್ಟ ಜಿನನಾಮಾಂಕಿತವಾದ ಪತ್ರವು ಶಿವನಾಮಾಂಕಿತವಾದ ಪ ತ್ರಕ್ಕೆ ಸಮಾನವಾಗುವದಿಲ್ಲ. ಎಂದು ಹೇಳಿ, ಒಂದು ಓಲೆಯಗರಿಯಲ್ಲಿ ಶಿವ ಎಂಬ ಎರಡಕ್ಷರಗಳನ್ನು ಬರೆದು ಅದನ್ನು ರಾಯನ ಕೈಗೆ ಮೊದಲು ಕೊಟ್ಟನು. ಆಮೇಲೆ ಆ ಜೈನಮುನಿಗಳು ಜಿನ ಎಂಬ ಎರಡಕ್ಷರಗಳನ್ನು ಮತ್ತೊಂದು ಪತ್ರ ದಲ್ಲಿ ಬರೆದು, ಅದನ್ನು ಅರಸನ ಕೈಗೆ ಕೊಟ್ಟರು ಪಟ್ಟಣದ ಜನರೂ ದೇಶದಜ ನರೂ ಸುತ್ತಲೂ ನಿಂತು ನೋಡುತ್ತಿರಲು ; ಅರಸನು ಆ ಎರಡು ಪತ್ರಿಕೆಗಳನ್ನೂ ಉರಿಯುವ ಬೆಂಕಿಯಲ್ಲಿ ಹಾಕಿದನು. ಜೈನಪತ್ರಿಕೆಯು ನಿಮಿಷಮಾತ್ರದಲ್ಲಿ ಅವರ ಇಚ್ಛೆಗಳೊಡನೆ ಬೆಂಕಿಯಲ್ಲಿ ಬೂದಿಯಾಯಿತು. ಶೈವಪತ್ರಿಕೆಯು ಸೂರ್ಯಕಿ

ರಣದಿಂದ ಸೋಕಲ್ಪಟ್ಟ ತಾವರೆಯಂತೆ ಕಳಕಳಿಸಿತು. ವೈರಿಗಳ ಮುಖಗಳು ಪ್ರಾತಃಕಾಲದ ಚಂದ್ರನಿಗೆ ಸಮಾನಗಳಾದವು. ಶಿವಭಕ್ತರ ಮುಖಗಳು ಪ್ರಾತಃಕಾಲದ ಕಮಲಕ್ಕೆ ಸಮಾನಗಳಾದವು.

ಈ ರೀತಿಯಾಗಿ ಜೈನರು ಸೋತುಹೋದವರಾದಾಗ್ಯೂ ಮತ್ತೂ ರಾಯನನ್ನು ಕುರಿತು–ಎಲೈ ಪ್ರಭುವೇ, ಮೂರುವೇಳೆ ತೋರಿಸಿದರೆ ಈತನು ಪ್ರತಿಜ್ಞೆಯೇ ಉತ್ತಮವಾದದ್ದಾಗಲಿ, ಈ ಎರಡು ಪತ್ರಿಕೆಗಳನ್ನು ಹೊಳೆಯಲ್ಲಿ ಹಾಕಿದಲ್ಲಿ ಯಾವದು ಹೊಳೆಗೆ ಇದಿರೇರುತ್ತದೆಯೋ ಅದೇ ಜಯಪತ್ರಿಕೆಯು, ಎಂದು ಹೇಳಿದರು. ಜ್ಞಾನಸಂಬಂಧನು ಕೇಳಿ, ಕೋಪದಿಂದ ರಾಯನಿಗೆ–ಎಲೈ ಅರಸನೇ, ವಾದಿಗಳಾದ ನಮ್ಮಿಬ್ಬರಿಗೆ ಮರಣಪರ್ಯಂತವಾದ ಪಣಬಂಧವನ್ನು ವಿಧಿಸುತ್ತೀಯಾ ಏನು; ಹಾಗಾದರೆ ಸೋತವರನ್ನು ತೀಕ್ಷ್ಣವಾದ ಶೂಲಕ್ಕೇರಿಸಬೇಕು. ಇದಕ್ಕೆ ಸಮ್ಮತಿಸಿದರೆ ಮತ್ತೂ ಪರೀಕ್ಷಿಸಲಿ. ಎಂದು ಹೇಳಲು, ಜೈನರೆಲ್ಲರೂ ಹಾಗೇ ಆಗಲಿಎಂದು ಸಮ್ಮತಿಸಿದರು. ಆಗ ರಾಯನು ಅಲ್ಲಿದ್ದ ಜೈನರನ್ನೆಲ್ಲಾ ಸಂಗಡ ಕರಕೊಂಡು ನದೀತೀರವನ್ನೈದಿ, ಅಲ್ಲಿ ಎರಡು ಪತ್ರಿಕೆಗಳನ್ನೂ ನೀರೊಳಗೆ ಹಾಕಿ–ತಾಯಿ, ಸತ್ಯವಾದದ್ದು ಯಾವದೋ ಅದನ್ನು ಹೇಳು ; ಎಂದು ನದಿಗೆ ಹೇಳಲು ; ಶಿವನಾಮಾಂಕಿತವಾದ ಪತ್ರಿಕೆಯು ಪ್ರವಾಹಕ್ಕೆ ಎದುರಾಗಿ ಹೋಯಿತು. ಆಗ ಶಿವಭಕ್ತರೆಲ್ಲರೂ ಸಂತೋಷದಿಂದ ಹರಮಹಾದೇವ, ಹರಮಹಾದೇವ ಎಂದು ಗಟ್ಟಿಯಾಗಿ ಉಚ್ಚರಿಸಿದರು. ಆಗ ಜ್ಞಾನಸಂಬಂಧನು ರಾಯನಿಂದ ಕೊಡಲ್ಪಟ್ಟ ಕ್ರೂರರಾದ ಭಟರನ್ನು ಕಳುಹಿಸಿ, ಶಿವದೂಷಕರಾದ ಜೈನಚಂಡಾಲರನ್ನೆಲ್ಲಾ ಹಿಡಿತರಿಸಿ, ಅವರೊಳಗೆ ಶಿವನಾಮೋಚ್ಚಾರಣೆಯಲ್ಲಿ ಆಸಕ್ತರಾದವರನ್ನೂ, ಶಿವಶಿವ ಎಂದು ಕೂಗುವವರನ್ನೂ, ಭಸ್ಮರುದ್ರಾಕ್ಷಗಳಿಂದ ಅಲಂಕರಿಸಲ್ಪಟ್ಟ ದೇಹವುಳ್ಳವರನ್ನೂ, ಪ್ರೀತಿಯಿಂದಾಲಿಂಗಿಸಿ ಅವರನ್ನು ಬಿಟ್ಟು ಉಳಿದವರನ್ನು ಶೂಲಕ್ಕೆ ಹಾಕಿಸಿ, ಆ ದೇಶವನ್ನೆಲ್ಲಾ ಭಸ್ಮದಿಂದ ಪಡೆಯಲ್ಪಟ್ಟ ಪಾವನತೆಯುಳ್ಳದ್ದನಾಗಿ ಮಾಡಿದನು. ಅದು ಮೊದಲ್ಗೊಂಡು ಆ ದೇಶವು ವಿಭೂತಿಯಿಂದಲೂ, ರುದ್ರಾಕ್ಷದಿಂದಲೂ, ಪರಿಶುದ್ಧವಾದದ್ದಾಯಿತು. ಎಲಾ ಜೈನನೇ ಈ ಜ್ಞಾನಸಂಬಧನ ಚರಿತ್ರೆಯನ್ನು ನೀನು ಕೇಳಿಲ್ಲವೇ?

ರಾಜಾಧಿರಾಜನಾದ ಸುಂದರಪಾಂಡ್ಯರಾಯನ ಮೇಲೆ ಪ್ರಸರಿಸಲ್ಪಟ್ಟ ಬಹುಕರುಣೆಯೆಂಬ ಪ್ರವಾಹದಿಂದ ಮನೋಹರವಾದ ಜ್ಞಾನಸಂಬಂಧನೆಂಬ

ಭಕ್ತವರ್ಯನಕಥೆಯೆಂಬ ನದಿಯಲ್ಲಿ ಯಾವನು ನಿತ್ಯದಲ್ಲಿಯೂ ಸ್ನಾನವನ್ನು ಮಾಡುತ್ತಾನೋ ಅನೇಕಪಾಪಗಳು ನಾಶವಾಗುವದರಿಂದ ನಿರ್ಮಲವಾದ ಮನಸ್ಸುಳ್ಳವನಾಗಿಯೂ, ದುಃಖಗಳಿಂದ ಬಿಡಲ್ಪಟ್ಟ ಬುದ್ಧಿಯುಳ್ಳವನಾಗಿಯೂ ಇರುವ ಆತನಿಗೆ, ವಿರೋಧಿಗಳಾದ ಪಂಡಿತರನ್ನು ಜೈಸುವ ವಿದ್ಯೆಯೂ, ವಾಕ್ಚಾತುರ್ಯವೂ ಸಿದ್ಧಿಸುವವು.

ಬಸವೇಶವಿಜಯದಲ್ಲಿ ಮುವ್ವತ್ತೇಳನೆಯ ಅಧ್ಯಾಯವು
ಸಂಪೂರ್ಣ.

---

## ಮೂವತ್ತೆಂಟನೆಯ ಅಧ್ಯಾಯವು.

---

ಇದಲ್ಲದೆ ಏಕಾಂತರಾಮಯ್ಯನು ಆ ಜೈನನಿಗೆ ಹೇಳಿದ್ದೇನಂದರೆ;—ಎಲಾ ಬುದ್ಧಿಹೀನನೇ, ಶಿವಭಕ್ತರ ಮಹಿಮೆಯನ್ನು ಇನ್ನೂ ಹೇಳುತ್ತೇನೆ. ನಿಡುಮಾರನೆಂದು ಪ್ರಸಿದ್ಧನಾದ ಒಬ್ಬ ಶಿವಭಕ್ತರಾಜನು ಜೈನರಿಂದಾಕ್ರಮಿಸಲ್ಪಟ್ಟ ತನ್ನ ದೇಶವನ್ನು ನೋಡಿ;-ನನ್ನ ದೇಶದಲ್ಲಿ ಔಷಧಕ್ಕಾದರೂ ಒಬ್ಬ ಶಿವಭಕ್ತನಿಲ್ಲವಲ್ಲಾ ಎಂದು ಚಿಂತಾಕ್ರಾಂತನಾಗಿ ಕೆಲವು ಕಾಲವನ್ನು ಕಳೆಯುತ್ತಾ ಇದ್ದನು.

ಒಂದಾನೊಂದುದಿನ ಆ ರಾಯನು, ಜೈನರನ್ನು ಶೂಲಕ್ಕೆ ಹಾಕಿಸುವದರಲ್ಲಿ ನಿಪುಣವಾದದ್ದೆಂದು ಪಾಂಡ್ಯದೇಶದಲ್ಲಿ ಪ್ರಖ್ಯಾತಿಗೊಂಡಿರುವ ಜ್ಞಾನಸಂಬಂಧನ ವೈಭವವನ್ನು ಕೇಳಿ, ಆ ಮಹಾತ್ಮನ ವ್ಯಾಪಾರವನ್ನು ತಿಳಿದು, ಹಾಗೆಯೇ ಮಾಡಿ ತನ್ನದೇಶದಲ್ಲಿಯೂ ಶಿವಭಕ್ತಿಯನ್ನುಂಟು ಮಾಡಬೇಕೆಂದು ಅಪೇಕ್ಷಿಸಿದವನಾಗಿ, ಜೈನರನ್ನೂ ಅವರ ಗುರುಗಳನ್ನೂ ಕರತರಿಸಿ, ಪಾಂಡ್ಯದೇಶದಲ್ಲಿ ಜ್ಞಾನಸಂಬಂಧನು ಜೈನರನ್ನು ಜಯಿಸಿದ ಸಂಗತಿಯನ್ನು ತಿಳಿಸಿ-ನೀವು ಕೂಡ ಶಿವಭಕ್ತರಾಗಿರಿ ಇದನ್ನು ತಿರಸ್ಕರಿಸಿದರೆ ನಿಮ್ಮನ್ನು ಶೂಲಕ್ಕೆ ಹಾಕಿಸುವೆನೆಂದು ಹೇಳಿದನು. ಅವರು ಆ ಮಾತನ್ನು ಕೇಳಿ,-ಎಲೈ ರಾಯನೇ, ನೀನು ಪಾಂಡ್ಯರಾಯನಂತೆ ವಾದದಲ್ಲಿ ನಮ್ಮನ್ನು ಗೆದ್ದು ಶೂಲಕ್ಕೆ ಹಾಕಿಸೆನಲು; ರಾಯನು ಹಾಗೇ

ಆಗಲಿಯೆಂದು, ಶಿವಾನಂದನೆಂಬ ಹೆಸರುಳ್ಳ ಗುರುವನ್ನು ಕರಸಿ, ಅವರ ಮುಖ ದಿಂದ ನಾನಾವಿಧವಾದ ವಾದಗಳಲ್ಲಿ ಆ ಜೈನರನ್ನು ಜೈಸಿದನು. ಆ ಶೈವಾಚಾ ರ್ಯನಿಂದ ಜೈಸಲ್ಪಟ್ಟವರಲ್ಲಿ ಕೆಲವರು ಇ ಗುರುವಿಗೆ ಶರಣಾಗತರಾದರು. ಆತ ನಿಗೆ ಪ್ರತಿಕೂಲರಾದ ಕೆಲವರನ್ನು ಆ ರಾಯನು ಶೂಲಕ್ಕೆ ಹಾಕಿಸಿ, ಅದು ಮೊದಲುಗೊಂಡು ತನ್ನ ದೇಶವೆಲ್ಲಾ ಶಿವಭಕ್ತಿಯಿಂದ ಭರಿತವಾದದ್ದನ್ನು ನೋಡಿ, ಸಂತೋಷದಿಂದ ಪ್ರಜಾಪಾಲನೆಯನ್ನು ಮಾಡಿದನು. ಎಲಾ ಜೈನಾಧಮನೇ ಈ ಸಂಗತಿಯನ್ನು ನೀನು ಕೇಳಿಲ್ಲವೇ ?

ಇದಲ್ಲದೆ ಚೆಲತಿರುವಾಲೂರೆಂದು ಪ್ರಸಿದ್ಧವಾದ ಪಟ್ಟಣದಲ್ಲಿ ನಮಿನಂದಿ ಯೆಂಬ ನಾಮಧೇಯವುಳ್ಳ ಒಬ್ಬ ಶಿವಭಕ್ತಶಿರೋಮಣಿ ಯಿದ್ದನು. ಅವನು ಪ್ರತಿದಿನವೂ ಆ ಊರಲ್ಲಿ ತುಪ್ಪವನ್ನು ತಿರಿದುತಂದು ಅದರಿಂದ ಶಿವನ ಸನ್ನಿಧಿಯಲ್ಲಿ ಪ್ರತಿದಿನವೂ ಸಹಸ್ರದೀಪಗಳನ್ನು ಹಚ್ಚುವ ವ್ರತವನ್ನು ದೃಢವಾಗಿ ಹಿಡಿದು, ಜೈನ ರಿಗೆ ಭಯಪಡದೆ ಯಿದ್ದನು. ಅದನ್ನು ಸೈರಿಸದ ಜೈನರು ಇವನು ಹಾಳುಗುಡಿ ಯಲ್ಲಿ ದೀಪಗಳನ್ನುಹಚ್ಚಿ ಬೆಳಕು ಮಾಡುತ್ತಾನಲ್ಲಾ ಎಂದು ದುಃಖಗೊಂಡವ ರಾಗಿ ಅವನಿಗೆ ತುಪ್ಪವನ್ನು ಕೊಡದಂತೆ ಆ ಊರಿನವರಿಗೆ ಕಟ್ಟು ಮಾಡಿದರು. ಬಳಿಕ ಆ ಭಕ್ತನು ಆ ಊರಿನಲ್ಲಿ ಎಂದಿನಂತೆ ಯಾಚಿಸಿ ತುಪ್ಪ ದೊರೆಯದೆ ಹೋ ದ್ದರಿಂದ ಬಹುದುಃಖಗೊಂಡು ದೇವಾಲಯಕ್ಕೆಬಂದು,-ಎಲೈ ಸ್ವಾಮಿ! ಜೈನ ರಿಂದ ಅಡ್ಡಿಮಾಡಲ್ಪಟ್ಟ ಈ ಊರಿನವರು ಯಾಚಿಸುವ ನನಗೆ ತುಪ್ಪವನ್ನು ಕೊಡ ಲಿಲ್ಲ. ಸಾವಿರ ದೀಪಗಳೊಳಗೆ ಒಂದು ದೀಪವಾದರೂ ಆರಿದರೆ ಕೂಡಲೆ ಪ್ರಾಣ ವನ್ನು ಬಿಡುತ್ತೇನೆ. ಪ್ರತಿಜ್ಞಾಭಂಗವಾದ ಮೇಲೆ ಈ ಪ್ರಾಣಗಳನ್ನಿಟ್ಟು ಕೊಂ ಡದ್ದರಿಂದೇನು ಫಲ? ಎಂದು ಬಿನ್ನೈಸಿಕೊಳ್ಳಲು; ಆ ಲಿಂಗಮೂರ್ತಿಯೊಳಗ ಣಿಂದ;-ಎಲೈ ಭಕ್ತನೇ, ಇನ್ನುಮೇಲೆ ಈ ಕೊಳದ ನೀರಿನಿಂದಲೇ ದೀಪಗಳನ್ನು ಉರಿಸು ಎಂಬ ಅರ್ಥವುಳ್ಳ ಒಂದು ಅದ್ಭುತನಾದವುಂಟಾಯಿತು. ನಮಿನಂದಿಯು ಶಿವನ ಅಪ್ಪಣೆಯಿಂದ ತನ್ನ ವ್ರತಕ್ಕೆ ಭಂಗವುಂಟಾಗದಂತೆ ನಿತ್ಯದಲ್ಲಿಯೂ ಹಗಲಿ ರುಳು ಲೆಕ್ಕವಿಲ್ಲದಷ್ಟು ದೀಪಗಳನ್ನು ಕೊಳದ ನೀರಿನಿಂದಲೇ ಉರಿಸಿದನು. ಬಳಿಕ ಶಿವಾಜ್ಞೆಯಿಂದ ಆ ಪೂರಿನವರ ಮನೇ ಹಸುಗಳೆಲ್ಲವೂ ಕರುಗಳು ಸಹಿತವಾಗಿ ಸತ್ತುಹೋದವು. ಅದರಿಂದ ಊರಿನವರು ಭಯಪಟ್ಟವರಾಗಿ ಆ ಭಕ್ತನನ್ನೇ ಮರೆ ಹೊಕ್ಕರು. ಆ ಊರಿನ ಜೈನರೂ ಜೈನಗುರುಗಳೂ ಒಂದು ಪಾದಾಕ್ರಾಂತರಾ

ಗಲು; ಅವರೆಲ್ಲರಿಗೂ ಭಸ್ಮರುದ್ರಾಕ್ಷಾದಿಶಿವಚಿಹ್ನೆಗಳನ್ನು ಕೊಟ್ಟು, ಅವರ ಗೋವುಗಳನ್ನು ಬದುಕಿಸಿದನು. ಎಲೈ ಜೈನನೇ, ಈ ನಮಿನಂದಿಯ ಚರಿತ್ರೆಯು ಲೋಕಪ್ರಸಿದ್ಧವಾಗಿವೆ. ನೀನು ಕೇಳಿಲ್ಲವೇ. ಅಂಥಾ ಮತ್ತೊಂದು ಚರಿತ್ರೆಯನ್ನು ಹೇಳುತ್ತೇನೆ ಕೇಳು.

## ಸಾಂಖ್ಯತೊಂಡನಕಥೆ.

ಚೋಳದೇಶಕ್ಕೆ ಅಲಂಕಾರವಾದ ಚೋಡಮಂಡವೆಂಬ ಊರಿನಲ್ಲಿ ಬುದ್ಧಮತಸ್ಥರಲ್ಲಿ ಒಬ್ಬ ಭಕ್ತನು ಹುಟ್ಟಿದನು. ಜ್ಞಾನವಂತನಾದ ಅವನು ಪೂರ್ವಜನ್ಮದ ವಾಸನಾಬಲದಿಂದ ತನಗೆ ಒಂದು ಶಿವಲಿಂಗವು ಗೋಚರವಾಗಲು, ಅದನ್ನು ಯಾರಿಗೂ ಕಾಣಿಸದೆ ಗುಪ್ತವಾಗಿ ಜೋಪಾನಮಾಡಿದನು. ಶಿವಪೂಜೆಗೆ ಯೋಗ್ಯವಾದ ಸಾಮಗ್ರಿಗಳನ್ನು ಸಂಪಾದಿಸುವುದಕ್ಕೆ ಉಪಾಯವನ್ನು ಕಾಣದೆ, ಹಾಳುಗುಡಿಯಲ್ಲಿರುವ ಶಿವಲಿಂಗದಮುಂದೆ ನಿಂತು ವಿಜ್ಞಾಪಿಸಿದ್ದೇನೆಂದರೆ:— ಎಲೈ ಶಾಂಭಮೂರ್ತಿಯೇ, ಹೊಲೆಯನ ಹಿತ್ತಲಲ್ಲಿ ಬಿಲ್ವವೃಕ್ಷವನ್ನು ಹುಟ್ಟಿಸಿದಂತೆ, ಅಸುದ್ಧವಾದ ಬೌದ್ಧಕುಲದಲ್ಲಿ ನನ್ನನ್ನು ಹುಟ್ಟಿಸಿದೆ. ನಿನ್ನ ಪಾದಪೂಜೆಯನ್ನು ಮಾಡಿಕೊಂಡಿರುವುದಕ್ಕೆ ನನಗೆ ಶಕ್ತಿಸಾಲದು. ಪೂಜೆಯನ್ನು ಮಾಡದೆ ಜೀವಿಸಿಕೊಂಡೂ ಇರಲಾರೆನು. ಆದಕಾರಣ ನಾನು ಪ್ರತಿದಿನವೂ ಮೂರು ಮೂರು ಕಲ್ಲುಗಳಿಂದ ನಿನ್ನನ್ನು ಪೂಜಿಸುತ್ತೇನೆ. ಎಲೈ ಸ್ವಾಮಿಯೇ, ಆ ಪೂಜೆಯನ್ನು ನೀನು ಅರಳಿದ ಕನ್ನೈದಿಲೇಹೂವಿನ ಪೂಜೆಯೆಂದು ತಿಳಿದು ಸ್ವೀಕರಿಸಬೇಕು; ಎಂದು ವಿಜ್ಞಾಪಿಸಿ, ಸ್ಥಿರಹೃದಯನಾಗಿ ಅಂದಿನಿಂದ ನಿತ್ಯದಲ್ಲಿಯೂ ಕಲ್ಲುಗಳಿಂದ ಶಿವನನ್ನು ಪೂಜಿಸುತ್ತಾ, ಬೌದ್ಧರಿಗೆ ಸಂತೋಷವನ್ನುಂಟುಮಾಡಿಕೊಂಡಿದ್ದನು. ಒಂದಾನೊಂದುಕಾಲದಲ್ಲಿ ಮಳೆಸುರಿದು ದಡವನ್ನುಕಟ್ಟಿ ಹರಿಯುತ್ತಿರುವ ಹೊಳೆಯಿಂದ ಮೂರು ದಿವಸತನಕ ಮಾರ್ಗಕ್ಕೆ ತಡೆಯಾಗಲು ಸಾಂಖ್ಯತೊಂಡನು ಶಿವಾಲಯಕ್ಕೆ ಹೋಗಲಿಲ್ಲ.

ಆ ಕಾಲದಲ್ಲಿ ಶಿವಪೂಜೆಯು ನಿಂತುಹೋದದ್ದರಿಂದ ಉಪವಾಸವನ್ನು ಮಾಡಿ, ಬಳಲಿದ ಇಂದ್ರಿಯಗಳುಳ್ಳವನಾಗಿ ಬಡವಾದನು. ಕ್ರಮವಾಗಿ ಹೊಳೆಯು ಇಳಿದುಹೋದಮೇಲೆ ಶಿವಾಲಯಕ್ಕೆ ಹೋಗಿ, ಮೂರುದಿನಗಳಲ್ಲಿ ಸಮರ್ಪಿಸುವುದಕ್ಕೆ ಯೋಗ್ಯವಾದ ಕಲ್ಲಿನಷ್ಟು ಭಾರವುಳ್ಳ ಒಂದು ಕಲ್ಲನ್ನು ತೆಗೆದು

ಕೊಂಡು ಲಿಂಗದ ತಲೆಯಮೇಲೆ ಹಾಕಿದನು. ಆ ಕಲ್ಲು ಭಕ್ತನ ಭಕ್ತಿಯಿಂದ ಶಿವನಿಗೆ ಹೂವಿನ ಗೊಂಚಲಾಯಿತು. ಹಾಗೆ ಆ ಭಕ್ತನ ಪೂಜೆಗೆ ಮೆಚ್ಚಿದ ಶಿವನು ಪ್ರತ್ಯಕ್ಷನಾಗಿ, ಅಯ್ಯಾ ಮಗನೇ, ನಿನ್ನ ವ್ರತಕ್ಕೆ ನಾನು ಸಂತುಷ್ಟನಾಗಿದ್ದೇನೆ; ವರವನ್ನು ಕೇಳು. ಎಂದು ಆಜ್ಞಾಪಿಸಲು; ಸಾಂಖ್ಯತೊಂಡನು ಕೈಗಳನ್ನು ಜೋಡಿಸಿಕೊಂಡು ಸ್ತೋತ್ರವನ್ನು ಮಾಡಿದನು. ಹ್ಯಾಗಂದರೆ;—

ಬ್ರಹ್ಮವಿಷ್ಣುಗಳಿಗೂ ಅಗೋಚರವಾದ ಮಸ್ತಕಪಾದಗಳುಳ್ಳ ನಿನಗೆ ನಮಸ್ಕಾರವು. ವೇದಗಳು ನಿನ್ನನ್ನು ಸ್ತುತಿಸುವುದಕ್ಕೂ ಉಪನಿಷತ್ತುಗಳು ನಿನ್ನ ತತ್ವವನ್ನು ನಿರ್ಣಯಿಸುವುದಕ್ಕೂ, ಸಮರ್ಥಗಳಲ್ಲ. ಯೋಗಿಗಳೂ ನಿನ್ನನ್ನು ಕಾಣಲಾರರು. ಆದ್ದರಿಂದ ಸಾಮಾನ್ಯಸೇವಕನಾದ ನಾನು ಕಾಣಬಲ್ಲೆನೇ? ಶಾಸ್ತ್ರಪುರಾಣಗಳ ಅನೇಕ ಯುಕ್ತಿಗಳಿಂದಲೂ ಈ ವಿಧವಾಗಿದ್ದೀಯೆಂದು ಹೇಳುವುದಕ್ಕೆ ಅಶಕ್ತನಾಗಿರುವಲ್ಲಿ ಅಲ್ಪನಾದ ನನ್ನಿಂದ ಹೇಳುವುದಕ್ಕೆ ಅಶಕ್ಯನಾಗಿರುವಲ್ಲಿ ಅಲ್ಪನಾದ ನನ್ನಿಂದ ಹೇಳುವುದಕ್ಕೆ ಹ್ಯಾಗೆ ಶಕ್ಯನಾದೀಯೆ? ಎಲೈ ಪರಮೇಶ್ವರನೇ, ನಾನು ನಿತ್ಯದಲ್ಲೂ ನಿನ್ನನ್ನು ಕಲ್ಲುಗಳಿಂದ ಹೊಡೆದಾಗ್ಯೂ ನನ್ನನ್ನು ಸಂತೋಷಪಡಿಸಿದ್ದೀಯೆ. ನಿನ್ನ ಕೃಪೆಯು ಆಶ್ಚರ್ಯವು. ಭಕ್ತಿಯಿದ್ದರೆ ಸ್ತೋತ್ರವೂ ದೂಷಣೆಯೂ, ಹಿತವೂ ಅಹಿತವೂ ಕಿರಾತನೂ ಬ್ರಾಹ್ಮಣನೂ ಎಲ್ಲವೂ ನಿಮಗೆ ಸಮವೇ. ಸ್ತೋತ್ರವನ್ನು ಮಾಡಿದ ಪಲ್ಲಣ್ಣನು ನಿಂದೆಯನ್ನು ಮಾಡಿದ ನಂಬಿಯು ಇವರಿಬ್ಬರೂ ಬ್ರಹ್ಮವಿಷ್ಣುಗಳಿಂದಲೂ ಪಡೆಯುವುದಕ್ಕೆ ಆಗದ ನಿನ್ನ ಸಾಮೀಪ್ಯ ಪದವಿಯನ್ನು ಹೊಂದಿದರು. ಎಲ್ಲರೂ ನಿನ್ನನ್ನು ಹೂವಿನಿಂದ ಪೂಜಿಸುತ್ತಾರೆ. ನಾನಾದರೋ ಕಲ್ಲಿನಿಂದ ಪೂಜಿಸಿದನು. ಹೂವಿನಿಂದ ಪೂಜಿಸಿದವರಿಗೆ ಪ್ರಸನ್ನನಾದಂತೆ ನನಗೂ ಆದೆ. ಕಣ್ಣಪ್ಪನು ಅವನನ್ನು ವಿರೋಧಿಸಿದ ಬ್ರಾಹ್ಮಣನು ಇವರಿಬ್ಬರೂ ನಾಶರಹಿತವಾದ ಸಾಯುಜ್ಯಪದವಿಯನ್ನು ಸಮವಾಗಿ ಪಡೆದರು. ಎಲೈ ತ್ರಿನೇತ್ರನೇ, ಮೃತ್ಯುವನ್ನು ಜೈಸಿದವನೇ, ಜಯಶೀಲನಾಗು; ಜಗದೀಶನೇ ರಕ್ಷಿಸು. ಎಂದು ನಮಸ್ಕರಿಸಿ, ಅತ್ಯುತ್ತಮವಾದವರವನ್ನು ಕೇಳಿದನು. ಏನಂದರೆ,–ಎಲೈ ಸ್ವಾಮಿಯೇ, ನಾನುವಾಸವಾಡುವ ದೇಶದಲ್ಲಿ ಬೌದ್ಧಮತಾಚಾರಗಳೂ, ಜೈನರು, ನಿಂದಕರೂ ಇಲ್ಲದಂತಾಗಲಿ. ಎಂದು ವರವನ್ನು ಕೇಳಲು, ಶಿವನು ಹಾಗೆ ಆಗಲಿ ಯೆಂದು ಅಪ್ಪಣೆಯಂ ಮಾಡಿದ್ದರಿಂದ ಆ ದೇಶವು ಈಗಲೂ ಶಿವಭಕ್ತಿಪರಾಯಣವಾದದ್ದೂ ಜೈನ, ಬೌದ್ಧ; ವೈಷ್ಣವಾದಿ ಪಾಷಂಡರಿಂದ ಶೂನ್ಯವಾ

ದದ್ದೂ ಆಗಿ ಭೂಮಿಗೆ ಆಭರಣವೆನಿಸಿಕೊಂಡಿದೆ ಪಾಪಕ್ಕೆ ವಾಸಸ್ಥಾನವಾದ ಎಲಾ ಜೈನಾಧಮನೇ, ಈ ಸಂಗತಿಯನ್ನು ನೀನು ಯಿದುವರಿಗೂ ಕೇಳಲಿಲ್ಲವೇ ? ಆಶ್ಚರ್ಯಕರವಾದ ಇನ್ನೊಬ್ಬ ಶಿವಭಕ್ತನ ಮಹಿಮೆಯನ್ನು ಹೇಳುತ್ತೇನೆ ಕೇಳು.

## ಕೋವೂರ ಬ್ರಹ್ಮಯ್ಯನ ಕಥೆ.

ಕೋವೂರೆಂಬ ಊರಿನಲ್ಲಿ ಬ್ರಹ್ಮಯ್ಯನೆಂಬ ಒಬ್ಬ ಭಕ್ತಶ್ರೇಷ್ಠನಿದ್ದನು. ಆತನು ಒಂದಾನೊಂದು ಸಮಯದಲ್ಲಿ ಜೈನರೊಡನೆ ವಾದವನ್ನು ಮಾಡಿ ಅವರನ್ನು ವಿದ್ಯೆಯಲ್ಲಿ ಜೈಸಿದನು. ಆಗ ಜೈನರು—ಎಲಾ ಶೈವನೇ, ವಿದ್ಯೆಯಲ್ಲಿ ಗೆದ್ದಮಾತ್ರದಿಂದೇನು ? ನಮ್ಮ ಶಕ್ತಿಯನ್ನೂ ನಿನ್ನ ಶಕ್ತಿಯನ್ನೂ ತಿಳಿಯಬೇಕಾದರೆ ಒಂದು ಉಪಾಯವಿದೆ. ಏನಂದರೆ—ಇಗೋ ಈ ಆಲದಮರವನ್ನು ನಿನ್ನ ತಪಶ್ಯಕ್ತಿಯಿಂದ ಸುಡು; ನಾವು ಅದನ್ನು ಬದುಕಿಸುತ್ತೇವೆ. ಇಲ್ಲವೇ ನಾವು ನಮ್ಮ ತಪಶ್ಯಕ್ತಿಯಿಂದ ಸುಡುತ್ತೇವೆ. ನೀನು ಬದುಕಿಸು. ಎಂದರು. ಆ ಮಾತಿಗೆ ಬ್ರಹ್ಮಯ್ಯನು, ದ್ರೋಹವನ್ನು ಮಾಡದೆ ಯಿರುವವರಿಗೆ ದ್ರೋಹವನ್ನೆಣಿಸುವದು ಭಕ್ತರ ಧರ್ಮವಲ್ಲ, ನೀವು ಈ ವೃಕ್ಷಕ್ಕೆ ದ್ರೋಹವನ್ನು ಮಾಡಿರಿ. ನಾನು ಆಮೇಲೆ ಬದುಕಿಸುತ್ತೇನೆ ಎಂದು ಹೇಳಲು, ಆ ಜೈನರು ತಮ್ಮ ತಪೋಽಗ್ನಿಯಿಂದ ಆ ಮರವನ್ನು ಸುಟ್ಟರು. ಬಳಿಕ ಬ್ರಹ್ಮಯ್ಯನು ಅದರ ಮೇಲೆ ವಿಭೂತಿಯನ್ನು ಉದುರಿಸಿ ಅದನ್ನು ಬದುಕಿಸಿದನು. ಜೈನರು ಅದನ್ನು ನೋಡಿ ನಾಚಿಕೆಪಟ್ಟು, ತಾವು ವಾದಾರಂಭದಲ್ಲಿ ಮಾಡಿದ ಪ್ರತಿಜ್ಞೆಗೆ ಅನುಸಾರವಾಗಿ, ಆ ದೇಶವನ್ನು ಬಿಟ್ಟು ಎಲ್ಲಿಯೋ ಓಡಿಹೋದರು. ಆ ಭಕ್ತನು ಆ ಜೈನರ ಮನೆಗಳನ್ನೆಲ್ಲಾ ತನ್ನ ಸೇವಕರ ಕೈಯಿಂದ ಸುಡಿಸಿಬಿಟ್ಟನು.

## ಜಯಸಿಂಹನ ಕಥೆ.

ಪೊಟ್ಟಲಚ್ಚೇರೆಂಬ ಪಟ್ಟಣದಲ್ಲಿ ಜಯಸಿಂಹನೆಂಬ ಒಬ್ಬ ರಾಯನಿದ್ದನು. ಅವನು ಜಿನಾಚಾರಗಳನ್ನು ನಡಸುವವನಾದಾಗ್ಯೂ ಶಿವಾಚಾರಗಳಿಗೆ ಅರ್ಹವಾದ ಅದೃಷ್ಟವುಳ್ಳವನಾಗಿ, ನ್ಯಾಯಮಾರ್ಗದಿಂದ ಪ್ರಜಾರಕ್ಷಣೆಯನ್ನು ಮಾಡಿಕೊಂಡಿದ್ದನು. ಆತನ ಗುರುವು ಪುಷ್ಪಸೇನನೆಂಬವನು ಜಿನಧರ್ಮಗಳನ್ನು ಉಪದೇಶಿಸುವದರಲ್ಲಿ ಸಮರ್ಥನಾಗಿ ಇಪ್ಪತ್ತುಸಾವಿರ ಮಂದಿ ಶಿಷ್ಯರುಗಳಿಂದ ಸೇವಿಸಲ್ಪಡು

ತ್ತಿದ್ದನು. ಆ ಗುರುವಿನಿಂದ ಪ್ರೇರಿಸಲ್ಪಟ್ಟ ಜಯಸಿಂಹನು ನಾನಾ ರತ್ನಗಳಿಂದ ಅಲಂಕರಿಸಲ್ಪಟ್ಟವುಗಳಾಗಿಯೂ, ಅನೇಕ ವಿಧವಾದ ಆಕಾರವುಳ್ಳವುಗಳಾಗಿಯೂ ಇರುವ ಐನೂರು ಬಸದಿಗಳನ್ನು ಕಟ್ಟಿಸಿದನು. ಆ ರಾಯನಿಗೆ ಸರ್ವಾಂಗಸುಂದರಿಯಾಗಿಯೂ, ಸದ್ಗುಣಗಳಿಂದ ಶ್ಲಾಘನೆಗೆ ಯೋಗ್ಯಳಾಗಿಯೂ ಇರುವ ಸುಗ್ಗಲದೇವಿಯೆಂಬವಳು ಪಟ್ಟಮಹಿಷಿಯಾದಳು. ಆಕೆಯು ವಿವಾಹಕಾಲದಲ್ಲಿ ಆ ರಾಯನಿಗೆ–ನೀನು ನನಗೆ ಯಾವಾಗ ಪ್ರತಿಕೂಲನಾಗುವೆಯೋ ಆಗ ನಾನು ನಿನ್ನವಳಲ್ಲವೆಂದು ಹೇಳಲು; ಹಾಗೇ ಆಗಲಿ ಎಂದು ಒಪ್ಪಿಕೊಂಡದ್ದರಿಂದ ಆತನೊಡನೆ ಆ ಪತಿವ್ರತೆಯು ಜೈನಾಧಮರಿಂದ ತಡೆಯಲ್ಪಟ್ಟಾಗ್ಯೂ ತನ್ನ ಗುರುವಿನ ಬಳಿಗೆ ಹೋಗಿ, ಆತನ ಪಾದಕಮಲದ ಧೂಳಿಯಿಂದ ಪಾವನ ಮಾಡಲ್ಪಟ್ಟ ಶಿರಸ್ಸುಳ್ಳವಳಾಗಿ, ಜೈನರ ದುಷ್ಟತನಕ್ಕೆ ಹೆದರಿ, ತನ್ನ ಗುರುವನ್ನು ಮತ್ತೊಂದು ಕಡೆ ಇಳಿಸಲೊಲ್ಲದೆ ತನ್ನ ರಾಣಿವಾಸದ ತೋಟದ ರತ್ನಮಂಟಪದಲ್ಲಿಯೇ ಇಳಿಸಿದಳು. ಆಗ ಜೈನರು ರಾಯನಿಗೆ–ನಿನ್ನ ಹೆಂಡತಿಯು ಶೈವನನ್ನು ಮನೆಯಲ್ಲಿ ತಂದಿಟ್ಟುಕೊಂಡು ಪೂಜಿಸುತ್ತಾಳೆ. ಇದು ಜಿನಮತಕ್ಕೆ ವಿರುದ್ಧವಲ್ಲವೇ ಎಂದು ಹೇಳಲು; ರಾಯನು ಆಕೆಯನ್ನು ಕರೆದು–ಎಲೇ ವಲ್ಲಭೆಯೇ, ಗಂಡಹೆಂಡರಿಗೆ ಬೇರೆ ಬೇರೆ ಮತವೂ ಬೇರೆ ಬೇರೆ ಗುರುವೂ ಉಂಟೇ? ಆದಕಾರಣ ಇನ್ನು ಶೀಘ್ರವಾಗಿ ನಿನ್ನ ಗುರುವನ್ನು ಕಳುಹಿಸಿ ಬಿಡು. ನಮ್ಮ ಜೈನಮುನಿಗಳು ಪರಮತಸ್ಥರ ದರ್ಶನವನ್ನು ಕೂಡ ಸೈರಿಸುವವರಲ್ಲ. ಎಂದು ಹೇಳಲು; ರಾಣಿಯು ಕೇಳಿ ಕೋಪಗೊಂಡು ಹೇಳಿದ್ದೇನಂದರೆ,–ಎಲೈ ಪತಿಯೇ, ಗಂಡಹೆಂಡರಿಗೆ ಬೇರೆಬೇರೆ ಮತಉಂಟೇ ಎಂದು ಹೇಳುತ್ತೀಯಲ್ಲಾ! ಹಾಗಾದರೆ ಗುರುಶಿಷ್ಯರಿಗೆ ಬೇರೆ ಬೇರೆ ಮತವು ಯಾವ ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವದು? ಹಿಂದೆ ನನ್ನನ್ನು ವಿವಾಹಿಸುವಕಾಲದಲ್ಲಿ ನೀನು ಹೇಳುವದನ್ನು ಮರೆತೆಯಾ? ಇದಲ್ಲದೆ ನನ್ನ ಗುರುವು ಪ್ರಸಂಗದಲ್ಲಿ ಜೈನರನ್ನು ಜೈಸಿ ಓಡಿಸಿ ಈ ದೇಶದಲ್ಲಿ ಜೈನರಗಂಧವೇ ಇಲ್ಲದಂತೆ ಮಾಡಿಹೋಗುವನೇ ಹೊರತು ಸುಮ್ಮನೆ ಹೋಗುವನೇ? ಎಂದು ಹೇಳಿದಳು. ರಾಯನು ಹೆಂಡತಿಯಾಡಿದ ಮಾತನ್ನು ಕೇಳಿ ನಿನ್ನ ಗುರುವು ವಾದಗಳಲ್ಲಿ ನಮ್ಮ ಗುರುಗಳನ್ನು ಜೈಸಿದರೆ ನೀನು ಹೇಳಿದ್ದಕ್ಕೆ ನಾನು ಸಮ್ಮತಿಸುವೆನೆಂದು ಹೇಳಿ ಅಲ್ಲಿಂದ ಸಭಾಮಂಟಪಕ್ಕೈದಿ ತನ್ನ ಗುರುವನ್ನು ಕರಸಲು ಆವನು ತನಗೆ ಸಮಾನರಾದ ಶಿಷ್ಯರೊಡನೆ ಬಂದು ಕುಳಿತುಕೊಂಡನು. ಬಳಿಕ ಸಗ್ಗಲೆಯು ತನ್ನ ಗುರುವನ್ನು

ಸಭೆಗೆ ಕರಸಿ, ರತ್ನ ಖಚಿತವಾದ ಸಿಂಹಾಸನದಲ್ಲಿ ಕುಳ್ಳಿರಿಸಿ, ಮಹಾನುಭಾವರಾದ ಶಿಷ್ಯರಿಂದ ಸೇವಿಸಲ್ಪಡುವ ಆತನನ್ನು ಸೇವಿಸುತ್ತಿದ್ದಳು. ಆಗ ಜೈನತಪಸ್ವಿಗಳು ತಮ್ಮ ಕಪಟಮಂತ್ರ, ತಂತ್ರ, ಇಂದ್ರಜಾಲವಿದ್ಯೆ ಈ ವಿಷಯವಾದ ಮಾತುಗಳಿಂದ ವಾದವಂ ಮಾಡುವದಕ್ಕಾರಂಭಿಸಲು; ದಾಸಿಮಯ್ಯನು ತನ್ನ ಮಹಿಮೆಯಿಂದ ಅವುಗಳನ್ನೆಲ್ಲಾ ಜೈಸಿ ವೇದ, ಉಪನಿಷತ್ತು, ಮೀಮಾಂಸ, ತರ್ಕ, ವೈಶೇಷಿಕ ಈ ಪ್ರಮಾಣಗಳಿಂದ ನಿಶ್ಚೈಸಲ್ಪಟ್ಟ ಅರ್ಥವನ್ನು ಹಿಡಿದು ಅವರಿಗೆ ಹೇಳಿದ್ದೇನಂದರೆ;-ಅದ್ವಿತೀಯನಾದ ರಾಮನಾಥನೊಬ್ಬನೇ ಸಕಲಲೋಕಗಳಿಗೂ ಕರ್ತನು. ಅವನಿಗಿಂತ ಹೆಚ್ಚಾದವನಾಗಲಿ ಅವನಿಗೆ ಸಮನಾದವನಾಗಲಿ ಮತ್ತೊಬ್ಬನಿಲ್ಲ. ಲಿಂಗರೂಪನಾದ ಶಿವನ ಮಧ್ಯದಲ್ಲಿ ಸ್ಥಾವರಜಂಗಮಾತ್ಮಕವಾದ ಪ್ರಪಂಚವೆಲ್ಲವೂ ನೆಲೆಗೊಂಡಿರುವದು. ಲಿಂಗದ ಹೊರಗೆ ಯಾವದೂ ಇಲ್ಲ. ರುದ್ರನೊಬ್ಬನೇ ಇರುವನು. ಎಂದು ಶ್ರುತಿಯು ಸಾರುತ್ತಿರುವುದು. ಜಗದೀಶನಾದ ಶಿವನು ಆ ಪ್ರಪಂಚವನ್ನು ಒಳಗೂ ಹೊರಗೂ ವ್ಯಾಪಿಸಿಕೊಂಡಿರುವನು ಎಂಬ ಶ್ರುತಿಪ್ರಮಾಣದಿಂದ ಶಿವನ ಹೊರಗೆ ಒಂದೂ ಇಲ್ಲ ಎಂದು ಹೇಳಿದನು. ಜೈನರು ಕೇಳಿ, ಒಬ್ಬರೊಬ್ಬರ ಮುಖವನ್ನು ನೋಡಿಕೊಂಡು ಸ್ಥಾವರ ಜಂಗಮಾತ್ಮಕವಾದ ಈ ಜಗತ್ತು ಶಿವಮಯವೆಂತಲೂ, ಈ ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಶಿವನಿದ್ಧಾನೆಂತಲೂ ಹೇಳುತ್ತೀಯೆ. ಹಾಗಾದರೆ ಶಿವಾಲಯಕ್ಕೆ ಹೋಗುವದೇಕೆ ? ನಿನ್ನ ಶಿವನು ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚಕ್ಕೆ ಯಾವಾಗಲೂ, ದೇಹವಾಗಿದ್ಧಾನೋ ಜೀವವಾಗಿದ್ಧಾನೋ ? ಆತ್ಮನಾಗಿದ್ಧಾನೋ ? ಎಂದು ಕೇಳಲು; ದಾಸಿಮಯ್ಯನು-ಎಲಾ ಜೈನರೇ, ಮೊದಲನೇ ಪ್ರಶ್ನೆಗೆ ಉತ್ತರವನ್ನು ಹೇಳುತ್ತೇನೆ ಕೇಳಿರಿ. ಈ ರಾಜನು ಸಕಲ ದೇಶಗಳನ್ನಾವರಿಸಿಕೊಂಡಿದ್ಧಾನೆಂಬ ಮಾತಿಗೆ ರಾಜನು ಬ್ರಾಹ್ಮಣ, ಕಿರಾತಚಂಡಾಲರೂಪನಾಗಿದ್ಧಾನೆಂಬ ಅರ್ಥವನ್ನು ಬಿಟ್ಟು ತನ್ನ ಆಜ್ಞೆಯಿಂದ ಸಕಲದೇಶಗಳನ್ನಾವರಿಸಿಕೊಂಡಿದ್ಧಾನೆಂಬರ್ಥವನ್ನು ಹೇಳುವಂತೆ ಶಿವನು ಜಗನ್ಮಯನೆಂಬಲ್ಲಿ ತನ್ನ ಶಕ್ತಿಯಿಂದ ಪ್ರಪಂಚವನ್ನು ವ್ಯಾಪಿಸಿಕೊಂಡಿದ್ಧಾನೆಂಬರ್ಥವಲ್ಲದೆ ಜಗದ್ರೂಪನಾಗಿದ್ಧಾನೆಂಬರ್ಥವಲ್ಲ. ಶಿವನೇ ಪ್ರಪಂಚದಲ್ಲೆಲ್ಲಾ ಇರುವನಾದರೆ ಶಿವಾಲಯಕ್ಕೆ ಹೋಗುವದೇಕೆ ? ಎಂದು ಮಾಡಿದ ಪೂರ್ವಪಕ್ಷಕ್ಕೆ ನ್ಯಾಯದಿಂದ ಕೂಡಿದ ಉತ್ತರವನ್ನು ಹೇಳುತ್ತೇನೆ. ನೀವು ದುರಾಗ್ರಹವನ್ನು ಬಿಟ್ಟು ಕೇಳಿರಿ. ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡಿರುವ

ಚಂದ್ರನ ಪ್ರಕಾಶವು ಕಲ್ಲುಗಳ ಮೇಲೆ ಬಿದ್ದಾಗ್ಯೂ ಚಂದ್ರಕಾಂತಶಿಲೆಯೊಂದೇ ದ್ರವಿಸುವದಲ್ಲದೆ ಮತ್ತೊಂದು ಕಲ್ಲು ದ್ರವಿಸುವದಿಲ್ಲ. ಹಾಗೆಯೇ ಶಿವನಕಳೆಯು ಸಕಲಲೋಕದಲ್ಲಿ ಸಂಬಂಧಿಸಿಕೊಂಡಿದ್ದಾಗ್ಯೂ ಭಕ್ತನ ಮನಸ್ಸುಮಾತ್ರ ಉಲ್ಲಾಸಗೊಂಡಿರುವದಲ್ಲದೆ ಭಕ್ತನಲ್ಲದವನ ಮನಸ್ಸು ಉಲ್ಲಾಸಗೊಳ್ಳುವದಿಲ್ಲ. ಚಂದ್ರನಿಗೆ ಚಂದ್ರಕಾಂತಶಿಲೆಯೂ, ಚಂದ್ರಕಾಂತಶಿಲೆಗೆ ಚಂದ್ರನೂ ಪ್ರೀತಿಸುವಂತೆ ಶಿವನಿಗೆ ಭಕ್ತನೂ ಭಕ್ತನಿಗೆಶಿವನೂ ಪ್ರೀತಿಸುವನು. ಪ್ರಪಂಚವನ್ನು ವ್ಯಾಪಿಸಿಕೊಂಡಿರುವ ಶಿವನಲ್ಲಿ ಪ್ರಪಂಚವಿದ್ದೇಯಿದೆ. ಶಿವನು ಜಗನ್ಮಯನಾದಾಗ್ಯೂ ದ್ರವಿಸುವದಿಲ್ಲ. ಯಾಕಂದರೆಸಾಮರಸ್ಯವಿಲ್ಲದಿದ್ದರೆದ್ರವವುಂಟಾಗುವದಿಲ್ಲ. ಲಿಂಗಮಧ್ಯದಲ್ಲಿ ಸಕಲ ಪ್ರಪಂಚವಿದ್ದರೂ ಪ್ರಯೋಜನವೇನು? ಭಕ್ತನಿಗೋಸ್ಕರ ಶಿವನ ವ್ಯಾಪಾರವು; ಶಿವನಿಗೋಸ್ಕರ ಭಕ್ತನವ್ಯಾಪಾರವು. ಕರುವಿಗೂ ಹಸುವಿಗೂ ಇರುವ ಪ್ರೇಮದಿಂದ ಇತರಜನವು ಬೆಳೆಯುವಂತೆ ಶಿವನಿಗೂ ಭಕ್ತನಿಗೂ ಇರುವ ಸ್ನೇಹದಿಂದ ಲೋಕವು ಬೆಳೆಯುತ್ತದೆ. ಪ್ರಪಂಚವು ಲಿಂಗಮಧ್ಯದಲ್ಲಿದ್ದಾಗ್ಯೂ ಶಿವನು ಪ್ರಪಂಚವಿಷಯದಲ್ಲಿ ಉದಾಸೀನನಾಗಿ ಆ ಪ್ರಪಂಚದಲ್ಲಿರುವ ಭಕ್ತನಿಗೆ ಪ್ರಸನ್ನನಾಗಿದ್ದಾನೆ,- ಪ್ರಪಂಚವೂ ಬದುಕುತ್ತದೆ. ಹಸುವು ಕರುವಿನಕಡೆ ತಿರುಗಿರುವದಲ್ಲದೆ ಮತ್ತೊಂದರ ಕಡೆಗೆ ತಿರಿಗೀತೇ? ಹಸುವು ಕರುವಿನ ಮೇಲಿಟ್ಟಿರುವ ಪ್ರೇಮದಿಂದ ಹಾಲು ದೊರಕುವದು. ಆದ್ದರಿಂದ ಜನವು ಬದುಕುವರು ಆದರಂತೆ ಶಿವನು ಭಕ್ತನ ಮೇಲಿಟ್ಟಿರುವ ಕರುಣದಿಂದ ಲೋಕವೆಲ್ಲಾ ಬದುಕುವುದು. ಸ್ವಾತಿಮಳೆಯನೀರು ಎಲ್ಲಾ ಚಿಪ್ಪುಗಳ ಮೇಲೆ ಸುರಿದಾಗ್ಯೂ ಮುತ್ತಿನ ಚಿಪ್ಪೊಂದೇ ಅದನ್ನು ಗ್ರಹಿಸಬಲ್ಲದು. ಅದರಂತೆ ಶಿವನ ಮಹಿಮೆಯು ಲೋಕದಲ್ಲೆಲ್ಲಾ ವ್ಯಾಪಿಸಿದಾಗ್ಯೂ, ಭಕ್ತನು ಮಾತ್ರ ಅದನ್ನು ತಿಳಿದುಕೊಳ್ಳುವನೇ ಹೊರತು ಇತರರು ತಿಳಿಯರು. ಮುತ್ತಿನ ಚಿಪ್ಪಿನಿಂದ ಹಿಡಿಯಲ್ಪಟ್ಟ ಸ್ವಾತೀಮಳೆಯ ನೀರು ಮುತ್ತಾಗುವಂತೆ ಭಕ್ತನಿಂದಧ್ಯಾನಿಸಲ್ಪಟ್ಟ ಶಿವನ ತೇಜಸ್ಸು ಭಕ್ತನ ಮನಸ್ಸಿನಲ್ಲಿ ಜ್ಞಾನವಾಗಿ ಪರಿಣಮಿಸುತ್ತದೆ.

ಶಿವನು ಶರೀರವಾಗಿದ್ದಾನೋ? ಆತ್ಮನಾಗಿದ್ದಾನೋ ? ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುತ್ತೇನೆ. ನ್ಯಾಯದಿಂದ ಕೂಡಿದ್ದೋ ಅಲ್ಲವೋ ಈಗ ಆಲೋಚಿಸಿರಿ. ಜನ್ಮಾಂತರದ ಕರ್ಮಶೇಷದಿಂದ ಶರೀರವುಂಟಾಗುವದು. ಆ ಶರೀರವು ಯಾವಾಗಲೂ ಸುಖಗಳಿಗೆ ಆಶ್ರಯವೂ, ಪುಣ್ಯಪಾಪಗಳಿಗೆ ಆಸ್ಪದವೂ ಆಗಿದೆ.

ನಿತ್ಯನಾಗಿರುವದರಿಂದ ಈ ದೇಹಕ್ಕಿಂತಲೂ ಬೇರೆಯಾ ಶಿವನ ಶರೀರವಲ್ಲ. ಸಕಲ ಲೋಕಗಳನ್ನೂ ವ್ಯಾಪಿಸಿಕೊಂಡಿರುವ ಶಕ್ತಿಯುಳ್ಳಶಿವನು. ಮೂರ್ತದ್ರವ್ಯಸಂಯೋಗಿ ಯಾಗಿದ್ದಾನೆ. ಜೀವನು ಮಾಯಾಬದ್ಧನೂ, ಸಾವಯನೂ, ಉತ್ಪತ್ತಿಯುಳ್ಳವನೂ, ದುಷ್ಕರ್ಮಿಯೂ, ಮಲಿನನೂ, ಪಶುವೂ, ಅಶಾಶ್ವತನೂ ನಿತ್ಯಸಂಸಾರಿಯೂ ಅಶುದ್ಧನೂ ಆಗಿದ್ದಾನೆ. ಪರಶಿವನಾದರೋ ಕರ್ಮರಹಿತನೂ, ನಿರ್ಮಲನೂ, ಪರಿಶುದ್ಧನೂ, ನಿಷ್ಕಳನೂ, ಮುಕ್ತರಿಂದ ಸೇವಿಸಲ್ಪಟ್ಟವನೂ, ಬ್ರಹ್ಮಾದಿ ಪಶುಗಳಿಗೆ ಪತಿಯಾದವನೂ, ಸಂಸಾರರಹಿತನೂ,ಶಾಶ್ವತನೂ ಆಗಿದ್ದಾನೆ ಆದಕಾರಣ ಶಿವನು ಜೀವನಲ್ಲ. ಹಾಗಾದರೆ ಆತ್ಮನಾಗಿದ್ದಾನೋ ಎಂದರೆ ಹೇಳುತ್ತೇನೆ. ಆತ್ಮನು ಪಂಚೇಂದ್ರಿಯ ಸ್ವರೂಪನಾಗಿರುವದ್ದರಿಂದ ಶಿವನು ಆತ್ಮನಲ್ಲ. ಹೇಳುವದಕ್ಕೆ ಅಶಕ್ಯವಾದ ಮಹಿಮೆಯುಳ್ಳವನಾಗಿಯೂ ಅತೀಂದ್ರಿಯನಾಗಿಯೂ ಇರುವ ಶಿವನುಚೈತನ್ಯಸ್ವರೂಪನಾಗಿದ್ದಾನೆ. ಮತ್ತು ಆತನು ಅಣುವಿಗೆ ಅಣುವಾಗಿಯೂ, ಮಹತ್ತಿಗೆ ಮಹತ್ತಾಗಿಯೂ, ಇದ್ದಾನಷ್ಟೆ; ಎಳ್ಳಿನಲ್ಲಿ ಎಣ್ಣೆಯೂ, ಸೌಧೆಯಲ್ಲಿ ಬೆಂಕಿಯೂ, ಘಟಮೊದಲಾದವುಗಳಲ್ಲಿ ಆಕಾಶವೂ ಕಲ್ಲಿನಲ್ಲಿ ಕಬ್ಬಿಣವೂ ನೇತ್ರದಲ್ಲಿ ತೇಜಸ್ಸೂ, ಹಾಲಿನಲ್ಲಿ ತುಪ್ಪವೂ, ಕನ್ನಡಿಯಲ್ಲಿ ಪ್ರತಿಬಿಂಬವೂ, ಮಣಿಯಲ್ಲಿ ಸೂತ್ರವೂ, ನೀರುತುಂಬಿದ ಕೊಡದಲ್ಲಿ ಚಂದ್ರನೂ, ವೃಕ್ಷದಲ್ಲಿ ಬೀಜವೂ, ಶಬ್ದದಲ್ಲಿ ಅರ್ಥವೂ ಪರ್ವದಲ್ಲಿ ಪ್ರತಿಧ್ವನಿಯೂ, ಸ್ಪಟಿಕದ ಕಲ್ಲಿನಲ್ಲಿ ನಿರವಕಾಶತೆಯೂ ಹ್ಯಾಗೆ ಅಡಿಗಿದಯೋ ಹಾಗೆ ಶಿವನು ಸಕಲ ವಸ್ತುಗಳಲ್ಲಿಯೂ, ಅಡಗಿಕೊಂಡು ಪ್ರಪಂಚವನ್ನು ಪೋಷಿಸುತ್ತಾನೆ. ಈಪ್ರಕಾರವಾಗಿ ಶಿವಶಂಕರನಾದ ದಾಸಯ್ಯನಿಂದ ಹೇಳಲ್ಪಟ್ಟ ಆ ಜೈನಾಧಮರು ಕೇಳಿ ಭಲಾ ಭಲಾ ಎಂದು ಪರಿಹಾಸವನ್ನು ಮಾಡಿ ಹೇಳಿದ್ದೇನಂದರೆ;—ಶಿವನು ನಿತ್ಯನು ಅನಿತ್ಯನಾದ ಜೀವನಗಿಂತಲೂ ಉತ್ಕೃಷ್ಟನು ಸಮಸ್ತ ಜೀವಿಗಳೂ ಪಶುಗಳು, ಶಿವನು ಪಶುಪತಿಯು ಎಂದು ಹೇಳಲ್ಪಟ್ಟಿತಷ್ಟೆ.

ಆ ಜೀವಾತ್ಮಗಳಲ್ಲಿ ವಾಸಿಸುವ ಶಿವನ ಒಂದು ಗುಣವಾದರೂ ಜೀವನಲಿ ಯಾಕೆ ಯೇನೆಂದು ಕೇಳಲು, ದಾಸನು ಹೇಳಿದ್ದೇನಂದರೆ;—ಎಲಾ ಜೈನರೇ! ನಿಮ್ಮ ಮಾತಿಗೆ ಉತ್ತರವನ್ನು ಹೇಳುತ್ತೇನೆ. ಎಳ್ಳಿನಲ್ಲಿ ಎಣ್ಣೆಯಿಲ್ಲವೇ? ಎಣ್ಣೆಯಲ್ಲಿ ಎಳ್ಳಿನಗುಣವಿರುವದುಂಟೇ? ಆದರಂತೆ ಶಿವನು ಜೀವನಲ್ಲಿದ್ದಾನೆ. ಆದಾಗ್ಯೂ ಶಿವನ ಗುಣವು ಜೀವನಲ್ಲಿ ಕಾಣಬರುವದಿಲ್ಲ. ಎಳ್ಳಿನಲ್ಲಿ ಎಣ್ಣೆಯು ತೋರು

ವದು. ಎಣ್ಣೆಯಲ್ಲಿ ಎಳ್ಳು ಎಲ್ಲಿಯೂ ಕಾಣುವದಿಲ್ಲ. ಸರ್ವಜ್ಞನಾದ ಶಿವನಲ್ಲಿ ಪ್ರಪಂಚವಿರುವದು. ಪ್ರಪಂಚದಲ್ಲಿ ಶಿವನಿಲ್ಲ. ಹೇಳಿದ ಕಾರಣಗಳಿಗೆ ಹೀಗೆ ಅರ್ಥವನ್ನು ತಿಳಿಯಿರಿ. ಜಗತ್ಪತಿಯಾದ ಶಿವನೇ ಎಲ್ಲೆಲ್ಲಿಯೂ ಪ್ರಕಾಶಿಸುತ್ತಾನೆ. ಆದರೂ ಭಕ್ತಿಯುಳ್ಳವನಿಗೆ ದೊರೆಯುವನಲ್ಲದೆ ಭಕ್ತಿಯಿಲ್ಲದವನಿಗೆ ಎಂದಿಗೂ ದೊರೆಯುವದಿಲ್ಲ. ನಿರ್ಗುಣಸ್ವರೂಪನಾದ ಶಿವನು ತಾನು ಎಲ್ಲದರಲ್ಲಿಯೂ ಇದ್ದುಕೊಂಡಿದ್ದಾನೆ. ಜನ್ಮರಹಿತನಾಗಿ ಸಕಲವನ್ನೂ ಸೃಷ್ಟಿಸುತ್ತಾನೆ. ತಾನು ಸಂಚರಿಸದೆ ಇರುವವನಾಗಿ ಎಲ್ಲವನ್ನೂ ಸಂಚಾರಮಾಡಿಸುತ್ತಾನೆ. ಸಕಲಪದಾರ್ಥಗಳೂ ನಾಶವನ್ನೈದುತ್ತಿರಲಾಗಿ, ತಾನು ಜ್ಞಾನಸ್ವರೂಪನೂ, ನಾಶರಹಿತವಾದ ವೈಭವವುಳ್ಳವನೂ ವ್ಯಾಪಕನೂ ಆಗಿರುವ ತಾನು ತನ್ನ ವೈಭವವನ್ನು ಪ್ರಕಟಿಸುತ್ತಾನೆ. ಯಾವನಿಗಿದ್ದಾನೋ ಅವನಿಗಿದ್ದಾನೆ. ಯಾವನಿಗಿಲ್ಲವೋ ಅವನಿಗಿಲ್ಲ. ಆದಕಾರಣದಿಂದ ಅನುಮಾನಪ್ರಮಾಣದಿಂದಲೂ, ಆಗಮ ಪ್ರಮಾಣದಿಂದಲೂ ಹೇಳಲ್ಪಟ್ಟ ಅದೆಲ್ಲವೂ ಇರಲಿ. ಶಕ್ತರಾದರೆ ಪ್ರತ್ಯಕ್ಷಪ್ರಮಾಣವನ್ನು ಹೇಳಿರಿ. ಅದನ್ನೂ ಜಯಿಸುತ್ತೇನೆ.

ಈ ಪ್ರಕಾರವಾಗಿ ಶಿವದಾಸನಿಂದ ಹೇಳಲ್ಪಟ್ಟ ಮಾತನ್ನು ಪಾಮರರಾದ ಜೈನರು ಕೇಳಿ, ತಮಗೇನಾದರೂ ಹಾನಿಯುಂಟಾದೀತೆಂದು ಊಹಿಸುವವರಾಗಿ ಎಲ್ಲರೂ ಕೂಡಿ ಆಲೋಚಿಸಿದರು. ಈ ಶಿವಾಚರಣಸಂಪನ್ನನಾದವನು ಯಾವ ಉಪಾಯದಿಂದಾದರೂ ಕೊಲ್ಲುವುದಕ್ಕೆ ಯೋಗ್ಯನಾಗಿದ್ದಾನೆ. ಹಾಗಿಲ್ಲದಿದ್ದರೆ ನಮಗೆ ನಾಶವು ಸಂಭವಿಸದೆ ಹೋಗುವದಿಲ್ಲ. ಈ ಭಕ್ತನು ತನ್ನ ದೇವರಾದ ಶಿವನನ್ನು ಎಲ್ಲೆಲ್ಲಿಯೂ ಇದ್ದಾನೆಂದು ಹೇಳುತ್ತಾನಷ್ಟೆ. ನಾವು ಈ ಮಾತನ್ನೇ ಅವಲಂಬಿಸಿಕೊಂಡು ಏನಾದರೂ ಕುಹಕವನ್ನು ಮಾಡೋಣ. ಎಂದು ನಿಶ್ಚಯಿಸಿದವರಾಗಿ, ಒಂದು ಕುಡಕೆಯಲ್ಲಿ ಒಂದು ಕ್ರೂರವಾದ ಸರ್ಪವನ್ನು ಕೂಡಿ, ಬಾಯಿಕಟ್ಟಿ ಸಭೆಗೆ ತೆಗೆದುಕೊಂಡುಬಂದು, ಆ ಶಿವದಾಸಯ್ಯನನ್ನು ಕುರಿತು,- ನೀನು ನಿನ್ನ ದೇವರಾದ ಶಿವನನ್ನು ಎಲ್ಲೆಲ್ಲಿಯೂ ಇದ್ದಾನೆಂದು ಹೇಳುತ್ತೀಯಷ್ಟೆ ಈ ಮಡಕೆಯಲ್ಲಿ ನಿನ್ನ ದೇವರಿದ್ದರೆ ಹಿಡಿದುಕೋ ಎಂದು ಹೇಳಿದರು. ಅನಂತರದಲ್ಲಿ ಸರ್ಪಗಳನ್ನೇ ಆಭರಣಗಳನ್ನು ಮಾಡಿಕೊಂಡಿರುವ ಶಿವನ ಭೃತ್ಯನಾದ ದಾಸಯ್ಯನು ಅವರ ಮಾತನ್ನು ಕೇಳಿ, ನನ್ನ ದೇವರು ಪ್ರಪಂಚದಲ್ಲೆಲ್ಲಾ ಜಾಗರೂಕನಾಗಿದ್ದಾನೆ. ಸಂಶಯವಿಲ್ಲ. ಎಂದುಹೇಳಿ, ಶೀಘ್ರದಲ್ಲಿ ಎದ್ದು, ಕೈಗಳ

ಸ್ನು ಜೋಡಿಸಿ, ತಲೆಯಮೇಲೆ ಇಟ್ಟುಕೊಂಡು ಪುರಾತನಭಕ್ತರನ್ನೂ, ನೂತನಭಕ್ತರನ್ನೂ ಸ್ಮರಿಸಿದವನಾಗಿ ಕಣ್ಣಿನಿಂದ ವಿಷಾಗ್ನಿಯನ್ನು ಉಗುಳುತ್ತದೋ ಎಂಬಂತಿರುವುದಾಗಿಯೂ, ಕಿಡಿಗಳಿಂದ ವ್ಯಾಪಿಸಲ್ಪಟ್ಟ ಉಸುರಿನ ಹೊಗೆಯಿಂದ ಆವರಿಸಲ್ಪಟ್ಟ ಮುಖವುಳ್ಳದ್ದಾಗಿಯೂ ಪೂತ್ಕಾರವನ್ನುಮಾಡುತ್ತಿರುವದಾಗಿಯೂ, ಉಬ್ಬಿಸಲ್ಪಟ್ಟ ದೇಹವುಳ್ಳದ್ದಾಗಿಯೂ, ಹೆಡೆಯಿಂದ ಮಡಕೆಯ ಒಳಗಡೆಯನ್ನು ಪದೇಪದೇ ಹೊಡೆಯುವಂಥಾದ್ದಾಗಿಯೂ, ಶೇಷ, ವಾಸುಕಿ, ಕರ್ಕೋಟಕ, ಶಂಖಚೂಡ ಮುಂತಾದ ಸರ್ಪಗಳನ್ನು ಧಿಕ್ಕರಿಸುತ್ತಿರುವದಾಗಿಯೂ ನಾಲಿಗೆಯಿಂದ ಕಟವಾಯಿಗಳನ್ನು ನೆಕ್ಕುತ್ತಿರುವುದಾಗಿಯೂ, ಇರುವ, ಆ ಭಯಂಕರ ಸರ್ಪವನ್ನು ನೋಡಿ, ಮಂದಹಾಸದಿಂದ ಕೂಡಿದಮುಖವುಳ್ಳವನಾಗಿ ಶಿವನೇ ದೇವನೆಂದು ಪ್ರತಿಜ್ಞೆಮಾಡಿ, ಕೈಯಿಂದ ಅದನ್ನು ಮುಟ್ಟಿದನು. ಆಕ್ಷಣವೇ ಆ ಸರ್ಪವು ಆತನ ಹಸ್ತದಿಂದ ಮುಟ್ಟಲ್ಪಟ್ಟ ಶಿಷ್ಯರು ಶಿವತ್ವವನ್ನು ಪಡೆಯುವಂತೆ ತಾನು ಶಿವರೂಪವನ್ನೈದಿತು. ಅನಂತರದಲ್ಲಿ ಸೂರ್ಯಕಿರಣವನ್ನು ಧಿಕ್ಕರಿಸುವ ತೇಜಸ್ಸುಳ್ಳ ಶಿವದಾಸನು ಕೈಯಲ್ಲಿ ಆ ಸ್ಫಟಿಕಮಯವಾದ ಲಿಂಗವನ್ನು ತೆಗೆದುಕೊಂಡನು. ಅನೇಕ ಚಂದ್ರರಂತೆಯೂ ಕ್ಷೀರಸಮುದ್ರದತೆರೆಗಳಂತೆಯೂ ಇರುವ ಆ ಲಿಂಗದ ಕಾಂತಿ ಸಮೂಹಗಳಿಂದ ಲೋಕವೆಲ್ಲಾ ತೊಳೆಯಲ್ಪಟ್ಟಿತು. ಆ ಲಿಂಗವು ಶಿವದಾಸನಹಸ್ತವೆಂಬ ಕಮಲದ ಕರ್ಣಿಕೆಯಂತೆ ಪ್ರಕಾಶಿಸಿತು. ಪಟ್ಟಣದ ಜನರು ದೇಶದಜನರು ಎಲ್ಲಾ ಬಹು ಪ್ರೀತಿಯಿಂದ ನೋಡಿದರು ಅನಂತರದಲ್ಲಿ ಸುಗ್ಗಲದೇವಿಯು ರಾಜನನ್ನು ನೋಡಿ;-ಎಲೈ ರಾಜನೇ ಈಗಲಾದರೂ ನಿನಗೆ ಶಿವನಲ್ಲಿ ಭಕ್ತಿಯುಂಟಾಗಲಿಲ್ಲವೇ? ಎನಲು, ರಾಜನು ಶಿವದಾಸನ ಪಾದಕ್ಕೆ ನಮಸ್ಕರಿಸುವುದನ್ನೇ ಆ ಮಾತಿಗೆ ಉತ್ತರವಾಗಿ ಮಾಡಿದನು. ಆ ರಾಜನನ್ನು ಶಿವದಾಸನು ಕರುಣಾರಸಭರಿತವಾದ ನೇತ್ರದಿಂದ ನೋಡಿದನು. ಆತನ ದೃಷ್ಟಿಪ್ರಭಾವದಿಂದ ಆ ರಾಯನು ಸಿದ್ಧರಸದಿಂದ ವ್ಯಾಪ್ತವಾದ ಕಬ್ಬಿಣವು ಸುವರ್ಣತೆಯನ್ನು ಪಡೆದಂತೆ ಶಿವಭಾವವನ್ನು ಪಡೆದನು. ಕೆಲವರು ಜೈನರು ಆ ರಾಜನ ರೀತಿಯಲ್ಲಿ ಶಿವದಾಸಯ್ಯನ ಕೃಪೆಯಿಂದ ಲಿಂಗಧಾರಣದೀಕ್ಷೆಯಂ ಪಡೆದರು. ಕೆಲವು ಜಿನಾಧಮರು ತಮ್ಮ ತಮ್ಮ ವಾಸಸ್ಥಳಗಳನ್ನೇ ಬಿಟ್ಟು ಓಡಿಹೋದರು. ಗಂಡನು ಶಿವಭಕ್ತನಾಗುತ್ತಿರಲಾಗಿ, ಗುರುವಾದ ಶಿವದಾಸಯ್ಯನು ಜಯಶಾಲಿಯಾಗುತ್ತಿರಲಾಗಿ, ರಾಣಿಯಾದ ಸುಗ್ಗಲದೇವಿಯು ಹೆಚ್ಚಾದ ಸಂತೋಷವನ್ನೈದಿದಳು.

ಬಳಿಕ ಶಿವದಾಸಯ್ಯನು, ಉತ್ತರಗಳಿಂದ ಜೈನರ ಕುಲವನ್ನು ಜೈಸಲ್ಪಟ್ಟದ್ದರಿಂದ ಆ ಲಿಂಗಕ್ಕೆ ಉತ್ತರೇಶ್ವರ ನೆಂಬ ಹೆಸರನ್ನಿಟ್ಟನು. ಬಳಿಕ ರಾಜ ಬಟರು, ರಾಜಾಜ್ಞೆಯನ್ನನುಸರಿಸಿ ಜಿನಾಲಯಗಳನ್ನೂ ಜೈನರ ಮನೆಗಳನ್ನೂ ಮುರಿದುಹಾಕಿದರು. ಶಿವದಾಸಯ್ಯನು ರಾಜನಿಂದಲೂ ರಾಜಪತ್ನಿಯಿಂದಲೂ ಪೂಜಿಸಲ್ಪಟ್ಟವನಾಗಿ ತನ್ನ ಪುರವನ್ನೈದಿದನು.

ವಿದ್ವಾಂಸರ ಸಮೂಹವೆಂಬ ಚಕೋರಪಕ್ಷಿಗಳಿಗೆ ಸಂತೋಷವನ್ನು ಕೊಡುವಂಥಾದ್ದಾಗಿಯೂ, ಶಿರಸ್ಸಿನಿಂದಲೂ ನಿತ್ಯದಲ್ಲೂ ಶ್ಲಾಘಿಸಲ್ಪಡುವಂಥಾದ್ದಾಗಿಯೂ, ಸಂಸಾರವೆಂಬ ಅಂಧಕಾರವನ್ನು ಪರಿಹರಿಸುವಂಥಾದ್ದಾಗಿಯೂ, ಇರುವ ನಿಡುಮಾರದೇವನ ಚರಿತ್ರೆಯೆಂಬ ಚಂದ್ರನನ್ನು ಸಂತೋಷದಿಂದ ಸೇವಿಸಿರಿ.

ನಮಿನಂದಿನಾಥನ ಚರಿತ್ರೆಯೆಂಬ ಚಂದ್ರನು ಭಕ್ತರೆಂಬ ಕಮಲಗಳನ್ನು ವೃದ್ಧಿಗೊಳಿಸಿ, ಸಮಸ್ತಭೂಮಂಡಲವೆಂಬ ಕನ್ನೈದಿಲೆಯನ್ನು ಅರಳಿಸುವದಲ್ಲದೆ, ಎಂದೆಂದಿಗೂ ಅಸ್ತಂಗತನಾಗುವದಿಲ್ಲ ಇದು ಆಶ್ಚರ್ಯವು.

ಯಾವ ಸಾಂಖ್ಯತೊಂಡಿಯೆಂಬ ಭಕ್ತನು ಶಿವನಪಾದಕಮಲಗಳಿಗೆ ಮಾಡಿದ ಕಲ್ಲಿನಪೂಜೆಯು, ನೈದಿಲೆಯ ಹೂವುಗಳ ಪೂಜೆಯಾಯಿತೋ ಆತನ ಮಹಿಮೆಯನ್ನು ವರ್ಣಿಸುವದಕ್ಕೆ ಮಾತುಗಳೇ ಸಾಲವು. ಬ್ರಹ್ಮಯ್ಯನೆಂಬ ಶಿವಭಕ್ತನ ಹಸ್ತಕಮಲದಿಂದ ಸೋಂಕಲ್ಪಟ್ಟ ಭಸ್ಮಧೂಳಿಯೆಂಬ ಅಮೃತದ ಹನಿಯು ಮದಿಸಿದ ಜೈನತಪಸ್ವಿಗಳ ಮಂತ್ರಬಲದಿಂದ ಸುಡಲ್ಪಟ್ಟ ಆಲದಮರವನ್ನು ಮರಳಿ ಸೃಷ್ಟಿಸುವ ವಿಷಯದಲ್ಲಿ ನೂತಬ್ರಹ್ಮನಾಯಿತು.

ಗರ್ವಾಂಗಧರರಾದ ಜೈನರೆಂಬ ಮೇಗಪಲಟಕ್ಕೆ ಜಂಝಾಮಾರುತನಾಗಿಯೂ, ಬೌದ್ಧರೆಂಬ ಮದಿಸಿದ ಆನೇಗಳಿಗೆ ಸಿಂಹವಾಗಿಯೂ, ಚಾರ್ವಾಕರೆಂಬ ಪರ್ವತಗಳಿಗೆ ವಜ್ರಾಯುಧ ಪ್ರಾಯನಾಗಿಯೂ ಶಿವನ ಜಯಧ್ವಜವಾಗಿಯೂ ಇರುವ ಶಿವದಾಸಯೋಗಿಯು ಸರ್ವೋತ್ಕೃಷ್ಟನಾಗಿದ್ದಾನೆ.

ಬಸವೇಶವಿಜಯದಲ್ಲಿ ಮೂವತ್ತೆಂಟನೆಯ ಅಧ್ಯಾಯವು

ಸಂಪೂರ್ಣವು.

## ಮೂವತ್ತೊಂಬತ್ತನೆಯ ಅಧ್ಯಾಯವು

### ನಾಚಿರಾಜಯ್ಯನ ಕಥೆ.

ಪೂರ್ವದಲ್ಲಿ ಮಾರುಡಿಗೆಯೆಂಬ ಪಟ್ಟಣದಲ್ಲಿ ನಾಚಿದೇವನೆಂದು ಪ್ರಸಿದ್ಧನಾದ ಒಬ್ಬ ಭಕ್ತನು ಆ ಪಟ್ಟಣದ ಜೈನರ ಮಧ್ಯದಲ್ಲಿ ಕಾಗೆಗಳ ಗುಂಪಿನ ಸಮೀಪದಲ್ಲಿ ಕೋಗಿಲೆಯು ನಿಶ್ಶಬ್ದವಾಗಿರುವಂತೆ ಗೂಢಭಕ್ತಿಯುಳ್ಳವನಾಗಿದ್ದನು.

ಆ ಊರೊಳಗೆ ಸಾವಿರದೇಳುನೂರು ಬಸ್ತಿಗಳ ನಡುವೆ ಪರ್ವತಗಳ ಮಧ್ಯದಲ್ಲಿ ಮೇರುಪರ್ವತವಿರುವಂತೆ ಒಂದು ಶಿವಾಲಯವಿರುವದು. ಆ ಶಿವಾಲಯದ ಗೋಪುರದ ಉನ್ನತಿಯನ್ನು ಸೈರಿಸದ ಜೈನರು ಆ ಶಿಖರವನ್ನು ಮುರಿದುಹಾಕಿದರು. ಆಗ ಅದು ಆ ಜೈನರಿಗೆ ನಾಶಸೂಚಕವಾದ ಸಿಡಿಲು ಬೀಳುವಂತೆ ಬಿದ್ದಿತು. ಅನಂತರದಲ್ಲಿ ನಾಚಿದೇವಯ್ಯನು ಅವರ ದುರಾಚಾರವನ್ನು ನೋಡಿ, ಬಹಳವಾಗಿ ಕೋಪಿಸಿದವನಾಗಿ, ಅರ್ಚಕನನ್ನು ಕರೆದು,-ಹತ್ತು ದಿನಗಳೊಳಗಾಗಿ, ಈ ಜೈನರ ಗರ್ವಭಂಗವಾಗುವದು. ಅಲ್ಲಿಯತನಕ ಶಿವನಿಗೆ ಪೂರ್ವದಂತೆ ಪೂಜೆಯನ್ನು ಮಾಡಬೇಡ, ಎಂದು ಆಜ್ಞೆಮಾಡಿ, ಶೀಘ್ರದಲ್ಲಿ ಹೊರಟು, ಹತ್ತು ದಿನಗಳೊಳಗೆ, ಹನ್ನೆರಡುಸಾವಿರ ಮಂದಿ ಭಕ್ತರಿಂದ ಸಹಿತನಾಗಿ ಖಡ್ಗವನ್ನೆತ್ತಿಕೊಂಡು, ಆಯುಧಗಳ ಕಾಂತಿಪರಂಪರೆಯಿಂದ ಮುಚ್ಚಲ್ಪಟ್ಟ, ಭಟರೊಡನೆ ಆ ಜೈನಪುರವನ್ನು ಕುರಿತು ಬಂದನು. ಜೈನರು ಆ ಸುದ್ಧಿಯನ್ನು ಕೇಳಿ, ಸಂತೋಷದಿಂದ ಭಟರೊಡನೆ ಯುದ್ಧಸನ್ನದ್ಧರಾಗಿ ಪಟ್ಟಣದಿಂದ ಹೊರಟರು.

ಅವರನ್ನು ನೋಡಿ, ಆ ಶಿವಭಕ್ತರ ಮಧ್ಯದಲ್ಲಿ ಹದಿಮೂರು ಮಂದಿಗಳು ಖಡ್ಗಪಾಣಿಗಳಾಗಿ ಮಿಕ್ಕ ಭಕ್ತರ ಪಾದಗಳಿಗೆ ಅಡ್ಡಬಿದ್ದು ನೀವು ಸುಮ್ಮನೆಯಿದ್ದು ನಿಮ್ಮ ಪಾದಕಮಲಧ್ಯಾನದಿಂದ ವೃದ್ಧಿ ಹೊಂದಿದ್ದಾಗಿಯೂ, ಜಯದಲ್ಲಿ ಕೊಬ್ಬಿರುವದಾಗಿಯೂ ಇರುವ ನಮ್ಮ ಪರಾಕ್ರಮವನ್ನು ನೋಡಿರಿ. ಎಂದು ಹೇಳಿ. ವೀರರಸವೇನಾದರೂ ಅನೇಕ ರೂಪವನ್ನು ಧರಿಸಿತೋ ಎಂಬಂತಿರುವ ಆ ಹದಿಮೂರುಮಂದಿ ಮಾಹೇಶ್ವರರು ದಯಾರಸಭರಿತರಾಗಿ-ಈ ಪಟ್ಟಣದಲ್ಲಿ ಜೈನರು ಹೊರತಾಗಿ ಮಿಕ್ಕಾದವರು ಯಾರಿದ್ದಾರೋ ಅವರೆಲ್ಲರೂ. ಶೀಘ್ರದಲ್ಲಿ ಈ ಊರನ್ನು ಬಿಟ್ಟು ಹೊರಟು ಹೋಗಲಿ. ಹೋಗದಿದ್ದರೆ ನಿಮಗೆ ಕಷ್ಟವುಂ

ಟಾಗುವದು ಎಂದು ಸಾರಿಸಿ, ತಮ್ಮ ಮೇಲೆ ಪ್ರತಿಭಟಿಸಿದ ಕೊಬ್ಬಿದ ಜೈನರನ್ನು ಮುರಿದರು. ಜಿನಸೇನೆಗಳೆಲ್ಲವೂ ಭಗ್ನವಾಗುತ್ತಿರಲಾಗಿ ಶತ್ರುಧ್ವಂಸಕರಾದ ಆ ಭಕ್ತರು ಖಡ್ಗಾಗ್ರದಿಂದ ತಮ್ಮ ತಲೆಗಳನ್ನು ಕತ್ತರಿಸಿಕೊಂಡವರಾಗಿ, ಕಿಲಕಿಲ ಧ್ವನಿಯಿಂದ ಸಮಸ್ತ ದಿಕ್ಕುಗಳನ್ನೂ ಶಬ್ದಾಯಮಾನಗಳನ್ನಾಗಿ ಮಾಡುತ್ತಿರುವ ತಲೆಗಳನ್ನು ಎಡಗಯ್ಯಲ್ಲಿ ಧರಿಸಿದವರಾಗಿ ಪಟ್ಟಣದೊಳಗೆ ಪ್ರವೇಶಿಸಿ,- ಇವರನ್ನು ಹೊಡಿ. ಇವನನ್ನು ಬಡಿ, ಇವನನ್ನ ಕೊಲ್ಲು, ಎಂದು ತಲಗಳಿಂದ ಹೇಳಲ್ಪಟ್ಟವರನ್ನು ಕೊಲ್ಲುತ್ತಾ, ತೋರಿಸಲ್ಪಟ್ಟ ಗುರಿಯನ್ನು ಭೇದಿಸುತ್ತಿರಲಾಗಿ ವಿಕಸಿತವಾದ ನೇತ್ರಗಳುಳ್ಳ ತಲೆಗಳಿಂದ ಶ್ಲಾಘಿಸಲ್ಪಡುತ್ತಾ ಕತ್ತಿಗಳನ್ನು ಜಳಿಪಿಸುತ್ತಾ ತಾವೂ ಕುಣಿದರು.

ಒಬ್ಬನು ಹಾರುವಂಥಾವನಾಗಿ, ಮತ್ತೊಬ್ಬನು ಓಡುವಂಥಾವನಾಗಿ ಇನ್ನೊಬ್ಬನು ಕುಣಿಯುವಂಥಾವನಾಗಿ ಬೇರೊಬ್ಬನು ದೂಷಿಸುವಂಥಾವನಾಗಿ, ಬಳಿಕೊಬ್ಬನು ಸ್ತುತಿಸುವಂಥವನಾಗಿ ಶತ್ರುಗಳನ್ನು ಕೊಂದನು.

ಮುಂಡರೂಪವು ಇತರರಿಂದ ಆಗಬೇಕಾದದ್ದು, ಸ್ವಭಾವವು. ಅದನ್ನು ತಮಲ್ಲಿ ತಾವೇ ಮಾಡಿಕೊಳ್ಳುವದು ಆಶ್ಚರ್ಯವಾಗಿರುವಲ್ಲಿ ಮುಂಡದ ಅವಸ್ಥೆಯಲ್ಲಿ ಕುಣಿಯುವದೂ, ಶತ್ರುಗಳನ್ನು ಕೊಲ್ಲುವದೂ ಆಶ್ಚರ್ಯದೊಳಗೆ ಆಶ್ಚರ್ಯವಲ್ಲವೇ ? ಈ ವೀರಭಕ್ತರು ಮುಂಡದ ಆಕಾರವುಳ್ಳವರಾಗಿದ್ದಾಗ್ಯೂ ನೇತ್ರವುಳ್ಳವರಂತೆ ಮುಂದುಗಡೆಯಲ್ಲಿರುವ ಶತ್ರುವಿನಿಂದ ಪ್ರಯೋಗಿಸಲ್ಪಟ್ಟ ಆಯುಧದ ಪ್ರಹಾರವನ್ನು ತಪ್ಪಿಸಿಕೊಂಡು, ಅವನನ್ನು ಹೊಡೆದು ಕೊಲ್ಲುತ್ತಾರೆ. ಒಬ್ಬನು ಉಬ್ಬುತ್ತಾ, ಒಬ್ಬನು ಸುಗ್ಗುತ್ತಾ, ಮತ್ತೊಬ್ಬನು ಉಬ್ಬಿತಗ್ಗುತ್ತಾ ಇನ್ನೊಬ್ಬನು ಸಿಂಹದಂತೆ ಪರಾಕ್ರಮಗೊಳ್ಳುತ್ತಾ, ಶತ್ರುಗಳನ್ನು ಕೊಲ್ಲುತ್ತಾರೆ. ಈಪ್ರಕಾರವಾಗಿ ಜನಗಳಿಂದ ಕೊಂಡಾಡಲ್ಪಟ್ಟ ಆ ಹದಿಮೂರು ಮಂದಿಗಳು ಆ ಪಟ್ಟಣವನ್ನಾಕ್ರಮಿಸಿ, ಜೈನಕುಲದ ಹೆಸರನ್ನೇ ತೊಡೆದರು. ಆ ಜಿನಪ್ರತಿಮೆಗಳನ್ನು ಪುಡಿ ಪುಡಿ ಮಾಡಿ, ಆಚೂರ್ಣದಿಂದ ಕಲ್ಲುಗಳಮೇಲೆ ನಾನಾವಿಧವಾಗಿ ಸೊಗಸಾದ ರಂಗವಲ್ಲಿಗಳನ್ನು ಬರೆದರು. ಇದಕ್ಕಿಂತ ಪೂರ್ವದಲ್ಲಿಯೇ ಶಿವಕಿಂಕರು ಬಂಡಿಗಳಮೇಲೆ ತಂದಿದ್ದ ಶಿವಲಿಂಗಗಳನ್ನು ಆ ಬಸದಿಗಳಲ್ಲೆಲ್ಲಾ ಸ್ಥಾಪಿಸಿದರು. ಹೀಗೆ ಜಿನಾಲಯಗಳಲ್ಲಿ ಲಿಂಗಸ್ಥಾಪನೆಯಾದನಂತರದಲ್ಲಿ ತಮ್ಮ ತಲೆಗಳನ್ನು ತಮ್ಮ ಕೊರಳುಗಳಲ್ಲಿ ಸೇರಿಸಿಕೊಂಡರು. ಅದು ಮೊದಲ್ಗೊಂಡು ಆ ಹದಿಮೂರು

ಮಂದಿ ವೀರಭಕ್ತರು ಈ ಲೋಕದೊಳಗೆ ಭಕ್ತರಲ್ಲಿ ತೇರಸರೆಂದು ಪೂಜ್ಯತೆಯನ್ನು ಪಡೆದು, ಸರ್ವೋತ್ಕೃಷ್ಟರಾಗಿದ್ದಾರೆ. ಹೀಗೆ ಆ ನಾಚೀದೇವಯ್ಯನು ಜೈನಪಟ್ಟಣವನ್ನು ಶೈವಪಟ್ಟಣವನ್ನಾಗಿ ಮಾಡಿ, ಆ ದಿವಸದಿಂದ ಪ್ರಕಾಶವಾಗಿ ಶಿವಭಕ್ತರೊಡನೆ ವಾಸಮಾಡಿದನು. ಎಲಾ ಜೈನನೆ ಕೇಳುವವನಿಗೆ ಕಾಮಧೇನುವಾಗಿರುವ ಮತ್ತೊಬ್ಬ ಭಕ್ತನಕಥೆಯನ್ನು ಹೇಳುತ್ತೇನೆ ಕೇಳು. * *

## ಸೋಮನಾಥನ ಕಥೆ

ಪುರಿಕರವೆಂಬ ಊರಿನಲ್ಲಿ ಭಕ್ತಿಮಾರ್ಗದಲ್ಲಿ ವಿಹರಿಸಬೇಕೆಂಬ ಆಸಕ್ತಿಯಿಂದ ಕೂಡಿದ ಮನಸ್ಸುಳ್ಳ ಸೋಮನಾಥನೆಂಬ ಭಕ್ತನಿದ್ದನು. ತಾನು ಮಾಡಿದ ಪ್ರತಿಜ್ಞೆಯಲ್ಲಿ ಜಾಗರೂಕವಾದ ಮನಸ್ಸುಳ್ಳ ಆತನು ಉದಯ ಮಧ್ಯಾಹ್ನ ಸಾಯಂಕಾಲಗಳಲ್ಲಿ ಶಿವಲಿಂಗ ಮೂರ್ತಿಯನ್ನು ಮುಟ್ಟಿ ನಮಸ್ಕರಿಸುವ ವ್ರತವನ್ನು ಹಿಡಿದಿದ್ದನು. ಒಂದಾನೊಂದು ಕಾಲದಲ್ಲಿ ಅವನು ಕಣ್ಣುಬೇನೆಯಿಂದ ಪೀಡಿತನಾಗಿ ಶಿವಾಲಯಕ್ಕೆ ಹೋಗಲಾರದೆ, ಮೂರುನಾಲ್ಕುದಿನಗಳು ನಿರಾಹಾರನಾಗಿದ್ದನು. ಕಣ್ಣುಬೇನೆಯಿಂದಲೂ, ಉಪವಾಸದಿಂದಲೂ, ದೇಹವು ಬಡವಾದಾಗ್ಯೂ, ಆತನು ನಿಶ್ಚಲವಾದ ವ್ರತವುಳ್ಳವನಾದ್ದರಿಂದ ಒಂದು ದೊಣ್ಣೆಯನ್ನೂರಿಕೊಂಡು ಶಿವಾಲಯಕ್ಕೆ ಹೋಗಬೇಕೆಂದು ಹೊರಟು ನಡುದಾರಿಯಲ್ಲಿ ಶಿಕ್ತಿಕಡಿಮೆಯಾದ್ದರಿಂದ ಹಿಂತಿರಿಗಿದವನಾಗಿ ಕಣ್ಣುಮುಚ್ಚಿಕೊಂಡು ಬರುತ್ತಿರಲು; ದುಷ್ಟರಾದ ಕೆಲವರು ಜೈನರು ಕಾಣಿಸಿಕ್ಕೊಂಡು, ಅಯ್ಯಾ ನಿನ್ನನ್ನು ನಾವು ಶಿವಾಲಯಕ್ಕೆ ಕರದುಕೊಂಡು ಹೋಗುತ್ತೇವೆ ಬಾ ಎಂದು ಜಿನಾಲಯಕ್ಕೆ ಕರೆದುಕೊಂಡುಹೋಗಿ. ನಮಸ್ಕಾರವನ್ನು ಮಾಡೆಂದು ಆತನಕೈತೆಗೆದು ಜೀನವಿಗ್ರಹದಮೇಲೆ ಇಟ್ಟರೂ. ಆ ಸೋಮನಾಥನು ಜಿನ ಪ್ರತಿಮೆಯ ತಲೆಯನ್ನು ಮುಟ್ಟಿಕೊಂಡು ಅದರ ಮುಂದೆ ನಮಸ್ಕರಿಸುತ್ತಿರುವಲ್ಲಿ ಆಕುಹಕಿಗಳು ಜಿನದೇವನು ನಿನ್ನ ಇಷ್ಟಾರ್ಥವನ್ನು ಕೊಡಲಿ ಎಂದು ಹೇಳಿದರು. ಆ ಮಾತುಗಳನ್ನು ಕೇಳಿದಕೂಡಲೇ ಕೋಪದಿಂದ ಘುಡು ಘುಡಿಸುತ್ತಾ, ಭಯಂಕರನಾಗಿ, ಕಣ್ಣಿನಮೇಲೆ ಮುಚ್ಚಿಕೊಂಡಿದ್ದ ಬಟ್ಟೆಯನ್ನು ತೆಗೆದುಬಿಸುಟನು. ಆಕ್ಷಣವೇ ಕಣ್ಣು ಬೇನೆಯು ಭಯಪಟ್ಟಂತೆ ಒಳಗೆಉರಿಯುತ್ತಿರುವ ಕೋಪಾಗ್ನಿಯ ಜ್ವಾಲೆಯು ಹೊರಕ್ಕೆ ಹೊರಟಿತೋ ಎಂಬಂತಿರುವ ಆತನದೃಷ್ಟಿಯನ್ನು ಬಿಟ್ಟು ಓಡಿತು. ಆತನು ಆ ಜೈನನಿಗೆ– ಎಲಾ ಈ ಮೂರ್ತಿಯು ಶಿವನೇ

ಹೊರತು ಜಿನನಲ್ಲವೆಂದು ಹೇಳುತ್ತಿರಲು; ಕೂಡಲೇ ಆಜಿನಪ್ರತಿಮೆಯೊಳಗಿನಿಂದ ಚಟುಚಟು ಎಂಬ ಶಬ್ದವುಂಟಾಗಿ, ಆವಿಗ್ರಹದ ಎದೆಯು ಒಡೆದು ತಲೆಯು ನೆಲಕ್ಕೆ ಬಿತ್ತು. ಆಗ ಭಯದಿಂದ ಆಧೂರ್ತ ಜೈನರು ಸೀಳಲ್ಪಟ್ಟ ಹೃದಯವುಳ್ಳವರಾಗಿ ಗಡಗಡನೆ ನಡುಗಿದರು. ಪಟಪಟನೇ ಸೀಳಿಹೋದ ಆಜಿನಪ್ರತಿಮೆಯ ಎದೆಯಿಂದ ಚಂದ್ರ, ಶಂಖ, ಮೊಲ್ಲೆ ಮಂದಾರಪುಷ್ಪ ಇವುಗಳಂತೆ ಸುಂದರವಾದ ಲಿಂಗರೂಪನಾದ ಶಿವನು ಉದ್ಭವಿಸಿದನು ಭಕ್ತರದುಃಖವನ್ನು ಪರಿಹರಿಸುವವನಾದ ಶಿವನು ಆ ಪುರಿಕರವೆಂಬ ಊರಿನಲ್ಲಿ ಪುನ್ನಾಗವಸತೀಶ್ವರನೆಂದು ಈಗಲೂ ಪ್ರಸಿದ್ಧಿಯಂ ಪಡೆದಿದ್ದಾನೆ. ಬರೀಮಾತಿನಿಂದೇನು ? ಮುಂಗೈಯಲ್ಲಿರುವ ಕಂಕಣವನ್ನು ನೋಡುವದಕ್ಕೆ ಕನ್ನಡಿಯೇಕೆ? ಆ ಪುನ್ನಾಗ ವಸತೀಶ್ವರನನ್ನು ನೋಡು. ಆಶ್ಚರ್ಯಕರವಾದ ಶಿವಮಹಿಮೆಯಿಂದ ಪ್ರಸಿದ್ಧವಾದ ಪ್ರಭಾವವುಳ್ಳವರಾದ ಮಹಾನುಭಾವರ ಪೂಜ್ಯವಾದ ಮತ್ತೊಂದು ಕಥೆಯನ್ನು ಹೇಳುತ್ತೇನೆ ಕೇಳು.

## ವೈಜವ್ವೆಯ ಕಥೆ.

ಪೂರ್ವದಲ್ಲಿ ಪುರವಲಿಯೆಂಬ ಊರಿನಲ್ಲಿ ವೈಜವ್ವೆಯೆಂಬ ಒಬ್ಬ ಪತಿವ್ರತೆಯಿದ್ದಳು. ಅವಳು ಶಿವಭಕ್ತಿಯೆಂಬ ಅನರ್ಘ್ಯವಾದ ರತ್ನಕ್ಕೆ ನಿಕ್ಷೇಪವೂ ಶಿವಭಕ್ತರನ್ನು ನೋಡುವದರಿಂದುಂಟಾದ ಸಂತೋಷದಿಂದ ಜಾರಿಹೋದ ಹೊರಗಣ ಸಂಸ್ಕಾರ ವುಳ್ಳವಳೂ, ಶಿವಧ್ಯಾನವೆಂಬ ಅಮೃತ ಸಮುದ್ರದಲ್ಲಿ ವಿಹರಿಸುವ ವಿಷಯದಲ್ಲಿ ಆಶಕ್ತಳೂ ಆಗಿದ್ದಾಗ್ಯೂ ಗಂಡ ಮುಂತಾದಬಂಧುಗಳೆಲ್ಲರೂ ಜೈನರಾಗಿದ್ದದರಿಂದ ಮನಸ್ಸಿನಲ್ಲಿ ಸಹಿಸುವದಕ್ಕೆ ಅಶಕ್ಯವಾದ ದುಃಖದಿಂದ ತುಂಬಿದವಳಾಗಿದ್ದಳು. ಹೀಗಿರುವಲ್ಲಿ ಅವಳಗಂಡನು ಒಂದುದಿನ ಜೈನರಿಗೂ ಜೈನರಗುರುಗಳಿಗೂ ಭೋಜನಕ್ಕೆ ಹೇಳಿ, ಅನೇಕವಿಧವಾದ ಭಕ್ಷ್ಯಭೋಜ್ಯಾದಿಗಳನ್ನು ಆಕೆಯ ಕೈಯಿಂದ ಮಾಡಿಸಿ, ಅಡಿಗೆಯಲ್ಲವೂ ಸಿದ್ಧವಾದಮೇಲೆ ಗುರುಗಳನ್ನೂ ಶ್ರಾವಕರನ್ನೂ ಕರೆಯುವದಕ್ಕೆ ಹೋದನು. ಅಷ್ಟರಲ್ಲಿಯೇ ಆಕೆಯು ಸಕಲ ಶಾಕಪಾಕಗಳಿಂದ ಕೂಡಿರುವ ಅನ್ನವನ್ನು ನೋಡಿ, ಅಯ್ಯೋ ಶಿವಭಕ್ತರಿಗೆ ಯೋಗ್ಯವಾದ ಈ ಅಡಿಗೆಯನ್ನು ನಾಯಿಗಳಿಗೆ ಹಾಕಬೇಕಲ್ಲಾ ಎಂದು ಬಹಳವಾಗಿ ಮನಸ್ಸಿನಲ್ಲಿ ವ್ಯಥೆಪಡುತ್ತಿರಲು; ಸರ್ವಜ್ಞನಾದ ಭಕ್ತವತ್ಸಲನಾದ ಶಿವನು ಅವಳ ಬಯಕೆಯನ್ನು ಪೂರೈಸಬೇಕೆಂದು ಜಡೆಮುಡಿ, ಕಾವಿಯುಬಟ್ಟೆ, ವಿಭೂತಿಗಳನ್ನು ಧರಿಸಿಕೊಂಡವನಾಗಿ, ಅವಳಿಗೆ ಗೋಚರನಾದನು. ವೈಜವ್ವೆಯು ಆತನಿಗೆ ನಮ

ಸ್ಕರಿಸಿದಳು. ಆತನು ನಿನಗೆ ಮಹಾನುಭಾವರ ಪೂಜೆಯ ಸಂಸ್ಕಾರವುಂಟಾಗಲಿ ಎಂದು ಹರಿಸಿದನು. ಆತನ ಪಾದಧೂಳಿಯಿಂದ ಪವಿತ್ರನಾಗಿ ಮಾಡಲ್ಪಟ್ಟ ಶಿರಸ್ಸುಳ್ಳವಳಾದ ವೈಜವ್ವೆಯು ಪಾದಪ್ರಕ್ಷಾಳನ ಪೂರ್ವಕವಾಗಿ ಪಾದ್ಯ ಮುಂತಾದ ಉಪಚಾರಗಳಿಂದ ಆತನನ್ನು ಪೂಜಿಸಿ ಅನಂತರದಲ್ಲಿ ಷಡ್ರಸಭರಿತವಾದ ಆಹಾರವನ್ನು ತನ್ನ ಗುರುವಿಗೆ ಸಮರ್ಪಿಸಿದಳು. ಸ್ವಾಮಿಯು ಕೂಡ ಭಕ್ತಿಯಿಂದ ನೀಡಲ್ಪಟ್ಟಿದ್ದನ್ನು ಬಹಳಪ್ರೀತಿಯಿಂದ ಸ್ವೀಕರಿಸಿ, ಕೈತೊಳೆದುಕೊಳ್ಳುತ್ತಿದ್ದನು. ಆಗ ಆಕೆಯ ಪತಿಯು ಬಂದು ಕೋಪದಿಂದ ಕೆಂಪಾಗಿರುವ ಕಣ್ಣಿನಿಂದ ಅವನನ್ನು ನೋಡಿದನು. ಆಕ್ಷಣವೇ ಶಿವನು ಅಂತರ್ಧಾನನಾಗಲು, ಆದುಷ್ಟಬುದ್ಧಿಗಳಾದ ಜೈನರು ಆಮಹೇಶ್ವರನನ್ನು ಕಾಣದೆ, ಶಿವಧ್ಯಾನದಿಂದುಂಟಾದ ಪರಮಾನಂದದಿಂದಭರಿತಳಾದ ಹೆಂಡತಿಯನ್ನು ಕುರಿತು;- ಎಲಾ ಸ್ತ್ರೀಯೆ, ನೀನು ಆ ದುಷ್ಟ ತಪಸ್ವಿಯನ್ನು ಎಲ್ಲಿಮರೆಮಾಡಿದೆ ? ಅವನನ್ನು ನೋಡಿದರೆ ಜೈನರು ಜಿನದರ್ಶನದಿಂದ ಪ್ರಾಯಶ್ಚಿತ್ತವನ್ನು ಮಾಡುತ್ತಾರೆ; ಜಿನನಿಗೆ ಸಂಕಲ್ಪಿಸಿ ಮಾಡಿದ ಅನ್ನವನ್ನು ಜೈನರು ನೋಡುವದಕ್ಕೂ ಮಾತನಾಡುವದಕ್ಕೂ ಅರ್ಹನಲ್ಲದ ಶೈವನಿಗೆ ಹ್ಯಾಗೆ ವಿನಿಯೋಗಿಸಿದೆ ? ಅವನೊಡನೆ ಕೂಡಬೇಕೆಂಬ ಅಪೇಕ್ಷೆಯಿಂದ ಈ ಅನಾಚಾರವನ್ನು ನಡಿಸಿದ್ದೀಯೆ. ಹುಚ್ಚನಾದ ಕಾಮನು ನ್ಯಾಯಾನ್ಯಾಯಗಳನ್ನು ತಿಳಿಯುವದಿಲ್ಲವಷ್ಟೆ. ಎಲೈ ವಂಚಕರಲ್ಲಿ ಪ್ರೀತಿಯುಳ್ಳವಳೇ, ನಿನಗೆಚಂಡಾಲರಮೇಲೆ ಆಶೆಯಾಕೆ! ಅವನನ್ನು ಒಳಗೆ ಹೋಗಿಸಿ, ನನ್ನಮನೆಯನ್ನು ಚಂಡಾಲರಮನೆಯನ್ನು ಮಾಡಿದೆ. ಇವುಮೊದಲಾದ ಕಠಿನವಚನಗಳಿಂದ ಮೊದಲುಬೆದರಿಸಿ, ಆಮೇಲೆ ತುದಿಯಲ್ಲಿ ಗಂಟುಗಳುಳ್ಳ ಒಂದು ಚಾವಟಿಯಿಂದ ಹೊಡೆಯುವದಕ್ಕೆ ಆರಂಭಿಸಿದನು. ಶಿವಾಗ್ನೆ ಎಂಬ ವಜ್ರಕವಚವು ಆಚ್ಛಾದಿಸಿರುವದರಿಂದ ಆಕೆಯು ಸ್ವಲ್ಪವೂ ಗಾಯವಡೆಯದ ಶರೀರವುಳ್ಳವಳಾಗಿ, ಆ ಚಾವಟಿಯ ಬಿರುಸಾದ ಏಟುಗಳನ್ನೆಲ್ಲಾ ಸೈರಿಸಿಕೊಂಡಳು. ಅವಳ ದೇಹದಮೇಲೆಬಿದ್ದ ಚಾವಟಿಯು ಕಮಲಮಾಲಿಕೆಯಂತಾಯಿತು. ಸಮಸ್ತ ಜೈನರ ಕಣ್ಣಿಗೂ ಚಾವಟಿಯಾಗಿ ಕಂಡುಬಂತು. ದೋಸೆ ಹಿಟ್ಟಿಗಾಗಿ ಘಟ್ಟವ್ವೆಗೆ ಪ್ರತಿನಿಧಿಯಾಗಿ ಮಣ್ಣನ್ನು ಹೊತ್ತ ಶಿವನಮೇಲೆಬಿದ್ದ ಚಾವಟಿಯ ಪೆಟ್ಟುಗಳು, ಸೈನ್ಯಸಹಿತನಾದ ಚೋಳರಾಯನಲ್ಲಿ ಕಾಣಿಸದಂತೆ ಅವಳಲ್ಲಿ ಬಿದ್ದ ಚಾವಟಿಯ ಪೆಟ್ಟುಗಳು ಆಗ ಜೈನರ ದೇಹಗಳ ಮೇಲೆ ಬಿದ್ದವು ಜೈನರೆಲ್ಲರೂ ಮೂರು ರೇಖೆಗಳ ಗುರುತುಳ್ಳ ಚಾವಟಿಯ

ಪೆಟ್ಟುಗಳಿಂದ ಎದೆಯನ್ನು ಅಗಲಿಸಿಕೊಂಡು ಪದೇ ಪದೇ ಬೆನ್ನಿನ ಮೂಳೆಗಳನ್ನು ಬಗ್ಗಿಸುತ್ತಾ ನೆಗೆದಾಡಿದರು. ಅಯ್ಯೋ ಎಂದು ಅರಿಚಿಕೊಂಡು ಭ್ರಾಂತರಾಗಿ, ದಿಕ್ಕುಗಳನ್ನು ಸುತ್ತಲೂ ನೋಡುತ್ತಾ, ಆ ಪೆಟ್ಟುಗಳಿಂದ ಆವರಿಸಲ್ಪಟ್ಟ ತಮ್ಮ ಹಸ್ತವನ್ನು ಕೊಡಹಿದರು. ಕೆಲವರು ಹೆದರಿ ಬಸದಿಗಳ ಮುಹಡಿಗಳನ್ನೇರಿದರು. ಅಲ್ಲಿಯೂ ಪೆಟ್ಟುತಿಂದ ಕೆಲವರು ಅಲ್ಲಿಂದಇಳಿದರು. ಕೆಲವರು ಬೀದಿಗಳಲ್ಲಿ ಓಡಿದರು. ಕೆಲವರು ಕೆರೆಗಳಲ್ಲಿ ಬಿದ್ದರು ಕೆಲವರು ಚನ್ನಾಗಿ ಬೀಳುವಪೆಟ್ಟುಗಳ ನೋವಿನಿಂದ ನೆಲದಮೇಲೆ ಬಿದ್ದು ಹೊರಳಿದರು. ಇನ್ನು ಕೆಲವರು ಮೊದಲು ಹತ್ತಿದ್ದ ಮರದ ಕೊನೆಯಿಂದಿಳಿದು, ನೆಲಮಾಳಿಗೆ ಯೊಳಗೆ ಪ್ರವೇಶಿಸಿ, ಬಾಗಿಲ ಕದವನ್ನು ಮುಚ್ಚಿಕೊಂಡರು. ಕೆಲವರು ತಮ್ಮ ದೇಹದಲ್ಲಿ ಕಾಣಬರುವ ಚಾವಟಿಯ ಪೆಟ್ಟಿನಿಂದ ಬಾಸುಂಡೆಯೆದ್ದು ರಕ್ತದಿಂದ ನೆನೆದ ಸ್ಥಳವನ್ನು ಬಾರಿ ಬಾರಿಗೂ ಮುಟ್ಟಿನೋಡಿಕೊಳ್ಳುತ್ತಿದ್ದರೂ. ಕೆಲವರು ಕಲ್ಲುಗಳಿಗೆ ತಲೆಗಳನ್ನು ಅವಿಚ್ಛಿನ್ನವಾಗಿ ತಾಡಿಸಿಕೊಂಡು, ಮೂರ್ಛಿತರಾಗಿದ್ದು ತಿರಿಗಿ ಕಣ್ಣುಗಳನ್ನು ತೆರೆದು, ನಿಟ್ಟುಸುರು ಬಿಟ್ಟರು. ಇನ್ನು ಕೆಲವರು ಚಾವಟಿಯ ಪೆಟ್ಟುಗಳಿಂದ ಸುರಿಯುತ್ತಿರುವ ರಕ್ತಧಾರೆಯಿಂದ ವ್ಯಾಪ್ತವಾದ ದೇಹವುಳ್ಳವರಾಗಿ, ಸಹಿಸಲಾರದೆ ಒಬ್ಬರನ್ನೊಬ್ಬರು ತಬ್ಬಿಕೊಂಡರು. ಕಲ್ಲಿನಮನೆಗಳಲ್ಲಿಯೂ ಮುಹಡಿಗಳ ಮೇಲ್ಗಡೆಗಳಲ್ಲಿಯೂ,ದರಿಗಳಲ್ಲಿಯೂ, ಔತುಕೊಂಡವರಾದಾಗ್ಯೂ ಅವರು ದೇಹಗಳಲ್ಲಿ ಚಾವಟಿಪೆಟ್ಟುಗಳು ಮತ್ತಷ್ಟು ಹೆಚ್ಚಾಯಿತು. ಎಲೈ ಪರಮೇಶ್ವರನೇ? ಈ ವರಿಗೂ ನಿನ್ನಪಾದಕಮಲವನ್ನು ಸೇವಿಸುವದಕ್ಕೆ ಈ ಚಾವಟಿಪೆಟ್ಟುಗಳೇ ಫಲವೋ? ಎಂದು ಜಿನದೇವನನ್ನು ನಿಂದಿಸಿದರು. ಪುಷ್ಪ ಸೇನಮುನಿಯು ಊರನ್ನು ಬಿಟ್ಟು ಮತ್ತೊಂದೂರಿಗೆ ಹೋದನು. ಚಂದ್ರಸೇನಮುನಿಯು ಚಂದ್ರ ಕುಂಡವೆಂಬ ಮಡುವಿಗೆ ಬಿದ್ದನು. ಮಂತ್ರಸೇನಮುನಿಯು ಮನೆಯನ್ನು ಬಿಟ್ಟು ವನಕ್ಕೆ ಹೋದನು. ವೀರಸೇನಮುನಿಯು ಬೆಟ್ಟದಗವಿಯೊಳಗೆ ಪ್ರವೇಶಿಸಿದನು. ಗರ್ವಿಷ್ಟನಾದ ಆಕೆಯ ಪತಿಯು ಜೈನರ ಮತ್ತು ಕ್ಷಪಣಕರ ಭಾಗ್ಯದಿಂದ ತನ್ನ ಕೈಗೆ ನೋವು ಉಂಟಾದುದ್ದರಿಂದ ಹೊಡೆಯಲಾರದೆ ಸುಮ್ಮನಾಗಿ, ಕೋಪದಿಂದ ತನ್ನ ಪತ್ನಿಯನ್ನು ಮನೆಯಿಂದ ಹೊರಡಿಸಿದನು. ಅವಳು ಹೋಗುತ್ತಾ ಮುಂದುಗಡೆಯಲ್ಲಿ ಜಿನಾಲಯುವನ್ನು ನೋಡಿ, ಶಿವಾಲಯವೆಂದು ಅದರೊಳಗೆ ಪ್ರವೇಶಿಸಿ– ಎಲೈ ಶಂಭುವೇ ನನ್ನನ್ನು ರಕ್ಷಿಸು ರಕ್ಷಿಸು ಎಂದು ಹೇಳುತ್ತಾ

ನಮಸ್ಕರಿಸಿದಳು. ಆಕ್ಷಣವೇ ಆ ಜಿನಪ್ರತಿಮೆಯು ಎರಡುಪಾಲಾಗಿ, ಸೀಳಿಹೋಗಿ ಆ ವೈಜವ್ವೆಯನ್ನು ರಕ್ಷಿಸುವದಕ್ಕಾಗಿ ಅದರಿಂದ ಒಂದು ಉತ್ಕೃಷ್ಟವಾದ ಶಿವ ಲಿಂಗವು ಆವಿರ್ಭವಿಸಿತು. ಅವಳಗಂಡನೂಕೂಡಾ ಕೋಪದಿಂದ ಆ ಜಿನಾಲಯಕ್ಕೆ ಬರಲು; ಅವಳನ್ನು ಹೊಡೆಯುವದಕ್ಕೆ ಉದ್ಯುಕ್ತನಾದ ಪತಿಯನ್ನು ಕಂಡು, ಭೀತಿಯಿಂದ ಲಿಂಗದಪಕ್ಕವನ್ನು ಸೇರಿದಳು. ಅವನೂ ಹಿಂದೆಯೇಹೋಗಿ, ವೇಗ ದಿಂದ ಅವಳ ತುದಿಗೈಯ್ಯನ್ನು ಹಿಡಿದುಕೊಂಡನು. ಕೂಡಲೇ ಚಪಲವಾದಕಣ್ಣು ಗಳುಳ್ಳವಳಾಗಿ, ನಡುಗಿದಳು. ಆಗ ಶಿವನು ಆ ದುಷ್ಟನಿಂದ ಎಳೆಯಲ್ಪಟ್ಟವಳಾಗಿ ಮುಂಚೆಯೇ ದಾರಲಿಂಗೋಚಿತಳಾಗಿದ್ದಾಗ್ಯೂ ತಿರುಗಿ ದಾರಾಲಿಂಗೋಚಿತಗಳಾ ಗಳಿಂದಕೂಡಿದವಳಾಗಿ, ಮತ್ತು ಭೀತಿಲಕ್ಷಣಗಳಿಂದಕೂಡಿದವಳೂ, ಆಗಿ ಎಂದರ್ಥ. ಗಿ ಅಂದರೆ, ಮೊದಲೇ ಪತ್ನಿ ಚಿನ್ನೆನಡುಗುತ್ತಿರುವ ವೈಜವ್ವೆಯನ್ನು ಅದೃಶ್ಯಳನ್ನಾಗಿ ಮಾಡಿದನು. ಪ್ರಾಯುದಮುದ್ದಾನೆಯ ಕಪೋಲದಲ್ಲಿ ತುಂಬಿಗಳ ಮಾಲಿಕೆಯಂತೆ ಅ ವಳ ಮುಖದಲ್ಲಿ ಮೀಸೆಯು ಪ್ರಕಾಶಿಸಿತು. ಅವಳ ಗಂಡನ ಅಭಿವೃದ್ಧಿ ಹೊಂದಿದ ಮಾನವೂ ಬಯಕೆಯೂ, ಅಡಗಿದಂತೆ ಆಕೆಯ ಉನ್ನತವಾದ ಕುಚಗಳೆರಡು ಅಡಗಿ ದವು. ಅವಳ ಕಂಠಧ್ವನಿಯು ಮೇಘಧ್ವನಿಯಂತೆ ಗಂಭೀರವಾಯಿತು. ನಡಗೆಯು ಗಂಭೀರವಾದದ್ದು ಮಂದವಾದದ್ದು ಆಯಿತು ನೋಟವು ಸಕಲ ಲೋಕಗಳನ್ನು ತೃಣೀಕರಿಸಿತು. ಅವಳ ಗಂಡನು ತಾನು ಪೌರುಷದಲ್ಲಿ ಆಶೆಯುಳ್ಳವನಾದರೂ, ಆಕೆಯ ಪೌರುಷವನ್ನು ಸಹಿಸದೆ, ಭೀತಿ, ಆಶ್ಚರ್ಯ, ದೈನ್ಯ, ಇವುಗಳಿಗೆ ಗುರಿಯಾ ದವನಾಗಿ ಕಯ್ಯನ್ನು ಬಿಟ್ಟನು, ಭಕ್ತರು ಆಕೆಯ ಪುರುಷಾಕಾರವನ್ನು ನೋಡಿ, ಆಶ್ಚರ್ಯ ಪಟ್ಟರು. ಪೂರ್ವದಲ್ಲಿ ತಿಲಕವ್ವೆಯೆಂಬ ಭಕ್ತೆಯೂ ಕೂಡ, ಭಕ್ತಿಯನ್ನು ಸೈರಿಸದ ತನ್ನ ಗಂಡನು ತನ್ನನ್ನು ಮನೆಯಿಂದ ಹೊರಡಿಸಲು; ಶಿವಾಲಯಕ್ಕೆ ಹೋಗಿ, ಈರೀತಿಯಾದಳೆಂದು ಕಥೆಗಳಲ್ಲಿ ಕೇಳುತ್ತೇವೆ. ಈ ವೈಜವ್ವೆಯ ಚರಿ ತ್ರೆಯು ಹಾಗ್ಯೆ ಆಯಿತು.

ಈಪ್ರಕಾರವಾಗಿ, ಭಕ್ತರು ಆ ವೈಜವ್ವೆಯನ್ನು ಸ್ತುತಿಸಿದವರಾಗಿ ಆಲಿಂ ಗವನ್ನು ಪೂಜಿಸಿದರು. ವೈಜವ್ವೆಯ ಭಾವನೆಯಿಂದ ಉತ್ಪನ್ನವಾದದ್ದರಿಂದ ವೈಜ ನಾಥೇಶ್ವರನೆಂಬ ಹೆಸರನ್ನು ಪಡೆದ ಆ ಲಿಂಗವು ಈಗಲೂ ಆ ಪಟ್ಟಣದಲ್ಲಿ ಪೂಜಿಸ ಲ್ಪಡುತ್ತದೆ. ಎಲೈ ದುಷ್ಟನೇ ನೋಡು, ಅದಂತಿರಲಿ.

ಅಬ್ಬಲೂರೆಂಬ ಗ್ರಾಮದಲ್ಲಿ ಜೈನರೊಡನೆ ನನಗೆ ವಾದವು ನಡೆಯಿತು. ಅವರು ನನ್ನಿಂದ ಜೈಸಲ್ಪಟ್ಟವರಾಗಿ ರೋಷದಿಂದ;—ನಿನಗೆ ಶಕ್ತಿಯಿದ್ದರೆ ಪ್ರತ್ಯಕ್ಷವಾಗಿ ಅದ್ಭುತವನ್ನು ತೋರಿಸು ಎಂದು ಹೇಳಲು, ನಾನು ಪ್ರತಿಜ್ಞೆಯನ್ನು ಮಾಡಿದೆನು, ಏನಂದರೆ;—ನಾಳೆದಿನ ಸೂರ್ಯೋದಯವಾಗುವದಕ್ಕಿಂತ ಮುಂಚೆಯೇ ಪೌಳಿಸಹಿತವಾಗಿ ಈ ಜಿನಾಲಯವು ಮುರಿದು ಬೀಳಲಿ, ಹಾಗಾಗದಿದ್ದರೆ ನಾನು ಶಿವನಕಿಂಕರನಲ್ಲ. ಶೈವಜೈನರುಗಳ ಮಹಿಮೆಯ ವಿಷಯದಲ್ಲಿ ಇದು ನನ್ನ ಪ್ರಮಾಣವು ಎಂಬ ಅವನ ಆಶ್ಚರ್ಯಕರವಾದ ಪ್ರತಿಜ್ಞಾವಚನವನ್ನು ಆಜೈನರು ಅಂಗೀಕರಿಸಿದರು. ಆಗ ಸೂರ್ಯೋದಯಕ್ಕಿಂತ ಮುಂಚಿತವಾಗಿ, ಆ ಜಿನಾಲಯವು ಪೌಳಿಸಹಿತವಾಗಿ ಮುರಿದುಬಿತ್ತು. ಜಿನವಿಗ್ರಹವೂ ಒಡೆದುಹೋಗಿ ನೆಲದಮೇಲೆಬಿತ್ತು. ಜೈನರು ಹೊತಾರೆಯಲ್ಲಿ ಬಿದ್ದಿರುವ ಆ ಜಿನಪ್ರತಿಮೆಯನೋಡಿ, ಭ್ರಾಂತರಾಗಿ ಭಯದಿಂದ ಹಿಡಿಯಲ್ಪಟ್ಟಮನಸ್ಸುಳ್ಳವರಾಗಿ ಚಿಂತೆಗೊಂಡು, ಮರಳಿ ಶಿಲ್ಪಿಗಳಿಂದ ಜಿನಾಲಯವನ್ನು ಕಟ್ಟಿಸಿದರು. ಅದುಕೂಡ ಶೀಘ್ರವಾಗಿ ಪೌಳಿಯೊಡನೆಯೂ ಜಿನವಿಗ್ರಹದೊಡನೆಯೂಬಿತ್ತು. ಈಗಲೂ ಅದನ್ನು ಯಾರೂ ಕಟ್ಟಿಸಿಲ್ಲ. ಏಟನನ್ನು ವಶಗೊಳಿಸುವದಕ್ಕಾಗಿ ಪ್ರಾರಂಭದಲ್ಲಿ ಆಡುವ ಮುದಿಸೊಳೆಯ ಮಾತಿನಂತಿರುವ ಆ ಮಾತಿನಿಂದೇನು ಪ್ರಯೋಜನವು ಈಗಲೇ ನಾನು ನನ್ನತಲೆಯನ್ನು ಕತ್ತರಿಸಿಕೊಂಡು ಏಳುದಿವಸದಮೇಲೆ ತಿರಿಗಿಪಡೆದು, ಈ ಪಟ್ಟಣವನ್ನೂ, ಎಲ್ಲಾ ಬಸ್ತಿಗಳನ್ನೂ ಧ್ವಂಸಮಾಡುತ್ತೇನೆ. ಎಲಾ ನೀಚನೇ ಹೇಳು, ಎನಲು, ಆಮಾತನ್ನು ಕೇಳಿ ಜೈನರೆಲ್ಲರೂ ಹೆದರಿದರು. ಶಿವಭಕ್ತರೆಲ್ಲರೂ ಧೈರ್ಯದಿಂದ ಆ ಶಿವಾಲಯದಲ್ಲಿಯೇ ಇದ್ದರು. ಬಿಜ್ಜಳರಾಯನು ಪುರಜನಗಳಿಂದಲೂ, ಸೇನೆಗಳಿಂದಲೂ ಸಹಿತನಾಗಿ, ಆ ಶಿವಾಲಯಕ್ಕೆ ಬಂದನು. ಅಷ್ಟರೊಳಗೆ ಬಸವೇಶ್ವರನು ಭಕ್ತರೊಡನೆ ಬಂದು ಅಲ್ಲಿದ್ದನು. ಆಗ ಏಕಾಂತ ರಾಮಯ್ಯನು ಗಣಸಭೆಯಮುಂದೆ ನಿಂತು,—ನಾನು ಬಂಕಯ್ಯನ ದಾಸತ್ವಕ್ಕೆ ಯೋಗ್ಯನೋ ಅಲ್ಲವೋ ನೋಡಿರಿ. ಎಂದು ಹೇಳಿ, ಎಡದ ಕಯ್ಯಿಂದ ಜುಟ್ಟನ್ನು ಹಿಡಿದುಕೊಂಡು, ಅಟ್ಟಹಾಸವನ್ನು ಮಾಡುತ್ತಾ, ಬಲಗಯ್ಯಲ್ಲಿರುವ ಕತ್ತಿಯಿಂದಕತ್ತರಿಸಿದನು. ಬಸವೇಶ್ವರಸಹಿತರಾದ ಭಕ್ತರು ಉಘೇಎಂದು ಕೂಗಿದರು. ರಾಜನು ಪಟ್ಟಣದ ಜನಗಳೊಡನೆ ಮತ್ತೆಮತ್ತೆ ನಮಸ್ಕರಿದನು, ನಗೆಯಿಂದ ಕೂಡಿರುವದಾಗಿಯೂ, ವಿಕಸಿತವಾದ ನೇತ್ರಗಳುಳ್ಳದ್ದಾಗಿಯೂ, ಇರುವ ತಲೆಯನ್ನು

ಎಡಗೈಯಿಂದಲೇ ಹಿಡಿದುಕೊಂಡು, ಬಲಗೈಯ್ಯಿಂದ ಕತ್ತಿಯನ್ನು ಜಳಿಪಿಸುತ್ತಿದ್ದನು. ತಲೆಯು ನಟನಂತೆ ಕುಣಿಯಿತು. ಮುಂಡವು ಕುಣಿಯುತ್ತಿರಲಾಗಿ; ಆ ರುಂಡವು ಸಭೆಯಲ್ಲಿ ವ್ಯಕ್ತವಾಗಿ ಆಯಾಕಾಲಕ್ಕೆ ಯೋಗ್ಯವಾದ ಮಾತುಗಳನ್ನು ಹೊರಡಿಸಿತು. ಮುಂಡವು ಗೀತಾರ್ಥವನ್ನು ಸೂಚಿಸುವ ಹಸ್ತಾಭಿನಯಕ್ರಮಗಳನ್ನು ತೋರಿಸುತ್ತಿರಲಾಗಿ ರುಂಡವು ತನ್ನಿಂದತೋರಿಸುವದಕ್ಕೆ ಯೋಗ್ಯವಾದ ಮುಖಾಭಿನಯಗಳನ್ನು ತೋರಿಸಿತು. ಅನಂತರದಲ್ಲಿ ವೀರನು ಹೊರಟು, ಹನ್ನೆರಡು ಯೋಜನ ವಿಸ್ತೀರ್ಣವಾದ ಪಟ್ಟಣದಲ್ಲಿ ಬೀದಿ ಬೀದಿಗಳಲ್ಲಿಯೂ, ಕುಣಿಯುತ್ತಾ, ಹಾಡುತ್ತಾ, ತಿರಿಗಿದನು. ಒಂದುಕಡೆಯಲ್ಲಿ ಓಡುತ್ತಾ. ಒಂದು ಕಡೆಯಲ್ಲಿ ಮೆಲ್ಲನೆ ನಡೆಯುತ್ತಾ, ಒಂದು ಕಡೆಯಲ್ಲಿ ಹಾರುತ್ತಾ ಒಂದು ಕಡೆಯಲ್ಲಿ ಕೂಗುತ್ತಾ, ರಾಜನಿಗೆ ಆಶ್ಚರ್ಯವನ್ನು ಟುಮಾಡಿದನು; ಹಿಂದಕ್ಕೂ ಮುಂದಕ್ಕೂ ಓಡುತ್ತಿರುವವನಾಗಿಯೂ, ಸುತ್ತಲೂ, ಬಾರಿಬಾರಿಗೂ ನೋಡುವವನಾಗಿಯೂ, ಶಸ್ತ್ರಾಭ್ಯಾಸವನ್ನು ತೋರಿಸುವವನಾಗಿಯೂ ಇರುವ ಏಕಾಂತ ರಾಮಯ್ಯನನ್ನು ಪುರಜನರೆಲ್ಲರೂ ಸ್ತುತಿಸಿದರು. ಈ ರೀತಿಯಾಗಿ ಪಟ್ಟಣದಲ್ಲೆಲ್ಲಾ ಏಳುದಿವಸಗಳ ತನಕ ವಿಹರಿಸಿ, ಮರಳಿ, ಬಸವೇಶ್ವರನಿಂದ ಅಲಂಕರಿಸಲ್ಪಟ್ಟ ಗಣಸಭೆಗೆ ಬಂದು, ಅಲ್ಲಿ ಭಕ್ತರಿಂದ ಪೂಜಿಸಲ್ಪಟ್ಟವನಾಗಿ. ವಿಕಸಿತವಾದಕಣ್ಣುಗಳುಳ್ಳದ್ದಾಗಿಯೂ ಶರಣಾರ್ಥಿಎಂದು ಹೇಳುತ್ತಿರುವದಾಗಿಯೂ ಇರುವ ತಲೆಯನ್ನು ತನ್ನ ಕುತ್ತಿಗೆಎಂಬ ಪೀಠದಲ್ಲಿ ಇಟ್ಟುಕೊಂಡನು ಜೈನರು ಆತನ ಚರಣಕಮಲಗಳಿಗೆ ನಮಸ್ಕರಿಸಿ ಜಯುವನ್ನು ಕೊಟ್ಟರು, ಶಿವಯೋಗಿಯಾದ ಏಕಾಂತ ರಾಮಯ್ಯನುಕೂಡ, ಅವನ ಹಣೆಯಲ್ಲಿ ಬಸವನ ಮುದ್ರೆಯನ್ನು ಒತ್ತಿದನು. ಶತ್ರುಗಳನ್ನು ಜೈಸಿದವನೂ, ಜಿನಾಲಯಗಳೆನ್ನೆಲ್ಲಾ ಧ್ವಂಸಮಾಡಿದವನೂ ಆದ ಆ ಭಕ್ತನನ್ನು ಬಸವೇಶ್ವರನು ಕೂಡ ಭಕ್ತರೊಡನೆ ತನ್ನಮನೆಗೆ ಕರಕೊಂಡುಹೋದನು.

ಶೂರರಾದ ತೇರಸರ ಆಶ್ಚರ್ಯಕರವಾದ ಮತ್ತು ಭಯಂಕರವಾದ ಪರಾಕ್ರಮದಿಂದ ಪ್ರಕಾಶಿಸುವದಾಗಿಯೂ, ತ್ರಿಭುವನದಲ್ಲಿ ಪ್ರಸಿದ್ಧವಾದದ್ದಾಗಿಯೂ ಇರುವ ನಾಚಿದೇವಯ್ಯನ ಚರಿತ್ರೆಯು ಯಾವಾಗಲೂ ವೃದ್ಧಿಹೊಂದುತ್ತದೆ.

ತನ್ನ ಹಸ್ತಕಮಲವನ್ನು ಜಿನವಿಗ್ರಹದನೇಲಿಟ್ಟು. ಅದನ್ನು ಶಿವಲಿಂಗವನ್ನಾಗಿಮಾಡಿ ಜಗತ್ಪ್ರಸಿದ್ಧನಾಗಿಯೂ ಆಶ್ಚರ್ಯಕರವಾದ ಮಹಿಮೆಯ ಸಂಪತ್ತು

ಉಳ್ಳವನಾಗಿಯೂ ಇರುವ ಸೋಮನಾಥಗುರುವು ಮನಸ್ಸಿನಲ್ಲಿ ತನ್ನನ್ನು ಸ್ಮರಿಸುವಭಕ್ತರಿಗೆ ಮಂಗಳಗಳನ್ನು ಕೊಡಲಿ.

ವೈಜವ್ವೆಯ ಚರಿತ್ರೆಯನ್ನು ಓದುವವರಿಗೆ ಉತ್ತಮವಾದ ಶ್ರೇಯಸ್ಸುಂಟಾಗುವದು. ಮತ್ತು ಅವರಿಗೆ ಶತ್ರುಗಳು ಮಾಡಿದ ಅಪಮಾನವು ತಿರಿಗಿ ಆ ಶತ್ರುಗಳನ್ನೇ ಬಾಧಿಸುತ್ತದೆ.

ಏಕಾಂತರಾಮಯ್ಯನೆಂಬ ಭಕ್ತನ ಮುಖಚಂದ್ರನಿಂದ ಹುಟ್ಟಿದ ಜ್ಞಾನಸಂಬಂಧನೇ ಮುಂತಾದ ಭಕ್ತರಕಥೆಯೆಂಬ ಅಮೃತವನ್ನು ನಿತ್ಯವೂ ಪ್ರಾತಃಕಾಲದಲ್ಲಿ ಯಾವನು ಪಾನಮಾಡುತ್ತಾನೋ ಅವನು ಪ್ರಸಿದ್ಧವಾದ ಭಕ್ತಿಯುಳ್ಳವನಾಗಿ ಇಹದಲ್ಲಿ ದೀರ್ಘಾಯುಷ್ಯವನ್ನೂ, ಕೀರ್ತಿಯನ್ನೂ ಪಡೆದು, ಪರದಲ್ಲಿ ನಿಶ್ಚಯವಾಗಿ ಶಿವಸಾಮೀಪ್ಯವನ್ನು ಹೊಂದುತ್ತಾನೆ.

ಬಸವೇಶವಿಜಯದಲ್ಲಿ ಮೂವತ್ತೊಂಭತ್ತನೇ ಅಧ್ಯಾಯವು
ಸಂಪೂರ್ಣವು.

---

## ನಲವತ್ತನೇ ಅಧ್ಯಾಯವು

### ಸೊಡ್ಡಳಭಾಸ್ಕರಯ್ಯನಕಥೆ

ಆ ಕಲ್ಯಾಣಪಟ್ಟಣದಲ್ಲಿ ಮಹಾತ್ಮನೂ, ಶಿವನ ಎರಡನೆಯ ಅವತಾರವೂ ಇಂದ್ರಿಯಭ್ರಮರಹಿತನೂ, ಶಿವನ ಪಾದಕಮಲಧ್ಯಾನದಲ್ಲಿ ತಡೆಯಿಲ್ಲದ ಮನೋಲಯವುಳ್ಳವನೂ, ಅಹಂಕಾರ ವಿಲ್ಲದವನೂ, ಸಕಲ ಭಕ್ತರೊಳಗೆ ಮೊದಲಿಗನೂ, ಪುಣ್ಯವಂತರೊಳಗೆ ಶ್ರೇಷ್ಠನೂ, ನಿಗ್ರಹಾನುಗ್ರಹಸಮರ್ಥನೂ, ಶಿವದ್ರೋಹಿಗಳನ್ನು ಶಿಕ್ಷಿಸುವವನೂ, ದುಷ್ಟರಿಗೆದೂರನೂ, ಸತ್ಪುರುಷರಿಗೆ ಮಿತ್ರನೂ, ತ್ರಿಭುವನದಲ್ಲಿ ಪ್ರಸಿದ್ಧನೂ ದುರಾಲೋಚನೆಗಳಿಲ್ಲದ ಮನಸ್ಸುಳ್ಳವನೂ, ಒಳ್ಳೇ ಭಾವಗಳುಳ್ಳವನೂ, ಜನ್ಮರಾಹಿತ್ಯದಿಂದ ಪೂಜ್ಯನಾದವನೂ, ಪುನರ್ಜನ್ಮದಲ್ಲಿ ಉತ್ಸವವಿಲ್ಲದವನೂ, ಶಿವಧ್ಯಾನದಲ್ಲಿ ಧೀರೋದಾತ್ತನೂ, ಶತ್ರುಗಳಲ್ಲಿ ಧೀರೊದ್ಧತನೂ,

ಮುಕ್ತಿಕಾಂತೆಯನ್ನು ಮೋಹಗೊಳಿಸುವದರಲ್ಲಿ ಧೀರಲಲಿತನೂ ಶಮದಮಾದಿ ಸಂಪನ್ನನೂ, ಅನ್ಯಮತವನ್ನು ಶಿಕ್ಷಿಸುವವನೂ, ಗುರುಲಿಂಗಜಂಗಮಗಳಲ್ಲಿ ಸಮಾನವಾದ ಭಾವನೆಯುಳ್ಳವನೂ, ಪರದೈವಗಳೆಂಬ ವೃಕ್ಷಗಳಿಗೆ ಕಾಡಾನೆಯೂ, ಪರದೈವಗಳೆಂಬ ಪರ್ವತಗಳಿಗೆ ವಜ್ರಾಯುಧನೂ, ಪರದೈವಗಳೆಂಬ ಸಿಂಹಗಳಿಗೆ ಶರಭನೂ, ಶತ್ರುಗಳಿಗೆ ಅಗ್ನಿಯೂ, ಆದ ಸೊಡ್ಡಳಭಾಸ್ಕರನೆಂಬ ಭಕ್ತನಿದ್ದನು. ಸದ್ಗುರುವಾದವನು ನಂದೀಶ್ವರನ ಸರ್ವಜ್ಞತ್ವವನ್ನೂ, ಗೌತಮನ ತರ್ಕಯುಕ್ತಿಗಯನ್ನೂ. ವೀರಭದ್ರನ ಶೌರ್ಯವನ್ನೂ, ಭೃಂಗೀಶ್ವರನ ಏಕಲಿಂಗನಿಷ್ಠೆಯನ್ನೂ, ದಧೀಚಿಯ ಶಾಪಸಾಮರ್ಥ್ಯವನ್ನೂ ತೆಗೆದುಕೊಂಡು ನಿರ್ಮಿಸಲ್ಪಟ್ಟನೋ ಎಂದು ಸತ್ಪುರುಷರಿಂದ ಆಲೋಚಿಸಲ್ಪಟ್ಟ ವೈಭವವುಳ್ಳವನಾಗಿದ್ದನು. ವೇದ, ಶಾಸ್ತ್ರ, ಪುರಾಣ, ಇತಿಹಾಸ, ಅನೇಕಾಗಮ ಮೊದಲಾದವುಗಳಿಂದಲೂ, ಪ್ರತ್ಯಕ್ಷ, ಅನುಮಾನ, ಉಪಮಾನ. ಮುಂತಾದ ಅನೇಕ ಪ್ರಮಾಣಗಳಿಂದಲೂ, ಶಿವನೇ ಪತಿಯು; ಬ್ರಹ್ಮನೇ ಮುಂತಾದ ದೇವತೆಗಳೆಲ್ಲರೂ ಪಶುಗಳು. ಎಂದುಸ್ಥಾಪಿಸಿ ತನ್ನ ಮನೆಯಮುಂದೆಧ್ವಜವನ್ನು ನೆಟ್ಟಿರುವನು. ಇದಲ್ಲದೆ ಪಾಂಚರಾತ್ರ ಕಾಪಾಲಿಕ, ಜೈನ, ಚಾರ್ವಾಕ ಬೌದ್ಧ ಮಾಯಾವಾಗಿ ಮುಂತಾದ ದುರ್ಮತಗಳನ್ನು ಅನಾಯಾಸದಿಂದ ಜೈಸಿದನು.

ಈ ರೀತಿಯಾಗಿ ವಿರೋಧಿಗಳನ್ನು ಧ್ವಂಸಮಾಡುವದರಲ್ಲಿ ಸಮರ್ಥನಾದ ಸೊಡ್ಡಳಭಾಸ್ಕರನಿಗೆ ಸೌರಾಷ್ಟ್ರಸೋಮೇಶ್ವರನು ಪ್ರಾಣನಾಥನಾಗಿದ್ದನು. ಶಿವರಾತ್ರಿಯಲ್ಲಿ ಸೌರಾಷ್ಟ್ರಪತಿಯಾದ ಸೋಮೇಶ್ವರನಮುಂದೆ ಜಾಗರಣವನ್ನು ಮಾಡುವದು ಆತನಿಗೆ ನಿತ್ಯನಿಯಮವಾಗಿತ್ತು. ಜಿತೇಂದ್ರಿಯನಾದ ಆತನು ಪ್ರತಿವರ್ಷವು ಮಾಡತಕ್ಕ ಈ ವ್ರತವನ್ನು ಆಚರಿಸುವದಕ್ಕಾಗಿ ಸೌರಾಷ್ಟ್ರಕ್ಕೆ ಹೋಗಬೇಕೆಂದು ಉದ್ಯುಕ್ತನಾಗಿ ಬಿಜ್ಜಳರಾಜನಿಗೆ ತಿಳಿಸಿದನು. ರಾಜನು ಅದನ್ನು ಕೇಳಿ, ಕೋಪಗೊಂಡು ಪಕ್ಕದಲ್ಲಿರುವವರ ಮುಖವನ್ನು ನೋಡಿ, ಪರಿಹಾಸಪೂರ್ವಕವಾಗಿ, ನೀನಾದರೂ ಹೋಗು. ಸೌರಾಷ್ಟ್ರನಾಥನು ತಾನಾದರೂ ಬರಲಿ. ನಾನು ಕಾಣೆನು. ಪ್ರತಿದಿನವೂ ಬತ್ತವನ್ನು ಅಳೆಯ ಬೇಕು ಎಂದು ಹೇಳಿಲು; ಭಾಸ್ಕರನು ರಾಯನ ಮಾತನ್ನು ಕೇಳಿ,— ಇದುವರಿಗೂ ನಿರಂಕುಶವಾಗಿ ನಡೆದ ನನ್ನ ವ್ರತಕ್ಕೆ ಶಿವನು ಹ್ಯಾಗೆ ಭಂಗವನ್ನು ತಂದಾನು ಎಂದು ಆಲೋಚಿಸುತ್ತಿದ್ದನು. ಶಿವರಾತ್ರಿಯ ಪೂರ್ವದಿನವೇ ನಂದೀಶ್ವರನು ಕಯ್ಯಲ್ಲಿ ಒಂದು ಪತ್ರಿಕೆ

ಯನ್ನೂ ಒಂದು ಕಯ್ಯಲ್ಲಿ ದಂಡವನ್ನೂ ಹಿಡಿದು, ಕಣಜದ ಮನೆಗೆ ಬಂದನು. ಕೆನ್ನೆಯತನಕ ಅತಿಶುಭ್ರವಾದ ಭಸ್ಮವನ್ನು ಧರಿಸಿರುವವನೂ, ಸ್ಫಟಿಕಮಣಿಗಳನ್ನು ಸೇರಿಸಿ ಪೋಣಿಸಲ್ಪಟ್ಟ ರುದ್ರಾಕ್ಷಮಾಲಿಕೆಯಿಂದ ಅಲಂಕರಿಸಲ್ಪಟ್ಟ ಕಂಠವುಳ್ಳವನೂ, ವಸ್ತ್ರವನ್ನು ಮುದುರಿ ಸೊಂಟಕ್ಕೆ ಸುತ್ತಿದವನೂ, ಜೀರ್ಣವಸ್ತ್ರದ ಪಾಗಿನಿಂದ ಕೂಡಿದ ಶಿರಸ್ಸುಳ್ಳವನೂ, ಶುಭ್ರವಾದ ದಂತಪಙ್ತಿಯುಳ್ಳವನೂ ಆಗಿದ್ದ ನಂದೀಶ್ವರನು ಲೋಕರಿಂದ ಬಳಸಲ್ಪಟ್ಟವನಾಗಿರುವದರಿಂದ ಬ್ರಹ್ಮರುಗಳಿಂದ ಸುತ್ತಲ್ಪಟ್ಟ ಸಾಕ್ಷಾತ್ಪರಶಿವನಂತೆ, ಕಾಣುತ್ತಿರುವ ಭಾಸ್ಕರಯ್ಯನನ್ನು ನೋಡಿ–ಎಲೈ ಭಾಸ್ಕರಯ್ಯನೇ, ಈ ಕಣಜದಲ್ಲಿ ಸೌರಾಷ್ಟ್ರನಾಥನಾದ ಸೋಮೇಶ್ವರನು ಪ್ರಸನ್ನನಾಗುತ್ತಾನೆ. ಆದಕಾರಣದಿಂದ ಈ ಧಾನ್ಯವನ್ನೆಲ್ಲಾ ತೆಗೆದುಬಡಿತಿಯನ್ನು ಮಾಡು. ಎಂದು ಭಾಸ್ಕರಯ್ಯ ಸಹಿತವಾಗಿ ರಾಯಸದವರೆಲ್ಲರೂ ನೋಡುತ್ತಿರಲಾಗಿ ಹೇಳಿ, ಆ ಪತ್ರಿಕೆಯನ್ನು ಕೊಟ್ಟು, ಅಲ್ಲಿಯೇ ಅಂತರ್ಧಾನನಾದನು. ಪೂರ್ವದಲ್ಲಿ ಶಿವನು ರಾಮಣನ ಕೂಡ ಮಾತನಾಡಿದನೇ ಹೊರತು, ಅವನಿಗೆ ಪ್ರತ್ಯಕ್ಷನಾಗಲಿಲ್ಲ ಆ ಪರಶಿವನು ಭಕ್ತರ ಭಕ್ತಿಗೆ ಸಿಕ್ಕತಕ್ಕವನೇ ಹೊರತು ತಪಸ್ಸಿಗೆ ಸಿಕ್ಕುವವನಲ್ಲ. ಎಂದು ಪುರಜನರಿಂದ ಸ್ತುತಿಸಲ್ಪಟ್ಟ ಭಾಸ್ಕರಯ್ಯನು ಶಿವನಿಂದ ಕಳುಹಿಸಲ್ಪಟ್ಟ ಪತ್ರಿಕೆಯನ್ನು ಶಿರಸ್ಸಿನ ಮೇಲೆ ಮಡಗಿಕೊಂಡು ಆನಂದಭರಿತನಾದನು. ಶಿವಭಕ್ತರಾದವರು ಸೋಮೇಶನ ಆಗಮಗವನ್ನು ಕೇಳಿ, ಬಸವೇಶ್ವರನನ್ನು ಮುಂದಿಟ್ಟುಕೊಂಡು, ಭಾಸ್ಕರಯ್ಯನ ಬಳಿಗೆ ಬಂದರು. ಬಸವೇಶನು ಅಲ್ಲಿ ಭಕ್ತರೊಡನೆ ಸಭೆಯಲ್ಲಿ ಕುಳಿತವನಾಗಿ–ಪಟ್ಟಣವನ್ನು ಅಲಂಕರಿಸಿರಿಕೆಲವರು ವಾದ್ಯಗಳನ್ನು ಬಾಜಿಸಿದರು ಎಂದು ಗ್ರಾಮಪಾಲಕರಿಗೆ ಆಜ್ಞಾಪಿಸಿದರು. ಆಗ ಕೆಲವರು ಶಿವನನ್ನು ಕುರಿತು ಗಾನವಂ ಮಾಡಿದರು. ಭೃಂಗಿನಾಟ್ಯವನ್ನು ಅಭ್ಯಾಸವನ್ನು ಮಾಡಿರುವ ಕೆಲವರು ನರ್ತನವನ್ನುಮಾಡಿದರು ಕೆಲವರು ಕಂಚುಕಿ ವೇಷದ ನಂದೀಶನ ಅಂತರ್ಧಾನಚಾತುರ್ಯವನ್ನೂ ಕೆಲವರು ಸೋಮೇಶ್ವರನ ಭಕ್ತವಾತ್ಸಲ್ಯವನ್ನೂ ವರ್ಣಿಸಿದರು. ಸೂರ್ಯನು ಮಧ್ಯಾನ್ಹವನ್ನತಿಕ್ರಮಿಸಿ ಆಕಾಶದಲ್ಲಿರುತ್ತಿರಲು; ಆದಿವಸದಲ್ಲಿ ಅಂತರಿಕ್ಷದಿಂದ ಪುಷ್ಪವೃಷ್ಟಿಯಾಯಿತು. ಭಕ್ತಸಂರಕ್ಷಣೆಯಲ್ಲಿ ಆಸಕ್ತನಾದ ಸೌರಾಷ್ಟ್ರಸೋಮನಾಥನುಶಿಖರವನ್ನು ಭೇದಿಸಿಕೊಂಡು ಕಣಜದಮನೆಯನ್ನೈದಿದನು. ಅಗು ಮೊದಲುಗೊಂಡು ಕೊಟ್ಟಾರ ಸೋಮನಾಥನೆಂದು ಹೆಸರುಬಂತು. ಆ ಸೌರಾಷ್ಟ್ರನಾಥನು ಸತ್ಪುರು

ಷರಿಂದ ಅಹೋರಾತ್ರಿಗಳಲ್ಲಿಯೂ ಪೂಜಿಸಲ್ಪಟ್ಟನು. ಆ ಭಾಸ್ಕರೈಯನು ಲಿಂಗ ರೂಪನಾಗಿ ಕಾಣಿಸಿರುವ ಸೋಮನಾಥನನ್ನು ನೋಡಿ, ಸಂತುಷ್ಟಚಿತ್ತನಾಗಿ ನರ್ತನವಂಮಾಡಿದನು. ರಾಯನು ತನ್ನ ಅಂತಃಪುರದಿಂದ ಬಂದು, ಸ್ವಾಮಿಗೆ ನಮಸ್ಕರಿಸಿ ಪೌಳಿ ಗೋಪುರಗಳಿಂದ ಕೂಡಿದ್ದಾಗಿಯೂ ಚಿನ್ನದಿಂದಲೂ, ರನ್ನಗಳಿಂದಲೂ, ನಾನಾ ಬಣ್ಣಗಳುಳ್ಳದ್ದಾಗಿಯೂ ಇರುವ ಗುಡಿಯನ್ನು ಕಟ್ಟಿಸಿದನು. ನಿರಂಕುಶವಾದ ಪ್ರೀತಿವುಳ್ಳಭಾಸ್ಕರಯ್ಯನು ಸೋಮನಾಥನಮುಂದೆ ಭಕ್ತಸಮೇತನಾಗಿ ಬಸವೇಶನೊಡನೆ ಶಿವರಾತ್ರಿ ವ್ರತವನ್ನು ನೆರವೇರಿಸಿದನು. ಪೂರ್ವದಲ್ಲಿ ಸೊನ್ನಲಿಗೆಯ ಸಿದ್ಧರಾಮನು ಮಲ್ಲಿಕಾರ್ಜುನ ಸ್ವಾಮಿಯನ್ನು ತನ್ನಪುರಕ್ಕೆ ತರುತ್ತಾ ಮಧ್ಯಮಾರ್ಗದಲ್ಲಿ ಶಿವನದೃಷ್ಟಿಯಿಂದ ಸ್ತಂಭಿತನಾಗಿ ಅಶಕ್ತನಾದನು. ಈಭಾಸ್ಕರಯ್ಯನಾದರೋ ವಂಚಿಸಲ್ಪಡದವನಾಗಿ ಸೌರಾಷ್ಟ್ರಸೋಮನಾಥನನ್ನು ತನ್ನೂರಿಗೆ ತಂದನು. ಈ ರೀತಿಯಾಗಿ ಸರ್ವರಿಂದಲೂ ಸ್ತುತಿಸಲ್ಪಡುತ್ತಿರುವ ಆ ಭಾಸ್ಕರಯ್ಯನ ಪರಮತ ಕೋಲಾಹಲನೆಂದು ಹತ್ತುದಿಕ್ಕುಗಳಲ್ಲಿಯೂ ಪ್ರಸಿದ್ಧವಾದ ಬಿರುದನ್ನು ರಾಯನುಕೇಳಿ ಸೈರಿಸದೆ, ದುಷ್ಟರಾದ ಪರಮತಸ್ಥರೊಡನೆ ಆಲೋಚಿಸಿ, ರತ್ನಖಚಿತವಾದ ಸುವರ್ಣಮಯವಾದ ಒಂದು ದೇವಾಲಯವನ್ನು ಕಟ್ಟಿಸಿ, ಆದರಲ್ಲಿ ಪ್ರತಾಪನಾರಾಯಣನೆಂಬ ಹೆಸರಿನಿಂದ ಒಂದು ವಿಷ್ಣುಪ್ರತಿಮೆಯನ್ನು ಪ್ರತಿಷ್ಠೆಮಾಡಿಸಿ ಅಲ್ಲಿ ಸಕಲಸೇವಕರಿಂದಲೂ ಸುತ್ತಲ್ಪಟ್ಟವನಾಗಿರುತ್ತಾ, ಸೊಡ್ಡಳಭಾಸ್ಕರನನ್ನು ಕಾಣದೆ, ಕೋಪಾಕ್ರಾಂತನಾಗಿ,–ಭಾಸ್ಕರನು ಯಾಕೆ ಬರಲಿಲ್ಲ? ತಾನು ಶಿವಭಕ್ತನೆಂದು ನನ್ನ ಸೇವೆಯನ್ನು ಬಿಟ್ಟನೋ; ತಿಳಿಯದೆಯಿದ್ದಾನೋ ತಿಳಿದಿದ್ದರೂ ವಿಷ್ಣುಸ್ಥಾಪನೆಯ ಸಮಯದಲ್ಲಿ ವಿಸ್ತರಿಸಲ್ಪಟ್ಟ ನನ್ನಸಭೆಯನ್ನು ಉದಾಸೀನಮಾಡಿದ್ದಾನೋ? ಈರೀತಿಯಾಗಿ ಕೂಗಿ ಮಾತಾಡುತ್ತಿರುವ ಬಿಜ್ಜಳರಾಯನನ್ನು ಕುರಿತು ಬಸವೇಶ್ವರನು—ಅಯ್ಯಾ ರಾಜನೇ, ಈಗ ಭಾಸ್ಕರಯ್ಯನು ಬಾರದಿದ್ದದರಿಂದ ಯಾವ ಕೆಲಸತಾನೇ ಕೆಡುವದು? ಆತನು ಕೆಲಸದ ಕಾಲದಲ್ಲಿ ನಿನ್ನನ್ನು ಬಿಟ್ಟೇನಾದರೂ ಹೊದನೋ? ತನ್ನ ಅಧಿಕಾರದಲ್ಲಿ ಉಂಟಾದ ಆಯವ್ರಯಗಳಿಗೆ ವಂಚನೆಯನ್ನು ಮಾಡಿದನೋ? ಪ್ರಭುವಾದವನು ತಪ್ಪುಮಾಡಿದ ಸೇವಕನಮೇಲೆ ಕೋಪಗೊಳ್ಳುವದು ಯುಕ್ತವಲ್ಲದೆ, ತಪ್ಪುಮಾಡದವನ ಮೇಲೆ ಕೋಪವು ಎಂದಿಗೂ ಸರಿಯಲ್ಲ. ಹಾಗೆಯೇ ಸತ್ಪುರುಷನಲ್ಲಿ ಅನುಗ್ರಹವನ್ನಿಡಬೇಕಲ್ಲದೆ, ದುಷ್ಟನಲ್ಲಿ ಎಂದಿಗೂ ಇಡಕೂಡದು. ಇದಲ್ಲದೆ ಶಿವ

ಭಕ್ತರಾದವರು ಅನ್ಯದೈವಗಳನ್ನು ನೋಡುವದಿಲ್ಲ. ಪ್ರಪಂಚವನ್ನೆಲ್ಲಾ ಹುಲ್ಲಿನಂತೆ ಎಣಿಸಿರುವ ಆ ಭಕ್ತರ ವಿಷ್ಣ್ವಾದಿ ದೇವತೆಗಳನ್ನು ಹುಲ್ಲಿನಂತೆಯೂ ಎಣಿಸಿರುವದಿಲ್ಲ. ಲಿಂಗನಿಷ್ಠೆಯಲ್ಲಿ ಆಸಕ್ತನಾದ ಭೃಂಗೀಶ್ವರನು ಹಿಂದೆ ಶಿವನ ದಕ್ಷಿಣಾಂಗಕ್ಕೆ ಮಾತ್ರ ನಮಸ್ಕರಿಸಿದನಲ್ಲದೆ, ಪಾರ್ವತಿಯಿಂದಾಶ್ರಯಿಸಲ್ಪಟ್ಟ ವಾಮಾಂಗಕ್ಕೆ ನಮಸ್ಕರಿಸಲಿ. ಸದ್ಭಕ್ತರಾದವರು ಶಿವನಿಗೆ ಪ್ರಾಣಪ್ರಿಯಳಾದ, ಆದಿಶಕ್ತಿಯಾದ ಗೌರೀದೇವಿಯನ್ನು ಕೂಡ ಶ್ಲಾಘಿಸುವದಿಲ್ಲ. ಇತರ ದೇವತೆಗಳನ್ನು ಕುರಿತು ಹೇಳತಕ್ಕದ್ದೇನು ? ಅನ್ಯದೇವತೆಗಳ ಹೆಸರನ್ನು ಕೇಳದಿರುವ ವ್ರತವುಳ್ಳ ಒಬ್ಬ ಭಕ್ತನಿದ್ದನು. ಅವನು ಘಂಟೆಗಳಿಂದ ಕೂಡಿದ ಕಿವಿಗಳುಳ್ಳವನಾದುದರಿಂದ ಘಂಟಾಕರ್ಣನೆಂದು ಪ್ರಸಿದ್ಧನಾಗಿದ್ದನು.

## —ಆರ್ಯಮನಕಥೆ—

ಮಹೇಂದ್ರಮಂಗಳವೆಂಬ ಪಟ್ಟಣದಲ್ಲಿ ಆರ್ಯಮನೆಂಬ ಭಕ್ತನಿದ್ದನು. ಆತನು ಶಿವನಲ್ಲಿಯೇ ನೆಲೆಗೊಂಡ ಮನಸುಳ್ಳವನಾಗಿ, ಅನ್ಯದೇವತೆಗಳಲ್ಲಿ ವಿಮುಖನಾಗಿ, ಶಿವನಿಗಿಂತಲೂ ಇತರರಾದ ದೇವತೆಗಳ ಹೆಸರನ್ನು ಯಾವನು ನನ್ನಮುಂದೆ ಉಚ್ಚರಿಸುತ್ತಾನೋ ಅವನ ತಲೆಯನ್ನು ಕತ್ತರಿಸುತ್ತೇನೆಂದು ಮಹಾಪ್ರತಿಜ್ಞೆಯನ್ನು ಮಾಡಿದ್ದನು. ಹೀಗಿರುವಲ್ಲಿ ಒಬ್ಬ ಬ್ರಾಹ್ಮಣನು ಶ್ರೀರುದ್ರವನ್ನು ಪಠಿಸುತ್ತಾ, ಆ ಆರ್ಯಮನಮನೆಗೆ ಭಿಕ್ಷಕ್ಕೆ ಬಂದನು. ಭಿಕ್ಷವನ್ನಿಡುವ ಸಮಯದಲ್ಲಿ ನೆಲದ ಮೇಲೆ ಒಂದು ಅಗುಳು ಬೀಳಲು, ಆ ಆರ್ಯಮನ ದೃಢವ್ರತವನ್ನು ತಿಳಿಯದೆ, ಹರಿಹರಿ ಎಂಬದಾಗಿ ಗಟ್ಟಿಯಾಗಿ ಉಚ್ಚರಿಸಿದನು. ಆಗ ಆರ್ಯಮನು ಇತರ ದೈವನಾಮವನ್ನು ಕೇಳಿದ ನಿಮಿತ್ತದಿಂದ ಕೋಪಪ್ಯನಾಗಿ, ತೀಕ್ಷ್ಣಧಾರೆಯುಳ್ಳ ಸಾಟಿನಿಂದ ಅವನ ತಲೆಯನ್ನು ಕತ್ತರಿಸಿ, ಅವನ ಹೊಟ್ಟೆಯನ್ನು ಸೀಳಿದನು. ಆ ಬ್ರಹ್ಮಹತ್ಯೆಯನ್ನು ಕೇಳಿ ರಾಜನು ಭಟರಿಂದ ಆರ್ಯಮನನ್ನು ಕರಿಸಿದನು. ಆರ್ಯಮನು ಧೈರ್ಯದಿಂದ ನಡುಕಟ್ಟನ್ನು ಕಟ್ಟಿಕೊಂಡು ರಾಯನಬಳಿಗೆ ಬಂದನು. ರಾಯನು ವಿಚಾರಣೆಮಾಡಿ, ಕೋಪದಿಂದ ಕಠಿನಶಿಕ್ಷೆಯನ್ನು ವಿಧಿಸಿದನು. ಆರ್ಯಮನು ಓಡಿಹೋಗಿ ಶಿವಾಲಯವನ್ನು ಪ್ರವೇಶಿಸಿದನು. ಭಟರುಕೂಡ ಹಿಂದೆಯೇ ಓಡಿ ಅವನ ಸೆರಗನ್ನು ಹಿಡಿದುಕೊಳ್ಳುವಷ್ಟರೊಳಗೆ ಆರ್ಯಮನು ಎಲ್ಲಾ ಜನರಿಗೂ ಆಶ್ಚರ್ಯವನ್ನುಂಟುಮಾಡುತ್ತಾ, ಶಿವಲಿಂಗದ ಗರ್ಭವನ್ನು ಪ್ರವೇಶಿಸಿದನು. ಆ ವಸ್ತ್ರದ ಕೊನೆಯು ಈಗಲೂ ಲಿಂಗವಿಗ್ರಹದಲ್ಲಿ ದಂಡಾಕಾರಣದಿಂದ ಆ ಭಕ್ತನ ಭಕ್ತಿಧ್ವಜದಂತೆ ಕಾಣುತ್ತದೆ.

## ವೀರಶಂಕರದಾಸನ ಕಥೆ

ಇದಲ್ಲದೆ ದೃಢವಾದ ಆಚಾರವೂ ಭಕ್ತಿಯೂ, ವ್ರತವೂ ವುಳ್ಳವೀರಶಂಕರದಾಸನೆಂಬ ಹೆಸರುಳ್ಳ ಒಬ್ಬ ಶಿವಭಕ್ತನಿದ್ದನು. ಆತನ ಕನಸಿನಲ್ಲಾದರೂ ಅನ್ಯದೈವಗಳ ನಾಮವನ್ನು ಉಚ್ಚರಿಸುವದಿಲ್ಲ ಅವುಗಳನ್ನು ಮುಟ್ಟುವದೂಇಲ್ಲವೆಂದು ಪ್ರತಿಜ್ಞೆಯನ್ನು ಮಾಡಿದನು. ಹೀಗೆ ಕೆಲವುಕಾಲ ಕಳೆಯುತ್ತಿರಲು; ಒಂದುದಿನ ಮಲಗಿರುವಾಗ ಒಬ್ಬ ಬೌದ್ಧನು ತನ್ನನ್ನು ಮುಟ್ಟಿದಂತೆ ಸ್ವಪ್ನವನ್ನು ಕಂಡು ಎಚ್ಚರವಾಗಿ— ಅಶುದ್ಧನಾದವನನ್ನು ಮುಟ್ಟಿದ ನನಗೆ ನಾಯಿಮುಟ್ಟಿದ ಮಡಕೆಗೆ ಶುದ್ಧಿಯುಂಟಾಗುವಂತೆ ಬೆಂಕಿಯಿಂದ ಶುದ್ಧಿಯಾಗಬೇಕು; ಎಂದು ಆಲೋಚಿಸಿದವನಾಗಿ ಶ್ರೀಶೈಲಕ್ಕೆಹೋಗಿ, ಹಾಟಕೇಶ್ವರನ ಸನ್ನಿಧಿಯಲ್ಲಿ ಕಗ್ಗಲಿಯ ಸೌದೆಗಳಿಂದ ಅಗ್ನಿಯನ್ನು ಉರಿಸಿ ಅದರಮೇಲೆ ಪದ್ಮಾಸನವನ್ನುಹಾಕಿ ಕುಳಿತುಕೊಂಡು, ಶಸ್ತ್ರಗಳಿಂದ ತನ್ನ ದೇಹವನ್ನು ತುಂಡುತುಂಡಾಗಿ ಕತ್ತರಿಸಿ ಮುಖವನ್ನು ಅಲ್ಲಾಡಿಸದೆ ಪಂಚಾಕ್ಷರಿಯನ್ನು ಉಚ್ಚರಿಸುತ್ತಾ ಅವುಗಳನ್ನು ಬೆಂಕಿಯಲ್ಲಿ ಹೋಮಮಾಡಿದನು. ವ್ರತನಿಷ್ಟನಾದ ಆ ಭಕ್ತನು, ಅಮಾನುಷವಾದ ಆಶ್ಚರ್ಯಕರವಾದ, ಧೈರ್ಯವನ್ನು ನೋಡಿ. ಹಾಟಕೇಶ್ವರನು ಆತನಿಗೆ ಸಾಯುಜ್ಯಪದವಿಯನ್ನು ಕೊಟ್ಟನು. ಎಲೈ ರಾಯನೆ ಇನ್ನೂಹೇಳುತ್ತೇನೆ ಕೇಳು.

## ಮಂಚಣ್ಣಪಂಡಿತರ ಕಥೆ.

ಮಂಚಂಣ ಪಂಡಿತನೆಂಬೊಬ್ಬ ಪೂಜ್ಯನಿದ್ದನು. ಬ್ರಹ್ಮವಿಷ್ಣು ಮೊದಲಾದ ದೇವತೆಗಳೆಲ್ಲರೂ ಆತನ ಆಜ್ಞೆಯನ್ನು ಹಿಡಿದು ನಡೆಯುತ್ತಿರುವರು. ಆತನು ಕಾಶಿಯಲ್ಲಿ ವಾಸಿಸುತ್ತಾ ತನ್ನ ಬೆರಳುಗಳನ್ನು ಕತ್ತರಿಸಿ, ಅವುಗಳಿಂದ ವಿಶ್ವೇಶ್ವರನನ್ನು ಪೂಜಿಸಿ, ಕೈಮುಗಿವ ಸಮಯದಲ್ಲಿ ತಿರಿಗಿ ಹೊಸ ಬೆರಳುಗಳನ್ನು ಪಡೆಯುತ್ತಿದ್ದನು. ಈ ರೀತಿಯಾಗಿ ಆತನು ಪ್ರತಿದಿನದ ಮೂರು ಸಂಜೆಗಳಲ್ಲಿಯೂ ವಿಶ್ವೇಶ್ವರನನ್ನೂ ಪೂಜಿಸಿ ತಿರಿಗಿ ತಿರಿಗಿ ಬೆರಳು ಪಡಿಯುತ್ತಾ ಇರುವದನ್ನು ಕಂಡು ಪಟ್ಟಣದ ಜನರು–ಈತನು ಮಹಾತ್ಮನು ಎಂದು ಹೊಗಳಿದರು. ವಿಶ್ವೇಶನೇ ಪ್ರಪಂಚಕ್ಕೆಲ್ಲಾ ಅಧಿಪತಿಯಾದವನು; ಮತ್ತು ವೀರಶೈವಮಾರ್ಗವೇ ಮಾರ್ಗವು. ಎಂದು ಪ್ರತಿಜ್ಞೆಯನ್ನು ಮಾಡಿ, ಏಳಿಗೆಯನ್ನು ಹೊಂದುತ್ತಿದ್ದನು.

ಹೀಗಿರುವಲ್ಲಿ ಕೆಲವರು ಪರಮತಸ್ಥರು ಆತನ ವ್ರತವನ್ನು ಸೈರಿಸದೆ, ಗದಾಧರನ ಸನ್ನಿಧಿಯಲ್ಲಿ ಇದ್ದು ತರ್ಕಪ್ರಶಂಸೋಣಮಾಡೋಣ ಬಾ ಎಂದರು. ಶಿವನಿಂದಹೇಳಲ್ಪಟ್ಟ ಆಯಾಯ ಶಿವಾಗಮ ವಚನಗಳಿಂದಲೂ, ವೇದಗಳಿಂದಲೂ, ಉಪನಿಷತ್ತುಗಳಿಂದಲೂ, ಅನಾಯಾಸದಿಂದ ಅವುಗಳನ್ನು ಖಂಡಿಸಿದನು. ಖಂಡಿಸಲ್ಪಟ್ಟ ಆ ಪರವಾದಿಗಳು;—ಎಲಾ! ಒರೀವಾಗಾಡಂಬರವೋ? ಪ್ರತ್ಯಕ್ಷವಾಗಿ ಶಿವಾಧಿಕ್ಯವನ್ನು ತೋರಿಸುವದರಲ್ಲಿ ಶಕ್ತಿಯಿದೆಯೋ? ಎಂದು ಪ್ರಶ್ನೆಯಂ ಮಾಡಲು; ಮಂಚಣ್ಣನು ಕೊಬ್ಬಿದ ಆ ಮಾತನ್ನು ಕೇಳಿ, ಹಾಗೇ ಆಗಲಿ ಎಂದು ಪ್ರತಿಜ್ಞೆ ಮಾಡಿ, ಬಿಂದುಮಾಧವನ ಕಡೆಗೆ ತಿರಿಗಿಕೊಂಡು;—ಎಲೈ ನಾರಾಯಣನೇ! ನೀನು ಪ್ರಪಂಚಸ್ವರೂಪನಾಗಿದ್ದೀಯೆ. ಪರಶಿವನು ಪ್ರಪಂಚಕ್ಕೆ ಅಧಿಕನಲ್ಲವೇ? ಆದಕಾರಣದಿಂದ ಆ ಜಗದೀಶನ ಸೇವೆಗೆ ಬಾ ಎಂದು ಕರೆದನು. ಬಳಿಕ ಶಿವನೇ ನನ್ನ ಒಡೆಯನು ಎಂಬ ಆ ಮಂಚಣ್ಣ ಪಂಡಿತನ ಮಾತಿಗೆ ಪ್ರಾಮಾಣ್ಯವನ್ನು ತೋರಿಸುವದಕ್ಕೋ ಎಂಬಂತೆ ವಿಷ್ಣುವು ಆ ಮಹಾತ್ಮನ ಆಜ್ಞೆಯನ್ನು ನಡಸಿದನು. ಹ್ಯಾಗಂದರೆ-ವಿಷ್ಣುವು ಕೈಜೋಡಿಸಿಕೊಂಡು ಕಾಲುನಡಿಗೆಯಿಂದ ಗುಡಿಯಿಂದ ಹೊರಟನು. ಕಾಶೀಪಟ್ಟಣದ ಜನರೆಲ್ಲರೂ ಕಂಡು, ಆಶ್ಚರ್ಯಪಟ್ಟರು. ಹೀಗೆ ಬಿಂದುಮಾಧವನು ಮಂಚಣ್ಣನ ಅಪ್ಪಣೆಯಿಂದ ಹೊರಟು ವಿಶ್ವನಾಥನ ಎದುರಿಗೆ ಬಂದುನಿಂತು ಸಾಷ್ಟಾಂಗ ನಮುಸ್ಕಾರಮಾಡಿದನು. ಜಗದ್ರೂಪನಾದ ನಾರಾಯಣನು ಶಿವಭಕ್ತನ ಆಜ್ಞೆಯನ್ನು ನಡೆಸಿರುವಲ್ಲಿ ಜಗತ್ತಿನೊಳಗೆ ಸೇರಿದ ಇತರರು ಆ ವಿಷಯದಲ್ಲಿ ಹೇಳುವದೇನು?

ಈ ನಿನ್ನ ಕಲ್ಯಾಣಪಟ್ಟಣದಲ್ಲಿಯೇ ಪಂಚಲೋಹದಿಂದ ಮಾಡಿಸಲ್ಪಟ್ಟ ವಿಷ್ಣುವಿಗ್ರಹವು ಶಂಕರದಾಸಯ್ಯನ ನೇತ್ರಾಗ್ನಿಯಿಂದ ಸುಟ್ಟುಹೋಯಿತು. ಇದಲ್ಲದೆ ಶಿವನಿಗಿಂತಲೂ ಇತರರಾದ ದೇವತೆಗಳು ತಮ್ಮ ಗುಡಿಗಳೆಲ್ಲವೂ ಶಂಕರದಾಸಯ್ಯನ ಹಣೆಗಣ್ಣಿನಿಂದ ಭಸ್ಮವಾಗಲು; ಅವರೆಲ್ಲರೂ ಆ ಭಕ್ತನನ್ನೇ ಮರೆಹೊಕ್ಕರು. ಪ್ರಕೃತದಲ್ಲಿ ನಿನಿಂದ.ದೂಷಿಸಲ್ಪಟ್ಟ ಸೊಡ್ಡಳ ಭಾಸ್ಕರಯ್ಯನು ಜಗದ್ಗುರುವಾದ ಸೌರಾಷ್ಟ್ರಸೋಮನಾಥನನ್ನು ತಂದನು. ಎಲ್ಲಾ ಪತ್ರಪುಟಗಳಲ್ಲಿಯೂ, ಪಂಚಾಕ್ಷರಗಳನ್ನೇ ಬರೆದು ಅದನ್ನೇ ನೋಡಿ, ಭಕ್ತರ ಆದಾಯವ್ಯಯಗಳನ್ನು ನಿರ್ಣಯಿಸುತ್ತಾನೆ. ಎಂದನು. ಈ ಪ್ರಕಾರವಾಗಿ ರಾಜನಿಗೂ ಬಸವೇಶ್ವರನಿಗೂ ನಡೆದ ಸಂಭಾಷಣೆಯನ್ನು ಭಕ್ತರೊಳಗೆ ಪ್ರಕಾಶಿಸುವ ಭಾಸ್ಕರ

ಯ್ಯನು ಕೇಳಿ, ಸಭೆಗೆ ಬಂದನು. ಅಯ್ಯಾ ಭಾಸ್ಕರಯ್ಯನೇ; ಪ್ರಪಂಚವನ್ನು ಸಂರಕ್ಷಿಸುವದರಲ್ಲಿ ಪ್ರೌಢನಾದ ಮಹಾವಿಷ್ಣುವಿನ ಮಹೋತ್ಸವಕ್ಕೆ ಸರ್ವರೂ ಬಂದಿರುವಲ್ಲಿ ನೀನೇಕೆ ಬರಲಿಲ್ಲ? ಎಂದು ಬಿಜ್ಜಳರಾಯನು ಕೇಳಲು; ಮಾತನಾಡುವದರಲ್ಲಿ ಚತುರನಾದ ಭಾಸ್ಕರಯ್ಯನು ರಾಯನ ಮಾತನ್ನು ಕೇಳಿ ಆ ಮಾತನ್ನು ಪ್ರತ್ಯುತ್ತರಗಳಿಂದ ತಿರಸ್ಕರಿಸುವದಕ್ಕೆ ಪ್ರಾರಂಭಿಸಿದನು. ಎಲೈ ಜನಪತಿಯೇ; ನಾರಾಯಣನು ಲೋಕರಕ್ಷಕನಾದರೆ ಶಿವನ ನೇತ್ರಾಗ್ನಿಯಿಂದ ಸುಡಲ್ಪಟ್ಟ ದೇಹವುಳ್ಳ ತನ್ನ ಮಗನಾದ ಮನ್ಮಥನನ್ನು ಯಾಕೆ ಬದುಕಿಸಿಕೊಳ್ಳಲಿಲ್ಲ. ಬ್ರಹ್ಮನು ಸೃಷ್ಟಿಕರ್ತನಾದರೆ ಶಿವನಿಂದ ಕತ್ತರಿಸಲ್ಪಟ್ಟ ತನ್ನ ಐದನೆಯ ತಲೆಯನ್ನು ಯಾಕೆ ಹುಟ್ಟಿಸಿಕೊಳ್ಳಲಿಲ್ಲ ವೇದವು ದೇವರಾದರೆ ಸೋಮಕಾಸುರನಿಂದ ಯಾಕೆ ಅಪಹರಿಸಲ್ಪಟ್ಟಿತು? ವೇದಬಾಹ್ಯರಾದ ಜಿನಬೌದ್ಧ ಮೊದಲಾದವರು ದೇವರಲ್ಲ. ಬ್ರಹ್ಮಮುಂತಾದವರು ಶಿವನಾಜ್ಞೆಯಿಂದ ಆಯಾಯ ಕಾರ್ಯವನ್ನು ಮಾಡುತ್ತಾರೆ. ಕರ್ಮವೇ ಜಗದ್ವ್ಯಾಪಾರಗಳಿಗೆ ಕಾರಣವಾದರೆ ದಕ್ಷನು ಮಾಡಿ ಯಜ್ಞಕರ್ಮವು ಅದಕ್ಕೆ ತಕ್ಕ ಒಳ್ಳೇಫಲವನ್ನು ಕೊಡದೆ, ಕುರಿತಲೆಯನ್ನು ಯಾಕೆ ಕೊಟ್ಟಿತು? ಚಂಡನು ಮಾಡಿದ ಪಿತೃವಧೆಯು ಕೆಟ್ಟ ಫಲವನ್ನು ಕೊಡದೆ ಯಾಕೆ ಮೋಕ್ಷವನ್ನು ಕೊಟ್ಟಿತು? ರುದ್ರನೊಬ್ಬನೇ ಅದ್ವಿತೀಯಪುರುಷನೆಂದು ಶ್ರುತಿಪ್ರಮಾಣವಿರುವದು. ಆದ್ದರಿಂದ ಕ್ಷುದ್ರದೇವತೆಗಳೆಲ್ಲಾ ದೇವತಾಸಾರ್ವಭೌಮನಾದ ಶಿವನಿಗೆ ಸಮಾನರೇ? ಪಂಚಾವರಣಪೂಜೆಯಲ್ಲಿ ವಿಷ್ಣು ಸೂರ್ಯ ಮೊದಲಾದ ದೇವತೆಗಳು ಶಿವನ ಸೇವೆಯನ್ನು ಮಾಡುವದಿಲ್ಲವೇ? ಪೂರ್ವದಲ್ಲಿ ನಾರಾಯಣನು ಸಹಸ್ರ ಕಮಲಗಳಿಂದ ಶಿವನ ಚರಣಕಮಲವನ್ನು ಪೂಜಿಸುವಲ್ಲಿ ಒಂದು ಕಡಿಮೆಯಾಗಲು; ಅದಕ್ಕೆ ಪ್ರತಿಯಾಗಿ ತನ್ನ ಬಲಗಣ್ಣನ್ನು ಕೊಟ್ಟು ಮೆಚ್ಚಿಸಿ, ಸಕಲ ರಾಕ್ಷಸಸೈನ್ಯಗಳನ್ನೂ ಭಯಪಡಿಸುವ ಚಕ್ರಾಯುಧವನ್ನು ಶಿವನಿಂದ ಪಡೆಯಲಿಲ್ಲವೇ? ಲೋಕದಲ್ಲಿ ಹೇಳಿದ ಕೆಲಸವನ್ನು ಮಾಡತಕ್ಕ ಸೇವಕರು ಕೆಲಸದ ಯಜಮಾನರಾಗುವದುಂಟೇ? ಬ್ರಹ್ಮ ಮುಂತಾದ ದೇವತೆಗಳೆಲ್ಲರೂ ಶಿವನಅಪ್ಪಣೆಯನ್ನು ಪಡೆದು ಆಯಾಯ ಕಾರ್ಯಗಳನ್ನು ನಡಿಸುವರಾಗಿದ್ದಾರೆ. ಬೇರೆ ಪ್ರಮಾಣಗಳಿಂದೇನು? ಪ್ರತಿಗ್ರಾಮದಲ್ಲಿಯೂ, ಇತರ ದೇವತೆಗಳೆಲ್ಲರೂ ಶಿವನ ಸುತ್ತಲೂ ಇದ್ದು ಸೇವಿಸುತ್ತಿದ್ದಾರೆ ನಿತ್ಯನಿರ್ಮಲನಾಗಿಯೂ, ಕರ್ಮರಹಿತವಾಗಿಯೂ ಇರುವ ದೇಹವುಳ್ಳ ಪರಶಿವನಿಗೆ ಯಾವಾಗಲೂ ದುರ್ಮ

ಲವುಳ್ಳದ್ದಾಗಿಯೂ, ದುಷ್ಕರ್ಮವುಳ್ಳದ್ದಾಗಿಯೂ ಇರುವ ದೇಹದಿಂದಕೂಡಿದವರು ಸಮಾನರಾದರೇ? ಜನನಮರಣಗಳಿಗೆ ದೂರನಾದವನಿಗೆ ಭವಬದ್ಧರಾದವರು ಸಮರೇ? ಬ್ರಹ್ಮಾದಿಪಶುಗಳ ಪಾಶವನ್ನು ಕತ್ತರಿಸುವವನಿಗೆ ಪಾಶಬದ್ಧರಾದ ಜೀವರುಗಳು ಸಾಟಿಯೇ? ಪ್ರಪಂಚಕ್ಕೆ ಪ್ರಳಯವನ್ನುಂಟು ಮಾಡುವವನಿಗೆ ಪ್ರಳಯಕ್ಕೊಳಗಾದವರು ಸರಿಯೇ ಪೂಜ್ಯನಾದವನಿಗೆ ಪೂಜಿಸುವ ಪುರುಷರು ಸಮರಾದಾರೇ? ಸಮುದ್ರಮಥನದಲ್ಲಿ ಹುಟ್ಟಿದ ವಿಷದಿಂದ ನೊಂದವರು ಆ ವಿಷವನ್ನು ಕಂಠದಲ್ಲಿ ಧರಿಸಿದವನಿಗೆ ಎಣೆಯಾದರೇ? ತ್ರಿಪುರದಿಂದ ಬಾಧಿಸಲ್ಪಟ್ಟವರು ತ್ರಿಪುರವನ್ನು ಲೀಲಾಮಾತ್ರದಿಂ ಸುಟ್ಟವನಿಗೆ ಸಮಾನರೇ? ಅಂಧಕಾಸುರನಿಗೆ ಭಯಪಟ್ಟವರು ಅವನ ಪ್ರಾಣಗಳನ್ನು ತೆಗೆದವನಿಗೆ ಹೋಲಿಕೆಯಾದಾರೇ? ಪ್ರತಿಪ್ರಳಯದಲ್ಲಿಯೂ ನಾಶವಾಗತಕ್ಕ ಬ್ರಹ್ಮವಿಷ್ಣು ಮೊದಲಾದವರು ವಿಷ್ಣುವಿನ ಮೂಳೆಯನ್ನೂ ಬ್ರಹ್ಮನ ತಲೇಬುರುಡೆಯನ್ನು ಪಿಡಿದವನಿಗೆ ಸಮರೇ? ಲಿಂಗಮಧ್ಯದಲ್ಲಿರುವವರು ಲಿಂಗಮೂರ್ತಿಗೆ ಸಮಾನರೇ? ಅಲ್ಪವನ್ನು ತಿಳಿದವರು ಸರ್ವವನ್ನೂ ತಿಳಿದವನಿಗೆ ಸರಿಯಾದರೆ? ಈ ಆಸಡ್ಡಾಳರಾದ ದೇವತೆಗಳೆಲ್ಲನೂ ಸೊಡ್ಡಾಳದೇವನಿಗೆ ಸಮಾನರೇ? ಯಮನಿಗೊಳಗಾದವರು ಯಮನನ್ನು ಸಂಹರಿಸಿದವನಿಗೆ ಸಮರೇ? ಹರನು, ಪಶುಪತಿಯು, ರುದ್ರನು, ಭವನು, ಸರ್ವೇಶ್ವರನು, ಮಹಾದೇವನು ಎಂಬ ಹೆಸರುಗಳು ಇನ್ನಾರಿಗೆ ಇವೆ? ಜಲಂಧರಾಸುರನಿಗೆ ಭಯಪಟ್ಟು ಭ್ರಾಂತರಾದ ದೇವತೆಗಳು, ಅಂಥಾ ಜಲಂಧರನನ್ನು ಸಂಹರಿಸಿದ ಶಿವನಿಗೆ ಸಮಾನರಾದಾರೇ? ಜ್ಞಾನಿಗಳಾದವರು ಆ ವಿಷ್ಣುವಿಗೆ ಆಧಾರವಾಗಿರುವ ಸ್ಥಾನವನ್ನು ನೋಡುತ್ತಾರೆ. ಈ ವಿಷಯದಲ್ಲಿ ವೇದವು ತದ್ವಿಷ್ಣೋಃಪರಮಂಪದಂ ಎಂದು ಪ್ರಸಿದ್ಧವಾಗಿದೆ. ಹಿಂದೆ ಉಪಮನ್ಯುವೆಂಬ ಮಹರ್ಷಿಯು ಕ್ಷೀರಸಮುದ್ರವನ್ನು ಕುಡಿಯುವ ಹೊತ್ತಿನಲ್ಲಿ ಗಂಟಲಿಗೆ ಸಿಕ್ಕಿದ ವಿಷ್ಣುವನ್ನು ಹುಲ್ಲುಕಡ್ಡಿಯಂತೆ ಉಗುಳಲಿಲ್ಲವೇ? ನಾರಾಯಣನು ಭೃಗುಮುನಿಯ ಶಾಪದಿಂದ ಹತ್ತು ಅವತಾರಗಳನ್ನು ಎತ್ತಲಿಲ್ಲವೇ? ದಧೀಚಿಮುನಿಯ ಬೆನ್ನಿಗೆ ತಗಲಿದ ಚಕ್ರಾಯುಧವು ಮುರಿದು ಹೋದಾಗ; ನಾರಾಯಣನು ಬೆಹಳವಾಗಿ ಭಯಪಟ್ಟುಕೊಂಡು ವೇಗದಿಂದ ಓಡಿಹೋಗಲಿಲ್ಲವೇ? ನಾನು ಸಕಲ ಲೋಕಗಳಿಗೂ ಕರ್ತನು ನನಗೆ ಕರ್ತನು ಪರಶಿವನು. ಹೀಗೆ ವಿಷ್ಣುವಾಡಿದ ಮಾತು ಸುಳ್ಳಾಯಿತೋ? ನೃಸಿಂಹನ ಮುಖ, ವರಾಹಾವತಾರನಾದ ವಿಷ್ಣುವಿನ ಕೋರೇಹಲ್ಲು,

ಕೂರ್ಮಾವತಾರನಾದ ನಾರಾಯಣನ ಬೆನ್ನೋಡು ಇವುಗಳಿಂದ ಅಲಂಕರಿಸಲ್ಪಟ್ಟ ಅಸ್ಥಿಮಾಲಿಕೆಯನ್ನು ಶಿವನು ಧರಿಸಿರುವದಿಲ್ಲವೋ? ಶಿವನ ಕಯ್ಯಲ್ಲಿ ತ್ರಿವಿಕ್ರಮಾವತಾರನಾದ ವಿಷ್ಣುವಿನ ಬೆನ್ನುಮೂಳೆಯು ಖಟ್ವಾಂಗವೆಂಬ ದಂಡವಿಲ್ಲವೋ ಶಿವನು ವಿಷ್ಣುಸಂಬಂಧಿಯಾದ ದೇಹವನ್ನು ಹೆಗಲಿನಲ್ಲಿ ಧರಿಸಿಲ್ಲವೇ? ಶಿವನು ವಿಷ್ಣುವಿನ ಮತ್ಸ್ಯಾದ್ಯವತಾರಗಳನ್ನು ಸಂಹರಿಸಿದ್ದರಿಂದ ಹರಿಹರನೆಂಬ ನಾಮಧೇಯವನ್ನು ಹೊಂದಿದ್ದಾನೆ. ಶಿವನು ಕೋಪಗೊಂಡವನಾಗಿ ಯಜ್ಞರೂಪನಾದ ನಾರಾಯಣನ ತಲೆಯನ್ನು ಛೇದಿಸಲಿಲ್ಲವೇ ? ಮತ್ತು ಅಹಂಕಾರಗೊಂಡ ಬ್ರಹ್ಮನ ಐದನೆಯ ತಲೆಯನ್ನು ತೆಗೆಯಲಿಲ್ಲವೇ? ಇದಲ್ಲದೆ ಭಗನಾಮಕನಾದ ಸೂರ್ಯನ ನೇತ್ರವನ್ನು ಕೀಳಲಿಲ್ಲವೇ ? ದಕ್ಷನ ತಲೆಯನ್ನು ತೆಗೆದು, ಅದಕ್ಕೆ ಪ್ರತಿಯಾಗಿ ಕುರಿತಲೆಯಂ ಇರಿಸಲಿಲ್ಲವೇ ? ಶಿವನ್ದ್ರೋಹಿಯಾದ ಪೂಷನೆಂಬ ಸೂರ್ಯನ ಹಲ್ಲುಗಳನ್ನು ಮುರಿಯಲಿಲ್ಲವೋ ? ಅನೇಕ ಲೋಕಗಳನ್ನು ಕೊಲ್ಲುವದಕ್ಕೆ ಉದ್ಯುಕ್ತವಾದದ್ದಾಗಿಯೂ, ಉರಿಗಳಿಂದ ಭಯಂಕರವಾಗಿಯೂ ಇರುವ ವಿಷವನ್ನು ನೇರಿಲಹಣ್ಣಿನಂತೆ ಕಂಠದಲ್ಲಿ ತಾಳಲಿಲ್ಲವೇ ? ಶಿವನೊಬ್ಬನೇ ಶಾಶ್ವತನು ಮಿಕ್ಕವರೆಲ್ಲರೂ ಅನಿತ್ಯರು. ಈ ವಿಷಯದಲ್ಲಿ ಶಿವನು ಬ್ರಹ್ಮವಿಷ್ಣುಗಳ ಮೂಳೆಗಳನ್ನು ಧರಿಸಿರುವದೇ ಪ್ರಮಾಣವು, ನಾರಾಯಣನು ಮತ್ಸ್ಯಾವತಾರದಲ್ಲಿ ಲಂಕೆಯಲ್ಲಿ ಮತ್ಸ್ಯೇಶ್ವರನನ್ನು ಪೂಜಿಸಿದನು. ಮತ್ತು ಸೋಮಕಾಸುರನಿಂದ ಅಪಹರಿಸಲ್ಪಟ್ಟ ವೇದಗಳನ್ನು ತಂದ ಕೂರ್ಮಾವತಾರನಾದ ವಿಷ್ಣುವು ಹರಿದ್ವಾರಸಮುದ್ರನೆಂಬ ಪಟ್ಟಣದಲ್ಲಿ ಕೂರ್ಮೇಶ ಲಿಂಗವನ್ನು ಪೂಜಿಸಿ, ಜಯಕೆಗಳನ್ನು ಹೊಂದಲಿಲ್ಲವೇ ? ರಾವಣಾಸುರನನ್ನು ಕೊಂದ ರಾಮನು ಸೇತುವೆಯನ್ನು ಕಟ್ಟಿ, ದಕ್ಷಿಣ ಸಮುದ್ರದ ತಡಿಯಲ್ಲಿ ರಾಮೇಶ್ವರನೆಂಬ ಹೆಸರಿನಿಂದ ಶಿವಲಿಂಗವನ್ನು ಪ್ರತಿಷ್ಠೆಮಾಡಿ ಪೂಜಿಸಲಿಲ್ಲವೇ ? ಕೃಷ್ಣನು ದ್ವಾರಕಾಪಟ್ಟಣದಲ್ಲಿ ಗೋವಿಂದೇಶ್ವರನನ್ನು ಪೂಜಿಸಲಿಲ್ಲವೇ? ಬ್ರಹ್ಮನು ಕೂಡ ಅಲಂಪುರದಲ್ಲಿ ಬ್ರಹ್ಮೇಶನನ್ನು ಪೂಜಿಸಲಿಲ್ಲವೇ ? ಕಾಶಿಯಲ್ಲಿ ಬ್ರಹ್ಮ ವಿಷ್ಣು ಮುಂತಾದ ದೇವತಾಶ್ರೇಷ್ಟರೂ ಸಾಮಾನ್ಯ ದೇವತೆಗಳೂ, ಋಷಿಗಳೂ, ಮನುಷ್ಯರೂ, ತಮ್ಮ ತಮ್ಮ ಹೆಸರಿನ ಲಿಂಗವನ್ನು ಸ್ಥಾಪಿಸಿ ನಮಸ್ಕರಿಸಿದರು, ದೇವತೆಗಳಿಗೂ, ರಾಕ್ಷಸರಿಗೂ, ಮನುಷ್ಯರಿಗೂ, ಇಷ್ಟಾರ್ಥವನ್ನು ಭಕ್ತರಿಗೆ ಕಲ್ಪವೃಕ್ಷನಾದ ಪಾರ್ವತೀಪ್ರಾಣನಾಯಕನಾದ ಶಿವನಿಗಿಂತಲೂ ಬೇರೆ ಯಾವನು ಕೊಡುತ್ತಾನೆ? ಹಿಂದೆ ಬಟ್ಟಬಾಣನೆಂಬ ಮಹಾಕವಿಯು ಕತ್ತರಿಸ

ಲ್ಪಟ್ಟ ತನ್ನ ಎರಡು ಕೈಗಳಿಂದ ಶಿವನನ್ನು ಪೂಜಿಸಿ, ಶಿವನಿಂದ ಮತ್ತೆ ಪಡೆದನು ಮಯೂರನೆಂಬುವನು ಸೂರ್ಯನಿಂದಲೂ ಹೋಗಲಾಡಿಸುವದಕ್ಕೆ ಅಶಕ್ತವಾದ ರೋಗವನ್ನು ಶಿವನ ಸೇವೆಯಿಂದ ಭವರೋಗದೊಡನೆ ಪರಿಹರಿಸಿಕೊಂಡು, ಸುಖಿಯಾದನು. ಕಾಳಿದಾಸನು ತನ್ನ ಎರಡು ನೇತ್ರಗಳನ್ನು ಕೊಟ್ಟು, ಶಿವನಿಂದ ಅನೇಕ ವರಗಳನ್ನು ಪಡೆದು, ತಾನುಕೂಡ ಅಂಥಾ ವರಗಳನ್ನು ಕೊಡತಕ್ಕ ಶಕ್ತಿಯುಳ್ಳವನಾದನು. ಈಶ್ವರನು ಸಾಮವೇದಿಯನ್ನು ಅನೇಕ ಪಟ್ಟಣಸಜಿತವಾಗಿ ಕೈಲಾಸಕ್ಕೊಯ್ದನು. ಜ್ಞಾನಸಬಂಧನನ್ನು ದೇಹದೊಡನೆ ಲಿಂಗಗರ್ಭದಲ್ಲಿ ಸೇರಿಸಿದನು. ಮೊದಲೇ ವೈಷ್ಣವನಾಗಿದ್ದ ದಂಡಿಯು ವಿಷ್ಣುವಿನಿಂದ ಪರಿಹರಿಸುವದಕ್ಕಸಾಧ್ಯವಾದ ಮಹಾಜ್ವರವನ್ನು ಶಿವಪಾದಕಮಲಸೇವೆಯಿಂದ ಪರಿಹರಿಸಿಕೊಂಡನಲ್ಲವೇ ? ಇದಲ್ಲದೆ ಶಿವನು ಜೇಡರದಾಸನಿಗೆ ನಿಧಿಯನ್ನೂ, ತಿರುನೀಲಕಂಠನಿಗೆ ಯೌವನವನ್ನೂ, ಕರಿಕಾಲಚೋಳನಿಗೆ, ಇಷ್ಟವಾದ ಹೊನ್ನಿನಮಳೆಯನ್ನೂ ಚೇರಮರಾಯನಿಗೆ ತನ್ನ ಅರ್ಧಾಸನವನ್ನೂ, ಓಹಿಲಯ್ಯನಿಗೆ ಪಟ್ಟಣವನ್ನೂ ಶಂಕರನಾಮಕನಾದ ಭಕ್ತರಿಗೆ ತನ್ನನ್ನೂ ಅನುಗ್ರಹಿಸಿ ಕೊಟ್ಟನು. ನಿಂಬನಾಥನೆಂಬ ಹೆಸರುಳ್ಳಶಿವಸ್ವಾಮಿಯು ನಿಂಬವ್ವೆಗೆವರವನ್ನು ಕೊಟ್ಟನು. ಕದಿರೆ ರೇಮಯ್ಯನು ಮೃತವಾ ದಶಿಶುವನ್ನು ಏಳುದಿವಸದಮೇಲೆ ಶಿವಾನುಗ್ರಹದಿಂದ ಮರಳಿಬದುಕಿಸಿದನು. ಪ್ರತಿಸೋಮವಾರದಲ್ಲಿಯೂ ಶಿವನಾಗೇಶ್ವರಯ್ಯನು ತನ್ನ ಎರಡು ಕಣ್ಣುಗಳಿಂದ ಶಿವನನ್ನು ಪೂಜಿಸುವವ್ರತವನ್ನು ಹಿಡಿದಿದ್ದನು. ಶಿವನು ಮೆಚ್ಚಿ, ಅವನಿಗೆ ಮರಳಿ ಆಕ್ಷಣವೇ ಕಣ್ಣುಗಳನ್ನು ಕೊಡುತ್ತಿದ್ದನು. ಮತ್ತು ಶಿವನು ವೀರಭಕ್ತಿ ವ್ರತದಲ್ಲಿ ನೆಲೆಗೊಂಡ ಷೋಡಶಗಣಂಗಳಿಂದ ಪೂಜಿಸಲ್ಪಟ್ಟವನಾಗಿ, ಅವರಿಗೆ ಶಾಶ್ವತವಾದ ಕೈಲಾಸಪದವಿಯನ್ನು ಕೊಟ್ಟನು. ತ್ರಿಭುವನಲ್ಲಿಯೂ ಪ್ರಸಿದ್ಧವಾದ ಮಹಿಮೆಯುಳ್ಳ ತೇರಸಗಣಂಗಳಿಗೆ ಮೆಚ್ಚಿ, ಅವರನ್ನು ಪ್ರಸಿದ್ಧಪಡಿಸಿದನು. ಇದಲ್ಲದೆ; ತೆಲುಗು ಜೊಮ್ಮಯ್ಯನ ಹಸ್ತದಿಂದಪ್ರಯೋಗಿಸಲ್ಪಟ್ಟ ಬಾಣಗಳಿಂದ ಹತವಾದ ಮೃಗಗಳಿಗೆ ಪ್ರಮಥಪದವನ್ನು ಕೊಟ್ಟನು. ಶಿವರಾತ್ರಿಯದಿವಸ ಸ್ವೇಚ್ಛೆಯಿಂದ ಜಾಗರಣವನ್ನು ಮಾಡಿದ ಸಂಕಣ್ಣನೆಂಬ ಕಿರಾತನು ಶಿವರಾತ್ರಿವ್ರತಸ್ಥರಾದ ಭಕ್ತರಿಗೆ ಮೋಕ್ಷಪ್ರಾಪ್ತಿವಿಷಯದಲ್ಲಿ ನಿದರ್ಶನವಾಗಿದ್ದಾನೆ. ಎಲೈ ರಾಯನೇ, ಈ ನಿನ್ನ ಕಲ್ಯಾಣಪಟ್ಟಣದಲ್ಲಿ ಮೋಜಯ್ಯ, ಕಿನ್ನರಬ್ರಹ್ಮಯ್ಯ ಮುಂತಾದ ಪ್ರಮಥರು ಪ್ರಸಿದ್ಧವಾದ ಶಕ್ತಿಯು

ಳ್ಳವರಾಗಿ, ಜಯಶಾಲಿಗಳಾಗಿದ್ಧಾರೆ. ಕೆಲವುದುರ್ವಾದಿಗಳು; ಇಂದ್ರನೂ ಶಿವ ಸ್ವರೂಪನು. ತ್ರಿಮೂರ್ತಿಗಳೂ ಶಿವಸ್ವರೂಪರು. ಆದ್ದರಿಂದ ತ್ರಿಮೂರ್ತಿಗಳೂ ಒಂದೇ ಎಂದು ಹೇಳುತ್ತಾರೆ. ಭಕ್ತರೊಡನೆ ಭಕ್ತಿಹೀನನ್ನು ಹೇಳತಕ್ಕವರಿಗೆ ಮಹಾ ಪಾತಕವಲ್ಲದೆ ಬೇರೆಇಲ್ಲ. ಅದಂತಿರಲಿ, ಈಗ ನನ್ನನ್ನು ಕರೆಸಿದ ಕಾರ್ಯ ವೇನು? ಹೇಳು. ಶಿವದರ್ಶನಹೊರತು ಅನ್ಯದೈವಗಳ ದರ್ಶನವವು ನನಗೆ ಯೋಗ್ಯ ವಲ್ಲ. ಆದಾಗ್ಯೂ ನಿನ್ನ ಆಜ್ಞೆಯಿಂದ ಈ ಪ್ರತಿಮೆಯನ್ನು ನೋಡುತ್ತೇನೆ.

ಈಪ್ರಕಾರವಾಗಿ, ಸೊಡ್ಡಳಬಾಸ್ಕರಯ್ಯನು ಹೇಳಿ ವಿಷ್ಣುಪ್ರತಿಮೆಯನ್ನು ಕಡೆಗಣ್ಣಿನಿಂದ ನೋಡಿದನು. ಆಕ್ಷಣದಲ್ಲಿಯೇ ಆ ಮಹಾತ್ಮನ ದೃಷ್ಟಿಯೆಂಬ ಉಳಿಯಿಂದ ಭೇದಿಸಲ್ಪಟ್ಟ ಪ್ರತಿಮೆಯ ಆಕಾರವು ಸೀಳಿಹೋಯಿತು. ರಾಯನು ವಿಷ್ಣುಪ್ರತಿಮೆ, ಸೀಳಿಹೋದದ್ದನ್ನು ನೋಡಿ, ಭಯದಿಂದ ಕಂಪಿಸುತ್ತಿರುವ ದೇಹವುಳ್ಳವನಾಗಿ, ಭಕ್ತಶ್ರೇಷ್ಠನಾದ ಭಾಸ್ಕರಯ್ಯನನ್ನು ಸ್ತುತಿಸಿ ಸಭೆಯಿಂದೆ ದ್ದನು. ಅಗಾಧಮಹಿಮೆಯುಳ್ಳವನೂ, ಕರುಣಾನಿಧಿಯೂ ಆದ ಭಾಸ್ಕರಯ್ಯನ ಕೂಡ, ಬಸವೇಶನಿಂದಕೂಡಿದ ಭಕ್ತರಿಂದ ಪೂಜಿಸಲ್ಪಟ್ಟವನಾಗಿ, ತನ್ನ ಮನೆಗೈ ದಿದನು.

ಯಾವ ಮನುಷ್ಯನು ಸ್ಥಿರಚಿತ್ತನಾಗಿ ಪ್ರಾತಃಕಾಲದಲ್ಲಿ ಈ ಕಥೆಯನ್ನು ಕೇಳುತ್ತಾನೋ; ಮತ್ತು ಸ್ತುತಿಸುತ್ತಾನೋ; ಆ ಪುರುಷನಿಗೆ ಶಿವ ಭಕ್ತಿಸೌಖ್ಯವೂ ಸ್ವಾಭಾವಿಕವಾದ ಏಕಲಿಂಗನಿಷ್ಠೆಯೂ ಸಿದ್ಧಿಸುವುದು.

ಬಸವೇಶವಿಜಯದಲ್ಲಿ ನಲವತ್ತನೇ ಅಧ್ಯಾಯವು
ಸಂಪೂರ್ಣವು.

---

## ನಲವತ್ತೊಂದನೇ ಅಧ್ಯಾಯ

### ಶಿವನಾಗ ದೇವಕಥಾ

ಅಯ್ಯಾಲಾಮಾತ್ಯ ಪುತ್ರನಾದ, ಮತ್ತು ಶಿವಪಾದಕಮಲ ಸೇವೆಯಲ್ಲಿ ಇನ್ನೂ ಭಕ್ತರ ಚರಿತ್ರೆಯನ್ನು ಹೇಳುತ್ತೇನೆ ಕೇಳು. ಆ ಕಲ್ಯಾಣಪಟ್ಟಣದಲ್ಲಿ, ಭಕ್ತಾಗ್ರೇಸರನಾದ ಶಿವನಾಗಯ್ಯನೆಂಬ ಮುನಿಶ್ರೇಷ್ಠನು; ಬಸವೇಶ ಮೊದಲಾ

ದವರಿಂದ ಪೂಜಿತನಾಗಿ, ವಾಸಮಾಡುತಿದ್ದನು. ಅವನಿಗೆ ಬಸವಣ್ಣನು ಮಾಡುವ ಪೂಜೆಯನ್ನು ನೋಡಿ, ಚಾಡಿಯಲ್ಲಿ ನಿಪುಣರಾದ ಭೂಸುರರು, ಬಿಜ್ಜಳರಾಯನ ಸಮೀಪಕ್ಕೂ ಹೋಗಿ;-ಎಲೈ ಪರಾಕ್ರಮಿಯಾದ ರಾಯನೇ, ಬಸವಣ್ಣನು ಹೊಲೆಯನನ್ನು ಮಹಾಭಕ್ತನೆಂದು ಅವನಿಗೆಅಡ್ಡಬಿದ್ದು ಅವನಪಾದೋದಕವನ್ನು ಪೂಜಿಸುತ್ತಾನೆ. ಮತ್ತು ಸಭ್ಯರಿಂದ ಬಿಡಲ್ಪಟ್ಟವನಾಗಿ ಭಯವಿಲ್ಲದೆ, ಅವನ ಪಾರ್ಶ್ವದಲ್ಲಿ ಇರುತ್ತಾನೆ. ಯಾವನ ನೆರಳು ಮೈಮೇಲೆ ಬಿದ್ದರೆ ಸಚೇಲಸ್ನಾನವನ್ನು ಮಾಡಬೇಕೆಂದು ವಿದ್ವಾಂಸರು ಹೇಳುತ್ತಾರೋ ಆ ಚಂಡಾಲನು ಬ್ರಾಹ್ಮಣರನ್ನು ಕೂಡ ಹುಲ್ಲಿಗೆ ಕಡೆಯಾಗಿ ಎಣಿಸುತ್ತಾನೆ. ಕಲ್ಯಾಣಪಟ್ಟಣವೆಲ್ಲಾ ಹೊಲಗೇರಿಯಾಯಿತು. ಇನ್ನೆಲ್ಲಿಯ ಜಾತಿ? ಇನ್ನೆಲ್ಲಿಯ ಧರ್ಮ? ಇನ್ನೆಲ್ಲಿಯ ನೀತಿ? ಇನ್ನೆಲ್ಲಿಯ ಕರ್ಮ? ಯಾವದೇಶದಲ್ಲಿ ದುರಾಚಾರಗಳಿಂದ ಪಾಪವು ಮಾಡಲ್ಪಡುವದೋ ಆ ಪಾಪವು ಅದಕ್ಕೆ ಶಿಕ್ಷೆಯನ್ನು ಮಾಡದಿರುವ ರಾಜನನ್ನು ಸೇರುತ್ತದೆ. ಧರ್ಮಾಧರ್ಮ ವಿಚಾರವನ್ನು ಬಲ್ಲ ಪುರೋಹಿತನು ಅಧರ್ಮವನ್ನೂ ಅದಕ್ಕೆ ತಕ್ಕ ಪರಿಹಾರವನ್ನೂ ರಾಜನಿಗೆ ತಿಳಿಸಬೇಕು. ಹಾಗೆ ತಿಳಿಸದಿದ್ದರೆ ಆ ಪಾಪವು ಪುರೋಹಿತನನ್ನೇ ಸೇರುತ್ತದೆ. ಪ್ರಜೆಗಳು ಮಾಡಿದ ಪಾಪವು ರಾಜನನ್ನೂ ರಾಜನು ಮಾಡಿದ ಪಾಪವು ಪುರೋಹಿತನನ್ನೂ ಹೊಂದುತ್ತದೆ. ಎಂಬ ಸ್ಮೃತಿವಚನವನ್ನು ನಾವು ತಿಳಿದಿರುವದರಿಂದ ನಿನಗೆ ಹೇಳುತ್ತೇವೆ. ರಾಜನಿಂದ ಅಂಗೀಕರಿಸಲ್ಪಟ್ಟದ್ದು ಧರ್ಮವೆಂದು ಸ್ಮೃತಿವಚನವಿರುವದರಿಂದ ರಾಜನಿಂದಂಗೀಕರಿಸಲ್ಪಡದ ಯಾವದನ್ನಾದರೂ ಎಂಥಾವನೂ ಮಾಡಕೂಡದು. ಹೀಗೆ ಆ ರಾಜಸಭೆಯಲ್ಲಿ ಬ್ರಾಹ್ಮಣರಿಂದ ಹೇಳಲ್ಪಟ್ಟ ಮಾತನ್ನು ಬಸವೇಶನು ಕೇಳಿ, ಕೂಡಿದ ಶಿವನಾಗಯ್ಯನೊಡನೆ ರಾಜಸಭೆಗೆ ಬಂದನು, ಪಲ್ಲಕ್ಕಿಯಲ್ಲಿ ಕುಳಿತುಕೊಂಡಿರುವ ಶಿವನಾಗಯ್ಯನ ಕಯ್ಯಲ್ಲಿ ತನ್ನ ಹಸ್ತವನ್ನು ಇಟ್ಟುಕೊಂಡು ಬರತಕ್ಕ ಬಸವೇಶ್ವನನ್ನು ನೋಡಿ, ದುರಭಿಪ್ರಾಯವುಳ್ಳ ವಿಪ್ರರು- ಎಲೈ ರಾಜನೇ, ಬಸವಣ್ಣನು ಈ ಉತ್ತಮಸಭೆಯನ್ನು ಚಂಡಾಲಸಭೆಯನ್ನು ಮಾಡುವದಕ್ಕೆ ಉದ್ಯುಕ್ತನಾಗಿ ನಿರ್ಭಯದಿಂದ ಬರುತ್ತಾನೆ. ಈ ಗರ್ವದ ರೀತಿಯೇನು? ಎನಲು; ರಾಯನು ಸಭೆಯನ್ನು ಬಿಟ್ಟು, ವಿಚಿತ್ರವಾದ ಮೇಲ್ಕಟ್ಟು ಮುಂತಾದವುಗಳಿಂದ ಪ್ರಕಾಶಿಸಲ್ಪಟ್ಟ ಹೊರಗಣ ಆಸ್ಥಾನಮಂಟಪಕ್ಕೆ ಬಂದನು. ಬಸವಣ್ಣನು ತಾನು ಶಿವನಾಗಯ್ಯನೊಡನೆ ಒಳಗೆ ಬರುವದು ರಾಯನಿಗೆ ಸಹನೆಯಿಲ್ಲದೆಹೋದದ್ದನ್ನು ತಿಳಿದು

ಆ ಶಿವನಾಗಾರ್ಯನಿಗೆ ತನ್ನ ಉತ್ತರೀಯವಸ್ತ್ರವನ್ನೆ ಗದ್ದುಗೆಮಾಡಿದನು. ನೆಲದ ಮೇಲೆ ಕುಳಿತಿರುವ ಬಸವಣ್ಣನನ್ನು ಬಿಜ್ಜಳರಾಯನು ನೋಡಿ;--ಎಲೈ ಬಸವಮಂತ್ರಿಯೇ, ಪೂರ್ವದಿಂದಲೂ ಬಂದಂಥ ವರ್ಣಾಶ್ರಮ ಧರ್ಮಭೇದವನ್ನು ತೊಡೆಯುವದಕ್ಕೆ ಉದ್ಯುಕ್ತನಾಗಿದ್ದೀಯೆ. ಕಲ್ಯಾಣಪಟ್ಟಣವೆಲ್ಲವೂ ಚಂಡಾಲಮಯವಾಯಿತು. ಈ ವಿಪರೀತಭಕ್ತಿಯು ನಿನ್ನಲ್ಲಿಯೇಹುಟ್ಟಿತೋ? ವರ್ಣಾಶ್ರಮಾಚಾರಗಳು ಕೆಟ್ಟರೆ, ದೇಶದಲ್ಲಿ ಮಳೆ ಸುರಿಯುತ್ತದೆಯೇ?ಭೂಮಿಯು ಬೆಳೆಯುಳ್ಳದ್ದಾಗುವದೇ? ಆದ್ದರಿಂದ ನಾನು ಭಯಪಡುತ್ತೇನೆ. ಎಂದು ಹೇಳಲು;ಬಸವಣ್ಣನು ಕೇಳಿ, ಕೋಪಗೊಂಡವನಾಗಿ,—ಚಂಡಾಲರ ನಡತೆಗೆ ಸಮಾನವಾದದ್ವಿಜರ ಚರಿತ್ರೆಯನ್ನು ಹೇಳುತ್ತೇನೆ ಕೇಳು. ನೀಚಜಾತಿಯವರನ್ನು ಉತ್ತಮಜಾತಿಯವರನ್ನಾಗಿ ಮಾಡುತ್ತೇನೆಂದು ಹೇಳಿ, ಚಿನ್ನದ ಗೋವನ್ನು ಮಾಡಿಸಿ, ಸಂಕಲ್ಪಿಸಿ ಧನಿಕರಾದವರನ್ನು ಹಾಲಿನಿಂದ ತೊಳೆಯಲ್ಪಟ್ಟ ಆ ಗೋವಿನ ಹೊಟ್ಟೆಯೊಳಗೆ ನುಗ್ಗಿ ಈಗ ನೀನುಉತ್ತಮಜಾತಿಯಾದೆ ಯೆಂದು ಅವನಿಗೆ ಹೇಳಿಕಳುಹಿಸಿ, ವಿಚಾರ ಶೂನ್ಯರಾಗಿ ಆ ಗೋವನ್ನು ತುಂಡುತುಂಡು ಮಾಡಿ, ಸೋಮಯಾಜಿಗೆ ಕೊಂಬು, ತ್ರಿವೇದಿಗೆ ತೊಡೆ, ಉಪಾಧ್ಯಾಯನಿಗೆ ಬೆನ್ನುಮೂಳೆ, ಬ್ರಹ್ಮವೇದಿಗೆ ಹಣೆ, ಶಿಕ್ಷಾದಿಷಡಂಗಗಳನ್ನು ತಿಳಿದವನಿಗೆ ಪಕ್ಕಗಳು ವೈಯ್ಯಾಕರಣನಿಗೆ ಎಲುಬು, ಪ್ರಾಭಾಕರಜ್ಞನಿಗೆ ಹೊಟ್ಟೆ, ದ್ವಿವೇದಿಗೆ ಬದಿಗಳು, ಎಲ್ಲಾ ಆಚಾರ್ಯರಿಗೂ ವಿದ್ಯಾರ್ಥಿಗಳಿಗೂ ಇತರ ಅಂಗಗಳು, ಎಂದು ಹೇಳಿಕೊಂಡು, ಮೊದಲು ಸಂಕಲ್ಪಸಿದ್ಧವಾಗಿಯೂ ಪೂಜ್ಯವಾದದ್ದಾಗಿಯೂ, ಇರುವ ಆ ಸುವರ್ಣಮಯವಾದ ಹಸುವನ್ನು ಸೀಳಿ, ಭಯವಿಲ್ಲದೆ ಗೋಹತ್ಯಾ ಪಾಪದಿಂದ ಲೇಪಿಸಲ್ಪಡುತ್ತಾರೆ, ಮಹಾಪುರುಷರಿಂದ ಭಾವಿಸಲ್ಪಟ್ಟ ಅಚೇತನ ಪದಾರ್ಥಗಳು ಆಯಾಯ ಆಕಾರಕ್ಕೆ ತಕ್ಕ ಪ್ರಾಣವುಳ್ಳವುಗಳಾಗಿ, ಅದೇ ರೂಪವನ್ನು ಹೊಂದುತ್ತವೆಯಲ್ಲವೇ?

ಎಲೈ ರಾಯನೇ, ಭಾವನೆಯಿಂದ ಕಲ್ಪಿಸಲ್ಪಟ್ಟದ್ದಾಗಿಯೂ ಪರಿಶುದ್ಧವಾದದ್ದಾಗಿಯೂ ಇರುವ ಗೋವನ್ನು ಕೊಂದು ಬಂದಿರುವ ಈ ದ್ವಿಜರನ್ನು ಸಭೆಯಲ್ಲಿ ಪರಮಪವಿತ್ರರಾದ ಭಕ್ತರಿಗೆ ಸಮಾನರನ್ನು ಮಾಡಬಹುದೇ? ನಹಿಂಸ್ಯಾತ್ಸರ್ವಭೂತಾನಿ ಎಂದು ಶ್ರುತಿಯಲ್ಲಿ ಹೇಳಲ್ಪಟ್ಟಿರುವದರಿಂದ ವಿವೇಕಶಾಲಿಗಳಾದವರು ಹಿಂಸೆಗೆ ಕಾರಣವಲ್ಲದ ಕರ್ಮವನ್ನು ಮಾಡಬೇಕು. ಮಾಟಕುಟಿಲ ಮುಂತಾದಕಾರ್ಯಗಳೂ ವೇದದಲ್ಲಿಯೇ ಹೇಳಲ್ಪಟ್ಟಿದ್ದಾಗ್ಯೂ, ಸತ್ಕರ್ಮ ದುಷ್ಕರ್ಮಗಳಲ್ಲಿ

ರಕ್ಷಣೆಯುಂಟಾಗತಕ್ಕ ಕರ್ಮಗಳನ್ನು ಮಾಡಬೇಕಲ್ಲವೇ ? ಎಲೈ ಭೂಪತಿಯೇ, ಸಿಂಹದೊಡನೆ ನಾಯಿಯನ್ನೂ, ಆನೆಯೊಡನೆ ಊರಹಂದಿಯನ್ನೂ, ಸಮುದ್ರದೊಡನೆ ಅಲ್ಪಸರೋವರವನ್ನೂ, ದೇವಗಂಗೆಯೊಡನೆ ಕಾಲಿವೆಯನ್ನೂ ಸೂರ್ಯನೊಡನೆ ಮಿಂಚುಹುಳವನ್ನೂ ಕಾಮಧೇನುವಿನೊಡನೆ ಕತ್ತೆಯನ್ನೂ ಹೋಲಿಸುವಂತೆ ಶಿವನಾಗಯ್ಯನೊಡನೆ ದ್ವಿಜರನ್ನು ಹೋಲಿಸುತ್ತೀಯೆ. ನಿರ್ಭಾಗ್ಯನ ಕಿವಿಯಲ್ಲಿ ಧರಿಸಲ್ಪಟ್ಟ ಚಿನ್ನವುಕೂಡ ಹಂಚಿಯಾಗಿ ಕಾಣುವಂತೆ ಶಿವಸ್ವರೂಪರಾದ ಭಕ್ತರು ಭವಿಗಳಕಣ್ಣಿಗೆ ಸಾಮಾನ್ಯ ಮನುಷ್ಯರಂತೆ ಕಾಣುವರು.

---

## ಶ್ರೀಪತಿ ಪಂಡಿತರ ಕಥೆ.

ಪೂರ್ವದಲ್ಲಿ ಶ್ರೀಪತಿ ಪಂಡಿತನೆಂಬ ಮಹಾತ್ಮನು ಅನಂತಪಾಲನ ಸಭೆಯಲ್ಲಿ ಒಬ್ಬ ಶಿವಭಕ್ತನಿಗೆ ಕೋಟಿಮಂದಿ ದ್ವಿಜರು ಸಮಾನರಲ್ಲವೆಂದು ಪ್ರತಿಜ್ಞೆಮಾಡಿ, ವಸ್ತ್ರದ ಕೊನೆಯಲ್ಲಿ ಉರಿಯುತ್ತಿರುವ ಬೆಂಕಿಯನ್ನು ಕೊಬ್ಬಿದ ಮನಸ್ಸುಳ್ಳ ಪರವಾದಿಗಳ ಮನೋರಥಗಳೊಡನೆ ಕಟ್ಟಿದನು. ಶಿವದ್ರೋಹದಲ್ಲಿ ನಿರತರಾದ ದ್ವಿಜರು ಶಿವಭಕ್ತರಿಗೆ ಸಮಾನರೇ ? ಕಡೆಗೆ ಭಕ್ತರ ಉಚ್ಛಿಷ್ಟವನ್ನು ತಿನ್ನುತ್ತಿರುವ ಆ ಭಕ್ತರ ಮನೆಯನಾಯಿಗಳಿಗೆ ಸಮಾನರಾದಾರೇ ?

---

## ಹಾವಿನ ಹಾಳಕಲ್ಲಯ್ಯನ ಕಥೆ.

ಹಾವಿನ ಹಾಳ ಎಂಬ ಹೆಸರುಳ್ಳ ಬ್ರಾಹ್ಮಣರ ಅಗ್ರಹಾರವಿತ್ತು. ಅಲ್ಲಿ ಕ್ರೂರವಾದ ಒಂದು ಸರ್ಪವು ಸೇರಿಕೊಂಡು ಮಾರ್ಗಸ್ಥರನ್ನೆಲ್ಲಾ ಕಚ್ಚಿಕೊಲ್ಲುತ್ತಿತ್ತು. ಹೀಗೆ ನಡೆಯುತ್ತಿರಲಾಗಿ, ಮಹಾ ತಪಸ್ವಿಯಾದ ಕಲ್ಲಿನಾಥನು ಸರ್ಪರ ಭಾಗ್ಯಸಂಪತ್ತಿನಿಂದ ಆ ಅಗ್ರಹಾರಕ್ಕೆ ಬಂದು ಯಾವದೋ ಒಂದು ಮನೆಯಲ್ಲಿ ಮಲಗಿರಲು ಆ ಸರ್ಪವು ಆತನನ್ನು ಕಚ್ಚಿ ಮೃತವಾಯಿತು. ಅದನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟರು. ಆ ಕರುಣಾನಿಧಿಯಾದ ಕಲ್ಲಯ್ಯನು ಆ ಸರ್ಪವನ್ನು ಮರಳಿ ಬದುಕಿಸಿ, ಇನ್ನು ಮೇಲೆ ನೀನು ಇಲ್ಲಿವಾಸಮಾಡಬೇಡವೆಂದಾಜ್ಞಾಪಿಸಿ, ಕಳುಹಿಸಿಬಿಟ್ಟನು. ಅನಂತರದಲ್ಲಿ ಆ ಬ್ರಾಹ್ಮಣರುಗಳಿಂದ ಪ್ರಾರ್ಥಿಸಲ್ಪಟ್ಟ ಆ ಶಿವಯೋಗಿಶ್ರೇಷ್ಠನು ಸಕಲ ಜನಗಳಿಂದಲೂ ಪೂಜಿಸಲ್ಪಡುತ್ತಾ, ಆ ಅಗ್ರಾಹಾ

ರದಲ್ಲಿ ಕೆಲವುದಿವಸ ವಾಸಮಾಡಿಕೊಂಡಿದ್ದನು. ಒಂದಾನೊಂದು ದಿವಸ ಆತನಮನೆಯದಾಸಿಯು ಅರ್ಘ್ಯೋದಕವನ್ನು ತರುವದಕ್ಕೆ ಗಡಿಗೆಯನ್ನು ತೆಗೆದುಕೊಂಡು ದಾರಿಯಲ್ಲಿ ಹೋಗುತ್ತಿರುವಾಗ, ಒಬ್ಬ ಬ್ರಾಹ್ಮಣನಿಂದ ಮುಟ್ಟಲ್ಪಟ್ಟವಳಾಗಿ ಕೋಪದಿಂದ ಆಗಡಿಗೆಯನ್ನು ನೆಲದಮೇಲೆ ಒಡೆದು ಚೂರುಮಾಡಿ ಒಂದು ಕಡೆಹೂಳಿ, ಭವಿಸ್ಪರ್ಶವಾಯಿತಲ್ಲಾ! ಎಂದು ವ್ಯಸನಪಟ್ಟು ಭಸ್ಮಸ್ನಾನವನ್ನುಮಾಡಿಕೊಂಡು, ಮತ್ತೊಂದು ಘಟವನ್ನು ತೆಗೆದುಕೊಂಡು ಹೋಗುತ್ತಿರುವಲ್ಲಿ ಬ್ರಾಹ್ಮಣರು ಕಂಡು ಕೋಪಗೊಂಡವರಾಗಿ ಕಲ್ಲಿನಾಥಯ್ಯನನ್ನು ಕರೆದುಹೇಳಿದ್ದೇನಂದರೆ;-ಎಲೈ ಕಲ್ಲಿನಾಥಯ್ಯನೇ, ನಿನ್ನ ಸಂಬಂಧಿಗಳೆಲ್ಲರೂ ಒಳ್ಳೆಯವರಾಗಿದ್ದಾರೆ. ಆದರೆ ನೀಚಳಾದ ನಿನ್ನ ದಾಸಿಯು ಮಾಡಿದ ಕೆಲಸವನ್ನು ನೀನು ಕೇಳಲಿಲ್ಲವೇ ದಾಮೋದರನ ಮಗನಾದ ತ್ರಿವಿಕ್ರಮ ಸೋಮಯಾಜಿಯು ಸಮಿತ್ತುಗಳನ್ನು ತರುವದಕ್ಕೋಸ್ಕರ ಹೋಗುತ್ತಾ ಮಾರ್ಗದಲ್ಲಿ ಆಕಸ್ಮಿಕವಾಗಿ ಆದಾಸಿಯಿಂದ ಸೋಕಲ್ಪಟ್ಟನು. ಅವಳು ಭವಿಯು ನನ್ನನ್ನು ಮುಟ್ಟಿದನೆಂದು ಗಡಿಗೆಯನ್ನು ಒಡೆದುಹಾಕಿ ಕೆಟ್ಟಮಾತುಗಳನ್ನಾಡಿಕೊಂಡು ಹೋದಳು. ನೀಚಜಾತಿಯವರಿಗೆ ಬ್ರಾಹ್ಮಣಸ್ಪರ್ಶವು ಉತ್ತಮವಲ್ಲವೇ? ಶ್ರುತಿಸ್ಮೃತಿಪುರಾಣಗಳಲ್ಲಿ ಈ ಅರ್ಥವು ಸಿದ್ಧವಾಗಿದೆಯಲ್ಲವೇ? ಆಗಲೇ ನಮ್ಮಹುಡುಗರು ಅವಳಿಗೆ ತಕ್ಕಶಿಕ್ಷೆಯನ್ನು ಮಾಡುವದಕ್ಕೆ ಉದ್ಯುಕ್ತರಾದರು. ಈ ಅರ್ಥವನ್ನು ಅವಳ ಯಜಮಾನನಿಗೆ ತಿಳಿಸೋಣ ಎಂದು ನಾವೆಲ್ಲರೂ ಸಮಾಧಾನವನ್ನು ಹೇಳಿ ನಿಲ್ಲಿಸಿದ್ದರಿಂದ ಶಾಂತರಾದರು. ಈ ರೀತಿಯಾಗಿ ಬ್ರಾಹ್ಮಣರು ಹೇಳಿದ ಮಾತನ್ನು ಕೇಳಿ, ಕಲ್ಲಿನಾಥಯ್ಯನು ಕುಪಿತನಾಗಿ;-ನೀವುಗಳು ನನ್ನ ದಾಸಿಯನ್ನು ಮುಟ್ಟುವದಕ್ಕೆ ಮಾತ್ರವೇ ಅನರ್ಹರಲ್ಲ; ನಮ್ಮ ನಾಯಿಗಳನ್ನು ಸಹ ಮುಟ್ಟುವದಕ್ಕೆ ಯೋಗ್ಯರಲ್ಲ, ಪರಮೇಶ್ವರನುಪರಬ್ರಹ್ಮನು, ಪರಮಾತ್ಮನು ಎಂಬ ಮಾತನ್ನು ವೇದಗಳು ರುದ್ರನನ್ನು ಮಾತ್ರ ಕುರಿತು ಹೇಳುವವೇ ಹೊರತು. ಮತ್ತೊಬ್ಬನನ್ನು ಕುರಿತು ಹೇಳುವದಿಲ್ಲ. ಆದ್ದರಿಂದ ಬ್ರಾಹ್ಮಣರಾದವರು ಪರಬ್ರಹ್ಮಸ್ವರೂಪನಾದ ರುದ್ರನನ್ನೇ ಸೇವಿಸುತ್ತಾರೆ. ಬ್ರಹ್ಮವನ್ನುಪಾಸಿಸುವರು ಬ್ರಾಹ್ಮಣರೆಂದು ಹೇಳಲ್ಪಡುವರು. ಆದಿಬ್ರಾಹ್ಮಣನಾದ ರುದ್ರನೇ ಬ್ರಾಹ್ಮಣರಿಂದ ಸೇವಿಸಲ್ಪಡುವದಕ್ಕೆ ಯೋಗ್ಯನು. ಆತನನ್ನು ಸೇವಿಸದೆ ಇರುವ ನಿಮಗೆ ಬ್ರಾಹ್ಮಣ್ಯವೆಲ್ಲಿಯದು. ಅದೇ ಕಾರಣ ನೀವು ಭಕ್ತರುಚ್ಛಿಷ್ಟವನ್ನು ಸವಿಯುವದರಿಂದ ವೃದ್ಧಿಹೊಂದಿದ ಆತ್ಮ

ಜ್ಞಾನವುಳ್ಳ ಮತ್ತು ಪುಣ್ಯಸ್ವರೂಪವಾದ ನಮ್ಮ ನಾಯಿಯಿಂದಲೂ ಮುಟ್ಟಲ್ಪಡುವದಕ್ಕೆ ಯೋಗ್ಯರಲ್ಲ. ಹಾಗೆಯೇ ಮಕುಟಾಗಮದಲ್ಲಿ, ಶಿವಭಕ್ತರ ಮನೆಯ ದಾಸಿಯ ಎಂಜಲನ್ನವನ್ನು ತಿನ್ನುವ ನಾಯಿಗಳು ಹಂದಿಗಳು ಸಹ ಯಜ್ಞವನ್ನು ಮಾಡಿದವರ ಗತಿಯನ್ನು ಹೊಂದುತ್ತವೆ. ಎಂದು ಹೇಳಲ್ಪಟ್ಟಿದೆ. ಎಂಬದಾಗಿ ಹೇಳಿದನು. ಈಮಾತನ್ನು ಕೇಳಿ ಕೋಪಿಷ್ಠರಾದ ಬ್ರಾಹ್ಮಣರು-ಎಲಯ್ಯಾ, ಬ್ರಾಹ್ಮಣರಾದ ನಮ್ಮನ್ನು ಮೂರ್ಖತನದಿಂದ ನಿನ್ನ ದಾಸಿಗಿಂತಲೂ ಕಠಿನವಾಗಿ ಮಾತನಾಡುತ್ತೀಯಾ? ಮುಳ್ಳನ್ನು ಕಿತ್ತು ಕಬ್ಬಿಣದ ಗೂಟವನ್ನು ಬಡಿದು ಕೊಂಡಂತಾಯಿತು. ಅದೆಲ್ಲವೂ ಇರಲಿ. ನಿಮ್ಮ ನಾಯಿಯ ಬಾಯಿಯಿಂದ ಜಗತ್ಪೂಜ್ಯವಾದ ಪದ ಕ್ರಮ ಜಟಾಮಯವಾದ ವೇದಘೋಷವನ್ನು ಮಾಡಿಸು; ಎಂದು ಹೇಳಿದ್ದಕ್ಕೆ ಆಮಾತನ್ನು ಕೇಳಿ ಕಲ್ಲಿನಾಥಯ್ಯನು ಭಕ್ತರಮನೆಯಲ್ಲಿ ವಾಸ ಮಾಡುವ ನಾಯಿಗಳು ವೇದಶಾಸ್ತ್ರಾದಿ ಘೋಷಣವನ್ನು ಮಾಡುವದು ಆಶ್ಚರ್ಯವಲ್ಲ. ಎಂದು ಹೇಳಿ ಕೆಲವು ಚೇಟಿಯರನ್ನು ಕಳುಹಿಸಿ, ಗುರುಧ್ಯಾನವನ್ನು ಮಾಡುತ್ತಾ ಮನೆಯ ಬಾಗಿಲನ್ನಾಶ್ರಯಿಸಿ ಕೊಂಡಿರುವ ನಾಯಿಯನ್ನು ತರಿಸಿ ಶಿವಪ್ರಸಾದಸೇವನೆಯಿಂದ ಪವಿತ್ರನಾದವನೇ ಓಂಕಾರದಿಂದ ಶ್ರೇಷ್ಠವಾದ ಸಚ್ಚಿದಾನಂದಸ್ವರೂಪನೇ ವೀರಶೈವ ಮಾರ್ಗದಲ್ಲಿ ಸಂಚರಿಸುವದರಲ್ಲಿ ಚತುರನಾದ ಮಾರ್ಗಸ್ಥನೇ, ವೇದಶಾಸ್ತ್ರಾರ್ಥವನ್ನು ವಿವರಿಸುವವರಲ್ಲಿ ಶ್ರೇಷ್ಠೋಪಾಧ್ಯಾಯನಾದವನೇ, ಬಾ, ಎಂದು ಕೂಗಲು; ವೇದವಿತಾನುಹನೆಂಬ ನಾಯಿಯು ಆ ಪರವಾದಿಗಳನ್ನು ಹೊಡೆಯುವದಕ್ಕೆ ಎತ್ತಿದ ಚಾವಟಿಯೋ ಎಂಬಂತಿರುವ ತನ್ನ ಬಾಲವನ್ನು ಅಲ್ಲಾಡಿಸುತ್ತಾ ನಮಸ್ಕರಿಸಿತು. ಈ ರೀತಿಯಾಗಿ ನಮಸ್ಕರಿಸಿದ ಆ ಶುನಕವನ್ನು ಕಲ್ಲಿನಾಥಯ್ಯನು ಕರುಣಾದೃಷ್ಟಿಯಿಂದ ನೋಡಿ ಎಲೈ ವೇದವಿತಾನುಹನೇ ವೇದಗಳ ಒಂದೊಂದು ಅನುವ್ವನ್ನು ಎತ್ತಿಹೇಳು; ಎಂದಾಜ್ಞಾಪಿಸಿದನು. ನಾಯಿ ಚರ್ಮದಿಂದಾವರಿಸಲ್ಪಟ್ಟ ರುದ್ರನಂತಿರುವ ಆ ಶುನಕನು ಪದ್ಮಾಸನವನ್ನು ಹಾಕಿಕೊಂಡು, ಸಾವಧಾನವಾಗಿ ಶಿವಮೂರ್ತಿಯನ್ನು ಧ್ಯಾನಿಸಿ, ಗುರುಚರಣದಲ್ಲಿ ಸ್ಥಿರವಾಗಿ ಆಧಾರ ಚಕ್ರವನ್ನು ಬಿಗಿಯಾಗಿ ಆಕುಂಚನವನ್ನುಮಾಡಿ, ಸೂರ್ಯ ಚಂದ್ರರ ಗತಿಯನ್ನು ತಡೆದು, ವಾಯುವನ್ನು ಶುಷುಮ್ನಾ ಮಾರ್ಗದಲ್ಲಿ ಸೇರಿಸಿ, ಬಿಂದುನಾದಲಯದಿಂದ ಕೂಡಿದ ಓಂಕಾರವನ್ನುಚ್ಚರಿಸಿ, ಸಕಲ ಜನಗಳಿಗೂ ಆಶ್ಚರ್ಯವುಂಟಾಗುವಂತೆ ವೇದಘೋಷವನ್ನು ಮಾಡಿತು. ಅನಂತರದಲ್ಲಿ

ಬ್ರಾಹ್ಮಣರೆಲ್ಲರೂ ಬೆರಗಾಗಿ ನಿನ್ನ ಮಹಿಮೆಯನ್ನು ಶಿವನೊಬ್ಬ ಬಲ್ಲನೇಹೊರತು, ಅಲ್ಪಜ್ಞರಾದ ನಾವು ಬಲ್ಲವೇ ಎಂದು ಹೇಳಿಕೊಂಡು ನಮಸ್ಕರಿಸಿದರು. ಕಲ್ಲಿನಾತಯ್ಯನು ಕೂಡ ಎಲೈ ವೇದಪಿತಾಮಹನೇ ಸಾಕು ಇನ್ನು ಸುಮ್ಮನಿರು ಎಂದು ನಿಲ್ಲಿಸಿ, ಆ ಸಭೆಯಲ್ಲಿರುವ ಬ್ರಾಹ್ಮಣರನ್ನೂ ಕುರಿತು ನೀವುಗಳು ಸಕಲ ವೇದಗಳಲ್ಲಿಯೂ ಈ ಶುನಕಕ್ಕಿರುವ ಸ್ವರಜ್ಞಾನವನ್ನು ನೋಡಿದಿರಾ ? ಶಿವಧ್ಯಾನದಿಂದ ಕೂಡಿಕೊಂಡಿರುವ ಭಕ್ತರ ಮಹಿಮೆಯನ್ನು ತಿಳಿದಿರಾ ? ಸಿದ್ಧರಾಮಯೋಗಿಯ ಆಶ್ರಮದಲ್ಲಿ ವೇದಾಂತದೇಶಿಕನೆಂಬ ಹೆಸರಿನಿಂದ ಪ್ರಸಿದ್ಧವಾದ ಒಂದು ಶುನಕವುಂಟು. ಅದೇ ಈ ಶುನಕಕ್ಕೆ ಗುರುವು ಇದಲ್ಲದೆ; ಜಂಬೂಪುರವೆಂಬ ಪಟ್ಟಣದಲ್ಲಿ ಮಹಾಕಾಳನೆಂಬ ಶಿವಯೋಗಿಯ ಮನೆಯಲ್ಲಿರುವ ಒಂದು ಶುನಕವು ರಾಜಸಭೆಯಲ್ಲಿ ವೇದಪರೀಕ್ಷೆಯನ್ನು ಕೊಟ್ಟಿತು. ಇದಲ್ಲದೆ ಎಲೈ ಭೂಸುರರಿರಾ ಕೇಳಿರಿ ಶಿವದ್ರೋಹಿಗಳನ್ನು ಜಯಿಸುವದರಲ್ಲಿ ಸಮರ್ಥನಾದ ಶಿವಚಿತ್ತನೆಂಬ ನಾಮದಿಂದಪ್ರಸಿದ್ಧನಾದ ಒಬ್ಬ ಶಿವಯೋಗಿ ಇದ್ದನು. ಆತನು ಕೋಟಿಮಂದಿ ದ್ವಿಜರಾದರೂ ಒಬ್ಬ ಭಕ್ತನಿಗೆ ಸಮಾನರಲ್ಲ ಎಂದು ವೇದಶಾಸ್ತ್ರಗಳಿಂದ ಸ್ಥಾಪಿಸಿ, ವಾದದಲ್ಲಿ ದ್ವಿಜರನ್ನು ಜಯಿಸಿದನು. ಈ ಅರ್ಥದಲ್ಲಿ ಪ್ರತ್ಯಕ್ಷಪ್ರಮಾಣ ವೇನಾದರೂ ಉಂಟೊ ? ಎಂದು ಕೇಳಲು; ಅಂಥಾ ಪ್ರಮಾಣವನ್ನು ತೋರಿಸುತ್ತೇನೆಂದು ಪ್ರತಿಜ್ಞೆಯನ್ನು ಮಾಡಿ, ಚಿಂತಾಲಿನಲ್ಲಿ ಒಂದುಕಡೆ ಅನೇಕ ಬ್ರಾಹ್ಮಣರನ್ನು ಕೂಡಿಸಿ, ಮತ್ತೊಂದು ಕಡೆಯಲ್ಲಿ ಭಕ್ತನ ಒಂದು ಪಾದುಕೆಯನ್ನು ಇರಿಸಿದನು. ಆಗ ಪಾದುಕೆಯಿಂದ ಕೂಡಿದ ತಕ್ಕಡಿಯು ಭಾರವಾದದ್ದರಿಂದ ಕೆಳಗೇ ಕೂತುಕೊಂಡಿತು. ಬ್ರಾಹ್ಮಣರಿಂದ ಕೂಡಿದ ತಕ್ಕಡಿಯು ಲಘುವಾದದ್ದರಿಂದ ಮೇಲಕ್ಕೆ ಎದ್ದಿತು, ಮಹಾತಪಸ್ವಿಯಾದ ಶಿವಚಿತ್ತಯ್ಯನು ಇಂಥಾ ಮಹಿಮೆಯನ್ನು ತೋರಿಸಿ, ಆ ಸ್ಥಾನವನ್ನು ಬಿಟ್ಟು ಶಿಷ್ಯಸಮೂಹದೊಡನೆ ಹೊರಟು ಹೋದನು. ಇದಲ್ಲದೆ ಗೊಬ್ಬೂರೆಂಬ ಊರಿನಲ್ಲಿ ವೀರಶೈವ ಮತಾಚಾರಗಳಿಗೆ ವಿರೋಧಿಗಳಾದವರನ್ನು ಸುಡುವ ವಿಷಯದಲ್ಲಿ ಅಗ್ನಿಯೂ, ಲಿಂಗಮುಖದಿಂದ ಬಂದು ಪ್ರಸಾದದ ಸಿದ್ಧಿಯಿಂದ ಪ್ರಖ್ಯಾತವಾದ ಮಹಿಮೆಯಿಂದ ಕೊಬ್ಬಿದವನೂ, ಭಕ್ತಸ್ಥಲವೆಂಬ ಸಮುದ್ರವನ್ನು ವೃದ್ಧಿಪಡಿಸುವದರಲ್ಲಿ ಕ್ಷೀರಸಮುದ್ರವೂ ಆದ ಬಿಜ್ಜಭಾಸ್ಕರಯ್ಯನೆಂಬ ಭಕ್ತನಿದ್ದನು. ಆತನು ಜಂಗಮಲಿಂಗಪ್ರಸಾದದಿಂದ ಪ್ರಾಣದ ಸಂಬಂಧವನ್ನು ಹೆಚ್ಚಿಸುತ್ತಾ, ಆ ಜಂಗಮಲಿಂಗವನ್ನೇ ತನಗೆ ಇಷ್ಟವಾದಪ್ರಾ

ಣಲಿಂಗವೆಂದು ಭಾವಿಸಿ, ಅದರ ಪಾದುಕೆಯ ತುಂಡುಗಳಿಂದ ಕುಂಡಲ, ಹಾರ, ಕಿರೀಟ, ಪದಕ, ಕಂಕಣಗಳನ್ನು ಮಾಡಿ ಧರಿಸಿಕೊಂಡವನಾಗಿ ಚಲಿಸುತ್ತಿರುವ ವಸ್ತ್ರವುಳ್ಳ ಧ್ವಜಗಳಿಂದ ಅಲಂಕರಿಸಲ್ಪಟ್ಟದ್ದಾಗಿಯೂ, ನಿರ್ಮಲವಾದ ಚಿತ್ರಿಕನ್ನಡಿ ತೋರಣಗಳಿಂದ ಕೂಡಿದ್ದಾಗಿಯೂ, ಅವ್ಯಕ್ತಮಧುರವಾದ ಧ್ವನಿಯಿಂದ ಪ್ರಕಾಶಿಸುವ ಘಂಟೆಯಸರದಿಂದ ಅಲಂಕರಿಸಲ್ಪಟ್ಟವುಗಳೂ, ಹೂವಿನಗೊಂಚಲುಗಳಿಂದ ಗುರುತಾಗಿ ಮಾಡಲ್ಪಟ್ಟ ಹೆಗಲುಗಳುಳ್ಳವುಗಳೂ ಚಿನ್ನದ ಪಟ್ಟೆಯಿಂದ ಕೂಡಿದ ಹಣೆಯುಳ್ಳವುಗಳೂ, ಕಟ್ಟಲ್ಪಟ್ಟ ರುದ್ರಾಕ್ಷ ಮಣಿಮಾಲೆಗಳಿಂದಲೂ, ಜೋಲುತ್ತಿರುವ ಹಗುರವಾದ ಚಾಮರಗಳಿಂದಲೂ, ಅಲಂಕರಿಸಲ್ಪಟ್ಟ ಕೊಂಬುಗಳಿಂದ ಕೂಡಿದವುಗಳೂ ಆದ ಬಲಿಷ್ಠಗಳಾದ ವೃಷಭಗಳಿಂದ ವಹಿಸಲ್ಪಟ್ಟದ್ದಾಗಿಯೂ ಸೂರ್ಯ ಚಂದ್ರಮಂಡಲಗಳಂತಿರುವವುಗಳೂ ಲಿಂಗಮುದ್ರೆಯಿಂದ ಕೂಡಿದವುಗಳೂ ಆದ ಗಾಲಿಗಳಿಂದ ವೇಗವಾದಗಮನವುಳ್ಳದ್ದಾಗಿಯೂ, ಪ್ರತ್ಯಕ್ಷವಾದ ಮನೋರಥವೋ ಎಂಬಂತಿರುವ ಆಶ್ಚರ್ಯಕರವಾದ ರಥದಮೇಲೆ ಕುಳಿತುಕೊಂಡು, ಉಘೇಉಘೇ ಚಾಂಗುಬಲಾ ಎಂದು ಉಚ್ಚರಿಸುತ್ತಾ, ತನ್ನ ಊರಲ್ಲಾಗಲಿ, ಸಮೀಪಗ್ರಾಮದಲ್ಲಾಗಲಿ. ಎಲ್ಲಿಯೇ ಆಗಲಿ ಜಂಗಮಲಿಂಗ ಪೂಜೆಯು ನಡೆಯುತ್ತಿದ್ದರೆ, ಅಲ್ಲಿಗೆಹೋಗಿ, ಆ ತಪಸ್ವಿಗಳ ಪಾದಕಮಲಧೂಳಿಯಿಂದ ವ್ಯಾಪಿಸಲ್ಪಟ್ಟ ಹಣೆಯುಳ್ಳವನಾಗಿ ಅಲ್ಲಿದ್ದುಕೊಂಡು ಅವರ ಸಂಭಾಷಣೆಯೆಂಬ ಅಮೃತವನ್ನು ಸವಿಯುವದರಿಂದುಂಟಾದ ಸುಖವುಳ್ಳವನಾಗಿ, ಜಂಗಮರೆಲ್ಲರೂ ಲಿಂಗಾರ್ಪಣವನ್ನು ಮಾಡಿ ಎದ್ದುಹೋದಮೇಲೆ, ಉಳಿದ ಅವರ ಪ್ರಸಾದದಲ್ಲಿ ಮುಳುಗಿದವನಾಗಿ ದೊರೆತಪ್ರಸಾದವನ್ನೆಲ್ಲಾ ಬಂಡಿಯಲ್ಲಿ ತುಂಬಿ ತಂದು ಅದನ್ನು ಸೇವಿಸುತ್ತಾ, ದಿನಗಳನ್ನು ಕಳೆಯುತ್ತಿದ್ದನು. ಈ ಸಂಗತಿಯನ್ನು ಗ್ರಾಮವಾಸಿಗಳಾದ ಬ್ರಾಹ್ಮಣರುಗಳು ಕೇಳಿ ಅವನನ್ನು ತಮ್ಮ ತಮ್ಮೊಳಗೆ ದೂಷಿಸಿದರು. ಹೀಗಿರುವಲ್ಲಿ ಗೊಬ್ಬೂರೊಳಗೆ ವಾಸಮಾಡುತ್ತಿದ್ದ ಒಬ್ಬಭಕ್ತನು ದೊಡ್ಡವರಿಂದ ಶ್ಲಾಘಿಸಲ್ಪಟ್ಟವನಾಗಿ ಜಂಗಮಾರ್ಚನೆಯಲ್ಲಿ ತತ್ಪರನಾಗಿದ್ದನು. ಅಲ್ಲಿಗೆ ಯಥಾಪ್ರಕಾರ ಬಂಡಿಯನ್ನು ಕಟ್ಟಿಕೊಂಡು ಹೋಗಿ, ಪ್ರಸಾದವನ್ನು ತರುತ್ತಿರಲು ಬ್ರಾಹ್ಮಣರು ತಡೆದು; ಎಲಾ; ನಿಲ್ಲು ನಿಲ್ಲು; ಈ ಮಹಾಗ್ರಾಮವನ್ನು ಪ್ರವೇಶ ಮಾಡುವದು ಯೋಗ್ಯವಲ್ಲ; ನಿನ್ನ ಮಿತ್ರರಾದ ದೂರ್ತಧುರಂಧರರಿಂದ ಇದೇನು ಸಂಭ್ರಮವು ಮಾಡಲ್ಪಡುತ್ತದೆ; ವಿವಾಹೋತ್ಸವವು ನಡೆಯುತ್ತ

ದಯೋ? ಯಾವನಾದರೂ ಭಕ್ತನು ಸತ್ತನೋ? ಅಥವಾ ಕೊಬ್ಬಿರುವ ನೀವುಗಳು ಕಳ್ಳನನ್ನು ಕೊಂದಿರೋ? ಇದೇನು ಕಿಲಕಿಲಧ್ವನಿಯು! ಕೇರಳ ದೇಶದ ಚೇರ ಮನು ಕೈಲಾಸಕ್ಕೆ ಹೋದಂತೆ ಯಾರಾದರೂ ಹೋದರೋ? ಶೂದ್ರರ ಎಂಜಲನ್ನೂ, ಹೊಲೆಯರ ಎಂಜಲನ್ನೂ, ಅಪೇಕ್ಷಿಸುವದು ನಿನಗೆ ಯೋಗ್ಯವೇ? ಈ ಅಗ್ರಹಾರವು ಅನಾಯಕವಾಗಿಧೆಯೋ? ಇದನ್ನು ಊರೊಳಗೆ ತರುವದು ಸರಿಯಲ್ಲ ಹಿಂತಿರಿಗಿಹೋಗು ಎಂದು ಹೇಳಲು ಬಿಬ್ಬ ಭಾಸ್ಕರಯ್ಯನು ಆಮಾತನ್ನು ಕೇಳಿ, ಎಲೈ ದುಷ್ಟದ್ವಿಜರಿರಾ, ಶಿವಭಕ್ತರಪ್ರಸಾದವನ್ನು ಎಂಜಲೆಂದು ಹೇಳುತ್ತೀರಾ, ಈ ಪ್ರಸಾದವು ಭಕ್ತಿಯುಳ್ಳವರಿಗೆ ಅಮೃತವೂ, ಭಕ್ತಿಹೀನರಿಗೆ ಅಗ್ನಿಯೂ ಆಗಿಧೆ. ಯಾರುಶಿವಭಕ್ತರ ಪ್ರಸಾದವನ್ನು ದೂಷಿಸುತ್ತಾರೋ ಅವರು ಘೋರನರಕಗಳಲ್ಲಿ ಬೀಳುತ್ತಾರೆ. ವ್ಯರ್ಥವಾಗಿ ನೀವು ಪ್ರಸಾದವೆಂಬ ಅಗ್ನಿಗೆ ಪತಂಗದ ಹುಳಗಳಾಗ ಬೇಡಿರಿ. ಪ್ರಸಾದವನ್ನು ದೂಷಿಸುವ ಯಾವನು ತಾನೇ ಪ್ರಸಾದದ ಹತ್ತರಕ್ಕೆ ಬರುವದಕ್ಕೆ ಶಕ್ತನಾದಾನು ? ಎಂದು ಹೇಳಿದನು. ದ್ವಿಜರು ಕೇಳಿ ಅಗ್ರಹದಿಂದ ಸಮೀಪಕ್ಕೆ ಬಂದು;—ಈ ಎಂಜಲನ್ನವುಸರ್ಪವೋ? ಹುಲಿಯೋ ? ಭಯಂಕರವಾದ ವಿಷವೋ? ವಾಮನನು ಕೇಶವಸ್ವಾಮಿಯು, ರಾಘವನು, ಸಿಂಗಮಾಧವನು, ವಿಷ್ಣುಕೂಚಿಯು, ಕೃಷ್ಣನು, ಗೋಪನು, ದಾಮೋದರನು ಮೊದಲಾದವರೇ, ಬಾಹುಯುದ್ಧ ಗದಾಯುದ್ಧಗಳಲ್ಲಿ ನಿಪುಣರಾಗಿಯೂ, ಗಟ್ಟಿಗರಾಗಿಯೂ, ಬಹ್ಮಚಾರಿಗಳಾಗಿಯೂ, ಇರುವ ನೀವು ದೊಣ್ಣೆಗಳನ್ನು ತೆಗೆದು ಕೊಂಡು ಶೀಗ್ರದಲ್ಲಿ ಬನ್ನಿರಿ, ಗಾಡಿಗೆ ಕಟ್ಟಿರುವ ಎತ್ತುಗಳನ್ನು ಬಿಚ್ಚಿಹಾಕಿರಿ. ನೊಗಗಳನ್ನು ಚೂರುಮಾಡಿರಿ. ಧ್ವಜಪಟಗಳನ್ನು ಹರಿದುಹಾಕಿರಿ. ಚಾಮರಗಳನ್ನು ಮುರಿಯಿರಿ. ಎಂದು ಕೂಗಲೂ; ಬಿಬ್ಬ ಭಾಸ್ಕರಯ್ಯನು ಅವರ ದುರ್ವಾಕ್ಯಗಳಿಗೆ ಮಂದಹಾಸವನ್ನುಮಾಡಿ, ಕಯ್ಯಿಂದ ಪ್ರಸಾದವನ್ನು ತೆಗೆದುಕೊಂಡು ಆ ಅಗ್ರಹಾರದಮೇಲೆ ಎರಚಿದಕೂಡಲೇ ಪ್ರಜ್ವಲಿಸುತ್ತಿರುವ ಆ ಪ್ರಸಾದವೆಂಬ ಅಗ್ನಿಯು ಶಿವನ ಹಣೆಗಣ್ಣಿನ ಬೆಂಕಿಯು ತ್ರಿಪುರವನ್ನು ಆವರಿಸಿದ ಹಾಗೆ ಗ್ರಾಮವನ್ನು ಬಳಿಸಿಕೊಂಡಿತು. ಬೆಂಕಿಯಿಂದ ಸುಡಲ್ಪಡುತ್ತಿರುವ ಆ ಮನೆಗಳೆಲ್ಲವೂ ಹೊಗೆಯಿಂದ ವ್ಯಾಪಿಸಲ್ಪಡುತ್ತಿರಲಾಗಿ ಜನರು ಕಣ್ಣೀರಿನ ಪ್ರವಾಹದಿಂದ ವ್ಯಾಪ್ತವಾಗಿರುದ ನೇತ್ರಗಳಿಂದ ಕೂಡಿದವರಾ, ಹೊರಗೆಹೊರಟರು. ಸಕಲದಿಕ್ಕುಗಳೂ ಉರಿಗಳಿಂದ ವ್ಯಾಪಿಸಲ್ಪಡುತ್ತಿರಲಾಗಿ

ಆಕಾಶವು ಕಿಡಿಗಳಿಂದ ಮುಚ್ಚಲ್ಪಡುತ್ತಿರಲಾಗಿ; ಬೆಂಕಿಯು ಉರಿಯುತ್ತಿರಲಾಗಿ; ಸಕಲರೂ ದುಃಖದಿಂದ ಕೂಗಿದರು. ಬೆಂಕಿಯು ವೃದ್ಧಿಹೊಂದುತ್ತಿರಲಾಗಿ ಭಕ್ತರು ಪ್ರಳಯದಲ್ಲಿ ಲೋಕಗಳೆಲ್ಲವೂ ಬೇಯುತ್ತಿರುವಾಗ ಪ್ರಮಥರೋಪಾದಿಯಲ್ಲಿ ಕಿಲಕಿಲಧ್ವನಿಯನ್ನು ಮಾಡಿದರು. ಕೆಲವರು ಸುಡಲ್ಪಟ್ಟ ತಲೆಯಕೂದಲು ಮೀಸೆ ಗಡ್ಡಗಳುಳ್ಳವರಾಗಿ ಸುಡಲ್ಪಟ್ಟ ವಸ್ತ್ರಗಳುಳ್ಳವರಾದ್ದರಿಂದ ದಿಗಂಬರರಾಗಿ, ಜೈನದೀಕ್ಷೆಯನ್ನು ಅವಲಂಬಿಸಿದಹಾಗಾದರು. ಕೆಲವರು ದೇವಾಲಯಗಳನ್ನು ಸೇರಿದರು. ಕೆಲವರು ಭಕ್ತರ ಮನೆಗಳನ್ನು ಪ್ರವೇಶಿಸಿದರು. ಕೆಲವರು ಬಿಬ್ಬಭಾಸ್ಕರಯ್ಯನ ಹಿಂಭಾಗದಲ್ಲಿ ಬಂದು ನಿಂತರು. ಉರಿಯುತ್ತಿರುವ ಅಗ್ನಿಜ್ವಾಲೆಗಳ ಹತಿಗೊಳಗಾದ ಕೆಲವರು ಬಹಳವಾದ ಅಂತರ್ದಾಹ ವುಳ್ಳವರಾಗಿ ಕೊಳಗಳಲ್ಲಿಯೂ ಭಾವಿಗಳಲ್ಲಿಯೂ ಬಿದ್ದರು. ಕೆಲವರು ಅಗ್ನಿಯಿಂದಾವರಿಸಲ್ಪಟ್ಟ ಊರನ್ನು ನೋಡಿ, ಗ್ರಾಮವನ್ನು ಬಿಟ್ಟು ಹೊರಗೆ ಹೋದರು. ಕೆಲವರು ಒಬ್ಬರಿಗೊಬ್ಬರು ಕೊರಳನ್ನು ತಬ್ಬಿಕೊಂಡು, ಕುಗ್ಗಿದ ಧ್ವನಿಯಿಂದ ಅತ್ತರು. ಊರೆಲ್ಲಾ ಸುಟ್ಟು ಧನಧಾನ್ಯಗಳು ನಾಶವನ್ನೈದುತ್ತಿರಲು, ಆ ಬ್ರಾಹ್ಮಣರೆಲ್ಲರೂ ದುಃಖಪಟ್ಟವರಾಗಿ ಆ ಭಾಸ್ಕರಯ್ಯನನ್ನೇ ಮರೆಹೊಕ್ಕರು. ಎಲೈ ಪರಮಪವಿತ್ರನೇ, ಅಜ್ಞಾನಿಗಳೂ ಪುಣ್ಯಹೀನರೂ, ಲೋಕನಿಂದಿತರೂ ಪಾಪಸ್ವರೂಪರೂ ಆದ ನಮ್ಮನ್ನು ರಕ್ಷಿಸು; ಎಂದು ಹೇಳಿಕೊಂಡು ಪಾದಕ್ಕೆ ಬಿದ್ದ ಆ ದ್ವಿಜರನ್ನು ಬಿಬ್ಬಭಾಸ್ಕರಯ್ಯನು ಅನುಗ್ರಹಿಸಿ, ಆ ಪ್ರಸಾದವನ್ನು ತಿರಿಗಿ ಕೈಗೆ ಕರೆದನು. ಆ ಜಂಗಮಪ್ರಸಾದವು ಆತನ ಹಸ್ತವನ್ನು ಹೊಂದಿರಲು, ಗ್ರಾಮವು ಪೂರ್ವವಂತೆ ಆಯಿತು. ಮಹಾತ್ಮರ ಅನುಗ್ರಹವು ಆಶ್ಚರ್ಯವಾದದ್ದು. ಶಿವಭಕ್ತಿಯಿಲ್ಲದ ಬ್ರಾಹ್ಮಣನು ಚಂಡಾಲನಿಗಿಂತಲೂ ನೀಚನು. ಶಿವಭಕ್ತಿಯುಳ್ಳ ಚಂಡಾಲನು ಬ್ರಾಹ್ಮಣನಿಗಿಂತಲೂ ಅಧಿಕನು. ಶಿವನು ಸಹಭೋಜನವನ್ನು ಮಾಡಬೇಕೆಂಬ ಬುದ್ಧಿಯಿಂದ ತನ್ನ ಮನೆಗೆ ಬರಲು; ಚಿದ್ರೂಪನಾದ ಚನ್ನಯ್ಯನು, ನಾನು ಚಂಡಾಲನೆಂದುಹೇಳಿದನೇ?

---

## ಮಾದರದೊಡ್ಡಯ್ಯನ ಕಥೆ

ಪೂಜ್ಯನೂ, ಕೀರ್ತಿವಂತನೂ, ಆದ ಮಾದರದೊಡ್ಡಯ್ಯನೆಂಬ ಭಕ್ತನಿದ್ದನು. ಎಲೈ ರಾಯನೇ, ಪ್ರಸಿದ್ಧವಾದ ಅವನ ಮಹಿಮೆಯನ್ನು ಹೇಳುತ್ತೇನೆ. ಕೇಳು. ಕುಷ್ಠರೋಗಿಯಾದ ಒಬ್ಬ ಬ್ರಾಹ್ಮಣನು ರಾತ್ರಿಯಲ್ಲಿ ತನ್ನ ಹಸುವ

ಬಾರದಿರಲು, ಅದನ್ನು ಹುಡುಕುವವಕ್ಕಾಗಿ ಹೊರಟು, ಕತ್ತಲೆಯಿಂದ ದಾರಿ ಯನ್ನು ಕಾಣದೆ ಮಾದರದೊಡ್ಡಯ್ಯನ ಮನೆಯ ಸಮೀಪಕ್ಕೆ ಬಂದು, ಅವನು ಸ್ನಾನಮಾಡಿದ ನೀರಿನಿಂದ ತುಂಬಲ್ಪಟ್ಟ ಪ್ರದೇಶದಲ್ಲಿ ಪಾದವನ್ನಿಟ್ಟನು. ಅವನ ಪುಣ್ಯಪ್ರಭಾವದಿಂದ ಮೊಳಕಾಲಪರ್ಯಂತರ ಕೆಸರಾಯಿತು. ಬಳಿಕ ಆ ಬ್ರಾಹ್ಮ ಣನು ಖಿನ್ನನಾಗಿ ಹೋಗಿ, ನೀರಿನಿಂದ ಕೆಸರಾಗಿರುವ ಕಾಲನ್ನು ತೊಳದು ಕೊಂಡು ತನ್ನ ಮನೆಗೆ ಸೇರಿದನು. ಮಾರಣೇದಿನ ಹೊತಾರೆ ಸುವರ್ಣಮಯವಾ ಗಿರುವ ಪಾದವನ್ನು ನೋಡಿಕೊಂಡು ಬಹು ಆಶ್ಚರ್ಯಪಟ್ಟು ಕಳೆದ ರಾತ್ರಿಯಲ್ಲಿ ಯಾವಕಡೆ ಪಾದವನ್ನಿಟ್ಟನೋ ಅಲ್ಲಿಗೆ ತಿರಿಗಿ ಹೋಗಿ, ಆ ಮಾದರದೊಡ್ಡಯ್ಯನ ಪವಿತ್ರವಾದ ಸ್ನಾನತೀರ್ಥದಲ್ಲಿ ಮುಳಿಗಿದನು. ಕೂಡಲೇ ಅವನ ಪಾಪವೆಲ್ಲವೂ ನಿವಾರಣೆಯಾಗಿ ಅವನ ದೇಹವೆಲ್ಲಾ ಅವನ ಪಾದದಂತೆ ಸುವರ್ಣಮಯವಾ ಯಿತು. ಅವನ ಅಂಗವು ದುರ್ವರ್ಣತ್ವವನ್ನು ಬಿಟ್ಟು, ಸುವರ್ಣತ್ವವನ್ನು ಹೊಂದಿ ದ್ದರಿಂದ ದೊಡ್ಡಯ್ಯನ ಸ್ನಾನಜಲದಿಂದುಟಾದ ಕೆಸರು ಸ್ಪರ್ಶವೇಧಿಯೋ ಏನೋ ತಿಳಿಯದು. ಅನಂತರದಲ್ಲಿ ಆ ಬ್ರಾಹ್ಮಣನು ಹೋಗಿ ದೊಡ್ಡಯ್ಯನಿಗೆ ನಮಸ್ಕರಿಸಿ, ಆತನ ಪಾದಕಮಲಧೂಳಿಇಂದಪವಿತ್ರವಾದ ಶಿರಸ್ಸುಳ್ಳವನಾಗಿ, ದೊಡ್ಡಯ್ಯನಕ ರುಣದಿಂದ ಶಿವಜ್ಞಾನವನ್ನೈದಿದನು. ಆ ವೃತ್ತಾಂತವನ್ನು ಕೇಳಿ, ಅವನಂತೆ ಕುಷ್ಠರೋಗಿಗಳಾದ ಆ ಊರಿನ ಏಳುನೂರು ಬ್ರಾಹ್ಮಣರು, ಆ ಕೆಸರಿನ ಸ್ಪರ್ಶಮಾತ್ರದಿಂದ ಸುವರ್ಣಮಯವಾದ ದೇಹವನ್ನು ಪಡೆದರು.

---

## ಸಾಮವೇದಿಯ ಕಥೆ

ಇದಲ್ಲದೆ ಸಂಸಾರವನ್ನು ತ್ಯಜಿಸಿದ ಸಾಮವೇದಿಯೆಂಬ ಒಬ್ಬ ಬ್ರಾಹ್ಮ ಣೋತ್ತಮನಿದ್ದನು. ಅವನು ಒಂದಾನೊಂದುದಿನ ಆಕಾಶಮಾರ್ಗವನ್ನು ಹಿಡಿದು ಸ್ವೇಚ್ಛೆಯಿಂದ ಹೋಗುತ್ತಿರಲು; ಶಿವನಿಗೆ ನೈವೇದ್ಯಾನ್ನವನ್ನು ಮಾಡುತ್ತಿದ್ದ ಶ್ವಪಚಯ್ಯನು ಅಂತರಿಕ್ಷದಲ್ಲಿ ಸಂಚರಿಸುವ ವಸ್ತ್ರದ ನೆರಳಿನಿಂದ ಬಾಡದಿರುವ ಮುಖಕಮಲವುಳ್ಳ ಆ ಸಾಮವೇದಿಯನ್ನು ಕಂಡು, ಅವನ ದೃಷ್ಟಿಯು ಬೀಳಬಾರ ದೆಂದು ನೈವೇದ್ಯಪಾತ್ರೆಯ ಬಾಯನ್ನು ಕರದಿಂದ ಮುಚ್ಚಿದನು. ತಪಸ್ವಿಯಾದ ಸಾಮವೇದಿಯು ಅವನು ಮಾಡಿದ ಕೆಲಸವನ್ನು ಕಂಡು ಸೈರಿಸದೆ, ಈ ಸ್ವಪ ಚನು ಪಾಯಸವನ್ನು ಮಾಡುತ್ತಾ ನನ್ನನ್ನು ಕಂಡು, ಪಾತ್ರೆಯನ್ನು ಮುಚ್ಚಿದ

ನೆಂದು ಅಟ್ಟಹಾಸವನ್ನು ಮಾಡಲು; ಅವನ ಅಹಂಕಾರದಿಂದ ಆಕಾಶದಲ್ಲಿ ಸಂಚ ರಿಸುತ್ತಿದ್ದವಸ್ತ್ರವು ಭೂಮಿಗೆ ಬಿದ್ದಿತು. ನೆರಳನ್ನುಂಟುಮಾಡುತ್ತಿದ್ದ ವಸ್ತ್ರವು ಬೀಳಲು, ಸಾಮವೇದಿಯ ಮುಖವು ಕಾಂತಿಹೀನವಾಯಿತು. ಸಾಮವೇದಿಯು ಮನಸ್ಸಿನಲ್ಲಿ ಬಹಳ ಆಶ್ಚರ್ಯಪಟ್ಟು, ಗುರುಕರುಣಾಕಟಾಕ್ಷವು ಒದಗಿದ್ದರಿಂದ ಸಾಮವೇದವನ್ನು ಪಠಿಸುತ್ತಾ; ಆ ಶ್ವಪಚಯ್ಯನ ಪಾದಗಳಲ್ಲಿ ಮಸ್ತಕವನ್ನಿಟ್ಟು ಆತನನ್ನೇ ಮರೆಹೊಕ್ಕನು. ಆ ಗುರುಶ್ರೇಷ್ಠನು ನಮಸ್ಕರಿಸುತ್ತಿರುವ ಆ ಸಾಮ ವೇದಿಯನ್ನು ಶಿವದೃಷ್ಟಿಯಿಂದ ಅನುಗ್ರಹಿಸಿದನು. ಸಾಮವೇದಿಯು ಆತನ ದೃಷ್ಟಿಪ್ರಭಾವದಿಂದ ಶಿವಜ್ಞಾನಸಮುದ್ರನಾಗಿ ಆ ಜ್ಞಾನಸಂಪತ್ತಿನಿಂದ ಮೂವ ತ್ತಾರು ಊರಿನ ಜನಗಳನ್ನು ಶಿವಪುರಿಗೆ ತೆಗೆದುಕೊಂಡು ಹೋದನು. ಎಲೈ ಭೂಪತಿಯೇ ಈ ಮಾರ್ಗವು ಪುರಾತನ ಶಿದ್ಧವಾದದ್ದು, ಈಗವುಂಟಾದದ್ದಲ್ಲ. ಆದಕಾರಣ ಶಿವಾಚಾರಗಳಲ್ಲಿ ಆಸಕ್ತನಾದನು ಬ್ರಾಹ್ಮಣರಿಗಿಂತಲೂ ಉತ್ಕೃಷ್ಟನೆ ನಿಸಿಕೊಳ್ಳುತ್ತಾನೆ.

---

## ಉದ್ಭಟಯ್ಯನ ಕಥೆ

ಇದಲ್ಲದೆ, ಭೋಜರಾಜನಿಂದ ಆಳಲ್ಪಡುತ್ತಿದ್ದ ವಲ್ಲಕೀಪುರದಲ್ಲಿ ಜ್ಞಾನನಿಧಿ ಯಾದ ಉದ್ಭಟಯ್ಯನೆಂಬ ಶಿವಭಕ್ತನಿದ್ದನು. ಆತನು ಶ್ಲಾಘ್ಯಗಳಾಗಿಯೂ, ದುರ ವಗಾಹಗಳಾಗಿಯೂ ಇರುವ ವೇದಶಾಸ್ತ್ರಾರ್ಥಪ್ರಮಾಣಗಳಿಂದ ಪರವಾದಿಗಳನ್ನು ಜೈಸಿದ್ದನು. ಭೋಜರಾಜನು ಭಾಗ್ಯವಂತರಿಗೆ ಸಿಕ್ಕತಕ್ಕದ್ದಾಗಿಯೂ, ನಿರ್ಭಾಗ್ಯರಿ ಗೆ ದುರ್ಲಭವಾದದ್ದಾಗಿಯೂ ಇರುವ ಆ ಉದ್ಭಟಯ್ಯನ ಪಾದಸೇವೆಯಿಂದ ಸರ್ವ ಜ್ಞತ್ವವನ್ನು ಪಡೆದಿದ್ದನು ಆತನು ಶಿವಭಕ್ತೆಯಾದ ಜೊಮ್ಮವ್ವೆಯನ್ನು ಮದುವೆ ಮಾಡಿಕೊಂಡು, ಆಕೆಯ ಸುರತಸುಖಾಮೃತದಲ್ಲಿ ಆಸಕ್ತನಾಗಿ, ಬಹುಕಾಲ ಪಟ್ಟಣದಲ್ಲಿ ವಾಸಮಾಡುತ್ತಿದ್ದನು. ಒಂದಾನೊಂದು ದಿನ, ಅವನತೇಜಸ್ಸನ್ನು ಸಹಿ ಸದಿರುವ ಕೆಲವರು ನಿನ್ನಗುರುವು ಚಂಡಾಲಸ್ತ್ರೀಯರಲ್ಲಿ ಆಸಕ್ತನಾಗಿದ್ದಾನೆಂದು ರಾಯನಿಗೆ ತಿಳಿಸಿದರು. ರಾಯನು ಚಾಡಿಕಾರರ ಮಾತನ್ನು ಕೇಳಿ, ಮೆಚ್ಚದೆ ಹೋದನು. ಅವರು ಆ ರಾಯನ ಗುರುಭಕ್ತಿಯನ್ನು ನೋಡಿ, ನಾಚಿಕೆಪಟ್ಟರು. ಮನ್ಮಥಧ್ವಂಸಿಯಾದಶಿವನು ತನ್ನ ಭಕ್ತನಾದ ಉದ್ಭಟನಮಹಿಮೆಯನ್ನು ಪ್ರಕಾ ಶಪಡಿಸಬೇಕೆಂಬ ಇಚ್ಛೆಯಿಂದ ಆತನನ್ನು ಕೈಲಾಸಕ್ಕೊಯ್ದನು. ಅವನ ದೇಹ

ವನ್ನು ದಹಿಸಿದ ಭೂಮಿಯಲ್ಲಿ ಹುಟ್ಟಿದ ವಟವೃಕ್ಷವನ್ನಾಶ್ರೈಸಿಕೊಂಡಿದ್ದ ಅನೇಕಪಿಶಾಚಗಳು ಆತನ ದೇಹದ ಹೊಗೆಯು ತಗಲಿ ಶಾಪದಿಂದ ಬಿಡುಗಡೆಯನ್ನು ಹೊಂದಿದವು, ಅದೇದಿನ ಪ್ರಾತಃಕಾಲದಲ್ಲಿ ಒಂದು ಪಿಶಾಚವು ಆಹಾರಾರ್ಥವಾಗಿ ಹೋರಟು, ತಿರಿಗಿಸಾಯಂಕಾಲಕ್ಕೆ ಬಂದು ತನ್ನ ಜೊತೆಯವರನ್ನು ಕಾಣದೆ, ಬಹಳಹೊತ್ತು ಗಟ್ಟಿಯಾಗಿರೋದನವನ್ನು ಮಾಡಿತು. ಆ ರೋದನಧ್ವನಿಯಿಂದ ಆ ಭೂಮಿಯಲ್ಲಾ ನಡುಗಿಹೋಯಿತು, ಆ ಪಟ್ಟಣದಲ್ಲಿ ಆನೆಗಳು ಕುದುರೆಗಳು ಮನುಷ್ಯರು ಮೂರ್ಛಿತರಾದರು. ಅನಂತರದಲ್ಲಿ ಭೋಜರಾಯನು ಪಟ್ಟಣದ ಜನರು, ಅಮಾತ್ಯರು, ಪುರೋಹಿತರು ಇವರೊಡನೆ ಬಂದು ಆ ರೋದನಕ್ಕೆ ನಿಮಿತ್ತವನ್ನೂ ಅದಕ್ಕೆ ಪರಿಹಾವನ್ನೂ ಕೇಳಿದನು. ಅನಂತರ ಆ ಪಿಶಾಚನು ರಾಯನನ್ನು ಕುರಿತು;—ಎಲೈ ರಾಜನೇ, ಈ ಕಥೆಯನ್ನುಕೇಳು; ಕೇಳಿ ಉಪಕಾರವನ್ನು ಮಾಡಿದರೆ ನಿನಗೆ ಪುಣ್ಯವುಒರುವದು. ಪೂರ್ವದಲ್ಲಿ ಕೈಲಾಸಪರ್ವತದ ಸಮೀಪದಲ್ಲಿ ಮಂದೋದವೆಂಬ ಸರೋವರದಲ್ಲಿ ಮಾರ್ಕಂಡೇಯನೆಂಬ ದರ್ಮಾತ್ಮನಾದೊಬ್ಬಮುನಿಯು ತಪಸ್ಸನ್ನು ಮಾಡುತ್ತಿದ್ದನು. ಶಿವಸಭೆಯಲ್ಲಿ ಹಾಡತಕ್ಕ ಗಂದರ್ವರು ದಿಗಂಬರರಾಗಿ, ಕಮಲಗಳನ್ನು ಕಿತ್ತು ಸೀರನ್ನೆಲ್ಲಾ ಕಲಕಿ ಆ ಸರೋವರದಲ್ಲಿವಿಹರಿಸಿದರು. ಬೆತ್ತಲೆಯಾಗಿದ್ದ ಆ ಏಳುನೂರು ಗಂಧರ್ವರನ್ನು ನೋಡಿ ಮಾರ್ಕಂಡೇಯಮುನಿಯು, ಹುಬ್ಬುಗಳನ್ನು ಗಂಟುಹಾಕಿಕೊಂಡು ಭಯಂಕರನಾಗಿ;—ಎಲಾ ದುಷ್ಟರಿರಾ, ಶಿವಾರ್ಚನೆಗೆ ಯೋಗ್ಯವಾದ ಕಮಲಗಳುಳ್ಳದ್ದಾಗಿಯೂ, ಸ್ನಾನಯೋಗ್ಯವಾದ ಜಲವುಳ್ಳದ್ದಾಗಿಯೂ; ಇರುವ ಸರೋವರವನ್ನು ಯಾವಕಾರಣದಿಂದ ಕಲಕಿದರೋ ಆ ಕಾರಣದಿಂದ ಪಿಶಾಚತ್ವವನ್ನು ಪಡೆಯಿರಿ, ಎಂದು ಶಾಪವಂ ಕೊಟ್ಟನು. ಆ ಶಾಪದಿಂದ ಅವರೆಲ್ಲರೂ ಭಯಪಟ್ಟು, ಮುನಿಯಚರಣಗಳಿಗೆರಗಿ ಸ್ವಲ್ಪ ದಿವಸಗಳೊಳಗಾಗಿ ಶಾಪವಿಮೋಚನವಾಗಬೇಕೆಂದು ಕೇಳಿಕೊಂಡರು;—ಎಲಾಗಂಧರ್ವರೇ ಉದ್ಭಟಯ್ಯನೆಂಬ ಒಬ್ಬ ಶಿವಭಕ್ತನು ಹುಟ್ಟುತ್ತಾನೆ. ಅವನು ಧೂರ್ತರಾದ; ಅನೇಕವಾದಿಗಳೆಂಬ ಆನೆಗಳಮದವನ್ನು ಇಳಿಸಿದವನಾಗಿ, ಶಿವಾಚಾರಗಳರಹಸ್ಯಾರ್ಥದಲ್ಲಿ ವಿಹರಿಸುವದರಿಂದ ಕೃತಾರ್ಥನಾಗಿ, ಬಹುಕಾಲ ಭೂಮಿಯಲ್ಲಿ ವಿಹರಿಸುತ್ತಿದ್ದು ಮೃತನಾಗುವನು. ಅವನದೇಹದಹನದಲ್ಲಿ ಉಂಟಾದ ಹೊಗೆಯು ಸೋಕಿದರೆ ನಿನಗೆ ಶಾಪವಿಮೋಚನವಾಗುವದೆಂದು ಹೇಳಿ, ಸುಮ್ಮನಾದನು. ಒಳಿಕ ನಾವು ಪಿಶಾಚತ್ವ

ವನ್ನು ಹೊಂದಿ ಈ ವಟವೃಕ್ಷದಲ್ಲಿ ವಾಸಮಾಡುತ್ತಾ, ಹಸಿವಿನಿಂದ ಹನ್ನೆರಡು ಸಹಸ್ರವರ್ಷಗಳನ್ನು ಕಳೆದೆವು. ಅವರೊಳಗೆ ನಾನೊಬ್ಬನು, ಈ ದಿವಸ ಹೊತಾರೆ ಆಹಾರಾರ್ಥವಾಗಿ ಹೋಗಿದ್ದನು, ನಾನು ಬರುವದಕ್ಕಿಂತ ಮುಂಚಿತವಾಗಿಯೇ ಅವರು ಕೃತಾರ್ಥರಾಗಿ ಹೋದವರಲ್ಲವೇ? ಆ ಹೊಗೆಯ ಸ್ಪರ್ಶಕ್ಕೆ ದೂರನಾದ ನನಗೆ ಪಿಶಾಚತ್ವವು ಹೋಗಲಿಲ್ಲ. ಆದ್ದರಿಂದ ಅಳುತ್ತೇನೆ. ನಿನ್ನ ದಯೆಉಂಟಾದರೆ, ನನ್ನ ಶಾಪವಿಮೋಚನೆಯಾಗುವದು ಈಗ ಚಿತಾಜ್ಞೆಗೆ ಸೌದೆಗಳನ್ನು ಹಾಕಿದರೆ, ಹೊಗೆಏಳುವುದು ಇದು ನನಗೆ ತಗಲಿದರೆ, ಶೀಘ್ರದಲ್ಲಿ ನನ್ನ ಪಾಪ ನಿವೃತ್ತಿಯಾಗುವದು. ಆಗ ನಾನು ಈ ಪಿಶಾಚತ್ವವನ್ನು ಬಿಟ್ಟು, ಈ ವಟವೃಕ್ಷವನ್ನು ಬುಡಸಹಿತವಾಗಿ, ಕಿತ್ತುಕೊಂಡು ಕೈಲಾಸಕ್ಕೆ ಹೋಗುತ್ತೇನೆ ಎನಲು; ರಾಜನು ಅದರಮಾತನ್ನು ಕೇಳಿ, ತನ್ನ ಸೇವಕರನ್ನು ಕರೆದು:—ಚಿತಿಯಕೆಂಡಗಳಮೇಲೆ ಸೌದೆಗಳನ್ನು ಯಿರಿಸಿರಿ ಎಂದು ಆಜ್ಞಾಪಿಸಿದನು. ಭೃತ್ಯರು ಹಾಗೆಯೇಮಾಡಲು, ರಾಯನು ಸೇವಕ, ಪಟ್ಟಣ ಜನ, ಪುರೋಹಿತ, ಮಂತ್ರಿ, ದಳವಾಯಿ, ಕಾಳಾಳು, ಇವರೊಡನೆ ಆ ವಟವೃಕ್ಷವನ್ನು ಹತ್ತಿದನು. ಆ ಚಿತೆಯ ಬೆಂಕಿಯ ಮಧ್ಯದಿಂದ ಎದ್ದಹೊಗೆಯು ಸೋಂಕಿದಮಾತ್ರದಿಂದ ಗಂಧರ್ವನು ಪಿಶಾಚಭಾವವನ್ನು ಬಿಟ್ಟು, ಪೂರ್ವರೂಪವನ್ನೈದಿದನು. ಆಗಮುಕ್ತಾಹರಾ, ವಜ್ರದ ಪದಕ, ರತ್ನ ಕುಂಡಲ ಇವುಗಳಿಂದ ಅಲಂಕರಿಸಲ್ಪಟ್ಟವನಾಗಿಯೂ, ಹೊಳೆಯುತ್ತಿರುವ ಸುಂದರವಾದ ದೇಹವುಳ್ಳವನಾಗಿಯೂ ಕಾಣಿಸಿಕೊಂಡನು. ಶಾಪವಿಮೋಚನದಿಂದ ಪೂರ್ವರೂಪವನ್ನು ಹೊಂದಿದ್ದರಿಂದುಂಟಾದ ಸಂತೋಷದಿಂದ ಬಲಿಷ್ಠನಾಗಿ ಆ ವಟವೃಕ್ಷವನ್ನು ಬುಡಸಹಿತವಾಗಿ ಕಿತ್ತನು. ಎಲ್ಲರೂ ವಟವೃಕ್ಷವನ್ನು ಹತ್ತಿಕೊಂಡು, ಉಘೇಎಂದು ಗಟ್ಟಿಯಾಗಿ ಕೂಗುತ್ತಿರಲು; ಅಖಂಡವಾದ ಆನಂದವುಳ್ಳ ಗಂಧರ್ವನು ನಿಮಿಷದಲ್ಲಿ ಕೈಲಾಸವನ್ನೈದಿದನು.

---

## ಡೋಹರ ಕಕ್ಕೈಯನ ಕಥೆ.

ಪೂರ್ವದಲ್ಲಿ ಶಿವದ್ವೇಶಿಗಳ ಬಲವನ್ನು ಧಿಕ್ಕರಿಸುವವನಾಗಿಯೂ, ಶಿವಸಿಗಿಂತಲೂ, ಮತ್ತೊಬ್ಬನನ್ನು ಕಾಣದವನಾಗಿಯೂ, ಇರುವ ಡೋಹರಕಕ್ಕಯ್ಯನೆಂಬ ಭಕ್ತನಿದ್ದನು. ಅವನು ವಂಚಕನಾದ ಪೌರಾಣಿಕನ ಮಾತನ್ನು ಕೇಳಿ, ಕೋಪೋ

ದ್ವೀಪಿತನಾಗಿ ಅವನ ಶಿರಸ್ಸನ್ನು ಛೇದಿಸಿದನು. ಹ್ಯಾಗಂದರೆ; ಈ ಪೌರಾಣಿಕನು ಚಕ್ರಾಯುಧದಿಂದ ಶತ್ರುಗಳನ್ನು ಸಂಹರಿಸಿದ ವಿಷ್ಣುವಿನ ವೈಭವವನ್ನು ಹೇಳುವನು. ಹರಿಯು ಶಿವನನ್ನು ಸಹಸ್ರ ಕಮಲಗಳಿಂದ ಪೂಜಿಸುತ್ತಾ, ಒಂದು ಕಮಲವು ಕಡಿಮೆಯಾದಲ್ಲಿ ತನ್ನ ನೇತ್ರವನ್ನು ಕೊಟ್ಟು ಮೆಚ್ಚಿಸಿ, ಶಿವನಿಂದ ಆ ಚಕ್ರವನ್ನು ಪಡೆದದ್ದನ್ನು ಹೇಳುವದಿಲ್ಲ.

ಶಿವನು ಬ್ರಹ್ಮ ಶಿರಃ ಕಪಾಲ ಕ್ಕೆಬಲಿಯನ್ನು ಯಾಚಿಸಿದನೆಂದು ಹೇಳುವನು. ತ್ರಿವಿಕ್ರಮಾವತಾರಿಯಾದ ವಿಷ್ಣುವನ್ನು ಕೊಂದು ಅವನ ದೇಹದ ಎಲುವಿನ ಪಂಜರವನ್ನು ಹಿಡಿದುಕೊಂಡನೆಂದು ಹೇಳುವದಿಲ್ಲ. ನರಸಿಂಹನು ಹಿರಣ್ಯಕಶಿಪುವನ್ನು ಕೊಂದನೆಂದು ಹೇಳುವನು. ಶರಭಾವತಾರನಾದ ವೀರಭದ್ರನು ನರಸಿಂಹನನ್ನು ಹೊಡದ ನೆಂಬುವದನ್ನು ಹೇಳುವದಿಲ್ಲ. ಇವನು ಗರ್ವದಿಂದ ಪ್ರಪಂಚವೆಲ್ಲಾ ವಿಷ್ಣುಮಯುವೆಂದು ಹೇಳುತ್ತಾನೆ ಪ್ರಳಯದಲ್ಲಿ ಶಿವನು ಅವನನ್ನ ಅನಾಯಾಸದಿಂದ ಸಂಹರಿಸಿದನು. ಎಂದು ಹೇಳುವದಿಲ್ಲ; ವ್ಯಾಸಮುನಿಯು ನದೇವಃ ಕೇಶವಾತ್ಪರಂ, ಎಂದು ಪ್ರತಿಜ್ಞೆಯನ್ನು ಮಾಡಿ ಕಯ್ಯೆತ್ತಿದನೆಂದು ಹೇಳುತ್ತಾನೆ. ನಂದೀಶನಿಂದ ಅವನ ಹಸ್ತವು ಸ್ತಬ್ಧವಾಯಿತೆಂದು ಎಂದಿಗೂ ಹೇಳುವದಿಲ್ಲ. ಲೋಕಗಳಿಗೆಲ್ಲಾ ವಿಷ್ಣುವೇ ಕರ್ತನೆಂದು ಬಹುಗೌರವದಿಂದ ಹೇಳುತ್ತಾನೆ. ಮಮಕರ್ತಾಮಹೇಶ್ವರಃ ಎಂದು ವಿಷ್ಣುವಚನವಿರುವದರಿಂದ ವಿಷ್ಣುವಿಗೆ ಶಿವನು ಪತಿಯೆಂಬುವದನ್ನು ಹೇಳುವದಿಲ್ಲ. ಈ ದುರಾಶಯನ್ನು ಮತ್ತು ಹರಿಯೇ ಪರಶಕ್ತಿಯೆಂದು ಗರ್ವದಿಂದ ಧಾರಾಳವಾಗಿ ಹೇಳುತ್ತಾನೆ. ಆಶಕ್ತಿಗೆ ಶಿವನು ಪತಿಯೆಂದು ಯಾವಾಗಲೂ ಹೇಳುವದಿಲ್ಲ; ಈ ದುರಾಯನು ಹರಿಹರಶಬ್ದದಲ್ಲಿರುವ ಅರ್ಥವನ್ನು ದ್ವಂದ್ವಸಮಾಸದಿಂದ ಹೇಳುತ್ತಾನಲ್ಲದೆ ತತ್ಪುರುಷ ಸಮಾಸದಿಂದುಂಟಾದ ಅರ್ಥವನ್ನು ಹೇಳುವದಿಲ್ಲ. ಎಂದರೆ ಹರಿಹರ ಎಂಬಮಾತಿಗೆ ವಿಷ್ಣುವೂ ಶಿವನೂ ಎಂದು ಅರ್ಥಮಾಡುವನೇ ಹೊರತು ‹‹ ಹರಿಂ ಹರಂತಮನುಯಾಂತಿದಮಃ '' ಎಂಬ ಶ್ರುತಿಪ್ರಮಾಣಾನುಸಾರವಾಗಿ ವಿಷ್ಣುವನ್ನು ಕೊಂದವನು ಎಂಬ ಅರ್ಥವನ್ನು ಹೇಳುವದಿಲ್ಲ ಎಂದು ತಾತ್ಪರ್ಯವು. ಈ ದುರ್ಬುದ್ಧಿಯು ಪೌರಾಣಿಕನಾಗಿ ಪುರಾಣರ್ಥವನ್ನು ಬೇರೆವಿಧವಾಗಿ ಮಾಡಿ ಹೇಳುತ್ತಾನೆ, ಇವನನ್ನು ಕೊಲ್ಲುವದಕ್ಕೆ ಇದೇ ಸಮಯುವೆಂದು ಮನಸ್ಸಿನಲ್ಲಿ ನಿಶ್ಚೈಸಿ, ಒಂದು ದೊಣ್ಣೆಯಿಂದ ಆ ಪೌರಾಣಿಕನ ಎದೆಯನ್ನು ಹೊಡೆದನು. ಪೂರ್ವದಲ್ಲಿ

ಬಲರಾಮನು ಕೊಬ್ಬಿದ ಸೂತನನ್ನು ನೇಗಿಲಿನಿಂದ ಸೀಳಿದಂತೆ ಆ ಶರಣನು ಕೋಪಿಷ್ಠನಾಗಿ ಆವನಹೊಟ್ಟೆಯನ್ನು ಸೀಳಿದನು. ಆ ನೀಚಬ್ರಾಹ್ಮಣನ ದೇಹವು ಆಕ್ಷಣದಲ್ಲಿಯೇ ಹುಳುಗಳಿಂದ ಭರಿತವಾಗಿತ್ತು. ಎಲೈ, ರಾಯನೇ ಈ ಸಂಗತಿಯನ್ನು ನಿನ್ನ ಪಟ್ಟಣದಲ್ಲಿರುವ ವಿಪ್ರರು ತಿಳಿಯರೇ ? ಹೀಗಿರುವಲ್ಲಿ ಕಕ್ಕಯ್ಯನನ್ನು ಚಂಡಾಲನೆಂದು ಹ್ಯಾಗೆ ಹೇಳುವದಕ್ಕಾದೀತು ?

ಬಿಬ್ಬ ಬಾಸ್ಕರಯ್ಯ ಸಾಮವೇದಿ ಮಾದರದೂಡಯ್ಯ ಶಿವಶರಣರ ಕಥೆಗಳನ್ನು ಯಾವನು ಭಕ್ತಿಯಿಂದ ಪ್ರಾತಃಕಾಲದಲ್ಲಿ ಚಿಂತನೆ ಗೈಯ್ಯುವನೋ ಅವನು ಕೀರ್ತಿ ಸಹಿತವಾದ ಐಶ್ವರ್ಯವನ್ನು ಪಡೆಯುತ್ತಾನೆ.

ಬಸವೇಶವಿಜಯದಲ್ಲಿ ನಲವತ್ತನೇಯ ಅಧ್ಯಾಯವು
ಸಂಪೂರ್ಣವು.

## ನೆಲವತ್ತೊಂದನೇ ಅಧ್ಯಾಯವು.

### ಭೋಗಯ್ಯರಾದಿ ಕಥೆ.

ಎಲೈ ರಾಯನೇ, ಕೆಂಬಾವಿಯೆಂಬ ಪಟ್ಟಣದಲ್ಲಿ ಬಹು ಯಶಸ್ಸಿನಿಂದ ಕೂಡಿದವನೂ ಭೂಮಿಯಲ್ಲಿ ಪ್ರಸಿದ್ಧನೂ ಆದ ಕೆಂಬಾವಿಭೋಗಯ್ಯನೆಂಬ ಶಿವಭಕ್ತಶಿರೋಮಣಿಯು ಜಂಗಮಪೂಜೆಯಲ್ಲಿ ಆಸಕ್ತವಾದ ಬುದ್ಧಿಯುಳ್ಳವನಾಗಿದ್ದನು. ಒಂದಾನೊಂದು ಕಾಲದಲ್ಲಿ ಆ ಭಕ್ತನ ಮಹಿಮೆಯನ್ನು ಲೋಕದಲ್ಲಿ ಪ್ರಕಾಶಪಡಿಸಬೇಕೆಂದು ಪರಶಿವನು ವಿಭೂತಿರುದ್ರಾಕ್ಷಿಗಳನ್ನು ಧರಿಸಿದವನಾಗಿ ಆ ಭಕ್ತನಿಗೆ ಕಾಣಿಸಿಕೊಂಡನು. ನಿರ್ಮಲಾಂತಃಕರಣನಾದ ಆ ಭೋಗಯ್ಯನು ಚಂಡಾಲ ಜಾತಿಗೆ ಯೋಗ್ಯವಾದ ಆಚಾರಗಳನ್ನೂ ಭಾಷೆಯನ್ನೂ ಹೊಂದಿರುವ ಆ ಶಿವಮೂರ್ತಿಗೆ ನಮಸ್ಕರಿಸಿದನು. ಆಗ ಶಿವನು ನಮಸ್ಕರಿಸುತ್ತಿರುವ ಆ ಭಕ್ತನನ್ನು ಪ್ರಾರ್ಥಿಸಿಕೊಳ್ಳುವವನಂತೆ ಒಂದು ಮಾತನ್ನಾಡಿದನು. ಏನಂದರೆ;—

ಅಯ್ಯಾ ಭಿಕ್ಷನೇ, ಸತ್ತ ಕರುವಿನ ಮಾಂಸವನ್ನು, ದೇವರಿಗೆ ಅರ್ಪಿಸುವದು ನನ್ನ ವ್ರತವು; ಎಂಬುವದೇ. ಆ ಭೋಗಯ್ಯನು ಆ ಮಾತನ್ನು ಕೇಳಿ, ಅವನು ತಂದಿದ್ದ ಸತ್ತ ಕರುವನ್ನು ಅವನ ಹೆಗಲ ಮೇಲಣಿಂದ ತೆಗೆದು ತನ್ನ ಹೆಗಲಿನಲ್ಲಿ ಹೊತ್ತುಕೊಂಡು ತನ್ನ ಮನೆಗೆ ತಂದು, ಅವನ ಪಾದಪೂಜೆಯನ್ನು ಕ್ರಮವಾಗಿ ಮಾಡಿದನು. ಬಳಿಕ ಚಂಡಾಲವೇಷದ ಶಿವನು ಭೋಗಯ್ಯನನ್ನು ಕುರಿತು;— ನೆನ್ನೇದಿನ ನಾನು ಜೇಡರದಾಸಯ್ಯನಿಗೆ ಈ ಕರುವನ್ನು ಬೇಯಿಸಿ ನನಗೆ ಕೊಡೆಂದು ಪ್ರಾರ್ಥಿಸಲು; ಅವನು ನನ್ನ ಹೆಂಡತಿಯನ್ನು ಕೇಳಿ ಬರುತ್ತೇನೆಂದು ಹೇಳಿ ಹೋದವನು ಇನ್ನೂ ಬಾರಲಿಲ್ಲ. ನೀನು ಇದನ್ನು ಪಾಕಮಾಡಿಕೊಡು ಎಂದು ಹೇಳಲು; ಭೋಗಯ್ಯನು ಹಾಗೇ ಆಗಲಿ ಎಂದು ಒಪ್ಪಿ, ಅನೇಕ ಪರಿಕರಗಳೊಡನೆ ಅದನ್ನು ಪಾಕಮಾಡಿದನು. ಅವನು ಪಾಕಮಾಡುವ ಸಮಯದಲ್ಲಿ ಉಂಟಾದ ಪರಿಮಳವು ಆ ಮಹಾತ್ಮನಿಗೆ ಸಂತೋಷವನ್ನುಂಟುಮಾಡಿತು ಆ ಊರಿನಲ್ಲಿ ವಾಸಿಸುತ್ತಿದ್ದ ಜನಗಳೆಲ್ಲರೂ ಆ ಕೃತ್ಯವನ್ನು ನೋಡಿ, ಬಹು ಕೋಪಗೊಂಡವರಾಗಿ ಸೌದೆ, ಹಿಂಟೆ, ಕಲ್ಲು ಮೊದಲಾದವುಗಳನ್ನು ಕೈಲಿ ಹಿಡಿದುಕೊಂಡು, ಅವನ ಮನೆಯ ಬಾಗಿಲಲ್ಲಿ ಮುತ್ತಿಗೆಹಾಕಿ ನಿಂತುಕೊಂಡು ಕದವನ್ನು ಒಡೆಯಿರಿ. ಮನೆಯನ್ನು ಮುರಿಯಿರಿ, ಇವನನ್ನು ಬಡಿಯಿರಿ, ಚಂಡಾಲನನು ಪೂಜಿಸುವದರಲ್ಲಿ ಆಸಕ್ತನಾಗಿ ಬ್ರಾಹ್ಮಣರ ಊರನ್ನೇ ಕೆಡಿಸಿದನು. ಎಂದು ಹೇಳುತ್ತಿರಲು; ಸ್ವಾಮಿಯು ಅದೃಶ್ಯನಾದನು. ಭೋಗಯ್ಯನು ಆ ದುರ್ಜನಗಳನ್ನು ಕೇಳಿ, ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಭಕ್ತರನ್ನು ದೂಷಿಸುವ ಬ್ರಾಹ್ಮಣರನ್ನು ಕುರಿತು;-ಎಲೈ ದ್ವಿಜರಿರಾ, ನನ್ನ ಮನೆಯು ನಿಮ್ಮಿಂದ ಪ್ರವೇಶಿಸಲ್ಪಡುವದಕ್ಕೆ ಯೋಗ್ಯವಲ್ಲ. ಶಿವಭಕ್ತನಪ್ರವೇಶಕ್ಕೆ ಯೊಗ್ಯವಾದದನ್ನು ಚಂಡಾಲನು ಹ್ಯಾಗೆ ಪ್ರವೇಶಿಸ್ಯಾನು ? ನೀವು ಭಕ್ತರನ್ನು ದೂಷಿಸುವದಾದರೆ ನಿಂಮ್ಮ ಗ್ರಾಮವು ಸುಖವಾಗಿರಲಿ; ನಾವು ನಂಮ್ಮ ಸ್ವಾಮಿಯೊಡನೆ ಈ ಊರನ್ನು ಬಿಟ್ಟು ಹೋಗುತ್ತೇವೆಂದು ಹೇಳಿ ಹೊರಟುಹೋದನು. ಭೋಗಯ್ಯನು ಹೊರಟ ಕೂಡಲೇ ಕೆಲವು ಲಿಂಗಗಳು ಕದಗಳನ್ನೂ ಕೆಲವು ಲಿಂಗಗಳು ಗೋಪುರಗಳನ್ನೂ, ಕೆಲವು ಲಿಂಗಗಳು ಗುಡಿಗಳನ್ನೂ ಒಡೆದುಕೊಂಡು ಹೊರಟವು, ಕೆಲವು ದಕ್ಷಿಣ ದಿಕ್ಕಿನ ಬಾಗಿಲಿನಿಂದ ಹೊರಟವು. ಹೀಗೆ ಮನೆಯಲ್ಲಿಯೂ, ಗುಡಿಯಲ್ಲಿಯೂ, ಇರುವ ಲಿಂಗಗಳು ಹೊರಟು, ಊರುಹೊರಗೆ ಒಂದು ಹರಿದಾರಿದೂರದಲ್ಲಿದ್ದ

ಶಿವನಅಪ್ಪಣೆಯಿಂದ ಆಕೆಯನ್ನು ದೂಷಿಸಿದ ದ್ವಿಜರನ್ನು ಕಾಲಿಸಿಂದ ತಲೆಯುವ ರೆಗೂ ವ್ಯಾಪಿಸಿ ಲೋಕದಲ್ಲಿ ಈಗಲೂ ಶಾಶ್ವತವಾಗಿರುವದು. ಆದಕಾರಣದಿಂದ ಎಲೈ ರಾಯನೇ ಭಕ್ತರಲ್ಲಿ ಕುಲವನ್ನೂ ಆಚಾರವನ್ನೂ ವಿಚಾರಮಾಡಬಾರದು. ಕಲ್ಲು ಎಲ್ಲಿತನಕ ಲಿಂಗಾಕೃತಿಯಾಗುವದಿಲ್ಲವೋ ಅಲ್ಲಿತನಕ ಕಲ್ಲೆನಿಸಿಕೊಳ್ಳುತ್ತದೆ. ಹಾಗೆಯೇ ವನುಷ್ಯನು ಶಿವಸಂಸ್ಕಾರವನ್ನು ಹೊಂದುವ ತನಕ ಮನುಷ್ಯನೇ. ಶಿವಸಂಸ್ಕಾರವನ್ನು ಹೊಂದಿದಮೇಲೆ ಶಿವನೇ. ಭ್ರಮರದಿಂದ ಅವಲಂಬಿಸಲ್ಪಟ್ಟ ಹುಳುವಿನಲ್ಲಿ ಹುಳುವಿನ ಭಾವವು ಹ್ಯಾಗೆ ಹೋಗುತ್ತದೋ ಹಾಗೆಯೇ ಶಿವನಿಂದಿ ಪ್ರೀತಿಸಲ್ಪಟ್ಟವನಲ್ಲಿ ಪೂರ್ವ ಭಾವನೆಯಿಲ್ಲ. ನದಿಗಳು ಸಮುದ್ರವನ್ನು ಸೇರಿ ಸಮು ದ್ರರೂಪವನ್ನೇ ಹೊಂದುತ್ತವೆಯಲ್ಲವೇ? ಹಾಗೆಯೇ ಮನುಷ್ಯನು ಗುರುವಿನ ಕೈಸೋಂಕಿನಿಂದ ಗುರುಸ್ವರೂಪನೇ ಆಗುತ್ತಾನೆ. ಮಹಾ ಮೇರುವನ್ನು ಹೊಂ ದಿದ ಕಾಗೆಯು ಸುವರ್ಣಮಯವಾದ ದೇಹವುಳ್ಳದ್ದೇ ಆಗುತ್ತದಷ್ಟೆ! ಹಾಗೆಯೇ ಶಿವನನ್ನು ಆಶ್ರೈಸಿದ ಮನುಷ್ಯನು ಶಿವಸ್ವರೂಪನೇ ಆಗುತ್ತಾನೆ. ಕೊಳೆಯಾದ ಬಟ್ಟೆಯಲ್ಲಿ ಕಟ್ಟಿದ ರತ್ನವು ಹೀನವಾಗುವದಿಲ್ಲ, ಹಾಗೆ ಭಕ್ತನು ದುರ್ಜಾನ ತಿಯಿಂದ ಮುಚ್ಚಲ್ಪಟ್ಟವನಾಗಿದ್ದರೂ ಪರಮಪವಿತ್ರನು. ಕಲ್ಲಿನಲ್ಲಿ ಚಿನ್ನವೂ. ಮರದಲ್ಲಿ ಬೆಂಕಿಯೂ, ಕೆಸರಿನ ಸ್ಥಲದಲ್ಲಿ ತಾವರೆಯೂ ಹುಟ್ಟಿದಾಗ್ಯೂ ಹ್ಯಾಗೆ ಉತ್ಕೃಷ್ಟವೆನಿಸುವದೋ ಭಕ್ತನು ನೀಚಕುಲದಲ್ಲಿ ಹುಟ್ಟಿದಾಗ್ಯೂ ಉತ್ಕೃಷ್ಟ ನೇಸರಿ. ಸಕಲ ಲೋಕಗಳಿಗೂ ಪಾರ್ವತಿಯೆ ತಾಯಿ, ಶಿವನೇ ತಂದೆಯು ಆದ ಕಾರಣದಿಂದ; ವಿಚಾರಮಾಡಿದರೆ ಒಬ್ಬತಾಯಲ್ಲಿ ಹುಟ್ಟಿದವರಿಗೆ ಜಾತಿಭೇದವು ಹ್ಯಾಗೆ. ತಾನೇಉಂಟಾದೀತು ? ಕಬ್ಬಿಲಗಿತ್ತಿಯಮಗನಾದ ವ್ಯಾಸನು ಬ್ರಾಹ್ಮ ಣರಿಗೆ ಗುರುವಾಗಲಿಲ್ಲವೇ ? ಮಾದಗಿತ್ತಿಯಲ್ಲಿಹುಟ್ಟಿದ ಮಾತಂಗನು ಮಹರ್ಷಿ ಯಾಗಲಿಲ್ಲವೇ ? ಮೂರುಲೋಕದಲ್ಲಿಯೂ ಸಕಲರೂ ಶಿವಭಕ್ತಿಯಿಂದಲೇ ಮುನಿಶ್ರೇಷ್ಟರಾದರು. ಈ ಪ್ರಕಾರವಾಗಿ ಹೇಳಿದ ಬಸವೇಶನಮಾತನ್ನು ಕೇಳಿ ಬಿಜ್ಜಳರಾಯನು ಕೋಪ್ರೋದ್ದೀಪಿತನಾಗಿ, ತಿರಿಗಿ ಬಸವೇಶನನ್ನು ಕುರಿತು; ಎಲೈ ಬಸವೇಶನೇ, ಸತ್ಪುರುಷರಿಗೆ ವಿರುದ್ಧವಾದ ಮಾತುಗಳನ್ನಾಡುವದರಲ್ಲಿ ನೀನು ನಿರ್ಭಯನಾಗಿದ್ದೀಯೆ. ಈಗ ಈ ಪ್ರಸ್ತಾಪವು ಸಾಕು. ಸುಮ್ಮನಿರು. ಭಕ್ತರ ದೇಹದಿಂದ ಹಾಲುಸುರಿಯುತ್ತದೋ, ದ್ವಿಜರದೇಹದಿಂದ ರಕ್ತವು ಸುರಿಯು ತ್ತದೋ ಎನಲು, ಬಸವೇಶನು ಕೋಪದಿಂದೆದ್ದು ಶೈವಮಾರ್ಗವೇ ಮುಖ್ಯಮಾ ರ್ಗವು. ಉಳಿದಮಾರ್ಗಗಳು ನೀಚಮಾರ್ಗಗಳು.

ಈ ವಿಪ್ರರಾದರೋ ದುರ್ಗುಣಗಳುಳ್ಳವರು, ಕೆಟ್ಟ ನಡತೆಯುಳ್ಳವರು, ಕೆಟ್ಟ ಗರ್ವದವರು, ದುರಾತ್ಮರು, ಶಿವದ್ರೋಹಿಗಳು, ವೇದಭಾರವನ್ನು, ಹೊತ್ತ ಕತ್ತೆಗಳು, ಷಡಕ್ಷರ ಮಂತ್ರ ಸಂಸ್ಕಾರವಿಲ್ಲದ ಮನಸ್ಸುಳ್ಳವರು. ಭ್ರಷ್ಟರು ದಧೀಚಿ ಮುಂತಾದ ಮಹಾಮುನಿಗಳ ಶಾಪಾಗ್ನಿಯಿಂದ ಸುಡಲ್ಪಟ್ಟವರು, ಕರ್ಮಪರಾಯಣರು ಜೀವದಿಂದ ಕೂಡಿದ ಪಶುಗಳನ್ನು ಕೊಲ್ಲುವವರಾದ ಕರ್ಮಚಂಡಾಲರು, ಸ್ವರ್ಗಲೋಕದಲ್ಲಿರುವ ದಾಸಿಯರನ್ನು ಸೇವಿಸಬೇಕೆಂಬ ಬಯಕೆಯಿಂದ ಕೂಡಿದವರು, ತಮ್ಮ ಕಡೆಯವನಿಗೆ ಹಣದ ಆಳತೆಯ ಕೋಲನ್ನು ಮಲಗಿಸಿ, ಅನ್ಯರಿಗೆ ಮಾಡಬೇಕಾದರೆ, ಆ ದಂಡವನ್ನು ನಿಲ್ಲಿಸಿ ಪ್ರಾಯಶ್ಚಿತ್ತವನ್ನು ಮಾಡುವರು, ಸೋಮಪಾನದ ನೆವದಿಂದ ಸುರಾಪಾನವನ್ನು ಮಾಡುವದರಲ್ಲಿ ಆಸಕ್ತರು, ಮಾಂಸವನ್ನು ತಿನ್ನತಕ್ಕವರು, ಇವರೊಡನೆ ಸಂಭಾಷಣೆಯನ್ನು ಮಾಡಿದ ಸತ್ಪುರುಷರಿಗೆ ದೋಷವುಂಟಾಗುವದು. ಪ್ರತ್ಯಕ್ಷ ಪ್ರಮಾಣ ವಿಲ್ಲದಿದ್ದರೆ ಭಕ್ತಿಯು ನೆಲೆಗೊಳ್ಳುವದಿಲ್ಲ. ಈರೀತಿಯಾಗಿ ಪ್ರತಿಜ್ಞೆಮಾಡಿ,—ಎಲೈ ರಾಜನೇ ನನ್ನ ಭಕ್ತಿಸಂಪತ್ತನ್ನು ನೋಡು, ನಾನು ಶಿವನಾಗಯ್ಯನ ದೇಹದಿಂದ ಆಶ್ಚರ್ಯಕರವಾದ ಕ್ಷೀರವನ್ನು ತೋರಿಸುತ್ತೇನೆ. ಈಗ ಸೋಮಯಾಜಿಯು ಶರೀರದಿಂದ ನೀರನ್ನಾದರೂ ತೋರಿಸು. ಈ ವಿಷಯದಲ್ಲಿ ನಾನು ಪರಾಜಿತನಾದರೆ, ನಾಯಕಾಲಮುದ್ರೆಯನ್ನು ಒತ್ತಿಕೊಂಡು ತಲೆಯಲ್ಲಿ ಐದು ಪಟ್ಟೆಗಳನ್ನು ತೆಗಿಸಿಕೊಂಡು, ಬಹಿಷ್ಕೃತನಾಗಿ ನನ್ನ ಮತವನ್ನು ಬಿಟ್ಟು ಹೋಗುನೆನು, ಎಂದುಹೇಳಿ, ಶಿವನಾಗಯ್ಯನ ಪಾದಗಳಿಗೆ ನಮಸ್ಕರಿಸಿ, ಹಸ್ತಕಮಲದಿಂದ ಅವನ ಪಾದಕಮಲವನ್ನು ಹಿಡಿದನು. ಆ ರೀತಿಯಾಗಿ ಹಿಡಿದು ಹಿಂಡಲು; ಭಕ್ತಿಎಂಬ ಹಸುವಿನ ಮೊಲೆಯಿಂದಲೋ ಎಂಬಂತೆ ಆತನ ಪಾದದಿಂದ ಸಭಾಸ್ಥಳವನ್ನು ಸೇಚನೆಮಾಡುವಂಥ ಕ್ಷೀರಧಾರೆಯು, ಹೊರಟಿತು. ಆಗ ಬಿಜ್ಜಳರಾಯನೂ ಆ ಸಭಿಕರೆಲ್ಲರೂ ಅಮೃತದೋಪಾಧಿಯಲ್ಲಿ ಪರಿಶುದ್ಧವಾದ ಕ್ಷೀರಧಾರೆಯನ್ನು ನೋಡಿ, ಬಹಳವಾಗಿ ಆಶ್ಚರ್ಯಪಟ್ಟು —ಪೂರ್ವದಲ್ಲಿ ಶಿವನು ಕರಿಕಾಲ ಚೋಳರಾಯನಿಗೆ ಸುವರ್ಣವೃಷ್ಟಿಯನ್ನು ಸುರಿಸಿದನು. ಈಗ ಬಸವೇಶನಿಗೆ ಅಮೃತದ ಮಳೆಯನ್ನು ಸುರಿಸಿದನು; ಇದು ಆಶ್ಚರ್ಯವು. ಎಂದು ಹೇಳಿಕೊಂಡರು. ಬಿಜ್ಜಳನು ಶಿವನಾಗಯ್ಯನ ಪಾದಗಳಿಗೆ ನಮಸ್ಕರಿಸಿ. ಬಸವೇಶ ಮುಂತಾದ ಸಭಾಸದರನ್ನು ಕಳುಹಿಸಿದನು. ಸಭಾಸದರು ಶಿವನಾಗಯ್ಯನ ಅಮೃತಾಂಗತ್ವವನ್ನೂ ಆ ಬಸವೇಶನನ್ನೂ ಶ್ಲಾಘಿಸಿ

ದವರಾಗಿ, ತಮ್ಮ ಮನೆಗೈದಿದರು. ಬಸವೇಶನು ಶಿವನಾಗಯ್ಯನನ್ನು ಆನೆಯ ಮೇಲೆ ಹತ್ತಿಸಿ, ಅವನಹಿಂದೆ ತಾನು ಕುಳಿತು ತನ್ನ ಮನೆಯನ್ನು ಕುರಿತು ಹೊರಟು, ಗೆಲವಿನಿಂದ ಸಂತೋಷಿಸುತ್ತಿರುವ ಮನಸ್ಸುಳ್ಳವನಾಗಿ ಎಲೈ ಬಸವೇಶನೇ, ನಮ್ಮನ್ನು ರಕ್ಷಿಸು ಎಂದು ಹೇಳುತ್ತಿರುವ ಆ ದ್ವಿಜಾಧಮರನ್ನು ಕರುಣಾದೃಷ್ಟಿಯಿಂದ ನೋಡಿದನು. ಶಿವನಾಗಯ್ಯನ ಮನೋಹರವಾದ ಮತ್ತು ವಿದ್ವಾಂಸರೆಂಬ ದೇವತೆಗಳಿಂದಾದರಿಸಲ್ಪಟ್ಟ ಚರಿತ್ರೆಯೆಂಬ ಅಮೃತರಸವನ್ನು ಭೂಮಿಯಲ್ಲಿ ಯಾವ ಭಕ್ತಶಿರೋಮಣಿಯು ಪಾನಮಾಡುತ್ತಾನೋ ಅವನು ಜರಾಮರಣಗಳಿಲ್ಲದವನಾಗುತ್ತಾನೆ. ಇದು ಸತ್ಯವು.

ಬಸವೇಶವಿಜಯದಲ್ಲಿ ನಲವತ್ತೊಂದನೆಯ ಅಧ್ಯಾಯವು

ಸಂಪೂರ್ಣವು.

---

## ನಲವತ್ತೆರಡನೇ ಅಧ್ಯಾಯವು.

---

### ವಿಷವಿಹರಣ ಕಥೆ

ಈ ಪ್ರಕಾರವಾಗಿ ಕಲ್ಯಾಣಪಟ್ಟಣದಲ್ಲಿ ಪರಮತಸ್ತರನ್ನು ಜಯಿಸತಕ್ಕವರಾಗಿಯೂ, ಶಿವಸಮಾನರಾಗಿಯೂ, ಶಾಂತಿ ಸಮುದ್ರರಾಗಿಯೂ ಇರುವ ಮಡಿವಳ್ಳಮಾಚಯ್ಯ, ಸುರಗಿ ಚೌಡಯ್ಯ, ಮಾದಿರಾಜಯ್ಯ, ಬ್ರಹ್ಮರಾಜಯ್ಯ, ಬಾಚಿರಾಜಯ್ಯ, ಕೇಶವ, ಕಿನ್ನರಬ್ರಹ್ಮಯ್ಯ, ಸಂಗಯ್ಯ, ಚಿಕ್ಕದೇವಯ್ಯ, ಮುಕ್ತಯ್ಯ, ಕನ್ನದಬ್ರಹ್ಮಯ್ಯ, ಕಕ್ಕಯ್ಯ, ಮುಸಡಿ ಚೌಡಯ್ಯ. ಕಲ್ಲಿನಾಥಯ್ಯ, ಮೋಳಿಗಮಾರಯ್ಯ, ಶೂಲಿಗಬ್ರಹ್ಮಯ್ಯ, ಕಲಕೇತ ಬ್ರಹ್ಮಯ್ಯ, ಮಾಚಯ್ಯ ಏಕಾಂತರಾಮಯ್ಯ, ಶಾಂತದೇವ, ತೆಲುಗಬೊಮ್ಮಯ್ಯ, ಗಂಡಗತ್ತರಿಯನಾಚಯ್ಯ, ಸಿಂಗಯ್ಯ, ಬಿಬ್ಬಯ್ಯ, ಹೊನ್ನಯ್ಯ, ಕಾಲಾಗ್ನಿಯರುದ್ರಯ್ಯ, ಚಂದಯ್ಯ, ಡಿಂಗರಿಗಮಲ್ಲಯ್ಯ, ಕದಿರೇರೇಮಯ್ಯ, ಮಹಾಕಾಳಯ್ಯ, ಪದ್ಮನಾಭ, ಮಾಯೀಭಟ್ಟ, ರಾಮಯ್ಯ, ಯೋಗಿದೇವಯ್ಯ,

ಸೋಮನಾಥಯ್ಯ, ಮುಂಡಬ್ರಹ್ಮಯ್ಯ ಚಿಕ್ಕಯ್ಯ, ಇಂಡೇಸೋಮಯ್ಯ ಬಂಡಿದೇವ, ಕೋಟೀಶ, ಹಾಟಕೇಶ್ವರಯ್ಯ, ಗೊಗ್ಗಯ್ಯ, ಕಾರುಜೊಮ್ಮಣ್ಣ, ಧೂರ್ಜಟಿ, ಹಿಮಸಂಗಯ್ಯ, ಕಪಿಲೇಶ, ವಿಶ್ವನಾಥ, ಮಲುಕಚಂದಯ್ಯ, ಕಣ ಕಲ್ಲಯ್ಯ, ಶಿವಯ್ಯ, ಕಾಲನಾಥಯ್ಯ, ಭಾಸ್ಕರಯ್ಯ, ಬಾಣಸಬ್ರಹ್ಮಯ್ಯ, ಗೊಣೀವಲ್ಲಯ್ಯ, ಕರವಾಲಬ್ರಹ್ಮಯ್ಯ, ಗೋಡಲಮಲ್ಲಯ್ಯ, ಅಲ್ಲಯ್ಯ, ಮಧು ವಯ್ಯ, ಹಲ್ಲಯ್ಯ, ಮಾದಯ್ಯ, ಶಿವನಾಗಯ್ಯ, ಶ್ರೀಗಿರೀಂದ್ರ, ಬಂದಿಕಾರ, ಲಕ್ಕಯ್ಯ, ವೀರನಾಗಯ್ಯ, ಕಲ್ಲಯ್ಯ, ವೀರವಾದಯ್ಯ, ಲಿಂಗಯ್ಯ, ಅಮೃತ ದೇವಯ್ಯ ಮುಂತಾದ ಅನೇಕ ಶಿವಭಕ್ತರು ಪ್ರಕಾಶಿಸುತ್ತಾ, ಪ್ರಸಾದಜ್ಞಾನ ದಿಂದ ಪ್ರಸಿದ್ಧವಾದ ಮಹಿಮೆಯುಳ್ಳವರಾಗಿ, ಪ್ರತ್ಯಕ್ಷಪ್ರಮಾಣಗಳಿಂದ ಪರ ವಾದಿಗಳ ಗರ್ವವನ್ನು ಮುರಿಯುವವರಾಗಿ, ಭಕ್ತರ ಅಭಿವೃದ್ಧಿ. ಭಕ್ತರಚರಿತ್ರೆ, ಭಕ್ತರಮಹಿಮೆ ಇವುಗಳನ್ನು ಪ್ರತಿದಿನವೂ ನೋಡುತ್ತಾ ಕೇಳುತ್ತಾ ಸಂತುಷ್ಟ ವಾದ ಮನಸ್ಸುಳ್ಳವರಾಗಿ ಸುಖವಾಗಿದ್ದರು.

ಹೀಗೆ ಕಲ್ಯಾಣಪಟ್ಟಣವು ಶಿವರಾಜ್ಯದಂತಿರಲು; ಅದರಲ್ಲಿ ಬಸವೇಶನು ಪ್ರತ್ಯಕ್ಷಶಿವನಂತೆ ಪ್ರಕಾಶಿಸುತ್ತಿದ್ದನು. ಹೀಗಿರುವಲ್ಲಿ ಒಂದಾನೊಂದುದಿನ. ಪ್ರಚಂಡ ಬುದ್ಧಿಗಳೂ, ಮಹಾತೇಜಸ್ವಿಗಳೂ, ಶಿವಸ್ತೋತ್ರಪಾಠಕರೂ, ವಾಚಾ ಲಕರೂ, ಸರ್ವಾಂಗದಲ್ಲಿಯೂ ಭಸ್ಮೋದ್ಧೂಳನದಿಂದಕೂಡಿದವರೂ,ರುದ್ರಾಕ್ಷ ಮಾಲಿಕೆಗಳಿಂದ ಅಲಂಕರಿಸಲ್ಪಟ್ಟವರೂ ಆದ ಶ್ರೀಕಂಠಶಿವ, ಗೌರೀಶಶಿವ, ಶಾಂ ತಶಿವ, ಉಗ್ರಾಕ್ಷಶಿವ, ನಿರ್ಮಲಶಿವ, ಪಾಶಮೋಕ್ಷಶಿವ, ಮಹೇಶಶಿವ, ನಿಷ್ಕಲಶಿವ, ಗಣೇಶ್ವರಶಿವ, ಮಹಾಶಿವ, ಧರ್ಮಶಿವ, ವಿದ್ಯಾಧರಶಿವ, ಪುರಾತಂಕಶಿವ, ವಿಮ ಲಾತ್ಮಶಿವ, ಪರಾನಂದಶಿವ, ಪರಮಾತ್ಮಶಿವ, ಅಘೋರಶಿವ ಪರಮಾನಂದಶಿವ ಮಹಾನಂದಶಿವ, ಇವರು ಮೊದಲಾದ, ಚಂಡಪುತ್ರರು ಬಿಜ್ಜಳರಾಯನ ಸನ್ನಿಧಿಯನ್ನೈದಿ, ಬಿನ್ನೈಸಿದರು. ಏನಂದರೆ;— ಎಲೈರಾಜನೆ ಧರ್ಮಭರಿ ತವಾದ ನಿನ್ನಪಟ್ಟಣದಲ್ಲಿ ಒಂದುಅಧರ್ಮವು ನಡೆಯುತ್ತದೆ. ಈಲೋಕದ ಲ್ಲಿ ಭಕ್ತರಾದವರು ಶಿವಪ್ರಸಾದವನ್ನು ನಮಗೇ ಕೊಡಬೇಕು. ಚಂಡನಿಗೆ ಶಿವಸಾನ್ನಿಧ್ಯದಲ್ಲಿ ಆ ಪ್ರಸಾದವು ವೃತ್ತಿಯಾಗಿ ಕಲ್ಪಿಸಲ್ಪಟ್ಟಿತು. ಆ ಚಂಡನು ಮಹಾತ್ಮನಾದ ಒಬ್ಬ ಬ್ರಾಹ್ಮಣ ಮಗನು, ಪ್ರಚಂಡ ಬುದ್ಧಿಯುಳ್ಳವನು. ತಂದೆಯ ಅಜ್ಞಾನುಸಾರವಾಗಿ ಹೊಳೆಯ ತಡಿಯಲ್ಲಿ ಗೋವುಗಳನ್ನು ಕಾಯು

ತ್ತಿದ್ದನು. ಹೀಗಿರುವಲ್ಲಿ ಅವನ ಹೃದಯದಲ್ಲಿ ಸ್ವಾಭಾವಿಕವಾದ ಶಿವಭಕ್ತಿಯು ಹುಟ್ಟಿದ್ದರಿಂದ ಮರಳಿನಿಂದ ಲಿಂಗವನ್ನು ಮಾಡಿ, ಎಲ್ಲಾ ಗೋವುಗಳಹಾಲನ್ನು ಕರೆದು ಆ ಲಿಂಗಕ್ಕೆ ಎರೆಯುತ್ತಿದ್ದನು. ಹೀಗಿರುವಲ್ಲಿ ಒಂದಾನೊಂದುದಿನ ಅವನ ತಂದೆಯು ಆ ಕಾರ್ಯವನ್ನು ಕಂಡು, ಕೋಪಿಷ್ಠನಾಗಿ ಕಾಲಿನಿಂದ ಮರಳ ಲಿಂಗ ವನ್ನು ಒದೆದನು. ಚಂಡೇಶನು ಕೋಪಗೊಂಡು ಕೊಡಲಿಯಿಂದ ತಂದೆಯ ಕಾಲನ್ನು ಕತ್ತರಿಸಿದನು. ತಂದೆಗಳು ತಾಯಿಗಳು ಎಂಬ ಮಾತಿನ ಅರ್ಥವು ಆಚರ ಣೆಯಲ್ಲಿರುವದ್ದರಿಂದ ಶಿವನು ಅವನ ತಂದೇ ತಾಯಿಗಳಿಗೆ ತನ್ನ ಪ್ರಸಾದವನ್ನು ಅನುಗ್ರಹಿಸಿದ್ದಲ್ಲದೆ. ಆ ಚಂಡನಿಗೆ ಬ್ರಹ್ಮಾದಿಗಳಿಗೂ ದುರ್ಲಭವಾದ ಪ್ರಸಾದ ವನ್ನು ಕರುಣಿಸಿದನು. ಚಂಡನು ಸಿವನ ಪ್ರಸಾದದಿಂದ ಪ್ರಬಲವಾದ ಮಹಿಮೆ ಯುಳ್ಳವನಾಗಿ ವಿಷ್ಣು ಬ್ರಹ್ಮ ಮೊದಲಾದವರಿಂದಲೂ, ಪೂಜಿಸಲ್ಪಟ್ಟ ಆಗ್ನೆಯು ಳ್ಳವನಾದನು. ಚಂಡನು ಭಕ್ತಿಯಿಂದುಂಟಾದ ರೋಮಾಂಚಗಳಿಂದ ವ್ಯಾಪ್ತ ವಾದ ದೇಹವುಳ್ಳವನಾಗಿ ಶಿವನನ್ನು ಸ್ತುತಿಸುವ ಸಮಯದಲ್ಲಿ ಅವನ ರೋಮ ಕೂಪಗಳಿಂದ ವಾಗ್ಮಿಗಳಾದ ಕೆಲವರು ಗಣಂಗಳು ಹುಟ್ಟಿ ಚಂಡೇಶನನ್ನು ನಿರ್ಮಲವಾದ ಜೋಡಣೆಯುಳ್ಳವುಗಳಾಗಿಯೂ, ಪ್ರೌಢಗಳಾಗಿಯೂ, ಆಶ್ಚರ್ಯ ಕರವಾದ ಅರ್ಥಗಳಿಂದ ಕೂಡಿದವುಗಳಾಗಿಯೂ ಇರುವ ಪದ್ಯಗಳಿಂದ ಸ್ತುತಿಸಿ ದರು. ಅವರ ವಾಕ್ಪಟುತ್ವಕ್ಕೆ ಮೆಚ್ಚಿದ ಚಂಡೇಶನು, ತನಗೆ ಶಿವನಿಂದ ಕೊಡಲ್ಪ ಟ್ಟದ್ದಾಗಿಯೂ ಇತರರಿಗೆ ಪಡೆಯುವದಕ್ಕೆ ಶಕ್ಯವಾಗಿಯೂ ಇರುವ ಪ್ರಸಾದ ವನ್ನು ಅವರಿಗೆ ಕೊಟ್ಟನು. ಶಿವನು ಕೂಡ ಅವರ ವಾಕ್ಚಾತುರ್ಯಕ್ಕೆ ಸಂತೋಷ ಪಟ್ಟು, ತನ್ನ ಸ್ತುತಿಪಾಠಕರಾಗಿರುವಂತೆ ವರವನ್ನು ಕೊಟ್ಟನು. ಅದು ಮೊದ ಲ್ಗೊಂಡು ಚಂಡಪುತ್ರರು ಶಿವವಂದಿಗಳೆಂದು ಕರೆಯಲ್ಪಡುತ್ತಾರೆ. ಇದಲ್ಲದೆ ಶಿವನು ಅವರಿಗೆ ಗ್ರಾಮಗಳಲ್ಲಿಯೂ, ಮನೆಗಳಲ್ಲಿಯೂ, ಇರುವ ಶಿವಲಿಂಗಗಳನ್ನೂ, ಕಾಳಿ, ಭೈರವ, ಕ್ಷೇತ್ರಪಾಲ, ಗಣಪತಿ ಇವರುಗಳನ್ನೂ ಪೂಜಿಸಿಕೊಂಡಿರುವಂತೆ ನೇಮಿ ಸಿದನು. ನಾವು ಶಿವಸ್ತೋತ್ರಪಾಠಕರಾದ ಆ ಚಂಡಪುತ್ರರ ಕುಲದಲ್ಲಿ ಹುಟ್ಟಿ ದವರು. ಶಿವಪ್ರಸಾದವನ್ನನುಭವಿಸುವದರಿಂದ ಪ್ರಸಿದ್ಧರಾಗಿಯೂ, ಅಪರಿಮಿತ ತೇಜಸ್ಸುಳ್ಳವರಾಗಿಯೂ ಇರುವ ನಮಗೆ ಮೊದಲಿನಿಂದಲೂ ಸಲ್ಲುತ್ತಿರುವ ಶಿವ ಪ್ರಸಾದವನ್ನು ನಿನ್ನ ಪಟ್ಟಣದಲ್ಲಿ ವಾಸಿಸುವ ಶಿವಭಕ್ತರುಮಾತ್ರ ಬಸವೇಶನ ಬಲ ದಿಂದ ನಮಗೆ ಕೊಡುವವೇ ಇಲ್ಲ. ಹೀಗೆ ಹೇಳಿದ ಆ ಚಂಡಪುತ್ರರ ಮಾತನ್ನು

ಕೇಳಿ, ಬಿಜ್ಜಳನು ಬಸವೇಶನನ್ನು ಕುರಿತು;—ಎಲೈ ಬಸವ ಮಂತ್ರಿಯೇ ನೀವು ಇವರಿಗೆ ಕೊಡತಕ್ಕ ಸೌಮ್ಯವನ್ನು ಕೊಡದೇಇರುವದು ನ್ಯಾಯುವೇ ? ಎನ್ನಲು; ಬಸವೇಶನು ದ್ವೇಷಿಗಳ ಕಡೆಗೆ ತಿರುಗಿ,-ಎಲೈ ಚಂಡಪುತ್ರರಿರಾ, ನಿಮ್ಮ ಶೌರ್ಯವನ್ನು ಬಿಡಿರಿ;-ನನ್ನ ಮಾತನ್ನು ಕೇಳಿರಿ, ಮನುಷ್ಯರಿಂದಾಗಲಿ, ದೇವತೆಗಳಿಂದಾಗಲಿ ಬ್ರಹ್ಮನಿಂದಾಗಲೀ, ಋಷಿಗಳಿಂದಾಗಲೀ, ಪ್ರತಿಷ್ಠಿಸಲ್ಪಟ್ಟ ಲಿಂಗದ ಪ್ರಸಾದದ ವಿಷಯುದಲ್ಲಿ ಚಂಡನಿಗೆ ಅಧಿಕಾರವುಂಟು, ಬೇರೇಕಡೆ ಎಂದಿಗೂ ಅಧಿಕಾರವಿಲ್ಲ. ಚರಲ್ಲಿಂಗದಲ್ಲಿಯೂ, ಸುವರ್ಣಲಿಂಗದಲ್ಲಿಯೂ, ರಜತಲಿಂಗದಲ್ಲಿಯೂ ಮಣಿಮಯುವಾದ ಲಿಂಗದಲ್ಲಿಯೂ, ಬಾಣಲಿಂಗದಲ್ಲಿಯೂ, ಸ್ವಾಯುಂಬುವ ಲಿಂಗಲ್ಲಿಯೂ ಪ್ರಸಾದಾಧಿಕಾರವು ಚಂಡನಿಗೇ ಇಲ್ಲ. ನಿಮಗೆಲ್ಲಿಂದಬಂದೀತು ? ಹಾಗೆಯೇ ಶಿವಾಗಮದಲ್ಲಿ “ ಬಾಣಲಿಂಗೆ ಚರೆಲೋಹೆ ರತ್ನಲಿಂಗೆಸ್ವಯುಂಭುವಿ ॥ ಪ್ರತಿಮಾಸುಚಸರ್ವ್ವಸುನಚಂಡಾಧಿ ಕೃತೋಭವೇತ್ ” ಎಂಬ ವಚನವು ಪ್ರಸಿದ್ಧವಾಗಿರುವುದು. ಚಂಡನಿಗೆ ಯಾವಲಿಂಗಪ್ರಸಾದದಲ್ಲಿ ಅಧಿಕಾರವಿರುವುದೋ ನಿಮಗೂ ಅದರಲ್ಲಿ ಅಧಿಕಾರವುಂಟು. ಈ ರೀತಿಯಾಗಿ ಹೇಳಿದ ಬಸವೇಶನ ವಚನವನ್ನು ಕೇಳಿದ ಚಂಡಪುತ್ರರು ಹೇಳಿದ್ದೇನಂದರೆ,—ದ್ರಾಕ್ಷಾರಾಮ, ಶ್ರೀಶೈಲ, ಕಾಂಚಿ ವ್ಯಾಘ್ರಪುರ, ಮೊದಲಾದ ಪುರಾತನ ಕ್ಷೇತ್ರಗಳನ್ನೆಲ್ಲಾ ನಮಗೆ ಶಿವಪ್ರಸಾದಾಧಿಕಾರವುಂಟು, ಆದಕಾರಣದಿಂದ ನಮಗೆ ನಿಮ್ಮ ಲಿಂಗಪ್ರಸಾದದ ವಿಷಯದಲ್ಲಿ ಹ್ಯಾಗೆ ಅಧಿಕಾರವಿಲ್ಲ ? ನೀನು ಬಲಾತ್ಕಾರದಿಂದ ನಮ್ಮ ವೃತ್ತಿಯನ್ನು ಅಪಹರಿಸುವದರಲ್ಲಿ ಪ್ರವರ್ತಿಸಿದ್ದೀಯೆ; ಹಾಗಾದರೆ ನಾವು ಪ್ರಾಣತ್ಯಾಗವನ್ನು ಮಾಡುತ್ತೇವೆ; ಎಂದು ಹೇಳಲು, ಬಸವೇಶನು ಅವರ ದುರ್ಭಾಷೆಗಳನ್ನು ಕೇಳಿ, ಕೋಪಗೊಂಡವನಾಗಿ—ನೀವು ಪ್ರಾಣತ್ಯಾಗವನ್ನು ಮಾಡಿಕೊಳ್ಳುತ್ತೇವೆಂದು ಹೇಳಿದಮಾತಿನಿಂದ ಭಕ್ತರು ಭಯಪಡುತ್ತಾರೆಯೇ ? ಗಾಳಿಯಿಂದ ತರಗೆಲೆಗಳು ಅಲ್ಲಾಡುತ್ತವೆ ಯಲ್ಲದೆ ಪರ್ವತಗಳು ಅಲ್ಲಾಡುತ್ತವೆಯೇ ? ಶಾಸ್ತ್ರೋಕ್ತವಲ್ಲದ ಶಿವಪ್ರಸಾದವನ್ನು ಚಂಡನಿಗೆ ಕೊಡುವದು ಹ್ಯಾಗೆ ? ಇಲ್ಲವೇ ಶಾಸ್ತ್ರಸಿದ್ಧವಾದ ಪ್ರಸಾದವನ್ನು ನಿಮಗೆ ಕೊಡದೆ ಅಡ್ಡಿಮಾಡಿದೇವೆ ? ಶಾಸ್ತ್ರದಿಂದಲೂ, ಅನುಭವದಿಂದಲೂ, ಸಿದ್ಧವಾದ ಅರ್ಥದಲ್ಲಿ ಯಾವದು ಪ್ರವರ್ತಿಸುತ್ತದೋ ಅದೇ ಸಕಲ ಸತ್ಪುರುಷರಿಗೂ ಸಮ್ಮತವಾಗಿದೆ. ಹಿಂದೆ ಯಾವದೇಶದಲ್ಲಿ ಯಾವ ಪಟ್ಟಣದಲ್ಲಿ ಯಾವ ಗ್ರಾಮದಲ್ಲಿ ಯಾವ ಹಳ್ಳಿಯಲ್ಲಿ ಎಲ್ಲಿ ವೀರಮಾಹೇಶ್ವರರು ನಿಮಗೆ ತಮ್ಮ

ಶಿವಪ್ರಸಾದವನ್ನು ಕೊಟ್ಟಿದ್ದಾರೆ; ಶಾಸ್ತ್ರ ಪ್ರಮಾಣದಿಂದಲಾದರೂ, ಅನುಭವ ದಿಂದಲಾದರೂ, ಇಷ್ಟಲಿಂಗ ಪ್ರಸಾದವಿಷಯದಲ್ಲಿ ಜಂಗಮನಿಗೆ ಅಧಿಕಾರವುಂಟೆಂಬು ವದನ್ನು ತೋರಿಸಿ, ವೀರಮಾಹೇಶ್ವರರಿಂದ ಪ್ರಸಾದವನ್ನು ತೆಗೆದುಕೊಳ್ಳಿರಿ. ಆವೆ ರಡೂ ಇಲ್ಲದೆ ಪ್ರಸಾದದಮೇಲೆ ಅಪೇಕ್ಷೆಯಿದ್ದರೆ, ಶಿವನಿಗೆ ವಿಷವನ್ನು ಸಮರ್ಪಿ ಸುತ್ತೇವೆ; ಅದನ್ನು ಸ್ವೀಕರಿಸುವದಕ್ಕೆ ಅರ್ಹರಾಗಿರಿ. ಎಂದು ಬಸವೇಶನು ಹೇಳಿದ ಮಾತನ್ನು ಕೇಳಿ, ಆ ಜಂಗಮಪುತ್ರರು ಕೋಪಗೊಂಡವರಾಗಿ;—ಎಲೈ ಬಸವೇಶನೇ! ಭಲಾ ! ಭಲಾ ! ಒಳ್ಳೇ ಮಾತನ್ನಾಡಿದೆ. ನೀವು ವ್ಯಾಘ್ರ್ಯವನ್ನು ಉಂಜಿಸುವ ವರು. ನಾವು ವಿಷವನ್ನು ಬುಂಜಿಸುವವರೋ ? ನೀನು ನಿಮ್ಮ ಶಿವಪ್ರಸಾದವೆಂಬ ಶ್ರೇಷ್ಠವಾದ ಸುವರ್ಣವನ್ನು ಯಾಚಿಸುವ ನಮ್ಮನ್ನು ದುಷ್ಟರೆಂದು ಆಲೋಚಿಸಿ, ಉಪಾಯದಿಂದ ಕೊಲ್ಲಬೇಕೆಂದು ಯತ್ನಿಸಿದ್ದೀಯೆ. ಹಾಗೇಆಗಲಿ. ನೀವು ಶಿವ ನಿಗೆ ಸಮರ್ಪಿಸಿದ ವಿಷವನ್ನು ಬುಂಜಿಸಿ, ಬದುಕಿರಿ. ಇದಲ್ಲದೆ ನೀನು ಈ ಕಾರ್ಯ ವನ್ನು ರಾಜ, ಪಟ್ಟಣದಜನ ಇವರ ಮುಂದೆ ಮಾಡಿದ್ದೇ ಆದರೆ, ಈ ವಿವಾದ ದಲ್ಲಿ ನಮ್ಮಿಬ್ಬರಿಗೂ ಇದೇಪ್ರಮಾಣವು. ಎಂದು ಹೇಳಿದರು. ಬಸವೇಶನು ಆ ಮಾತಿಗೆ ಹಾಗೇ ಆಗಲೆಂದು ಸಂಮತಿ ಪಟ್ಟನು. ಉಭಯ ಪಕ್ಷವನ್ನೂ ಅನುಮ ತಿಸಿದ ಬಿಜ್ಜಳರಾಯನು ಪಟ್ಟಣದ ಜನರಿಂದಲೂ, ಪುರೋಹಿತರಿಂದಲೂ, ಕೂಡಿ ದವನಾಗಿ, ಶ್ರೀ ಸಂಗಮೇಶ್ವರನಾಲಯದ ಬಾಗಿಲ ಮುಂದಣ ಮಂಟಪಕ್ಕೆ ಬಂದನು. ಅನೇಕ ಭಕ್ತರು ಅನೇಕ ಸ್ವಾಮಿಗಳೊಡನೆ ರಾಜನಿಂದಲೂ ಪುರಜನ ರಿಂದಲೂ, ಆಶ್ರಯಿಸಲ್ಪಟ್ಟಿದ್ದ ಸಂಗಮೇಶ್ವರನ ಸನ್ನಿಧಿಗೆ ಬಂದರು. ಅನಂತರದಲ್ಲಿ ಬಸವೇಶನು, ಚಿನ್ನ, ಬೆಳ್ಳಿ, ತಾಮ್ರ, ಕಬ್ಬಿಣಗಳ ಕೊಪ್ಪರಿಗೆಗಳನ್ನು ಸೇವಕರಿಂದ ಆ ಕ್ಷಣವೇ ತರಿಸಿ, ವತ್ಸನಾಭಿಯೇ ಮುಂತಾದ ಅನೇಕ ವಿಧವಿಷಗಳನ್ನು ಒಟ್ಟು ಗೂಡಿಸಿ ಗಾಣಗಳಲ್ಲಿ ಅರೆಯಿಸಿ ಸಣ್ಣಕುಂಬಳಕಾಯಷ್ಟು ಪ್ರಮಾಣದ ಉಂಡೆಗ ಳನ್ನು ಕಟ್ಟಿ ಕಟ್ಟಿ ಎಳ್ಳೆಣ್ಣೆಯನ್ನು ಕೊಪ್ಪರಿಗೆಗಳಲ್ಲಿ ಹೊಯ್ಸಿ, ಅದರೊಳಗೆ ಆ ವಿಷವನ್ನು ಹಾಕಿಸಿ, ಸೌಟಿನಿಂದ ಚನ್ನಾಗಿ ತಿರುಹಿಸಿದನು. ಆ ವಿಷದಿಂದ ಹುಟ್ಟಿದ ಉರಿಯಿಂದ ಸೂರ್ಯನ ರಥಕ್ಕೆ ಕಟ್ಟಿದ್ದ ಕುದುರೆಗಳು ಬೆಂದುಹೋದವು. ಅದರ ಹೊಗೆಯಿಂದ ಆವರಿಸಲ್ಪಟ್ಟ ಪರ್ವತಗಳು ನೀಲಾದ್ರಿಗಳಂತೆ ತೋರಿದವು. ಕೊಳ ಬಾವಿ ಹೊಳೆಗಳು ಕೂಡ ಬಹುಕಪ್ಪಾದವು. ಮತ್ತು ಉಷ್ಣವಾದ ಜಲವುಳ್ಳವುಗ ಳಾದವು. ಆ ವಿಷದಗಾಳಿ ಸೋಂಕಿದಮಾತ್ರದಿಂದಲೇ ಆ ಸ್ಥಳದ ವೃಕ್ಷಗಳೆಲ್ಲಾ

ನಾಶವಾದವು. ಈ ವಿಷದ ಕ್ರೌರ್ಯದಿಂದ ವ್ಯಾಪಿಸಲ್ಪಟ್ಟ ನಕ್ಷತ್ರಗಳು ಭೂಮಿಗೆ ಬಿದ್ದವು. ಪ್ರಳಯಕಾಲದ ಬೆಂಕಿಯು ಭೂತಲದಿಂದೇನಾದರೂ ಎದ್ದಿತೋ! ಎಂದು ಬ್ರಹ್ಮನು ಆ ಕಾಲವನ್ನು ಎಣಿಸುತ್ತಿದ್ದನು. ಕ್ಷೀರಸಮುದ್ರದಿಂದಹುಟ್ಟಿದ ವಿಷದಿಂದ ಹಿಂದೆ ನನ್ನ ದೇಹವು ಕಪ್ಪಾಯಿತು. ಈ ವಿಷಸಮುದ್ರದಿಂದುದ್ಭವಿಸಿದ ಬೆಂಕಿಯಿಂದೇನಾಗುವದೋ! ಎಂದು ನಾರಾಯಣನು ಚಿಂತಿಸಿದನು. ಶಿವನು ಕೊಪ್ಪರಿಗೆಯಲ್ಲಿರುವ ವಿಷವನ್ನು ಹಾಲಾಹಲವೆಂದು ನೆನಸಿ, ತನ್ನ ಕಯ್ಯಲ್ಲಿ ಕನ್ನಡಿಯನ್ನು ತೆಗೆದುಕೊಂಡು ತನ್ನ ಕುತ್ತಿಗೆಯನ್ನು ನೋಡಿಕೊಂಡನು.

ಹೀಗೆ ಅನೇಕ ಕೊಪ್ಪರಿಗೆಗಳಲ್ಲಿರುವಂಥ. ನಾನಾ ಪ್ರಾಣಿಗಳನ್ನು ಶೋಷಿಸುವಂಥ ಅತ್ಯುಲ್ಬಣವಾದ ವಿಷವನ್ನು ಜನರು ನೋಡಿದರು. ಅನಂತರದಲ್ಲಿ ಬಸವೇಶನು ಶಿವಪೂಜೆಯನ್ನು ಮಾಡಿದ ತಪಸ್ವಿಗಳಿಗೆ ಪಾತ್ರೆಗಳಲ್ಲಿ ತುಂಬಿತುಂಬಿ ವಿಷವನ್ನು ಸಮರ್ಪಿಸಿದನು. ಬಿಜ್ಜಳರಾಜನೂ, ಪಟ್ಟಣದ ಜನಗಳೂ ನೋಡುತ್ತಿರಲು; ಭಕ್ತರೂ, ಆತಪಸ್ವಿಗಳೂ, ಆ ವಿಷವನ್ನು ಶಿವನಿಗೆ ಸಮರ್ಪಿಸಿ. ಭುಂಜಿಸುವದಕ್ಕೆ ಆರಂಭಿಸಿದರು. ವಿಷವು ಭುಂಜಿಸಲ್ಪಡುತ್ತಿರಲಾಗಿ, ಆಶ್ಚರ್ಯರಸವುಂಟಾಯಿತು. ಅವರ ನಾಲಿಗೆಗಳು ಸಕ್ಕರೆ ಮೊದಲಾದ ಪದಾರ್ಥಗಳಲ್ಲಿಯೂ, ಇಚ್ಛೆಯಿಲ್ಲದವುಗಳಾಗಿ ನರ್ತನವಂಮಾಡಿದವು. ಆ ಸಕಲ ತಪಸ್ವಿಗಳೂ ಆ ವಿಷಸೇವನೆಯಿಂದ ಪರಮಾನಂದವನ್ನು ಅನುಭವಿಸಿದರು. ಅಂಗನೆಯರ ಗಾಢತರಾಲಿಂಗನೆಯಿಂದಲೂ, ಶಿವಧ್ಯಾನದಿಂದಲೂ ಪಡೆಯುವದಕ್ಕೆ ಅಶಕ್ಯವಾದ ಪರಮಾನಂದವನ್ನು ಪಡೆದರು. ಆ ಕಾಲದಲ್ಲಿ ಮಾಹೇಶ್ವರರೂ, ಸೇವೆಯಲ್ಲಿ ನೇಮಿಸಲ್ಪಟ್ಟ ಬಸವೇಶನ ಕಿಂಕರರೂ, ಪರಸ್ಪರವಾಗಿ ಆಡಿಕೊಳ್ಳುವ ಮಾತುಗಳು ಕೇಳಿಬಂದವು. ಏನಂದರೆ;-ಎಲೈ ತ್ರಿಲೋಚನನೇ, ಇದು ಬಹಳಇಕ್ಕಟ್ಟು, ಇಲ್ಲಿಬೇಡ ಅಲ್ಲಿ ಕೂತುಕೋ; ಎಲೈ ವಿಷಮಾಕ್ಷನೇ, ಬಹುರುಚಿಕರವಾದ ವಿಷವನ್ನು ಕೆಳಗೆ ಚಲ್ಲದಂತೆ ಸ್ವೀಕರಿಸು, ಎಲೈ ವಾಸುಕಿ ಭೂಷಣನೇ, ಸಾಲದಿದ್ದರೆ ಹೇಳು ಇನ್ನೂ ತರುತ್ತೇನೆ. ಇದುಸಾಲದು; ಇನ್ನಷ್ಟುತಂದು ಕಾಲಕಂಠನಿಗೆ ಕೊಡು. ಎಲೈ ನಿರಾಶಿ ದೇವನೇ, ನಿನಗೆ ಸಾಲದೋ ಎಲೈ ವೃಷಧ್ವಜನೇ, ಇಷ್ಟು ವೇಗವೇಕೆ? ಭೋಗನಾಥಯ್ಯನ ಪಾತ್ರೆಯಲ್ಲಿರುವ ಮಹಾಮೃತವು ಸಾಕು. ಎಲೈ ಫಾಲಲೋಚನನೇ ತಿರಿಗಿ ನಿನಗೆ ಅಪೇಕ್ಷೆಯಿದ್ದರೆ, ತೆಗೆದುಕೋ, ಶ್ರೀಗಿರಿಯೇ, ನೀನು ಅಶಕ್ತನು, ಇನ್ನೂ ಆಶೆಯನ್ನು ಮಾಡಿದ್ದರಿಂದೇನು? ಎಲೈ ವ್ಯೋಮಕೇಶನೇ,

ನಗುವಿನಿಂದೇನು ? ಶಿವದೇವನೇ ನನಗೆ ಶಿವಪ್ರಸಾದವು ಬೇಕು. ಎಲೈ ಭೀಮೇಶನೇ ಭಯಪಡಬೇಡ ಎಲೈ ಧೂರ್ಜಟಿಯೆ ಪ್ರತಿಜ್ಞೆಯನ್ನು ಮಾಡು. ಮೂರ್ತೀಶನೇ, ಮುಗ್ಧನಂತಿರು. ಕಾಮಾರಿಯೇ ಕಲಹದಿಂದೇನು ? ಸರ್ವಾಂಗ ದೇವನೇ ತ್ವರೆಯಾತಕ್ಕೆ ? ಭಾವದೇವನೇ ನಾನು ನಿನ್ನ ಅಭಿಪ್ರಾಯವನ್ನು ತಿಳಿದಿಲ್ಲವೇ ? ಮಹಾದೇವ ಲಿಂಗನೇ ಈ ಬಡಾಯಿಯನ್ನು ಬಿಟ್ಟು ತೆಗೆದುಕೋ ಚಂದ್ರಚೂಡನೇ, ಈ ಮಾತುಗಳಿಂದೇನು? ಬಟ್ಟಲಲ್ಲಿರುವ ಅಮೃತವನ್ನು ಕುಡಿ. ಕುಸುಮೇಶ ಮಹಾ ಯೋಗಿಯೇ, ಈ ಕುಟಿಲವಾದ ರೀತಿಗಳಿಂದೇನು? ಶಿವದೇವಿ, ಮಹಾದೇವಿ ದುರ್ಗಾದೇವಿ, ಶಂಕರಿ, ಲಿಂಗಾದೇವಿ, ಶಂಭುದೇವಿ, ನಿಂಬವ್ವೆ, ವಿಮಲಾಂಬಿಕೆ, ಆನಂದದೇವಿ, ಹೊಲ್ಲಾಂಬೆ, ಸಿದ್ಧಾಂಬೆ, ಚಾಕಮಾಂಬೆ, ಬ್ರಹ್ಮದೇವಿ, ಕೇತಮಾಂಬೆ, ಚೂಡಿಕೆ, ಶಶಿಶೇಖರೆ, ಮುಂತಾದ ಯೋಗಿನಿಯರು ಈ ಮಂಟಪದಲ್ಲಿ ಕುಳಿತುಕೊಳ್ಳಿರಿ ಎನಲು, ಆ ಶಿವಯೋಗಿನಿಯರು ಕುಳಿತು ಆ ವಿಷಾಮೃತವನ್ನು ತಮ್ಮ ಇಷ್ಟಲಿಂಗಕ್ಕೆ ಸಮರ್ಪಿಸಿ, ತಮ್ಮ ಗುರುಧ್ಯಾನ ಪೂರ್ವಕವಾಗಿ ಸ್ವೀಕರಿಸಿದರು. ಇಂಥಾ ಸಂದಣಿಯನ್ನು ಹಿಂದೆ ಯಾವಾಗಲೂ ಕಾಣೆವು. ತನ್ನ ಮಹಿಮೆಯನ್ನು ಬಸವೇಶನೊಬ್ಬನೇ ಬಲ್ಲನು. ನನ್ನ ಹೊಟ್ಟೆ ತುಂಬಿತು. ತೊಂದರೆಪಡಿಸಬೇಡ ಈ ಕಡೆಕೊಡಬೇಡ ಇನ್ನು ಮೇಲೆ ತರುವದಿಲ್ಲ ಬಟ್ಟಲಲ್ಲಿರುವದನ್ನು ಮೆಲ್ಲನೆ ಕುಡಿ. ಶಂಭುದೇವನಿಗೆ ಶಿವಾನಂದವು ತಲೆಮೀರಿ ಹೋಯಿತು. ಆದ್ದರಿಂದ ಅವನ ಪಾತ್ರೆಗೆ ಉತ್ತಮವಾದ ವಿಷಾಮೃತವನ್ನು ಒಡಿಸಬೇಡ. ಪ್ರಮಥರು ನನಗೆ ಪ್ರಾಣಗಳನ್ನು ಕೊಡಲಿ; ನನ್ನ ತಳೆಯಲ್ಲಿ ಮುಖವನ್ನು ಕೊಡಲಿ, ಹಾಗಾದರೆ ಈ ವಿಷಾಮೃತವನ್ನೆಲ್ಲಾ ಕುಡಿಯುತ್ತೇನೆ ಎಲೈ ಸೊಂಡಾಲ ದೇವನೇ ಉಡಿದಾರವನ್ನು ಸಡಲಿಸು. ತಲೆಯನಲ್ಲಾಡಿಸಬೇಡ. ನನ್ನ ಸಂಗಡ ವಾಗ್ವಾದದಿಂದೇನು ಫಲ? ಮಹಾ ದೇವಯ್ಯನೇ, ನನ್ನ ಸಂಗಡ ಈ ಮಾತನ್ನು ಹೇಳಬೇಡ. ಎಲ್ಲವನ್ನೂ ನನ್ನ ಪಾತ್ರೆಗೆ ಹಾಕು. ನನ್ನ ಲಿಂಗಯ್ಯನು ಹೊಟ್ಟೆಬಾಕನು. ಈ ಭಕ್ತಿವಾರ್ತಾ ಪ್ರಸಂಗದಲ್ಲಿ ವ್ಯರ್ಥವಾದ ಮಾತುಗಳನ್ನಾಡುವ ಸಂಭ್ರಮದಿಂದೇನು ? ನನ್ನ ಮನಸ್ಸು ಕೊಪ್ಪಂಗೆಗಳನ್ನ ಕೊಳ್ಳೆಮಾಡಬೇಕೆಂದು ಅಪೇಕ್ಷಿಸುತ್ತದೆ. ಅಮೃತವನ್ನು ಕುಡಿಯುವದಕ್ಕೆ ಬಾ, ಓಡಿಹೋಗಬೇಡ ನಿಂತುಕೋ ; ಇವು ಮೊದಲಾದ ಮಾತುಗಳನ್ನಾಡುತ್ತಾ ಕೆಲವರು ಆ ಮಾತುಗಳನ್ನು ಕೇಳುತ್ತಾ ಕೆಲವರು ಆ ವಿಷಾಮೃತವನ್ನು ಪಾನಾಮಾಡಿದರು

ಕೆಲವರು ಕಣ್ಣುಗಳನ್ನು ತಿರಿಗಿಸಿದರು. ಕೆಲವರು ಕಣ್ಣುಗಳನ್ನು ಮುಚ್ಚಿಕೊಂಡರು. ಕೆಲವರು ಕಯ್ಯಲ್ಲಿ ಒಟ್ಟಲನ್ನು ಹಿಡಿದುಕೊಂಡು ಕುಣಿದರು. ಕೆಲವರು ಸಂತೋಷದಿಂದ ಪ್ರಸಾದವನ್ನು ಸ್ವೀಕರಿಸುತ್ತಾ ಒಬ್ಬರಿಗೊಬ್ಬರು ಆ ಲಿಂಗನೆ ಮಾಡಿಕೊಳ್ಳುತ್ತಾ ಒಬ್ಬರಿಗೊಬ್ಬರು ನಮಸ್ಕರಿಸುತ್ತಾ ವಿಷಗೋಷ್ಠಿಯಲ್ಲಿ ವಿಹರಿಸಿದರು. ಈ ವಿಧವಾದ ವಿಷವಿಹಾರ ಸಂಭ್ರಮವು ನಡೆಯುತ್ತಿರಲಾಗಿ, ಬಸವೇಶನು ಪ್ರೀತಿಯಿಂದ ಲೇಖಕರನ್ನೂ, ವೀರಭಟರನ್ನೂ, ಅಧಿಕಾರಿಗಳನ್ನೂ, ಬಂಧುಜನಗಳನ್ನೂ, ಅವರ ಮಕ್ಕಳು ಮೊಮ್ಮಕ್ಕಳನ್ನೂ, ಅಂತಃಪುರಸ್ತ್ರೀಯರನ್ನೂ ಆ ಶ್ರೀತರಾದ ಬ್ರಾಹ್ಮಣರನ್ನೂ, ಸೇವಕರನ್ನೂ, ಗೌಡಿಯರನ್ನೂ, ವಿಲಾಸಿನಿಯರನ್ನೂ, ಚಿನ್ನದ ಒಟ್ಟಲು ಚಾಮರ ಬೀಸಣಿಗೆ ಕೊಡೆಗಳನ್ನು, ಹಿಡಿಯುವವರನ್ನೂ, ವೀಣೆ ಕೊಳಲು ಮೃದಂಗ ಮೊದಲಾದ ವಾದ್ಯವಿದ್ಯೆಗಳಲ್ಲಿ ಕುಶಲರಾದವರನ್ನೂ, ಸಂಗೀತ ವಿದ್ಯೆ ಭರತವಿದ್ಯೆಗಳನ್ನು ತಿಳಿದವರನ್ನೂ, ತಾಳದಲ್ಲಿಯೂ, ಕಹಳೆಗಳಲ್ಲಿಯೂ, ಕೋವಿದರಾದವರನ್ನೂ, ಕವಿಗಳನ್ನೂ, ಪೌರಾಣಿಕರನ್ನೂ, ಶಾಸ್ತ್ರಜ್ಞರನ್ನೂ, ಉಪಾಧ್ಯಾಯರನ್ನೂ, ವಿದೂಷಕರನ್ನೂ, ಉಪಾಧ್ಯಾಯರನ್ನೂ, ಸ್ತುತಿಪಾಠಕರನ್ನೂ, ಹೊಗಳಭಟ್ಟರನ್ನೂ, ಕಂಚುಕಿಗಳಿಂದ ಕರಸಿ, ಬಂದಂಥ ಅವರಿಗೆ ವಿಷಾಮೃತವನ್ನು ಕೊಡಿಸಿದನು. ಅವರು ಆ ವಿಷವನ್ನು ಪಾನಮಾಡಿ, ಅಮೃತಪಾನವನ್ನು ಮಾಡಿದಂತೆ ಆನಂದಪಟ್ಟರು. ಅನಂತರದಲ್ಲಿ ಬಿಜ್ಜಳನ ಸಮೀಪದಲ್ಲಿ ಅಂಕುಶ ಗರ್ಭಿತಗಳಾದ ಅಂಜಲಿಗಳನ್ನು ಮುಂದಕ್ಕೆ ನೀಡಿಕೊಂಡು ನಿಂತಿರುವಂಥ ಮಾವಟಿಗರನ್ನು ಕುರಿತು–ರಾಜಕೋಲಾಹಲ, ಕಾಲರುದ್ರ, ಮೊದಲಾಗಿ ಅಂತಕ, ಜಂಗಮದಾಸ ಕಡೆಯಾದ ಆನೆಗಳನ್ನು ಈಗ ತರಿಸು, ಎಂದು ಆಜ್ಞಾಪಿಸಿದನು. ಅನಂತರದಲ್ಲಿ ಅಂಜಲಿಯಲ್ಲಿ ಚಾವಟಿಯನ್ನು ಹಿಡಿದುಕೊಂಡಿರುವಂಥ ಅಶ್ವಾಧ್ಯಕ್ಷರನ್ನು ಕುರಿತು; ಅಸಮಾನಬಲ ವಾಜಿರಾಜ ಮೊದಲಾದ ಎಲ್ಲಾ ಅಶ್ವಗಳನ್ನೂ ಜಾಗ್ರತೆಯಾಗಿ ತೆಗೆದುಕೊಂಡುಬನ್ನಿ; ಎಂದು ಅಪ್ಪಣೆಕೊಟ್ಟನು. ತರಲ್ಪಟ್ಟ ಆ ಆನೆಗಳಿಗೂ, ಕುದುರೆಗಳಿಗೂ, ಅವುಗಳನ್ನು ಸಾಕುವವರಿಗೂ, ಕಲಿಸುವವರಿಗೂ, ಜಗದ್ರಕ್ಷಣ ಸಮರ್ಥನಾದ ಬಸವೇಶನು ವಿಷವನ್ನು ಪಾನಮಾಡಿಸಿದನು. ಆ ಗಜಾಶ್ವಗಳು ಆ ವಿಷಾಮೃತವನ್ನು ಕುಡಿದು ಸಂತುಷ್ಟವಾದ ಕೊಬ್ಬಿದ ದೇಹವುಳ್ಳವುಗಳಾಗಿ ಮೊದಲಿಗಿಂತಲೂ ಬಲಶಾಲಿಗಳಾದವು. ಆಕಾಶದಲ್ಲಿ ದುಂದುಭಿಗಳು ಧ್ವನಿ ಮಾಡಿದವು. ಮೇಘಗಳು

ಪುಷ್ಪವೃಷ್ಟಿಯನ್ನು ಸುರಿದವು. ರುದ್ರಗಣರು ಸಿದ್ಧ ಚಾರಣ ಕಿನ್ನರೊಡನೆ ಕೊಂಡಾಡಿದರು. ಭಕ್ತರ ಕರುಣದಿಂದ ಹೊಗ್ಗಿದ ಅನುಗ್ರಹವೇ! ಪುಷ್ಪ ಸಮೂಹಗಳಿಂದ ವರ್ಷಿಸಲ್ಪಟ್ಟವನೇ! ನಾಶರಹಿತವಾದ ಶಿವಾನಂದವುಳ್ಳವನೇ! ಪರಿಶುದ್ಧವಾಗಿಯೂ ಆಶ್ಚರ್ಯಕರವಾಗಿಯೂ ಇರುವ ಮಹಿಮೆಯುಳ್ಳವನೇ! ಭಕ್ತಿಗೋತ್ರವುಳ್ಳವನೇ! ಸಾಧು ಜನಮಿತ್ರನೇ! ನಿರ್ಮಲಹೃದಯನೇ! ಜ್ಞಾನನೇತ್ರನೇ! ಸತ್ಪುರುಷರಿಗೆ ಸ್ನೇಹಿತನಾದವನೇ! ಸಂಸಾರಸಮುದ್ರಕ್ಕೆ ಹಡಗಾದವನೇ! ಬಸವೇಶನೇ! ನನಗೆ ಸಕಲವೂ ನೆನಹುಮಾತ್ರದಿಂದ ಸಿದ್ಧಿಸುತ್ತದಷ್ಟೆ? ಹಿಂದೆ ಈಶ್ವರನು ವಿಷವನ್ನು ಕುಡಿಯುವುದಕ್ಕೆ ಅಸಮರ್ಥನಾಗಿ ಕಂಠದಲ್ಲಿ ಧರಿಸಿಕೊಂಡನು. ನೀನು ಕಂಠಪರ್ಯಂತರವೂ ವಿಷವನ್ನು ಭುಂಜಿಸಿದೆ. ಇದಾಶ್ಚರ್ಯ. ದೇವತೆಗಳು ಅಮೃತಪಾನವನ್ನು ಮಾಡಿ, ಅನಿತ್ಯದೇಹಿಗಳಾದರು. ನೀನು ವಿಷಪಾನವನ್ನು ಮಾಡಿ, ನಿತ್ಯಾತ್ಮನಾಗಿದ್ದೀಯೆ, ಇದು ಮತ್ತೂ ಆಶ್ಚರ್ಯವು ಎಂದು ಭೂಲೋಕದ ಸಕಲ ಭಕ್ತಗಣಂಗಳೂ ಬಸವನನ್ನು ಸ್ತುತಿಸಿದರು. ಬಳಿಕ ಆ ಜಂಡಪುತ್ರರು ಹೆದರಿದವರಾಗಿ, ವೃಷಭೇಶ್ವರನಿಗೆ ನಮಸ್ಕರಿಸಿ, ಸ್ತೋತ್ರವನ್ನು ಮಾಡಿ, ಅವನ ಕರುಣಾದೃಷ್ಟಿಯಿಂದ ಸಂತುಷ್ಟರಾಗಿ, ಅವನಿಂದ ಬೀಳ್ಕೊಂಡು ಹೊರಟುಹೋದರು. ಇದನ್ನೆಲ್ಲಾ ನೋಡಿದ ಬಿಜ್ಜಳರಾಯನು ಮಂತ್ರಿಗಳೊಡನೆಯೂ, ಸೇನಾಜನಗಳೊಡನೆಯೂ ನಮಸ್ಕರಿಸಿದನು. ಪಟ್ಟಣದ ಜನರೂ ಬ್ರಾಹ್ಮಣರೂ ಕೂಡ ಸ್ತುತಿಯಿಂದ ಶಬ್ದಾಯಮಾನರಾದರು.

ಈ ಪ್ರಕಾರವಾಗಿ ಕವಿಗಳಿಂದ ಕೀರ್ತಿಸಲ್ಪಟ್ಟ ಯಶಸ್ಸುಳ್ಳ ಬಸವೇಶ್ವರನು, ರಾಯನ ಮತ್ತು ಸಭಾಜನದ ಮುಂದೆ ಭುಂಜಿಸಲಾರದೇ ಹೋದ ಶತ್ರುಗಳನ್ನು ಜಯಿಸಿ, ಆ ವಿಷವನ್ನು ತಾನೇ ಸ್ವೀಕರಿಸಿ, ಶಿವಭಕ್ತಸಮೂಹವನ್ನು ಪ್ರಸಾದದಿಂದ ಸಂತುಷ್ಟವಾದಂಥಾದ್ದನ್ನು ಮಾಡಿ, ಕೃತಾರ್ಥತೆಯನ್ನು ಪಡೆದನು.

ಬಸವೇಶವಿಜಯದಲ್ಲಿ ನಲವತ್ತೆರಡನೆಯ ಅಧ್ಯಾಯವು ಸಂಪೂರ್ಣವು.

## ನಾಲ್ವತ್ತು ಮೂರನೆಯ ಅಧ್ಯಾಯವು.

---

### ಜಗದೇವಯ್ಯನ ಕಥೆ.

ಒಂದಾನೊಂದು ಕಾಲದಲ್ಲಿ ಜಗದೇವನೆಂಬ ಹೆಸರುಳ್ಳ ಒಬ್ಬ ಶಿವಭಕ್ತ ಬ್ರಾಹ್ಮಣನು ಬಸವೇಶ್ವರನನ್ನು ತನ್ನ ಮನೆಗೆ ಭೋಜನಕ್ಕೆ ಕರೆತರಬೇಕೆಂಬ ಆಶೆ ಯುಳ್ಳವನಾಗಿ ಹೋಗಿ ಪ್ರಾರ್ಥಿಸಿದನು. ಬಸವೇಶ್ವರನು ಆ ಬ್ರಾಹ್ಮಣನನ್ನು ಕುರಿತು;—ಎಲೈ ಜಗದೇವನೇ! ನನ್ನಮಾತನ್ನು ಕೇಳು. ನೀವು ದ್ವಿಜಕುಲದ ವರು; ಭಕ್ತರ ಪೂಜೆಯನ್ನು ಸೈರಿಸದ ಮನಸ್ಸುಳ್ಳವರು. ಎನಲು; ಜಗದೇವನು ನನ್ನ ವಿಜ್ಞಾಪನೆಯನ್ನು ಲಾಲಿಸಬೇಕು ನಿನ್ನ ಕರುಣಾವಿಶೇಷದಿಂದ ಎಲ್ಲವೂ ಒಳ್ಳೇದಾಗುವದೆಂದು ಹೇಳಿ, ವಿಭೂತಿಯನ್ನುಕೊಟ್ಟು, ಸಂತೋಷದಿಂದ ತನ್ನ ಮನೆಗೆಹೋಗಿ, ಜಾಗ್ರತೆಯಾಗಿ ಭಕ್ಷ್ಯ, ಭೋಜ್ಯ ಮುಂತಾದ ಪಂಚವಿಧ ವಾದ ಅಡಿಗೆಯನ್ನು ಮಾಡಿಸಿ, ಬಸವೇಶ್ವರನು ಬರುವದಕ್ಕಿಂತ ಮುಂಚೆ ದ್ವಿಜ ರನ್ನು, ಕರೆದು ಪೂಜಿಸಿದನು. ಆ ಸಂಗತಿಯನ್ನು ಬಸವೇಶನು ತನ್ನ ಸೇವಕರ ಮುಖದಿಂದ ಕೇಳಿದನು. ಅನಂತರ ಜಗದೇವನು ಬಸವೇಶ್ವರನನ್ನು ಕರೆಯುವದ ಕ್ಕಾಗಿ ಅವನ ಅರಮನೆಗೆ ಬಂದನು. ಬಸವೇಶ್ವರನು ಅವನ ಮುಖದರ್ಶನವನ್ನು ಮಾಡದೆ, ಮಧ್ಯದಲ್ಲಿ ತೆರೆಯನ್ನು ಹಾಕಿಸಿಕೊಂಡನು. ಹೀಗಿರಲು ಜಗದೇವ ಯ್ಯನು ಸ್ವಾಮಿ-ಭಕ್ತಸಮೂಹದೊಡನೆ ಶಿವಾರ್ಪಣಕ್ಕೆ ದಯಮಾಡಿಸಬೇ ಕೆಂದು ಹೇಳಲು; ಎಲೈ ಮೂಢನೇ, ಭವಿಗಳಸಂಬಂಧವುಳ್ಳ ನಿನಗೆ ಭಕ್ತಿಸಂಬಂ ದವೇಕೆ? ಜಗತ್ತ್ರಯಕ್ಕೂ ಸ್ವಾಮಿಯಾದ ಪರಶಿವನು ಕುಲದೈವವಾಗಿರುವಲ್ಲಿ ಭಕ್ತನಾದ ನಿನಗೆ ಹೀಗೆ ಬಹುಮಾರ್ಗ ಸಂಚಾರವು ಯುಕ್ತವಾದದ್ದೇ? ಶಿವಾ ರ್ಚನೆಯಲ್ಲಿ ಆಸಕ್ತಿಯುಳ್ಳ ಕೈಗಳಿಗೆ ಶಿವಭಕ್ತರ ದೂಷಣೆಯಲ್ಲಿ ಉದ್ಯುಕ್ತರಾದ ದ್ವಿಜರ ಪಾದಪೂಜೆಯು ಯೋಗ್ಯವಾದ್ದೇ? ಶಿರಸ್ಸಿನಲ್ಲಿ ಶಿವಪಾದೋದಕವನ್ನು ಧರಿಸಿದ್ದರಿಂದ ಸಫಲವಾದ ಜನ್ಮವುಳ್ಳ ನೀನು ಭವಿಗಳ ಪಾದೋದಕವನ್ನು ಧರಿಸುವದಕ್ಕೆ ಕಾರಣವೇನು? ಇದು ಸರಿಯಲ್ಲ. ಲಿಂಗಪ್ರಸಾದಸೇವನೆಯಿಂದ ಪರಿಶುದ್ಧನಾದ ಯಾವಪುರುಷನಿಗಾದರೂ ಭಕ್ತಿಹೀನರಾದ ದ್ವಿಜರ ಪಙ್ತಿಭೋ

ಜನವು ಹೊಂದುವದಕ್ಕೆ ಯೋಗ್ಯವಾದೀತೆ? ಭವವನ್ನು ಕಳೆದುಕೊಂಡ ಭಕ್ತನು ಭವಿಗಳೊಡನೆ ಭೋಜನ, ಸಂಭಾಷಣ, ಸಂಪರ್ಕ, ದರ್ಶನ, ಸ್ಪರ್ಶನಗಳನ್ನು ಕೂಡ ಮಾಡುವನುಂಟೆ? ಏಲೇಶ್ವರಕ್ಷೇತ್ರಪಾಲನೆಂಬ ಒಬ್ಬ ಮಹಾತ್ಮನಾದಭಕ್ತನಿದ್ದನು. ಅವನ ಶೀಲವು ಅದ್ಭುತವಾದದ್ದು. ಆತನಚರಿತ್ರೆಯನ್ನು ಹೇಳುತ್ತೇನೆಕೇಳು.

## ಏಲೇಶ್ವರ ಕ್ಷೇತ್ರಪಾಲನ ಕಥೆ

ಆತನು ತನ್ನಹೆಂಡತಿ, ಮಕ್ಕಳು, ಸ್ನೇಹಿತರು, ಒಡಹುಟ್ಟಿದವರು, ದಾಸಿಯರು ಮೊದಲಾದತನ್ನ ಮನೆಯ ಜನರನ್ನು ಲಿಂಗಧಾರಕರನ್ನು ಮಾಡಿ, ಲಿಂಗಬಾಹ್ಯರಾದ ಸಮೀಪದ ವಿದ್ವಾಂಸರನ್ನು ಕೂಡ ನೋಡನು. ಅವರ ಅಂಗಗಳನ್ನು ಮೆಟ್ಟನು. ಅವರ ಮಾತನ್ನು ಕೇಳನು. ಸ್ವಕೀಯ ಜನರಿಗೆ ಸನ್ಮಾನವನ್ನು ಮಾಡುವನಲ್ಲದೆ, ಇತರರಿಗೆ ಮಾಡುವದಿಲ್ಲ. ತಾನು ಕೂಡ ಪರರಿಂದ ಯಾವಾಗಲೂ ಸನ್ಮಾನವನ್ನು ಹೊಂದುವದಿಲ್ಲ. ಭವಿಗಳೊಬ್ಬರಿಗೂ ಒಂದು ಪದಾರ್ಥವನ್ನು ಮಾರುವದಿಲ್ಲ, ಅವರಿಂದ ಕೊಂಡುಕೊಳ್ಳುವದೂ ಇಲ್ಲ. ಭವಿಯಿಂದ ಏನನ್ನೂ ತೆಗೆದುಕೊಳ್ಳುವದಿಲ್ಲ. ಭವಿಗಳಿಗೆ ಏನನ್ನೂ ಕೊಡುವದಿಲ್ಲ. ಹೀಗೆ ಮಹಾವ್ರತಸ್ಥನಾದಕ್ಷೇತ್ರಪಾಲನು ಭವಿಗಳ ಸಂಗವನ್ನು ಬಿಟ್ಟು ನಡೆಯುತ್ತಿರಲಾಗಿ; ದುಷ್ಟರೆಲ್ಲರೂ ಸೇರಿ, ಸದಾಚಾರವನ್ನು ದೂಷಿಸುವವರಾಗಿ, ಇವನು ಭವಿಯ ಕೈಯಿಂದ ಯಾವ ಪದಾರ್ಥವನ್ನೂ ಮುಟ್ಟುವದಿಲ್ಲವಷ್ಟೆ. ಅದನ್ನು ನೋಡೋಣ ಎಂದು ಆಲೋಚಿಸಿ, ಆತನ ಧಾನ್ಯ ರಾಶಿಯನ್ನು ಸುಟ್ಟು ಬೂದಿ ಮಾಡಿದರು. ಅದನ್ನು ಕ್ಷೇತ್ರಪಾಲನು ನೋಡಿ ನಕ್ಕು, ಬಂಡಿಗಳಿಂದ ಬೂದಿಯ ರಾಶಿಯನ್ನು ತರಿಸಿ, ಬೀಜದ ಕಾಳನ್ನು ಎರಚುವಂತೆ ಗದ್ದೆಗೆ ಎರಚಿದನು. ಅದರಲ್ಲಿ ಆ ಮಹಾತ್ಮನು ಮುಂಚಿಗಿಂತಲೂ ಹೆಚ್ಚಾಗಿ ಧಾನ್ಯವನ್ನು ಪಡೆದನು. ಸತ್ಪುರುಷನಾದವನು ಕಯ್ಯಲ್ಲಿ ಮಣ್ಣನ್ನು ಹಿಡಿದಾಗ್ಯೂ ಚಿನ್ನವಾಗುತ್ತದೆ. ಇದಲ್ಲದೆ ದುಷ್ಟರಾದ ಜೈನರು ಕಳ್ಳರ ಕೈಯಿಂದ ಅವನ ಗೋವುಗಳನ್ನು ಅಪಹಾರ ಮಾಡಿಸಿದರು. ಆ ಕಳ್ಳರು ಏಳು ದಿವಸ ಪ್ರಯಾಣದಿಂದ ಹೋದತಕ್ಕ ಪ್ರದೇಶಕ್ಕೆ ತೆಗೆದುಕೊಂಡು ಹೋದರು. ಆ ಗೋವುಗಳು ಒಂದು ಹುಲ್ಲುಕಡ್ಡಿಯನ್ನೂ ತಿನ್ನಲಿಲ್ಲ. ಒಂದು ಹನಿ ನೀರನ್ನೂ ಕುಡಿಯಲಿಲ್ಲ. ಅವುಗಳನ್ನು

ಆ ಕಳ್ಳರು ಪೈರಿನ ನಡುವೆ ತಂದು ಬಿಟ್ಟರು. ಅದರಲ್ಲಿ ಸ್ವಲ್ಪವನ್ನೂ ಮುಟ್ಟಲಿಲ್ಲ ಬಳಿಕ ಆ ಗೋವುಗಳ ಸ್ಥಿತಿಯನ್ನು ಕಂಡು ಈ ಗೋವುಗಳು ಏಳು ದಿನಗಳಿಂದಲೂ ಹುಲ್ಲು ತಿಂದಿಲ್ಲ. ಸೀರು ಕುಡಿದಿಲ್ಲ. ಇನ್ನುಮೇಲೆ ಸತ್ತೇಹೋಗುವವು. ಎಂದು ಕಳ್ಳರು ಒಬ್ಬರಿಗೊಬ್ಬರು ಮಾತಾಡಿಕೊಂಡು, ಅವುಗಳನ್ನು ಬಿಟ್ಟುಬಿಟ್ಟರು. ಆ ಗೋವುಗಳು ಒಂದೇ ದಿನದೊಳಗಾಗಿ ತಮ್ಮ ಮನೆಗೆ ಬಂದು ಸೇರಿದವು. ಆ ಕ್ಷೇತ್ರಪಾಲನು ಒಂಭತ್ತನೇ ದಿನದ ಪ್ರಾತಃಕಾಲದಲ್ಲಿ ಕೊರಳನ್ನು ಎತ್ತಿಕೊಂಡು ಹುಂಭಾರವವನ್ನು ಮಾಡುತ್ತಾ, ಲಿಂಗದ ಮೇಲಣ ಧ್ಯಾನದಿಂದ ಕೃಶವಾಗಿ ಬಂದ ಆ ಗೋವುಗಳನ್ನು ಸೋಡಿ, ವ್ರತಭಂಗವನ್ನು ಹೊಂದಿದ ಈ ಗೋವುಗಳು ಕೊಟ್ಟಿಗೆಯನ್ನು ಪ್ರವೇಶಿಸುವದಕ್ಕೆ ಯೋಗ್ಯಗಳಲ್ಲವೆಂದು ನಿಶ್ಚೈಸಿ, ಶೀಘ್ರದಲ್ಲಿ ಆ ಕೊಟ್ಟಿಗಯ ಬಾಗಿಲ ಕದವನ್ನು ಮುಚ್ಚಿದನು. ಅನಂತರದಲ್ಲಿ ಆ ಗ್ರಾಮಸ್ಥರು ಹುಲ್ಲು ನೀರುಗಳನ್ನು ತಂದುಕೊಡಲು, ಅವುಗಳನ್ನು ಮುಟ್ಟದೆ, ಲಿಂಗದರ್ಶನಲ್ಲಿ ಆಸಕ್ತಿಯುಳ್ಳವುಗಳಾಗಿ ಕೊಟ್ಟಿಗೆಯ ಸುತ್ತಲೂ, ತಿರಿಗಿದವು. ಅವುಗಳ ಹುಂಬಾರವವನ್ನು ಕೇಳಿ ಕರುಗಳು ವ್ರತಭ್ರಷ್ಟರ ಸಂಗಡ ಸಂಭಾಷಣೆಯು ಯೋಗ್ಯವಲ್ಲವೆಂದು ಪ್ರತಿಧ್ವನಿಯನ್ನು ಕೊಡಲಿಲ್ಲ. ಆಗ ಕ್ಷೇತ್ರಪಾಲನು ಹುಲ್ಲನ್ನು ಮುಟ್ಟದಿರುವ ಆ ಗೋವುಗಳನ್ನು ನೋಡಿ, ವ್ರತಭ್ರಷ್ಟಗಳಾಗಿಲ್ಲವೆಂದು ತಿಳಿದು, ಸಂತೋಷದಿಂದ ಕೊಟ್ಟಿಗೆಯ ಬಾಗಿಲ ಕದವನ್ನು ತೆರೆದನು. ಆ ಗೋವುಗಳು ಕೊಟ್ಟಿಗೆಯನ್ನು ಹೊಕ್ಕು ತಮ್ಮ ತಮ್ಮ ಲಿಂಗವನ್ನು ಸೋಡಿ, ವಿಕಸಿತವಾದ ನೇತ್ರವುಳ್ಳವುಗಳಾಗಿ ತಮ್ಮ ತಲೆಗಳಿಂದ ಲಿಂಗವನ್ನು ಮುಟ್ಟಿ ಪ್ರದಕ್ಷಿಣವನ್ನು ಮಾಡಿ ಹುಲ್ಲು ತಿಂದು ನೀರು ಕುಡಿದು ದಣಿವನ್ನಾರಿಸಿಕೊಂಡವುಗಳಾಗಿ ಪ್ರೇಮದಿಂದ ಹುಂಬಾ ಧ್ವನಿಗಳಿಂದ ಕರುಗಳನ್ನು ಕರೆದವು. ಕರುಗಳು ಕೂಡ ಹಗ್ಗವನ್ನು ಕಿತ್ತುಕೊಂಡು ಬಾಲವನ್ನೆತ್ತಿ ಹಾರುತ್ತಾ ಬಂದು ವ್ರತಸ್ಥಗಳಾದ ತಮ್ಮ ತಾಯಿಗಳನ್ನು ಧ್ವನಿಗಳಿಂದ ಸಂತೋಷಪಡಿಸಿದವು. ಹಸುಗಳು ವಾತ್ಸಲ್ಯದಿಂದ ಕೆಚ್ಚಲದೆಸೆಯಿಂದ ಸ್ರವಿಸುವ ಕ್ಷೀರವುಳ್ಳವುಗಳಾಗಿ ಕರುಗಳ ಮೈಗಳನ್ನು ನೆಕ್ಕಿದವು. ಹೀಗೆ ಭಕ್ತರಮನೆಯ ಹಸುಗಳೂ ಕೂಡ ವ್ರತದಲ್ಲಿರುತ್ತವೆ.

---

## ನಾಚಿದೇವನ ಕಥೆ

ಇದಲ್ಲದೆ ನಾಚಿದೇವಯ್ಯನೆಂದು ಪ್ರಸಿದ್ಧನಾದ ಒಬ್ಬ ಭಕ್ತನಿದ್ದನು. ಗರ್ಭಿಣಿಯಾಗಿದ್ದ ಆತನ ಪತ್ನಿಯು ಅವಳಿ ಮಕ್ಕಳನ್ನು ಹೆತ್ತಳು. ಅವುಗಳೊಳಗೆ ಮೊದಲುಹುಟ್ಟಿದ ಕೂಸಿನಕೊರಳಲ್ಲಿ ಪೂರ್ವದಲ್ಲಿಯೇ ಸಂಪಾದಿಸಲ್ಪಟ್ಟಿದ್ದ ಲಿಂಗವನ್ನು ಕಟ್ಟಿದನು. ಎರಡನೆ ಕೂಸಿಗೆಲಿಂಗವಿಲ್ಲದ್ದರಿಂದ ಅದರಮುಖವನ್ನೂನೋಡದೆ—ಲಿಂಗವಿಲ್ಲದ ಈ ಭವಿಯಾದ ಕೂಸನ್ನು ಹೊರಗೆ ಬಿಸಾಡೆಂದು ಹೇಳಿದಕೂಡಲೇ ಆಚಾರದಿಂದಲಂಕೃತೆಯಾದ ಆಕೆಯು ಆ ಕೂಸನ್ನು ಗಂಡನ ಮುಂದಕ್ಕೆ ಹಾಕಿದಳು. ಈ ಶಿಶುವಿಗೆ ಅರ್ಧೋದಯದಲ್ಲಿ ಇಷ್ಟಲಿಂಗದ ಸಂಬಂಧವುಂಟಾಗಲಿಲ್ಲವೆಂದು ನಾಚಿದೇವನು ಅದನ್ನು ಹೊರಗೆಹಾಕಿಸಿದನು. ಸನ್ಮಾರ್ಗವಿದ್ದರೂ ನೀಚಮಾರ್ಗವನ್ನನುಸರಿಸುವದರಿಂದ ಫಲವೇನು? ದ್ರೋಹಿಗಳ ಸಹವಾಸವು ಯಾರಿಗೆ ತಾನೇ ಒಳ್ಳೆಯದನ್ನು ಮಾಡೀತು? ಪಶುಗಳಪಾಶವನ್ನು ಛೇದಿಸುವ ಪತಿಯು ಸಮರ್ಥನಾಗಿದ್ದರೂ, ಯಾವಮನುಷ್ಯಾಧಮರು ಪಶುಕೋಟಿಯಲ್ಲಿ ಸೇರಿದ ವಿಷ್ಣ್ವಾದಿಗಳನ್ನು ಆಶ್ರಯಿಸಿ ಪಶುತ್ವವನ್ನು ತಪ್ಪಿಸಿಕೊಳ್ಳಬೇಕೆಂದು ಅಪೇಕ್ಷಿಸುತ್ತಾರೋ ಅವರ ಕಿವಿಮೂಗನ್ನು ಬುಡದವರಿಗೆ ಕೊಯ್ದು ಶಿವನು ಇಟ್ಟಿಗೆಯಿಂದ ಉಜ್ಜುತ್ತಾನೆ. ಶಿವನು ಕರ್ಮಿಗಳ ಹೃದಯದಲ್ಲಿ ಹ್ಯಾಗೆತಾನೆ ವಾಸಿಸುವನು? ಎಲಾ ನೀಚನೆ, ನೀನು ಹ್ಯಾಗೆ ಜಗದೀಶನನ್ನು ತಿಳಿದೀಯೆ? ಕುರುಡನು ದೀಪವನ್ನು ನೋಡಬಲ್ಲನೇ? ಕಿವುಡನು ಶಬ್ದವನ್ನು ಕೇಳಬಲ್ಲನೇ! ಜ್ವರಪೀಡಿತನಾದವನು ಹಾಲಿನರುಚಿಯನ್ನು ತಿಳಿಯಬಲ್ಲನೇ ? ನೊಣಗಳು ಮಕರಂದನ್ನೂ, ಕಪ್ಪೆಗಳು ಸಮುದ್ರದಗಾಂಭೀರ್ಯವನ್ನೂ ತಿಳಿಯಬಲ್ಲವೇ ? ಕೋತಿಯು ರತ್ನ ಪರೀಕ್ಷೆಯಲ್ಲಿ ಜಾಣ್ಮೆಯನ್ನು ಧರಿಸೀತೇ? ಮಲಭಕ್ಷಣೆಯಲ್ಲಿ ಆಸಕ್ತವಾದ ನಾಯಿಯು ಸ್ವರ್ಗಸುಖಗಳನ್ನು ಬಲ್ಲದೇ? ಗೂಬೆಯು ಉರಿಯುವ ತೇಜಸ್ಸುಳ್ಳ ಸೂರ್ಯನನ್ನು ನೋಡಬಲ್ಲದೇ! ಏಕಲಿಂಗನಿಷ್ಠೆಯು ಮುಖದಲ್ಲಿ ದ್ರವಿಸುವ ಅಮೃತಧಾರೆಗೂ, ಅಂಗಳದಲ್ಲಿರುವ ನಿಕ್ಷೇಪಕ್ಕೂ ನೆಲೆಮಾಳಿಗೆಯಲ್ಲಿ ತುಂಬಿದ ಜೇನಿಗೂ ಸಮಾನವಾಗಿದೆ. ಅಮೂಲ್ಯವಾದ ರತ್ನವಿರಲಾಗಿ ಅಲ್ಪವಾದ ಗಾಜಿನ ಚೂರಿನಲ್ಲಿಯೂ ಸಕ್ಕರೆಯಿರಲಾಗಿ ಮರಳಿನಲ್ಲಿಯೂ, ಪಾಶುಪತಾಸ್ತ್ರ ವಿರಲಾಗಿ ಅಲ್ಪವಾದ ಚೂರಿಯಲ್ಲಿಯೂ ಕಾಮಧೇನುವು ಮುಂದುಗಡೆ ಯಿರುವಲ್ಲಿ ಬಂಜೆಹಸುವಿನಲ್ಲಿಯೂ, ಕಲ್ಪವೃಕ್ಷವು

ಹಿತ್ತಿಲಲ್ಲಿರುತ್ತಿರಲಾಗಿ ಕಾಡಮರದಲ್ಲಿಯೂ ಹೊಳೆಯನ್ನು ದಾಟುವ ಸಮಯದಲ್ಲಿ ಹಡಗನ್ನುಬಿಟ್ಟು ತೆಪ್ಪದಲ್ಲಿಯೂ ಆಸಕ್ತವಾದಂತೆ ಮೋಕ್ಷಮಾರ್ಗವನ್ನು ಕೊಡುವಂಥ ಏಕಲಿಂಗವ್ರತವೆಂಬ ಘನವಾದಮಾರ್ಗವಿರಲಾಗಿ ಮೂಢಾತ್ಮರು ಬೇರೆಮಾರ್ಗದಲ್ಲಿ ವರ್ತಿಸುತ್ತಾರೆ. ಮೂಢಾತ್ಮನಿಗೆ ಬೋಧಿಸಿದರೆ ಹ್ಯಾಗೆತಾನೇ ಭಕ್ತಿಕ್ರಿಯೆಯನ್ನನುಸರಿಸಿಯಾನು ? ಕಂಬಳಿಯನ್ನು ನೀರಿನಿಂದ ತೊಳೆಸಿದರೆ ನಿರ್ಮಲವಾದೀತೇ ! ನಾಯಬಾಲಕ್ಕೆ ದಬ್ಬೆಯನ್ನು ಕಟ್ಟಿದರೆ ನೆಟ್ಟಗಾದೀತೇ ? ಕಲ್ಲನ್ನು ನೀರಿಂದ ತೊಳೆದರೆ ಮೃದುವಾದೀತೇ ? ಹಾವಿಗೆ ಹಾಲನ್ನೆರೆದರೆ ವಿಷವನ್ನು ಬಿಟ್ಟೀತೇ? ಬೇವಿನಬೀಜವನ್ನು ಜೇನುತುಪ್ಪದಿಂದ ಅರೆದರೆ, ಕಹಿಯನ್ನು ಬಿಟ್ಟೀತೇ? ಕರೆಯುವ ಹಸುವನ್ನು ಬಿಟ್ಟು ಹೂವುಗಳಿಂದ ನಾಯಿಗಳನ್ನು ಪೂಜಿಸಿದಂತೆ ಶಿವನನ್ನು ಬಿಟ್ಟು ಜೀವಕೋಟಿಯಲ್ಲಿಸೇರಿದ ವಿಷ್ಣ್ವಾದಿದೇವತೆಗಳನ್ನು ಸೇವಿಸಿದರೆ ಯಾವಫಲವುಂಟಾದೀತು! ದಕ್ಷಬ್ರಹ್ಮನು ಶಿವನನ್ನು ಬಿಟ್ಟು ಯಜ್ಞಗಳನ್ನುಮಾಡಿ ತಲೆಯನ್ನು ಕಳಕೊಂಡನು. ಗೌತಮನು ದ್ವಿಜರನ್ನು ಪೂಜಿಸಿ, ಗೋಹತ್ಯಾದೋಷಕ್ಕೆ ಗುರಿಯಾದನು. ಪೂರ್ವದಲ್ಲಿ ಪರಶುರಾಮನು ದ್ವಿಜಕುಲದವರಿಗೆ ಭೂಮಿಯನ್ನು ದಾನವಾಗಿ ಕೊಟ್ಟು, ಕಡೆಗೆ ಅವರಿಂದ ದೂರಡಿಸಲ್ಪಟ್ಟವನಾಗಿ, ಸಮುದ್ರನ್ನು ವಾಸಕ್ಕಾಗಿ ಸ್ವಲ್ಪ ಸ್ಥಲಕೊಡೆಂದು ಕೇಳಿದನು. ವೇದವೇದಾಂಗ ಶಾಸ್ತ್ರಗಳನ್ನು ಬಲ್ಲವರಾದ ಕೋಟಿವಿಪ್ರರಿಗೆ ಕೊಟ್ಟದ್ದಕ್ಕಿಂತಲೂ ಒಬ್ಬ ಶಿವಭಕ್ತನಿಗೆ ಕೊಟ್ಟ ಅನ್ನವು ಅಕ್ಷಯವಾಗುತ್ತದೆ.

ಈ ಪ್ರಕಾರವಾಗಿ ಬಸವೇಶನಿಂದ ಬೋಧಿಸಲ್ಪಟ್ಟ ಜಗದೇವನು ಭಯದಿಂದ ಸಾಷ್ಟಾಂಗ ನಮಸ್ಕಾರವಂಮಾಡಿ, ಎದ್ದು ಕೈಗಳನ್ನು ಮುಗಿದುಕೊಂಡು—ನಾನು ಕರ್ಮದತೊಡಕಿನಲ್ಲಿ ಸಿಕ್ಕಿರುವವನೂ, ದುರ್ಜನರಲ್ಲಿ ಮೊದಲನೆಯವನೂ, ದುಷ್ಟನೂ, ಪಾಪಗಳಿಗೆ ಜನ್ಮಸ್ಥಳವೂ, ಬುದ್ಧಿಹೀನನೂ, ಅಪರಾಧಗಳಗಣಿಯೂ, ಅವಿವೇಕಿಶಿಖಾಮಣಿಯೂ ಆಗಿದ್ದೇನೆ. ಆದಕಾರಣ ನನ್ನಪ್ರಾಣತ್ಯಾಗರೂಪವಾದ ಪ್ರಾಯಶ್ಚಿತ್ತವು ವಿಧಿಸಲ್ಪಡಲಿ. ಎಂದು ಹೇಳಿ, ನಮ್ರನಾಗಿದ್ದ ಜಗದೇವನಿಗೆ ಬಸವೇಶನು ಹೇಳಿದ್ದೇನಂದರೆ—ಅಯ್ಯಾ ಪ್ರಮಥರಪ್ಪಣೆಯಿಂದ ಮುಂದೆ ಈ ಪಟ್ಟಣದಲ್ಲಿ ಶಿವದ್ರೋಹವು ನಡೆಯುವದು, ಆದ್ರೋಹಮಾಡಿದ ಪಾಪಿಯನ್ನು ಯಮಪುರಿಗೆ ಕಳುಹಿಸು. ಎಂದು ಹೇಳಿದನು. ಸ್ಥಿರಚಿತ್ತನಾದ ಜಗದೇವನು ಹಾಗೇಆಗಲೆಂದು ಸಮ್ಮತಿಸಿದವನಾಗಿ ವಿಜಯಾಸಕ್ತನಾಗಿ, ಬಸವೇಶನಿಂಕೊಡ

ಲ್ಪಟ್ಟ ವೀರತಾಂಬೂಲವನ್ನು ತೆಗೆದುಕೊಂಡನು. ಅನಂತರದಲ್ಲಿ ಆತನ ಪ್ರತಿಜ್ಞೆಯನ್ನೂ ಸ್ಥಿರಪ್ರಯತ್ನವನ್ನೂ ಕೇಳಿ ಆನಂದಪಟ್ಟ ಚಿತ್ತವುಳ್ಳ ಭಕ್ತರೊಡನೆ, ಬಸವೇಶನು ಆ ಜಗದೇವನ ಮನೆಗೆ ಹೋದನು. ಆತನು ಭಕ್ತಗಣಸಮೇತನಾದ ಬಸವೇಶನನ್ನು ಪೂಜಿಸಿದನು. ಆತನ ಪೂಜೆಯನ್ನು ಕೈಕೊಂಡು ಬಸವೇಶನು ತನ್ನಮನೆಯನ್ನೈದಿದನು.

ಬಸವೇಶವಿಜಯದಲ್ಲಿ ನಲವತ್ತು ಮೂರನೆಯ ಅಧ್ಯಾಯವು ಸಂಪೂರ್ಣವು.

---

## ನಲವತ್ತನಾಲ್ಕನೆಯ ಅಧ್ಯಾಯವು.

### ಬಸವೇಶನೈಕ್ಯವು.

ಅನಂತರದಲ್ಲಿ ಆ ಬಸವೇಶನಿಗೆ ಇಷ್ಟರಾಗಿಯೂ, ಲಿಂಗನಿಷ್ಠೆಯಲ್ಲಿ ನಿರತರಾಗಿಯೂ, ಜಂಗಮಪೂಜೆಯಲ್ಲಿ ಆಸಕ್ತರಾಗಿಯೂ, ಶಿವಾಚಾರ ಸಂಪನ್ನರಾಗಿಯೂ, ಯಶಸ್ಸುಳ್ಳವರಾಗಿಯೂ, ಇರುವ ಅಲ್ಲಯ್ಯ ಮಧುವಯ್ಯ, ಎಂದು ಪ್ರಖ್ಯಾತರಾದ ಇಬ್ಬರು ಶಿವಭಕ್ತರಿದ್ದರು. ಅವರು ಪರಸ್ಪರ ಸ್ನೇಹವುಳ್ಳವರೂ, ಒಂದೇವಿಧವಾದಸದಾಚಾರನಿಯಮಗಳುಳ್ಳವರೂಆಗಿರುವಲ್ಲಿ ದ್ವೇಷಿಗಳಾದವರು. ಬಿಜ್ಜಳರಾಯನ ಸಮೀಪದಲ್ಲಿ ಅವರಿಬ್ಬರನ್ನು ಅನಾಚಾರದಲ್ಲಿ ಬಿದ್ದಿದ್ದಾರೆಂದು ಚಾಡಿಯನ್ನು ಹೇಳಿದರು. ರಾಯನು ಬಸವೇಶನ ಮಹಿಮೆಯನ್ನು ತಿಳಿದಿದ್ದಾಗ್ಯೂ ಆ ದ್ವೇಷಿಗಳು ಹೇಳಿದ ಮಾತಿನಮೇಲೆ ಅವರಿಬ್ಬರ ಕಣ್ಣುಗಳನ್ನು ಕೀಳಿಸಿದನು. ಬಸವೇಶ ಮುಂತಾದ ಭಕ್ತರು ಆ ವಾರ್ತೆಯನ್ನು ಕೇಳಿ, ಒಂದು ಕಡೆಯಲ್ಲಿ ಸೇರಿ, ಶಿವನಪ್ಪಣೆಯಿಂದ ಅವರಿಬ್ಬರ ನೇತ್ರಗಳನ್ನು ಬರಮಾಡಿ—ಇನ್ನು ಮೇಲೆ ಈ ಪಟ್ಟಣದಲ್ಲಿ ಭಕ್ತದ್ರೋಹಿಯಾದ ಬಿಜ್ಜಳನ ಪ್ರಾಣವನ್ನು ತೆಗೆಯುವ ವಿಷಯದಲ್ಲಿ ಪ್ರತಿಜ್ಞೆಮಾಡಿದ ಜಗದೇವನು ಹೊರತು ನಮ್ಮೊಳಗೆ ಒಬ್ಬರಾದರೂ ಒಂದು ಕ್ಷಣವಾದರೂ ಇರತಕ್ಕದ್ದು ಸರಿಯಲ್ಲ. ಈ ಪ್ರಕಾರವಾಗಿ ಸರ್ವರೂ ಆಲೋ

ಚಿಸಿ ಬಸವೇಶನನ್ನು ಮುಂದಿಟ್ಟುಕೊಂಡು ಬಿಜ್ಜಳನನ್ನು ಶಪಿಸುತ್ತಾ, ಕೂಡಲಿ ಸಂಗಮಸ್ಥಾನವನ್ನೈದಿದರು.

ಸಕಲ ಶಿವಭಕ್ತರೂ ಸ್ವಾಮಿಗಳೊಡನೆ ಹೊರಟು ಹೋಗುತ್ತಿರಲಾಗಿ. ಆ ಮಹಾತ್ಮರಕೂಡ ಕಲ್ಯಾಣ ಪಟ್ಟಣದ ಐಶ್ವರ್ಯವೂ ಹೊರಟು ಹೋಯಿತು. ಬಳಿಕ ಮಧ್ಯಾಹ್ನವೇಳೆಯಲ್ಲಿ ಆಕಾಶದಲ್ಲಿ ನಕ್ಷತ್ರಗಳು ಕಾಣಿಸಿದವು. ಪ್ರತಿಯೊಬ್ಬರ ಮನೆಯಲ್ಲಿಯೂ, ಕಾಲಮೇಘಕ್ಕೆ ಸಮಾನವಾದಯಮನು ಕಾಣಿಸಿಕೊಂಡನು. ಅಹೋರಾತ್ರಿಗಳಲ್ಲಿ ಪುರ ಪ್ರಾಂತದಲ್ಲಿ ಹೊಗೆ ಯಾವರಿಸಿ ಕೊಂಡಿತು. ಕಲ್ಲಿನಮಳೆ ಸುರಿಯಿತು. ಜಾಲಚುಕ್ಕಿ ಧೂಮಕೇತುಗಳು ಭೂಮಿಗೆ ಬಿದ್ದವು. ಸೂರ್ಯಮಂಡಲದ ಸುತ್ತಲೂ, ಗುಡಿ ಕಟ್ಟಿತು. ಎಲ್ಲಾ ದಿಕ್ಕುಗಳಲ್ಲಿಯೂ ಗೋಳಾಟದ ಶಬ್ದವು ಕೇಳಿಸಿತು. ಭೂಮಿಯು ಪರ್ವತಗಳೊಡನೆ ಕಂಪಿಸಿತು. ಬಿಜ್ಜಳನು ಕನ್ನಡಿಯಲ್ಲಿ ನೋಡಿಕೊಳ್ಳುವಾಗ ತಲೆಯಿಲ್ಲದ ಪ್ರತಿ ಬಿಂಬವನ್ನು ಕಂಡನು, ಆತನು ಕುಳಿತುಕೊಂಡಿದ್ದ ಸಿಂಹಾಸನವು ನಡುಗಿತು. ಅಲ್ಲಲ್ಲಿ ನೆಲದಮೇಲೆ ಸಿಡಿಲು ಆವಿರ್ಭವಿಸಿತು. ಮೇಘಗಳು ರಕ್ತದ ಮಳೆಯನ್ನು ಸುರಿಯುತ್ತಾ ಆಕಾಶದಲ್ಲಿ ತಿರುಗಿದವು. ಈ ಪ್ರಕಾರವಾದ ದುಶ್ಶಕುನಗಳನ್ನು ಕಂಡು ಕೆಲವು ಜೈನರು ಭಯದಿಂದ ಕಾಂತಿ ಹೀನರಾಗಿ ಕಲ್ಯಾಣ ಪಟ್ಟಣವನ್ನು ಬಿಟ್ಟು ಹೊರಟು ಹೋದರು. ಆ ಸಮಯದಲ್ಲಿ ವೀರಭಕ್ತಿರಸಾತಿಶಯದಿಂದ ಕೂಡಿದ ಮನಸ್ಸಂಪತ್ತುಳ್ಳ ಜಗದೇವನ ತಾಯಿಯು, ಜಯದಲ್ಲಿ ಉದ್ಯುಕ್ತನಾದ ಮಗನನ್ನು ಕುರಿತು–ಯಾವನು ಶಿವದ್ರೋಹವನ್ನಾಗಲಿ ಶಿವಭಕ್ತದ್ರೋಹವನ್ನಾಗಲಿ ಕೇಳಿ ಸಹಿಸಿಕೊಳ್ಳುತ್ತಾನೋ ಅವನು ಪಾಪಿಯಾಗುವನು. ಭಕ್ತನಾದವನು ದ್ರೋಹಿಯನ್ನು ಕೊಲ್ಲಬೇಕು ಇಲ್ಲವೆ ತನ್ನನ್ನಾದರೂ ಕೊಂದು ಕೊಳ್ಳಬೇಕು. ದಾಕ್ಷಾಯಣಿಯು ಶಿವದ್ರೋಹವನ್ನು ಕೇಳದಕ್ಷಣವೇ ತಾನು ಯಾಗಾಗ್ನಿಯಲ್ಲಿ ದೇಹವನ್ನು ಬಿಡಲಿಲ್ಲವೇ? ಉಪಮನ್ಯುಮುನಿಯು ಶಿವದ್ರೋಹವನ್ನು ಕೇಳಿ ಆಕ್ಷಣವೇ ಭಸ್ಮೀಭೂತನಾಗಲಿಲ್ಲವೇ? ಶಿವದ್ರೋಹವನ್ನು ನೋಡಿದ ಮೇಲೆ ಒಂದು ಕ್ಷಣ ಮಾತ್ರವಾದರೂ ಪ್ರಾಣಧಾರಣೆ ಮಾಡಿಕೊಂಡಿರುವವನೇ ಮೂಢನು. ದುರ್ಬುದ್ಧಿಯೂ ಕಪಟಿಯೂ ಆದವನಿಗೆ ಶಿವನು ಹ್ಯಾಗೆ ಪ್ರಸನ್ನನಾದಾನು ! ಪ್ರಮಥರು ತಕ್ಕಕಾಲದಲ್ಲಿ ಪ್ರಾಣತ್ಯಾಗ ಮಾಡುವದರಲ್ಲಿ ಉದ್ಯುಕ್ತನಾದ ನಿನ್ನನ್ನು ಉದ್ದೇಶಿಸಿ, ಸಂತೋಷಪಟ್ಟರು. ಆದರೆ ಆ ಪ್ರಾಣತ್ಯಾಗಕ್ಕೆ ಯೋಗ್ಯವಾದ ಕಾಲವ

ನ್ನು ಹೇಳಿ ಹೊರಟುಹೋದರು. ಪ್ರಮಥರಲ್ಲಿ ಒಬ್ಬನೇ ಮೂರು ಲೋಕಗಳನ್ನೂ ಸಂಹರಿಸ ಬಲ್ಲನು. ಅಪರಿಮಿತವಾದ ಶಕ್ತಿಯುಳ್ಳ ಅವನಿಗೆ ರಾಜರು ಲಕ್ಷ್ಯವೇ? ನಾನು ಸೌರಾಷ್ಟ್ರ ಸೋಮೇಶನ ಸೇವೆಗೆ ಹೋಗಿರುವಲ್ಲಿ ಮೂಢಬುದ್ಧಿಯಾದ ನೀನು ದ್ವಿಜಪೂಜೆಯನ್ನು ಮಾಡಿದೆ; ಆಗ ನಾನು ಇಲ್ಲಿದ್ದರೆ ನನಗೂ ನರಕ ವಾಗುತ್ತಿತ್ತು. ಈಗ ಅದಕ್ಕಿಂತಲೂ ನೀನು ನೂರರಷ್ಟು ಪಾಪವನ್ನು ಮಾಡಿದೆ; ಶಿವದ್ರೋಹಿಯ ಪ್ರಾಣಗಳನ್ನು ತೆಗೆಯದೆ ಶಿವಪ್ರಸಾದವನ್ನು ಸೇವಿಸುವದಕ್ಕೆ ಬಂದಿದ್ದೀಯೆ; ಶಿವದ್ರೋಹಿಯನ್ನು ಕೊಲ್ಲದೆ ನೀನು ಶಿವಪ್ರಸಾದಕ್ಕೆ ಹ್ಯಾಗೆ ಯೋಗ್ಯನಾದೀಯೆ; ನೀನು ನಾಯಿಯೇ ಆಗಿದ್ದೀಯೆ; ಆದ್ದರಿಂದ ಆ ನಾಯಿಯಂತೆ ಹೊರಗಿದ್ದುಕೊಂಡು ನಾಲಗೆಯ ತುದಿಯಿಂದಲೇ ತಿನ್ನು ಎಂದು ಪ್ರಸಾದವನ್ನು ನೆಲದ ಮೇಲೆ ಹಾಕಿ, ಉಚ್ಚಿರೇ ಉಚ್ಚಿರೇ ಎಂದು ಕರೆದು ಚಿಟಿಕಿ ಹಾಕಿದಳು. ಅವನು ಯುಕ್ತವೆಂದು ತಿಳಿದು, ಹಾಗೆಯೇ ಅನ್ನವನ್ನು ತಿನ್ನುವದಕ್ಕೆ ಉದ್ಯುಕ್ತನಾದನು. ಆಗ ಮಲ್ಲಯ್ಯ, ಬ್ರಹ್ಮಯ್ಯ ಎಂಬ ಭಕ್ತರಿಬ್ಬರು ಈ ವೃತ್ತಾಂತವನ್ನು ತಿಳಿದು, ಬಂದು, ಅವನೊಡನೆ ಭೋಜನವನ್ನು ಮಾಡಿದರು. ಭೋಜನಾನಂತರದಲ್ಲಿ ಆ ಮೂವರು ಒರೆಯಿಂದ ಕತ್ತಿಯನ್ನು ಹಿರಿದು ಕೈಯಲ್ಲಿ ಹಿಡಿದುಕೊಂಡವರಾಗಿ, ತಡೆಯಿಲ್ಲದೆ ರಾಜ ಸಭೆಯನ್ನೈದಿದರು. ಮೂರು ರೂಪನ್ನು ಧರಿಸಿದ ವೀರ ರಸವೋ ಎಂಬಂತೆಯೂ, ಮೂರು ರೂಪವನ್ನು ಧರಿಸಿದ ವೀರಭದ್ರನೋ ಎಂಬಂತೆಯೂ, ಇರುವ ಅವರನ್ನು ನೋಡಿ, ಸಭೆಯ ಜನರು, ಯುದ್ಧ ಸನ್ನದ್ಧಗಳಾದ ಪರ್ವತಗಳನ್ನಾಗಿ ತಿಳಿದರು. ಗುರಾಣಿಯನ್ನು ಬಡಿಯುವದರಿಂದ ಬಿಜ್ಜಳರಾಯನ ಪಾರ್ಶ್ವದಲ್ಲಿದ್ದ ಭಟರುಗಳನ್ನೆಲ್ಲಾ ಓಡಿಸಿ, ರಾಜನನ್ನು ಹೊಡೆದರು. ಶಿವಭಕ್ತರ ಕೈ ಸೋಂಕಿನಿಂದ ಪರಿಶುದ್ಧವಾದ ಆ ಯುದ್ಧದ ಶಿಕ್ಷೆಯಿಂದ ಬಿಜ್ಜಳನು ಶಿವಸ್ಮರಣೆಯನ್ನು ಮಾಡುತ್ತಾ, ಸ್ವರ್ಗವನ್ನೈದಿದನು. ಆ ವೀರರು ಅವನ ಹೊಟ್ಟೆಯನ್ನು ತಿವಿದು, ತಲೆಯನ್ನು ಸೀಳಿ ಅಲ್ಲಿಯೇ ಹಾಕಿ, ಶಿವಭಕ್ತರು ಜಯಶೀಲರಾಗಲಿ ಎಂದು ಗಟ್ಟಿಯಾಗಿ ಕೂಗಿದರು. ಪ್ರಮಥರ ಅಪ್ಪಣೆಯಿಂದ ನಾವು ಈ ಕಾರ್ಯವನ್ನು ಮಾಡಿದೆವು. ಇನ್ನು ಮೇಲೆ ಯಾವನು ಶಿವದ್ರೋಹಿಯೋ ಅವನಿಗೆ ಈ ವಿಧವಾದ ಗತಿಯೇ ಆಗುವದು. ಯಾರಿಗೆ ಶಿವ ಸೇವೆಯೇ ಅವರಿಗೆ ಪ್ರತಿ ಭಟರೇ ಇಲ್ಲ. ಎಂದು ಒಂದು ಚೀಟಿಯಲ್ಲಿ ಬರೆದು ಅವನ ತೋಳಿಗೆ ಕಟ್ಟಿ ಕಯ್ಯಿಂದ ಕತ್ತಿಯನ್ನು ಜಳಿಪಿಸುತ್ತಾ, ಹಾರುತ್ತಾ

ಡಾಡುತ್ತಾ ಬಿ[illegible]ವಳಿಯನ್ನು ಪಠಿಸಿದರು. ಬಿಜ್ಜಳನ ಪ್ರಾಣವೆಂಬ ವಾಯು ಗೆ ಸರ್ಪಸ್ವರೂಪನಾದಂಥ ಜಗದೇವನು ವೀರವ್ರತವನ್ನು ನೆರವೇರಿಸಿ, ಅವರಿಬ್ಬ ೊಡನೆ ಮನೆಗೆ ಬಂದು ತನ್ನ ತಾಯಿಗೆ ನಮಸ್ಕರಿಸಿದನು. ಆಕೆಯು ಪುತ್ರನನ್ನು ಲಿಂಗಿಸಿ ಆಶೀರ್ವದಿಸಿದಳು. ಆಗ ತಾಯಿಯ ಆಶೀರ್ವಾದದಿಂದ ವೃದ್ಧಿ ಹೊಂ ಸಲ್ಪಟ್ಟ ಶ್ರೇಯಸ್ಸುಳ್ಳ ಜಗದೇವನು, ಲೋಕದಲ್ಲಿ ಭಕ್ತಿಯುಳ್ಳವರು ಶಿವದ್ರೋ ಗಳನ್ನು ಸಂಹರಿಸಬೇಕು. ಆದ್ದರಿಂದ ಶಿವಭಕ್ತರ ಅಪ್ಪಣೆಯ ಪ್ರಕಾರ ಮಾಡ ಕ್ಕ ಕಾರ್ಯವನ್ನು ಈಗ ಮಾಡಿದೆನು. ಭಕ್ತರನ್ನು ಹಿಂಸಿಸುವ ಕಾಲದಲ್ಲಿ ನಾನು ಸುಮ್ಮನಿದ್ದೆನು; ಆದ್ದರಿಂದ ಆ ಪಾಪಕ್ಕೆ ಪ್ರಾಣ ತ್ಯಾಗವೇ ಪ್ರಾಯಶ್ಚಿತ್ತವಲ್ಲದೆ ಬೇರೆಯಿಲ್ಲವೆಂದು ಮನಸ್ಸಿನಲ್ಲಿ ಆಲೋಚಿಸಿ ನಿಶ್ಚೈಸಿ, ನಿರ್ಭಯನಾಗಿ ಕುತ್ತಿಗೆಗೆ ಕತ್ತಿಯನ್ನು ಚಾಚಿದನು. ಆಗ ಅವನ ಮಸ್ತಕದ ಮೇಲೆ ಪುಷ್ಪವೃಷ್ಟಿಯಾಯಿತು. ಅನಂತರದಲ್ಲಿ ಜಗದ್ಗುರುವಾದ ಶಿವನು ಜಗದೇವನನ್ನು ರತ್ನಖಚಿತವಾದ ವಿಮಾ ನದಮೇಲೆ ಕುಳ್ಳಿರಿಸಿಕೊಂಡು ಅವನ ತಾಯಿತಂದೆಗಳೊಡನೆ ಕೈಲಾಸಕ್ಕೆ ಕರ ಕೊಂಡು ಹೋದನು. ಬಿಜ್ಜಳನು ಸಂತಾನ ಹೀನನಾದ್ದರಿಂದ ಪಟ್ಟಣದ ಜನರೆ ಲ್ಲರೂ ರಾಜನಿಲ್ಲದ ಸ್ಥಲದಲ್ಲಿ ವಾಸಿಸುವದು ನೀತಿಯಲ್ಲವೆಂದು ತಿಳಿದು ಕಲ್ಯಾಣ ಪಟ್ಟಣವನ್ನು ಬಿಟ್ಟರು. ಬಸವೇಶನು ಜಗದೇವನ ಕಾರ್ಯವನ್ನು ಕೇಳಿ, ಸಂತುಷ್ಟ ನಾಗಿ ಭಕ್ತರೊಡನೆ ಕೂಡಲಿ ಸಂಗಮವನ್ನೈದಿ ಶ್ರೇಷ್ಠವಾದ ಆಕ್ಷೇತ್ರದಲ್ಲಿ ಇರುವಂಥ ಪರಮೇಶ್ವರನನ್ನು ಸ್ತುತಿಸಿದನು. ಶಿವನುಕೂಡ ದಯೆಯಿಂದ ಗುರು ರೂಪವನ್ನು ಧರಿಸಿದವನಾಗಿ ಆತನ ಮುಂದೆ ಬಂದು ನಿಂತನು. ಆಗ ಬಸವೇಶನು ಗುರುವರನ ಪಾದಕಮಲ ದರ್ಶನದಿಂದುಂಟಾದ ಸಂತೋಷದಿಂದ ಎದ್ದ ರೋ ಮಾಂಚದಿಂದ ಮುಚ್ಚಲ್ಪಟ್ಟ ದೇಹವುಳ್ಳವನೂ ಕಣ್ಣಿನಿಂದ ಸುರಿಯುತ್ತಿರುವ ಆನಂದ ಬಾಷ್ಪವುಳ್ಳವನೂ, ಬೇರೆ ವ್ಯಾಪಾರಗಳಲ್ಲಿ ಚಿತ್ತವಿಲ್ಲದವನೂ ಆಗಿ ಗದ್ಗದ ಸ್ವರದಿಂದ ಸ್ತುತಿಸುತ್ತಾ, ಭೂಮಿಯಮೇಲೆ ಸಾಷ್ಟಾಂಗ ಪ್ರಣಾಮವಂ ಮಾಡಿ ದನು. ಅನಂತರದಲ್ಲಿ ಗುರುಸ್ವರೂಪನಾದ ಸಂಗಮೇಶ್ವರನು ನಮಸ್ಕರಿಸಿದಂಥ ಆ ಬಸವೇಶನನ್ನು ಎತ್ತಿ. ಪ್ರೇಮದಿಂದ ಬಿಗಿಯಪ್ಪಿ, ಮೂರ್ಧಾಘ್ರಾಣವನ್ನು ಮಾಡಿ, ಭಕ್ತರ ಎದುರಿಗೆ ಬಸವೇಶನ ಕೈಯನ್ನು ತನ್ನ ಕೈಯಿಂದ ಹಿಡಿದ ಕೊಂಡು, ಆ ಭಕ್ತರ ಕಣ್ಣುಗಳಿಗೆ ಅದೃಶ್ಯನಾದನು. ಸಕಲ ಶೈವಾಗಮಾಚಾ ರಗಳನ್ನು ಪ್ರಕಟಿಸಿದ ಬಸವೇಶನನ್ನು ಸಮಸ್ತ ಭೂಮಂಡಲಕ್ಕೂ ಸ್ವಾಮಿಯಾದ

ಪರಶಿವನು ಪ್ರೇಮ ಪೂರ್ವಕವಾಗಿ ತನ್ನೊಳಗೆ ಐಕ್ಯವನ್ನು ಮಾಡಿಕೊಳ್ಳಲು ಪ್ರಮಥರು ಪರಿಮಳದಿಂದ ಸಂತೋಷಪಡಿಸಲ್ಪಟ್ಟ ತುಂಬಿಗಳುಳ್ಳ ಹೂವಿನ ಮಳೆಯನ್ನು ದಿಕ್ಕು ದಿಕ್ಕುಗಳಲ್ಲಿಯೂ ಕರೆದರು.

ಬಸವೇಶನ ಚರಿತ್ರೆಯೆಂಬ ಕನ್ನಡಿಯಲ್ಲಿ ಕಾಣಲ್ಪಡುವದಾಗಿಯೂ, ಮೋಕ್ಷವೆಂಬ ಉಪ್ಪರಿಗೆಗೆ ಸೋಪಾನ ಮಾರ್ಗವಾಗಿಯೂ, ಇರುವ ಪ್ರಮಥರ ಚರಿತ್ರೆಗಳನ್ನು ಯಾವನು ಓದುತ್ತಾನೋ ಯಾವನು ಬರೆಯುತ್ತಾನೋ ಯಾವನು ಭಕ್ತಿಯಿಂದ ಕೇಳುತ್ತಾನೋ ಅವನು ಸಕಲೈಶ್ವರ್ಯಗಳಿಗೂ ಆಸ್ಪದನಾಗುತ್ತಾನೆ. * *

ಬಸವೇಶವಿಜಯದಲ್ಲಿ ನಲವತ್ತೈದನೆಯ ಅಧ್ಯಾಯವು
ಸಮಾಪ್ತವು.

---

ಶ್ರೀಮನ್ಮುಕುಂದಶತಾನಂದ ಪುರಂದರ ಪ್ರಮುಖನಿಖಿಲ ಬೃಂದಾರಕ
ಬೃಂದವಂದ್ಯಮಾನ ಶ್ರೀಪರಶಿವ ಚರಣಾರವಿಂದಸಪರ್ಯಾ ಸಮಾ
ಸಾದಿತಾನಂದ ಶ್ರೀರೇಣುಕಾ ಚಾರ್ಯಗೋತ್ರ ಸಂಭೂತ
ಭಿಷಗ್ವರೇಣ್ಯ ರುದ್ರಾರ್ಯತನೂಭವಕರಿಬಸವ
ಸುಧೀವಿರಚಿತಮಾದ ಕರ್ಣಾಟಕ ಬಸ
ವೇಶವಿಜಯವೆಂಬ ಗದ್ಯಕಾವ್ಯಂ
ಸಂಪೂರ್ಣಂ

---

ಕಂ|| ಬಸವೇಶವಿಜಯಮಂ ಸಂ|
ತಸದಿಂ ಸಿದ್ಧಂ ಸಮಂತು ಪಠಿಸುವನಾವಂ ||
ರಸೆಯೊಳ್ಕೇಳ್ವಂ ಭಕ್ತಿಯಿ |
ನಸಮಾಕ್ಷಂ ತಾನವಂಗೆ ಸೌಖ್ಯಮನೀವಂ ||

PRINTED AT THE CROWN PRESS, MYSORE.